" ಪರಮಹಂಸ ಅಹಂಗ್ರಹೋಪಾಸನೆ !

ಈ ಉಪಾಸನ ವಿಧಾನವನ್ನು ಗುರುಮುಖ ದಿಂದ ಅರಿಯಬೇಕು! 'ಹಂಸಃ' (ನಾನೇ ಅವನು) ಎಂಬುದು ವೈಕೃತವಾಗಿ 'ಸೋऽಹಂ' (ಅವನೇ ನಾನು) ಆಯಿತು. ಸಾಧನೆಯಿಂದ ಅದರಲ್ಲಿನ ಸ್-ಹ್ ಗಳು ಕಳಚಿ'ಓಂ' ಎಂಬ ವಾಚ್ಯ ಪ್ರಣವ ವಾಯಿತು. ಮುಂದೆ ಆ ಪ್ರಣವದಲ್ಲಿನ ಅ-ಉ ಗಳು ಅಡಗಿ ಪರಿಪೂರ್ಣ 'O' ಶೂನ್ಯ ಉಳಿಯಿತು.

...ವ. ಅದೇ

...ಕ !

...ೕಪನಿಷತ್ತು

...ೕಪಕಾರವೇ

... ಆಹಾರ !

... ವ ನೇ

ಪರಮಹಂಸ

# ಶ್ರೀಪತಿ ಪಂಡಿತಾಚಾರ್ಯ

(ಕಾದಂಬರಿ)

ಎಂ. ಜಿ. ನಂಜುಂಡಾರಾಧ್ಯ

ಪ್ರಬೋಧ ಪುಸ್ತಕಮಾಲೆ
ಮೈಸೂರು

# ಮುನ್ನುಡಿ

ಪ್ರಸಿದ್ಧ ವಿದ್ವಾಂಸರಾದ ಶ್ರೀ ಎಂ. ಜಿ. ನಂಜುಂಡಾರಾಧ್ಯ ಅವರ ಈ ಕಾದಂಬರಿ ಪರಮಹಂಸ ಶ್ರೀಪತಿ ಪಂಡಿತಾಚಾರ್ಯರ ಜೀವನ ಮತ್ತು ಸಾಧನೆಯನ್ನು ಕುರಿತದ್ದು. ಶ್ರೀ ಎಂ. ಜಿ. ನಂಜುಂಡಾರಾಧ್ಯರ ಸಾಹಿತ್ಯಕೃಷಿ ವಿಪುಲವಾದದ್ದು, ವೈವಿಧ್ಯಪೂರ್ಣವಾದದ್ದು. ಪ್ರೌಢವಾದ ಶಾಸ್ತ್ರ ಗ್ರಂಥಗಳ ಜೊತೆಗೆ ಸೃಜನಾತ್ಮಕ ಕೃತಿಗಳನ್ನೂ ಕೊಟ್ಟಿದ್ದಾರೆ. ಆದರೆ ಕಾದಂಬರಿ ರೂಪದ ಕೃತಿಯನ್ನು ಅವರು ರಚಿಸುತ್ತಿರುವುದು ಇದೇ ಮೊದಲು. ಆದರಲ್ಲೂ 'ಶ್ರೀಕರಭಾಷ್ಯ'ವನ್ನುಬರೆದ ಶ್ರೀಪತಿ ಪಂಡಿತರಂತಹ ಶಾಸ್ತ್ರಕಾರರ ಜೀವನವನ್ನು ಕಾದಂಬರಿಯನ್ನಾಗಿಸುವುದು ಸುಲಭಸಾಧ್ಯವಲ್ಲ. ಅದನ್ನು ಶ್ರೀ ಆರಾಧ್ಯರು ಲೀಲಾಜಾಲವಾಗಿ ಇಲ್ಲಿ ಸಾಧಿಸಿದ್ದಾರೆ.

ಶ್ರೀಪತಿ ಪಂಡಿತರ ಶ್ರೀಕರಭಾಷ್ಯ ವೀರಶೈವ ಸಿದ್ಧಾಂತದ ವಿಕಾಸದಲ್ಲಿ ಒಂದು ಮೈಲಿಗಲ್ಲು. ಆದರೆ ಅವರ ಕಾಲ ಚರ್ಚಾಸ್ಪದವಾಗಿದ್ದು, ಅನೇಕ ಭಿನ್ನಾಭಿಪ್ರಾಯಗಳಿಗೆ ಎಡೆಕೊಟ್ಟಿದೆ. ಬಹುಶಃ ಕ್ರಿ.ಶ.ಸು.೧೧ನೇ ಶತಮಾನದಲ್ಲಿ ಆತ ಇದ್ದಿರಬಹುದೆಂಬ ಆಧಾರಸಹಿತವಾದ ಒಂದು ನಿಶ್ಚಿತ ಅಭಿಪ್ರಾಯವನ್ನು ಅನೇಕರು ಒಪ್ಪಿದ್ದಾರೆ. ಶ್ರೀ ನಂಜುಂಡಾರಾಧ್ಯರೂ ಇದನ್ನೇ ಅಂಗೀಕರಿಸಿ,ಆ ಕಾಲದಲ್ಲಿದ್ದ ತಾತ್ವಿಕ ಹಿನ್ನೆಲೆ ಮತ್ತು ಆಂಧ್ರದಲ್ಲಿದ್ದ ಆತನ ಪರಿಸರ ಅದರ ಪ್ರಭಾವ ಇವುಗಳನ್ನು ಕಾದಂಬರಿಯುದ್ದಕ್ಕೂ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಶಾಸ್ತ್ರಕಾರನಾಗಿ ವ್ಯಾಖ್ಯಾಕಾರನಾಗಿ ಶ್ರೀಪತಿ ಪಂಡಿತನ ಜೀವನದ ವಿವಿಧ ಹಂತಗಳನ್ನು ಮತ್ತು ಅದಕ್ಕೆ ಹಿನ್ನೆಲೆಯಾಗಿ ಅನೇಕ ತಾತ್ವಿಕ ಜಿಜ್ಞಾಸೆಗಳನ್ನು ಕಾದಂಬರಿಯ ಬೆಳವಣಿಗೆಯಲ್ಲಿ ಸಹಜವಾಗಿ ಅಳವಡಿಸಿರುವುದು ಅವರ ಸೃಜನಾತ್ಮಕ ಪ್ರತಿಭೆಗೆ ಸಾಕ್ಷಿಯಾಗಿದೆ. ಆದರೂ ಅಲ್ಲಲ್ಲಿ ತತ್ವಜಿಜ್ಞಾಸೆಯ ಭಾರವನ್ನು ಕಾದಂಬರಿ ಹೊರಬೇಕಾಗಿ ಬಂದಿದೆ. ಆದರೆ ಶ್ರೀಪತಿಯ

ಪ್ರವಾಸದಲ್ಲಿ ಎದುರಾಗುವ ಕೆಲವು ಪ್ರೇಕ್ಷಣೀಯ ಸ್ಥಳಗಳ ಮತ್ತು ಹಿಮಗಿರಿ ಶಿಖರಗಳ ಮನಂಬುಗುವ ನಿಸರ್ಗರಮಣೀಯ ವರ್ಣನೆಗಳು ಈ ಭಾರವನ್ನು ಹಗುರಗೊಳಿಸಬಲ್ಲವು.

ಆದರೂ ಇಂತಹ ವಸ್ತುವೊಂದನ್ನು ಕಾದಂಬರಿಗೆ ಅಳವಡಿಸಬಹುದೆಂಬುದೇ ಸಾಹಸದ ಕೆಲಸ. ಆ ಸಾಹಸದಲ್ಲಿ ಶ್ರೀ ನಂಜುಂಡಾರಾಧ್ಯರು ಯಶಸ್ಸನ್ನು ಪಡೆದಿದ್ದಾರೆ. ಕೇವಲ ಶಾಸ್ತ್ರಜಡವಾಗಬಹುದಾಗಿದ್ದ ಇದನ್ನು ತಮ್ಮ ಸೃಜನಾತ್ಮಕ ಕಲ್ಪನೆಯಿಂದ ಅನುಭವದ ಅಡುಗೆಯನ್ನಾಗಿ ಮಾಡಿದ್ದಾರೆ. ಸಾಮಾನ್ಯರೂ ಅದನ್ನು ಆಸ್ವಾದಿಸುವಂತೆ ನೀಡಿದ್ದಾರೆ. ಆದರೆ ಆ ಕಲ್ಪನೆ ಎಲ್ಲಿಯೂ ಇತಿಹಾಸಕ್ಕಾಗಲೀ, ತತ್ವಪ್ರತಿಪಾದನೆಗಾಗಲೀ, ಧರ್ಮಜಿಜ್ಞಾಸೆಗಾಗಲಿ ವಿರುದ್ಧವಾಗದೆ ಆದಕ್ಕೆ ಪೋಷಕವಾಗಿ ಬೆಳೆದು ಬಂದಿದೆ. ಮಾನವೀಯ ಭಾವನೆಗಳಿಂದ ಮಿಡಿಯುವ ಅನೇಕ ಪಾತ್ರಗಳನ್ನು ಸೃಷ್ಟಿಸಿ ಆ ಮೂಲಕ ನೀರಸ ತತ್ವಗಳಿಗೆ ರಸಸ್ಪರ್ಶವನ್ನಿತ್ತು ಆಸ್ವಾದ್ಯಗೊಳಿಸಿದ್ದಾರೆ. ಆ ವಿವರಗಳಿಗೆ ಹೋಗದೆ ಒಂದು ಮಾತಿನಲ್ಲಿ ಹೇಳಬಹುದಾದರೆ ಗಹನವಾದ ತಾತ್ವಿಕ ಪರಿಸರದ ಹಿನ್ನೆಲೆಯಲ್ಲಿ, ಗಂಭೀರ ಶಾಸ್ತ್ರಕಾರನೊಬ್ಬನ ಜೀವನದ ಆಂತರಿಕ ದರ್ಶನವನ್ನು ಹೇಗೆ ಕಲಾತ್ಮಕ ಕಾದಂಬರಿಯನ್ನಾಗಿಸಬಹುದೆಂಬುದಕ್ಕೆ 'ಪರಮಹಂಸ ಶ್ರೀಪತಿ ಪಂಡಿತಾಚಾರ್ಯ' ಒಳ್ಳೆಯ ಉದಾಹರಣೆಯಾಗಿದೆ. ಶ್ರೀ ನಂಜುಂಡಾರಾಧ್ಯರ ಸಾಹಿತ್ಯ ಬರವಣಿಗೆಯಲ್ಲಿ ಇದೊಂದು ಸ್ವಾಗತಾರ್ಹವಾದ ತಿರುವು ಎಂದು ಹೇಳಬಹುದು. ಅನೇಕ ಶಾಸ್ತ್ರಕಾರರನ್ನು ಕರತಲಾಮಲಕವನ್ನಾಗಿ ಮಾಡಿಕೊಂಡಿರುವ ಅವರಿಂದ ಇಂತಹ ಇನ್ನೂ ಅನೇಕ ಕೃತಿಗಳು ಮೂಡಿ ಬರಲೆಂದು ಹಾರೈಸುತ್ತೇನೆ.

ಸರಸ್ವತಿಪುರಂ, ಮೈಸೂರು
೪–೪–೮೮

ಹೆಚ್. ತಿಪ್ಪೇರುದ್ರಸ್ವಾಮಿ

# ನಲ್ನುಡಿ

ಘನ ವಿದ್ವಾಂಸರಾದ ಶ್ರೀ ಎಂ. ಜಿ. ನಂಜುಂಡಾರಾಧ್ಯರ ವಿನೂತನ ಕೃತಿ ಪರಮಹಂಸ ಶ್ರೀಪತಿಪಂಡಿತಾಚಾರ್ಯ. ಇದು ಒಂದು ಕಾದಂಬರಿ. ಕಾದಂಬರಿ ಎಂದೊಡನೆ ಸಹೃದಯರಿಗೆ ಆಶ್ಚರ್ಯವಾಗುವುದು ಸಹಜ.

ನಂಜುಂಡಾರಾಧ್ಯರು ಶಾಸ್ತ್ರಗಳಲ್ಲಿ ಬಲ್ಲಿದರು. ದರ್ಶನಗಳಲ್ಲಿ ತೀರ್ಥರು. ತತ್ತ್ವಶಾಸ್ತ್ರ ಜಿಜ್ಞಾಸುಗಳು. ನಮ್ಮ ಪರಂಪರೆಯಿಂದ ಬಂದ ಸಂಸ್ಕೃತ ಅಧ್ಯಯನ ಪಾರಂಗತರು. ಮಹಾಕವಿ ಷಡಕ್ಷರಿಯು ಹೇಳು ವಂತೆ ನಂಜುಂಡಾರಾಧ್ಯರು ಸುಮ್ಮನೆ ಶಾಸ್ತ್ರ ಶ್ರೀರೋಹಣ ಗಿರಿಯನ್ನು ಏರಿದವರಲ್ಲ; ಅವರು ಮಾರಾರಿಯ ಕೃಪೆಪಡೆದೇ ಪ್ರತಿಭಾ ಪ್ರಧಾನವಾದ ಈ ಕೃತಿರಚನೆಗೆ ಕೈಹಾಕಿದವರು.

ಶ್ರೀಪತಿ ಪಂಡಿತರ ಜೀವನವನ್ನು ಆಧರಿಸಿ ಬರೆದಿರುವ ಪರಮಹಂಸ ಕಾದಂಬರಿ ಇದಕ್ಕೆ ನಿದರ್ಶನ. ಅದರಲ್ಲಿ ಹುದುಗಿರುವ ಪ್ರತಿಭಾಶಕ್ತಿ ಪ್ರಜ್ವಲಿಸಿ ಈ ಕೃತಿಯ ರೂಪು ತಳೆದಿದೆ.

ಶ್ರೀಪತಿ ಪಂಡಿತರು ವೀರಶೈವ ಚರಿತ್ರದಲ್ಲಿ ಸುಪ್ರಸಿದ್ಧರಾದ ಪಂಡಿತ ತ್ರಯರಲ್ಲಿ ಮೊದಲಿಗರು. ಅವರು ಬ್ರಹ್ಮಾದ್ವೈತವನ್ನು ಖಂಡಿಸಿ ತಮ್ಮ ವಿಶೇಷಾದ್ವೈತ ಅಥವಾ ಶಿವಾದ್ವೈತ ಅಂದರೆ ಭಕ್ತಿ ಪಥವನ್ನು ಎತ್ತಿಹಿಡಿ ದವರು ಎಂದು ಪಾಲ್ಕುರಿಕೆ ಸೋಮನಾಥನು ತನ್ನ "ಪಂಡಿತಾರಾಧ್ಯ ಚರಿತ್ರಮು" (೧–೭)ದಲ್ಲಿ ಸೂಚಿಸಿದ್ದಾನೆ. ಇದೇ ಶ್ರೀಕರಭಾಷ್ಯದ ಮುಖ್ಯವಸ್ತು. ಆಂಧ್ರಪ್ರದೇಶದ ಬೆಜವಾಡಮಲ್ಲೇಶ್ವರಾಲಯದಲ್ಲಿ ದೊರೆ ತಿರುವ ಪಲ್ಲಕೇತನ (ಕ್ರಿ.ಶ. ೧೧೨೦) ರಾಜನ ಶಾಸನದಲ್ಲಿ ಈ ಅಂಶವನ್ನು ಎತ್ತಿ ಹೇಳಿದೆ.

ಶ್ರೀಕರ ಭಾಷ್ಯದಲ್ಲಿ ಸಿದ್ಧಾಂತ ಶಿಖಾಮಣಿಯನ್ನು ಆಧರಿಸಿರುವುದ ರಿಂದ ಸಿದ್ಧಾಂತ ಶಿಖಾಮಣಿಯು ಶ್ರೀಕರ ಭಾಷ್ಯಕ್ಕಿಂತ (ಕ್ರಿ.ಶ. ೧೧೨೦) ಹಿಂದಿನದೆಂದು ಸ್ಪಷ್ಟವಾಗುತ್ತದೆ. ವೀರಶೈವ ಸಿದ್ಧಾಂತ ಚರಿತ್ರದಲ್ಲಿ ಮೈಲುಗಲ್ಲುಗಳಂತಿರುವ ಸಿದ್ಧಾಂತ ಶಿಖಾಮಣಿ ಮತ್ತು ಶ್ರೀಕರ ಭಾಷ್ಯಕ್ಕೆ ಸಂಬಂಧ ಇಲ್ಲಿ ನಿಚ್ಚಳವಾಗಿ ನಿಲ್ಲುತ್ತದೆ.

ಶ್ರೀನಂಜುಂಡಾರಾಧ್ಯರು ಈ ಕಾದಂಬರೀ ರಚನೆಗೆ ಕೈಹಾಕುವ ಮೊದಲು ಅವರು ತಮ್ಮ ಬಿನ್ನಹ ಮತ್ತು ಆಕರಗಳಲ್ಲಿ ಸೂಚಿಸಿರುವಂತೆ ಇವೆಲ್ಲ ವಿಷಯುಗಳನ್ನು ಖಚಿತಪಡಿಸಿಕೊಂಡು ತಮ್ಮ ಐತಿಹಾಸಿಕ ಪ್ರಜ್ಞೆ ಯನ್ನು ಪ್ರಕಟಿಸಿರುವರು. ಐತಿಹಾಸಿಕ ಕಾದಂಬರೀಕಾರರಿಗೆ ಈ ಪ್ರಜ್ಞೆ ಅತ್ಯಾವಶ್ಯಕ. ಇತಿಹಾಸದ ಚೌಕಟ್ಟನಲ್ಲಿ ಪ್ರತಿಭಾ ವಿಲೀನ ಸೃಜನ ಕಾರ್ಯವನ್ನೆಸಗಬೇಕಾಗುತ್ತದೆ.

ಪರಮಹಂಸ ಕಾದಂಬರಿಯ ಪೂರ್ವಾರ್ಧದಲ್ಲಿ ಸನ್ನಿವೇಶ ರಚನೆ, ಪಾತ್ರ ಸೃಷ್ಟಿ ಹೃದಯಂಗಮವಾಗಿದೆ. ಶ್ರೀಪತಿಯ ಕುತೂಹಲ ಬುದ್ಧಿ ಆತನ ವ್ಯಕ್ತಿತ್ವದ ವೈಶಿಷ್ಟ್ಯವಾಗಿದೆ. ಮುಂದೆ ಸುಪ್ರಸಿದ್ಧ ಭಾಷ್ಯಕಾರ ನಾಗಲಿರುವ ಮಗುವಿನ ಬಾಲ್ಯ ಬಹುಸುಂದರವಾಗಿ ನಿರೂಪಿತವಾಗಿದೆ. ಶ್ರೀಪತಿ ಯಾವುದನ್ನೂ ನೇರವಾಗಿ ನಂಬದೆ ವಿಚಾರದ ಒರೆಗಲ್ಲಿಗೆ ಹಚ್ಚುವ ತೀಕ್ಷ್ಣ ಮತಿಯನ್ನು ಪಡೆದಿದ್ದಾನೆ. ಇದನ್ನು ಲೇಖಕರು ಹರಿತ ವಾಗಿಯೇ ಮೂಡಿಸಿದ್ದಾರೆ.

ಶ್ರೀಪತಿಯ ಶಿವದೀಕ್ಷೆ–ಉಪನಯನಗಳ ಬಗೆಗೆ ಅವರ ತಂದೆಯ ಮನದಲ್ಲಿ ವೈಚಾರಿಕ ತಿಕ್ಕಾಟ ಪ್ರಾರಂಭವಾಗುತ್ತದೆ. ಶ್ರೀಪತಿಯ ತಂದೆ ಗುರುಲಿಂಗಾರಾಧ್ಯರು. ಅವರು ನಿತ್ಯ ತೃಪ್ತರು, ಆಜಾನು ಬಾಹುಗಳು ; ನಾಲ್ವತ್ತು ನಾಲ್ವತ್ತೈದರ ಪ್ರಾಯದವರು. ಭಾಗೀರಥಿ ಅವರ ಪತ್ನಿ, ಗುಣಶೀಲ ಸಂಪನ್ನೆ. ಗುರುಲಿಂಗಾರಾಧ್ಯರು ತಾವು ಸಲ್ಲಿಸಿದ ಹಲವಾರು ನೋಂಪಿಗಳಿಂದ ಸುಪ್ರೀತನಾದ ಮಲ್ಲೇಶ್ವರನ ವರ ಪ್ರಸಾದದಿಂದ ಶ್ರೀಪತಿ ಜನಿಸಿರುವನೆಂದು ಭಾವಿಸಿದ್ದರೆ ತಾಯಿ ಭಾಗೀರಥಿ ಶ್ರೀಪತಿ ಕನಕದುರ್ಗೆಯ ಕರುಣೆಯ ಕೂಸು ಎಂದು ನಂಬಿದ್ದಳು. ಈ ಸುಸಂಸ್ಕೃತ ದಂಪತಿಗಳ ಸಾಂಸಾರಿಕ ಜೀವನದಲ್ಲಿ ಹಾಲು–ಸಕ್ಕರೆಯ ಜೊತೆ ಜೇನು ಬೆರತಂತೆ ಬೆರೆದು ಶ್ರೀಪತಿ ಅದರ ಮಾಧುರ್ಯವನ್ನು ಹೆಚ್ಚಿಸುತ್ತಿದ್ದ ದೃಶ್ಯಗಳನ್ನು ಲೇಖಕರು ಚೆನ್ನಾಗಿ ಚಿತ್ರಿಸಿದ್ದಾರೆ. ಶ್ರೀಪತಿಯ ಬದುಕಿಗೆ ಹಿನ್ನೆಲೆಯಾಗಿ ರುವ ಗುರುಲಿಂಗಾರಾಧ್ಯರ ಹಾಗೂ ಸೋಮಶಂಭು ದೇಶಿಕರ ಕುಟುಂಬಗಳೆ ರಡರ ಚಿತ್ರಣವನ್ನು ಕಾದಂಬರಿಕಾರರು ರೇಖಿಸುವಲ್ಲಿ ದೃಶ್ಯನಿರ್ಮಾಣ ಪಾತ್ರಸೃಷ್ಟಿ ಕವಿ ಕೌಶಲವನ್ನು ವ್ಯಕ್ತಪಡಿಸಿರುವರು. ಸೃಜನ

ಸಾಹಿತ್ಯ ಕೃತಿಯ ಜೀವ ಅರಳುವುದು ಅಲ್ಲಿರುವ ಸಮಸ್ಯೆಯ ಮೂಲಕ. ಆ ಸಮಸ್ಯೆ ಜೀವನಕ್ಕೆ ನೇರವಾಗಿ ಸಂಬಂಧಿಸಿದ್ದರೆ ಅದು ಜಟಿಲವಾಗುವ ರೀತಿ, ಬಗೆಹರಿದ ಬಗೆ ಇವುಗಳನ್ನು ಎಷ್ಟೆಷ್ಟು ಸೂಕ್ಷ್ಮವಾಗಿ, ಆಳವಾಗಿ ಸಹಜವಾಗಿ ಚಿತ್ರಿಸುವರೋ ಅಷ್ಟಷ್ಟು ಕೃತಿಯ ಮಾನವೀಯತೆ, ಕಲಾತ್ಮಕತೆ ಹೆಚ್ಚುತ್ತದೆ. ಲೇಖಕರು ಈ ಕಡೆ ದೃಷ್ಟಿಯನ್ನಿಟ್ಟದ್ದರೂ ಅಲ್ಲಿರುವ ಸಮಸ್ಯೆ ಬಹುಜನರ ಸಮಾಜದ ಬದುಕಿನ ಇಲ್ಲವೆ ಮಾನವ ಜೀವನದ ಶಾಶ್ವತ ಸಮಸ್ಯೆಯಾಗಿರದೆ ಅದು ಶ್ರೀಪತಿ ಪಂಡಿನಾಗುವುದರತ್ತ ಕೇಂದ್ರೀಕೃತವಾಗುವುದರಿಂದ ಅಲ್ಲಿ ನಿರೂಪಣೆ ತತ್ತ್ವಪ್ರಣಾಲಿಯತ್ತ ನಡೆಯುತ್ತದೆ. ಶ್ರೀಪತಿ ಕುಶಾಗ್ರ ಬುದ್ಧಿಯವನಾದುದರಿಂದ ತಂದೆಯ ಹತ್ತಿರ ಕುಳಿತು ಅವರು ಹೇಳುವ ಮಂತ್ರಗಳನ್ನು ಸುಸ್ವರವಾಗಿ ಪಠನ ಮಾಡುವನು. ತಾಯಿಗೆ ಅದನ್ನು ಕಂಡು ಬಲು ಹಿಗ್ಗಾದರೆ ತಂದೆಗೆ ಅದು ಒಂದು ಸಮಸ್ಯೆಯಾಗುತ್ತದೆ. "ಉಪನಯನವಾಗದೆ ವೇದ ಪಠನಕ್ಕೆ ಅರ್ಹನಾಗಬಲ್ಲನೆ ! " ಎಂಬುದು ಅವರ ಮುಂದಿನ ಸಮಸ್ಯೆ. ಗುರುಲಿಂಗಾರಾಧ್ಯರ ಮಾವನವರು ಮುದಿಗೊಂಡದ ಸೋಮಶಂಭು ದೇಶಿಕರು. ಅವರು ಆರಾಧ್ಯ ಬ್ರಾಹ್ಮಣರಾಗಿದ್ದರೂ ಪ್ರಾಚೀನ ವೀರಶೈವದ ಸ್ವರೂಪ ರಹಸ್ಯಾದಿಗಳನ್ನು ಅರಿತು ನಿಷ್ಣಾತರಾಗಿದ್ದರು. ಅವರೊಡನೆ ಈ ವಿಷಯವನ್ನು ಚರ್ಚಿಸಿ ಅವರ ಅಭಿಪ್ರಾಯ ಪಡೆಯಲು ಗುರುಲಿಂಗಾರಾಧ್ಯರು ಮಗು ಶ್ರೀಪತಿಯನ್ನು ಕರೆದುಕೊಂಡು ಎತ್ತಿನ ಗಾದಿಯಲ್ಲಿ ಮುದಿಗೊಂಡಕ್ಕೆ ಹೊರಟರು.

ಶ್ರೀಪತಿಯ ತಾಯಿ ಭಾಗೀರಥಿ ಗಾಡಿ ಕಾಣುವವರೆಗೆ ಅಲ್ಲಿಯೇ ಮರವಟ್ಟು ನಿಂತಿದ್ದು ಕಣ್ಣಂಚಿನಲ್ಲಿ ಮೂಡಿ ಬಂದಿದ್ದ ಆನಂದ ಬಾಷ್ಪಗಳನ್ನು ಸೆರಗಿನ ತುದಿಯಿಂದ ಒರೆಸಿಕೊಂಡು ಮನೆಗೆ ಹಿಂದಿರುಗಿದಳು. ಲೇಖಕರ ಈ ಮಾತು ಅವರ ಕಾವ್ಯದ ಕಣ್ಣಿಗೆ ಸೂಕ್ಷ್ಮ ನಿರೀಕ್ಷಣ ಶಕ್ತಿಗೆ, ದೃಶ್ಯ ನಿರ್ಮಾಣ ಸಾಮರ್ಥ್ಯಕ್ಕೆ ಸಾಕ್ಷಿಯಾಗಿ ನಿಂತಿದೆ.

ಗಾಡಿಯಲ್ಲಿ ತಂದೆ–ಮಕ್ಕಳ ಸಂಭಾಷಣೆ ಬೀಜ–ಭೂಜನ್ಯಾಯ, ಮಯೂರಾಂಡ ರಸ ನ್ಯಾಯಗಳಂತಹ ತಾತ್ವಿಕ ಕ್ಷೇತ್ರಕ್ಕೆ ಬಂದು ನಿಲ್ಲುತ್ತದೆ. ಈ ಸಂಭಾಷಣೆ ಶ್ರೀಪತಿಯ ಅಸಾಧಾರಣ ಬುದ್ಧಿಶಕ್ತಿಯನ್ನು ಚಿತ್ರಿಸಿದರೂ ಕೃತ್ರಿಮವೆನಿಸುವಂತಿದೆ. ಆದರೆ ಅಷ್ಟರಲ್ಲಿ ತಂದೆಗೆಮಗನ ವಯ

ಸ್ಸಿನ ಕಲ್ಪನೆ ಬಂದು ಅಲ್ಲಿಗೆ ಸಂಭಾಷಣೆ ಮುಟುಕಾಗುತ್ತದೆ. ಈ ವೇಳೆಗೆ ಗಾಡಿ ಮುದಿಗೊಂಡ ಮುಟ್ಟಿತೆಂದು ಆ ಸಂಭಾಷಣೆಗೆ ತೆರೆ ಎಳೆಯುವಲ್ಲಿ ಕಲಾವಿದರ ಜಾಣ್ಮೆ ಖಚಿತವಾಗುತ್ತದೆ.

ಮುದಿಗೊಂಡದಲ್ಲಿ ಮಾವನವರಾದ ಸೋಮಶಂಭು ದೇಶಿಕರ ಸಮ್ಮುಖದಲ್ಲಿ ಗುರುಲಿಂಗಾರಾಧ್ಯರು ತಮ್ಮ ಸಮಸ್ಯೆಯನ್ನು ಮಂಡಿಸುವರು : ಶ್ರೀಪತಿ ಚಿಕ್ಕವ; ೫-೬ ವರ್ಷದ ಮಗು ವೇದ ಮಂತ್ರಗಳನ್ನು ಸುಸ್ವರವಾಗಿ ಮುಖೋದ್ಗತವಾಗಿ ಹೇಳುತ್ತಾನೆ. 8ನೇ ವರ್ಷಕ್ಕೆ ಮೊದಲು ಉಪನಯನ-ಶಿವದೀಕ್ಷೆಗಳಾಗದೆ ಅವನ ವೇದಾಧ್ಯಯನ ಪ್ರಾರಂಭವಾಗುವುದು ಹೇಗೆ ? ಈ ಸಮಸ್ಯೆಗೆ ದೇಶಿಕರು ಸಮರ್ಪಕವಾಗಿ ಉತ್ತರಿಸುವರು. ಉಪನಯನ ಮತ್ತು ಶಿವದೀಕ್ಷೆಗಳ ಉದ್ದೇಶ ರಹಸ್ಯಗಳನ್ನು ವಿವರಿಸುವರು. ಕೊನೆಗೆ "ಸರ್ವೇಭ್ಯೋ ದಧಿ ದೀಯತಾಂ, ಕೌಂಡಿನ್ಯಾಯ ತಕ್ರಂ" ಎಂಬ ನ್ಯಾಯದಂತೆ ಎಲ್ಲರಿಗೂ ಎಂಟು ವರ್ಷಕ್ಕೆ ಉಪನಯನವಾಗಬೇಕಾದರೂ ತೀಕ್ಷ್ಣಮತಿಯಾದ ಶ್ರೀಪತಿಗೆ ಐದನೇ ವರ್ಷದಲ್ಲಿಯೇ ಉಪನಯನ-ಶಿವದೀಕ್ಷೆಗಳು ನಡೆದರೆ ತಪ್ಪೇನಿಲ್ಲವೆಂದು ತಿಳಿಸುವರು.

ದೇಶಿಕರ ಅಭಿಪ್ರಾಯದಂತೆ ಶ್ರೀಪತಿಯ ಉಪನಯನ ಶಿವದೀಕ್ಷೆಗಳೆರಡೂ ನೆರವೇರುವುವು. ಅವನ ಜನ್ಮದಾತನಾದ ತಂದೆ ಗುರುಲಿಂಗಾರಾಧ್ಯರೇ ಯಜ್ಞೋಪವೀತ ಮತ್ತು ಲಿಂಗಧಾರಣ ಮಾಡುವರು.

ಶ್ರೀಪತಿಯ ಸೋದರಮಾವ ಶಂಭು ಭಟ್ಟರು; ಸೋಮಶಂಭು ದೇಶಿಕರ ಹಿರಿಯ ಮಗ. ಕಾಶಿಯ ವಿದ್ಯಾಪೀಠದಲ್ಲಿ ಶೈವಾಗಮ ಪ್ರಾಧ್ಯಾಪಕ. ಅಲ್ಲಿಯೇ ವಸತಿ. ವಿಜಯವಾಡದಲ್ಲಿ ಅಧ್ಯಯನ ಮುಗಿಸಿ, ಶ್ರೀಪತಿ ಈಗ ಉಚ್ಚ ವ್ಯಾಸಂಗಕ್ಕಾಗಿ ಕಾಶಿಗೆ ಹೊರಟಿದ್ದಾನೆ. ಅಲ್ಲಿ ವಿದ್ಯಾರ್ಥಿ ನಿಲಯದಲ್ಲಿ ವಾಸ, ವ್ಯಾಸಂಗ ತೀವ್ರ ಗತಿಯಲ್ಲಿ ನಡೆಯುತ್ತದೆ. ಶ್ರೀಪತಿ ಹನ್ನೆರಡು ವರ್ಷಗಳಲ್ಲಿ ವ್ಯಾಕರಣ; ನ್ಯಾಯ, ಮೀಮಾಂಸೆ, ವೇದಾಂತ ಶಾಸ್ತ್ರಗಳಲ್ಲಿ ಪಾರಂಗತನಾಗುವನು. ಶಿವಲೆಂಕ ಮಂಚಣ್ಣ ಈತನಿಗಿಂತ ಸ್ವಲ್ಪ ಹಿರಿಯನಾಗಿ ಕಾಶಿಯಲ್ಲಿಯೇ ವಾಸವಾಗಿದ್ದನು.

ಕೋಶವನ್ನು ಓದಿ ಕಲಿಯಬೇಕು, ದೇಶವನ್ನು ನೋಡಿ ತಿಳಿಯಬೇಕು ಎಂಬ ನಾಣ್ಣುಡಿಯುಂಟು. ಶ್ರೀಪತಿ ಎರಡನ್ನೂ ಪೂರೈಸಿದ್ದ. ಕಾಶಿಗೆ

ಹೋಗುವ ದಾರಿಯಲ್ಲಿ ಜ್ಯೋತಿರ್ಲಿಂಗದರ್ಶನ ಮಾಡಿಕೊಂಡಿದ್ದ. ನಾಗಾರ್ಜುನಕೊಂಡ ಮುಂತಾದ ಐತಿಹಾಸಿಕ ಧಾರ್ಮಿಕ ಮುಂತಾದ ಪುಣ್ಯ ಸ್ಥಳಗಳನ್ನು ನೋಡಿದ್ದ. ಆತನ ಮನಸ್ಸು ಅಪಾರವಾದ ಅನುಭವದಿಂದ ಪ್ರಫುಲ್ಲಿತವಾಗಿತ್ತು. ಇತರ ಶಾಸ್ತ್ರಗಳ ಅಧ್ಯಯನ ಮುಗಿದೊಡನೆ ಶಿವಾಗಮಗಳ ಅಭ್ಯಾಸವನ್ನು ಕೈಗೊಂಡಿದ್ದ. ತಾನು ಓದುತ್ತಿರುವಾಗಲೇ ಬ್ರಹ್ಮಸೂತ್ರಗಳಿಗೆ ಶಿವಾದ್ವೈತಪರ ಭಾಷ್ಯಬರೆಯಲು ಶ್ರೀಪತಿ ಸಂಕಲ್ಪಿಸಿದ್ದ.

ಶ್ರೀಪತಿಯ ಸೋದರಮಾವ ಶಂಭುಭಟ್ಟರ ಮಗಳು ಕನಕಲತೆ. ಅವಳನ್ನು ಮೊದಲ ಸಲ ಕಂಡಾಗಲೇ ಶ್ರೀಪತಿಯ ಹೃದಯದಲ್ಲಿ ಪ್ರೀತಿ ಅಂಕುರಿಸಿತ್ತು. ಸುದೀರ್ಘವೂ ರೋಮಾಂಚಕಾರಕವೂ ಆದ ಪ್ರವಾಸಗಳನ್ನು ಶ್ರೀಪತಿ ಕನಕಲತೆ, ಶಂಭುಭಟ್ಟ ಮೊದಲಾದವರೊಡನೆ ಮಾಡಿದ. ಪ್ರವಾಸದ ಕಾಲದಲ್ಲಿ ಆಕಸ್ಮಿಕವಾಗಿ ಬಂದು ಮಾರ್ಗದರ್ಶನ ಮಾಡಿದ ದುಗ್ಗವ್ವೆ ಮಿಂಚಿನಂತಹ ಪ್ರತಿಭೆಯುಳ್ಳವಳು. ಅವಳ ಅನುಭವ ಅಪಾರ. ಸ್ನೇಹ ಅನಿಮಿತ್ತ. ಅರ್ಧಯಾತ್ರೆ ಮುಗಿದ ಮೇಲೆ ವಿಂಧ್ಯಾದ್ರಿಯಲ್ಲಿ ಕಾಣಿಸಿಕೊಂಡ ಭೈರಣ್ಣಾದಿಗಳೊಂದಿಗೆ ಪ್ರವಾಸದಲ್ಲಿ ಮುಂದುವರಿದ. ಅವರೊಡನೆ ಕೂಡಿ ಮಾಡಿದ ಪ್ರವಾಸ ರಮ್ಯ ರಮಣೀಯ ; ರೋಮಾಂಚಕಾರಕ. ಈ ರಸಮಯ ಸನ್ನಿವೇಶಗಳಲ್ಲಿ ಶ್ರೀಪತಿ–ಕನಕಲತೆಯರ ಪ್ರೇಮ ಪಸಿಂಭೋಳಗಣ ರಸದ ರುಚಿಯಂತೆ ದಿನ ದಿನ ಬೆಳೆಯ ತೊಡಗಿತು. ಶ್ರೀಪತಿ ಶಂಭುಭಟ್ಟರ ಮನೆ ಬಿಟ್ಟು ಅಭ್ಯಾಸಕ್ಕಾಗಿ ವಿದ್ಯಾರ್ಥಿ ನಿಲಯದಲ್ಲಿಯೇ ಉಳಿಯುವ ಮನೋ ನಿರ್ಧಾರವನ್ನು ತಿಳಿಸಿದಾಗ ಕನಕ ಒಂದು ಕ್ಷಣ ತಲೆ ತಗ್ಗಿಸಿದಳು. ಕಾಲಬೆರಳು ವಿರಹಗೀತೆ ಬರೆಯುತ್ತಿತ್ತು ಎಂದು ಬಣ್ಣಿಸಿದ ಕಾದಂಬರಿಕಾರರು ಶ್ರೀಪತಿ-ಕನಕಲತೆಯರ ಪ್ರೇಮವನ್ನು ಬಹು ಸೂಕ್ಷ್ಮವಾಗಿ ಧ್ವನಿಸಿರುವರು. ಅಲ್ಲಿ ವಾಚ್ಯವಾದ ಪ್ರಣಯ ಶೃಂಗಾರಕ್ಕೆ ಸ್ಥಾನವಿಲ್ಲ.

ಶ್ರೀಪತಿ ಕೇದಾರ, ಬದರಿ, ಹರಿದ್ವಾರ, ಋಷೀಕೇಶ ಮೊದಲಾದ ಕ್ಷೇತ್ರಗಳನ್ನು ಕನಕೆಯೊಡನೆ ಸಂದರ್ಶಿಸಿ ತನಗೆ ಬೇಕಾದ ಆಕರ ಗ್ರಂಥಗಳನ್ನು ಸಂಶೋಧಿಸಿ ಶ್ರೀಕರ ಭಾಷ್ಯವನ್ನು ಪೂರೈಸಿದ. 50 ವರ್ಷದವನಾಗುತ್ತಲೇ ಶ್ರೀಪತಿ ವೈರಾಗ್ಯ ತಳೆದು ಜೀವನ್ಮುಕ್ತನಾಗಿ ಪರಮಹಂಸ

ನಾಗುತ್ತಾನೆ. ಇದು ಶೈವಬ್ರಾಹ್ಮಣ ಮತ್ತು ವೀರಶೈವ ಸಂಬಧಿಸಿದ ಬಹು ದೊಡ್ಡ ಬಳಗದ ಕತೆ.

ಶ್ರೀಪತಿಯ ಜೀವನ ಚರಿತ್ರೆಯೊಡನೆ ಈ ಕಾದಂಬರಿಯಲ್ಲಿ ಇನ್ನೆರಡು ಪ್ರವಾಹಗಳು ಬಲು ರಭಸದಿಂದ ಪ್ರವಹಿಸುತ್ತವೆ. ಮೊದಲನೆಯದು ಮತ, ಧರ್ಮ, ತತ್ತ್ವ ಪ್ರಣಾಳಿಕೆಗಳಿಗೆ ಸಂಬಂಧಪಟ್ಟದ್ದು. ಎರಡನೆಯದು ಭಾರತೀಯ ಪುಣ್ಯ ಕ್ಷೇತ್ರಗಳ ದರ್ಶನವನ್ನು ಆಧರಿಸಿದುದು. ಮೊದಲನೆಯದು ಪಾಂಡಿತ್ಯದ್ಯೋತಕವಾಗಿದ್ದರೆ ; ಎರಡನೆಯದು ಸೌಂದರ್ಯಾನುಭಾವ ಸೂಚಕ. ಒಂದರಲ್ಲಿ ಶಾಸ್ತ್ರ, ಇನ್ನೊಂದರಲ್ಲಿ ಕಲೆ ಅರಳಿದೆ.

ಗುರುಲಿಂಗಾರಾಧ್ಯರು ತಮ್ಮ ಮಾವ ಸೋಮಶಂಭು ದೇಶಿಕರೆದುರು ಮಂಡಿಸಿದ ಸಂದೇಹಗಳು ಮತ್ತು ಶ್ರೀದೇಶಿಕರು ಅವುಗಳಿಗೆ ನೀಡಿದ ಸಮಾಧಾನಗಳೇ ಕಾದಂಬರಿಯ (ಪು. ೭೦–೧೦೦) ಸುಮಾರು ಮೂವತ್ತು ಪುಟಗಳಲ್ಲಿ ವಿಸ್ತಾರವಾಗಿ ನಿರೂಪಿತವಾಗಿವೆ. ಕೃತಿಯಲ್ಲಿ ಇದೇ ಬಹು ಮುಖ್ಯ ಭಾಗ. ಇದನ್ನು ಕಾದಂಬರಿಯ **ಅಂತರಂಗ** ಎಂದರೂ ಸಲ್ಲುತ್ತದೆ. ಅದನ್ನು ಓದುಗರು ಮೂಲದಿಂದಲೇ ಅರಿವುದು ಒಳಿತು. ಇನ್ನು ದುಗ್ಗವ್ವೆ ಭೈರಣ್ಣರ ಜೊತೆ ಕಡೆಯಲ್ಲಿ ಕಾಣಿಸಿಕೊಂಡ ಕಾಳಣ್ಣನ ಮಂತ್ರಶಾಸ್ತ್ರ ಪ್ರಾವೀಣ್ಯ ಇವರ ಚರಿತ್ರ ಚಿತ್ರಣ ಮುಂತಾದುವನ್ನು ಓದುಗರಿಗೇ ಬಿಡೋಣ.

ಹನ್ನೆರಡನೆಯ ಶತಮಾನದ ಹಿಂದಣ ಪುರಾತನ ವೀರಶೈವದ ಚಿತ್ರ ಪರಮಹಂಸ ಕಾದಂಬರಿ. ಇಲ್ಲಿ ಭಾಷ್ಯಕಾರ ಶ್ರೀಪತಿಯ ಬದುಕಿಗಿಂತಲೂ ತತ್ತ್ವದ ಸರಕು ಹೆಚ್ಚಾಗಿ ಬಂದಿದೆ. ತತ್ತ್ವವೇ ಬದುಕಾಗಿದ್ದ ಶ್ರೀಪತಿಯನ್ನು ಕುರಿತ ಕಾದಂಬರಿಗೆ ಇದು ಅನಿವಾರ್ಯ. ಸೃಜನ ಶೀಲತೆ ಮತ್ತು ಪಾಂಡಿತ್ಯಗಳೆರಡೂ ಒಂದೆಡೆ ಸೇರಿದಲ್ಲಿ ಮೊದಲು ಸೃಜನಶೀಲತೆಯ ಲೀಲೆ. ಅದರ ನೆರಳಿನಲ್ಲಿ ಪಾಂಡಿತ್ಯ ಮೆರೆಯಬೇಕಲ್ಲವೆ !

ಒಟ್ಟಿನಲ್ಲಿ ಪರಮಹಂಸ ಒಂದು ವಿಶಿಷ್ಟ ತೆರನಾದ ಕಾದಂಬರಿ. ಸಾವಿರ ವರ್ಷಗಳ ಹಿಂದೆ ಬದುಕಿದ ಶ್ರೀಪತಿ ಪಂಡಿತರ ಜೀವನವನ್ನು ಸುಂದರವಾಗಿ ಬಂಧುರವಾಗಿ ಚಿತ್ರಿಸಿದ ಕೃತಿಕಾರರಿಗೆ ಅಭಿನಂದನೆಗಳು.

ಧಾರವಾಡ
೧೫–೩–೮೯

ಆರ್. ಸಿ. ಹಿರೇಮಠ
ನಿವೃತ್ತ ಕುಲಪತಿಗಳು

# ಬಿನ್ನಹ

ಭಾರತದ ಸಾಹಿತ್ಯಾಕಾಶದಲ್ಲಿ ಚಿರಕಾಲದಿಂದ ಮಿರುಗುತ್ತಿರುವ ತಾರೆಗಳಂತೆ ಮೂವರು ಮಹಾ ಪಂಡಿತರು ಹಾಗೂ ಮಹಾನುಭಾವಿಗಳು "ಪಂಡಿತತ್ರಯ" ಎಂಬ ಹೆಸರಿನಿಂದ ಪ್ರಸಿದ್ಧರಾಗಿದ್ದಾರೆ.

ಕ್ರಿ. ಶ. ಸುಮಾರು ೧೧-೧೨ನೆಯ ಶತಮಾನಗಳಲ್ಲಿ ಇದ್ದರೆಂದು ಹೇಳಲಾಗುತ್ತಿರುವ ಇವರು ಸಂಸ್ಕೃತ ತೆಲುಗು ಮತ್ತು ಕನ್ನಡಗಳಲ್ಲಿ ಅನೇಕ ಅನರ್ಘ್ಯಕೃತಿರತ್ನಗಳನ್ನು ಬರೆದು ಮಹಿಮೆಗಳನ್ನು ಮೆರೆದು ಭಾರತೀಯ ಸಂಸ್ಕೃತಿ ಮತ್ತು ಸಾಹಿತ್ಯಗಳನ್ನು ಶ್ರೀಮಂತಗೊಳಿಸಿದ್ದಾರೆ. ಈ ಮಹಾನುಭಾವಿಗಳನ್ನು ಕುರಿತು ಅವರ ಹಿರಿಮೆ ಗರಿಮೆಗಳನ್ನು ಕುರಿತು ಕನ್ನಡ, ತೆಲುಗು, ಮತ್ತು ಸಂಸ್ಕೃತ ಕವಿಗಳು ಪುರಾಣಗಳನ್ನು ಚರಿತ್ರೆಗಳನ್ನು ಪ್ರಬಂಧಗಳನ್ನು ಬರೆದಿದ್ದಾರೆ.

ಇವರಲ್ಲಿ ಶ್ರೀಪತಿ ಪಂಡಿತರು ಮೊದಲಿಗರು. ಶ್ರೀಪತಿ ಪಂಡಿತಾರಾಧ್ಯ ಶ್ರೀಕರಭಾಷ್ಯಕಾರ ಶ್ರೀಪತಿ ಪಂಡಿತಾಚಾರ್ಯ ಎಂದು ಕರೆಯಬಹು ದಾದರೂ ಇವರ ಭಾಷ್ಯದ ಕಡೆಯಲ್ಲಿ 'ಯತಿಪರಿವೃಢ' ಎಂದು ಹೇಳಿರುವುದರಿಂದ ಇವರನ್ನು 'ಪರಮಹಂಸ ಶ್ರೀಪತಿ ಪಂಡಿತಾ ಚಾರ್ಯ' ಎಂದು ಕರೆಯುವುದು ಅನ್ವರ್ಥಕವಾಗಿದೆ. ಗಣಸಹಸ್ರನಾಮದಲ್ಲಿ ಇವರ ಬಗೆಗೆ ''ಪರವಾದಿಘನೋಚ್ಚಂಡಮರುತ್ ಶ್ರೀಪತಿಪಂಡಿತಃ'' ಎಂದರೆ ಪರವಾದಿಗಳೆಂಬ ದಟ್ಟವಾದ ಮೇಘಮಂಡಲವನ್ನು ಚದುರಿಸುವಲ್ಲಿ ಶ್ರೀಪತಿ ಪಂಡಿತರು ಚಂಡಮಾರುತ (ಬಿರುಗಾಳಿ)ದಂತೆ ಇದ್ದರು ಎಂಬ ಮಾತು ಅವರ ಭಾಷ್ಯದ ರೂಪು ರೇಷೆಯನ್ನು ಚೆನ್ನಾಗಿ ಸಮರ್ಥಿಸು ತ್ತದೆ; ಮಾತ್ರವಲ್ಲದೆ ಶ್ರೀಮದಾಚಾರ್ಯರು ಬಸವಾವತರಣದ ಅರುಣೋ ದಯದ ಮುಂಚೂಣಿಯಲ್ಲಿದ್ದವರು. ಅವರು ತಮ್ಮ ದಿವ್ಯತತ್ತ್ವಗಳನ್ನು ಜನಸಾಮಾನ್ಯರಿಗೆ ಬೋಧಿಸಿ ಶಿವ ದೀಕ್ಷೆಯ ಮೂಲಕ ದೀನ-ದಲಿತರನ್ನು

ಪುನೀತಗೊಳಿಸಿ ಮೇಲೆತ್ತಲು ಪ್ರಯತ್ನಿಸಿದಾಗ ಎದುರಾದ ಸಾಮಾಜಿಕ ಪ್ರತಿಭಟನೆಗಳನ್ನು ತಮ್ಮದೇ ಆದ ಮಹಿಮಾ ವಿಧಾನಗಳಿಂದ ನಿಗ್ರಹಿಸಿ ಸಮಾಜ ಸುಧಾರಣೆಗೆ ಮೇಲ್ಪಂಕ್ತಿ ಹಾಕಿದವರು. ಮಾತ್ರವಲ್ಲದೆ ಇವರು ಕಾಶ್ಮೀರದಿಂದ ಕಾಶಿಯವರೆಗೆ ಹಿಮಗಿರಿಶಿಖರಗಳಲ್ಲಿ ತಪೋನಿರತರಾಗಿದ್ದ ಮಹಾಚಾರ್ಯರೊಬ್ಬರನ್ನು ಆಶ್ರಯಿಸಿ ಅವರಿಂದ ಉಪದೇಶ ಮುಖ ದಿಂದ ಪಡೆದ 'ಪರಮಹಂಸ' ಪದವಿಗೆ ತಮ್ಮದೇ ಆದ ಸಾಧನೆಯಿಂದ ಹೊಸತಿರುವನ್ನಿತ್ತು 'ಯತಿಪರಿವೃಢ'ರೆನಿಸಿ ಸಿದ್ಧಿ ಪಡೆದ ಧನ್ಯಾತ್ಮರು.

ಇಂಥ ಶ್ರೀಮದಾಚಾರ್ಯರೊಬ್ಬರ ಸಮಗ್ರಜೀವನವನ್ನು ಚಿತ್ರಿಸಿದ ಕಾದಂಬರಿ ರೂಪದ ಕೃತಿಯೊಂದು ಕನ್ನಡದಲ್ಲಿ ಇದುವರೆಗೂ ಪ್ರಕಟ ವಾಗದಿದ್ದ ಕೊರತೆಯನ್ನು ತುಂಬಿಕೊಡುವ ಪ್ರಯತ್ನ ಇಲ್ಲಿ ನಡೆದಿದೆ. ಕಾದಂಬರಿ ಎಂದ ಮಾತ್ರದಿಂದ ಇದೆಲ್ಲ ಕೇವಲ ಕಲ್ಪನೆಗಳ ಹಂದರವಲ್ಲ. ಇಲ್ಲಿ ಉಲ್ಲಿಖಿತವಾಗಿರುವ ಮುಖ್ಯ ಘಟನೆಗಳಿಗೆಲ್ಲಕ್ಕೂ, ಸಾಹಿತ್ಯಕ ಇಲ್ಲವೆ ಚಾರಿತ್ರಕ ದಾಖಲೆಗಳುಂಟು ಎಂಬುದಕ್ಕೆ ಈ ಕೃತಿಯ ಕಡೆಯಲ್ಲಿ ಕೊಟ್ಟಿರುವ ಅನುಬಂಧಗಳು ಸಾಕ್ಷಿ.

ಶ್ರೀ ಮದಾಚಾರ್ಯರ ಸಾಧನೆ ಮತ್ತು ಸಿದ್ಧಿಗಳನ್ನು ಚಿತ್ರಿಸಿರುವ ಈ ಕೃತಿಯನ್ನು ಕನ್ನಡಿಗರು ಸ್ವಾಗತಿಸುವರೆಂದು ಭಾವಿಸುತ್ತೇನೆ. ಮುಖಪುಟದ ಚಿತ್ರವನ್ನು ಬರೆದುಕೊಟ್ಟ ಕಲಾವಿದ ಶ್ರೀ ಬಿ. ಗುರು ಬಸವಯ್ಯನವರು ಮತ್ತು ಮುದ್ರಿಸಿದ ಪ್ರಬೋಧ ಪ್ರೆಸ್ ಗೆಳೆಯರಿಗೆ ನನ್ನ ನೆನಕೆಗಳು.

ಕಡೆಯದಾಗಿ ಮುನ್ನುಡಿ ನಲ್ನುಡಿಗಳಿಂದ ಕೃತಿಯನ್ನು ಸಿಂಗರಿಸಿ, ಸದಭಿಪ್ರಾಯಗಳನ್ನು ನೀಡಿದ ಎಲ್ಲ ವಿದ್ವಾಂಸರಿಗೆ ಕೃತಜ್ಞ.

ರಥಸಪ್ತಮಿ
೧೨–೨–೧೯೮೪
ಮೈಸೂರು

ಗ್ರಂಥಕರ್ತ

| ಪರಿವಿಡಿ | | | ಪುಟ |
| --- | --- | --- | --- |


೧ ಕಗ್ಗತ್ತಲೆಯಲ್ಲೊಂದು ಬೆಳಕು .... ೧
೨ ಸಂದೇಹ–ಚಿಕಿತ್ಸೆ .... ೧೭
೩ ಮುದಿಗೊಂಡದ ಹಾದಿಯಲ್ಲಿ .... ೩೬
೪ ಮಂಥನ .... ೫೩
೫ ದೋಣಿಯಲ್ಲಿ ದೂರದರ್ಶನ .... ೧೦೧
೬ ಅರ್ಹತೆಗೆ ತಕ್ಕ ಪುರಸ್ಕಾರ .... ೧೧೫
೭ ಪುಟಕ್ಕಿಟ್ಟ ಚಿನ್ನ .... ೧೨೭
೮ ಬೆರಳ ಆರತಿ ಕುರುಳ ಚಾಮರ ! .... ೧೪೨
೯ ಕೋಶ ಓದು ದೇಶ ನೋಡು ! .... ೧೫೧
೧೦ ಕೃಷ್ಣೆಯಿಂದ ಗಂಗೆಯವರೆಗೆ .... ೧೮೩
ಕೊಲ್ಲಿಪಾಕಿ .... ೧೮೪
ಪರಳಿ .... ೧೮೮
ಎರಗಿ ಬಂದ ವಿಪತ್ತು .... ೧೯೧
ಎಲ್ಲೋರದ ಮೂರ್ತಿ ಶಿಲ್ಪ .... ೧೯೯
ಅಜಂತೆಯ ವರ್ಣಕಲೆ .... ೨೦೩
ಉಜ್ಜಯಿನಿ .... ೨೦೮
ಪ್ರಯಾಗ ಮತ್ತು ವಾರಾಣಸಿ .... ೨೧೪
೧೧ ವಿದ್ಯೆಯ ಗಣಿ ವಾರಾಣಸಿ .... ೨೨೧
ಕನ್ಯಾಗುರುಕುಲ .... ೨೨೫
೧೨ ಶಿಕ್ಷಣಸೋಪಾನ .... ೨೨೮
೧೩ ತತ್ತ್ವಾನ್ವೇಷಣೆಯ ತಕ್ಕಡಿಯಲ್ಲಿ .... ೨೪೫
೧೪ ಕದಳೀವನ ಕಾರಣಿಕ .... ೨೫೦
ಶಿವಾಚಾರ್ಯರ ಸಂದರ್ಶನ .... ೨೫೭
ಕಾಯಕಕಲ್ಪತರು .... ೨೬೬
೧೫ ಹಿಮಗಿರಿಧಾಮಗಳಲ್ಲಿ .... ೨೭೯

| | | |
|---|---|---|
| | ಹರಿದ್ವಾರ .... | ೨೮೬ |
| | ಯಮುನೋತ್ರಿಧಾಮ .... | ೨೯೩ |
| | ಗಂಗೋತ್ರಿ .... | ೨೯೫ |
| | ಕೇದಾರಧಾಮ .... | ೩೦೧ |
| | ಬದರಿನಾರಾಯಣ .... | ೩೧೬ |
| ೧೬ | ಅವತರಣ–ಅಭ್ಯುದಯ .... | ೩೨೦ |
| ೧೭ | ಅಭಿನಂದನ-ಅನುತಾಪ .... | ೩೬೦ |
| | ತಿರುಪತಿ .... | ೩೬೬ |
| ೧೮ | ಜಲದ ಮೇಲೆ ಜ್ವಾಲೆ ನರ್ತನ .... | ೪೦೩ |
| | ನೇಪಾಳ ಸುತ್ತಮುತ್ತ ಪ್ರೇಕ್ಷಣೀಯಧಾಮಗಳು .... | ೪೧೯ |
| ೧೯ | ಚಿದ್ ಬೆಳಕು ಚಿಮ್ಮಿತು ! .... | ೪೨೫ |
| | ಶಿವದೀಕ್ಷಾ ಮಹಾಸಂಸ್ಕಾರ .... | ೪೩೮ |
| | ರವಿ ಪೀಠದಲ್ಲಿ ಶಶಿ ಉದಯ .... | ೪೪೮ |
| ೨೦ | ಹಂಸ .... | ೪೫೦ |
| | ಕಾಯಕವೇ ಕಾಮಧೇನು .... | ೪೫೨ |
| | ಚೀನಾಂಬರದಲ್ಲಿ ಅಗ್ನಿ ಬಂಧನ .... | ೫೫೩ |
| | ಪರಮಹಂಸ .... | ೪೫೪ |
| | ಅನುಬಂಧ .... | ೪೬೭ |


O o o o O

೧

# ಕಗ್ಗತ್ತಲೆಯಲ್ಲೊಂದು ಬೆಳಕು

ಮಧ್ಯಾನ್ಹದ ಬೇಗೆ ಇಳಿಮುಖವಾಗತೊಡಗಿತ್ತು. ಹಗಲೆಲ್ಲ ಜಗತ್ತನ್ನು ಶಿಶಿರದ ತನ್ನ ಉರಿಬಿಸಿಲಿನಿಂದ ಬಳಲಿಸಿದ ರವಿ ತಾನೂ ಬಳಲಿ ರುವನೆಂಬಂತೆ ಪಡುಗಡಲಕಡೆ ಧಾವಿಸತೊಡಗಿದ್ದ. ಬಾಹ್ಯಾಕಾಶ ತೊಳೆದಿಟ್ಟ ಕನ್ನಡಿಯಂತೆ ನಿರ್ಮಲವಾಗಿತ್ತು. ಆಹಾರಕ್ಕಾಗಿ ತೆರಳಿದ್ದ ಹಕ್ಕಿಗಳಿಗೆ ತಮ್ಮ ಮರಿಗಳ ನೆನಪಾಗಿ ಅವಕ್ಕೆ ಗುಟುಕು ಕೊಡುವ ಆತುರದಿಂದಲೆಂಬಂತೆ ಅವು ಗಗನತಲದಲ್ಲಿ ಸಾಲುಗಟ್ಟಿ ರಭಸದಿಂದ ಹಿಂದಿರುಗುತ್ತಿದ್ದವು. ವಿವಿಧ ವರ್ಣದ ಆ ವಿಹಂಗಮಮಾಲೆ ದಿವಸ್ಪತಿಯು ತನ್ನ ನಿರ್ಗಮನ ಸಮಯದಲ್ಲಿ ಗಗನಾಂಗನೆಯ ಕೊರಳಿಗೆ ತೊಡಿಸಿದ ನವರತ್ನ ಹಾರದಂತೆ ಕಂಗೊಳಿಸುತ್ತಿತ್ತು. ಆ ವೇಳೆಗಾಗಲೇ ತನ್ನೆಡಗೆ ಆಗಮಿಸುತ್ತಿದ್ದ ಇನಿಯನನ್ನು ಇದಿರ್ಗೊಳ್ಳಲು ಪಶ್ಚಿಮ ದಿಗ್ವನಿತೆ ಸಂಧ್ಯಾರಾಗದಿಂದ ಗಗನಾಂಗಣವನ್ನು ಸಿಂಗರಿಸಿರುವಳೆಂಬಂತೆ ಸಂಜೆಗೆಂಪು ಹರಡುತ್ತಿತ್ತು.

ಸಂಜೆ ಐದು ತಾಸಿನವರೆಗೆ ಪಾಠಶಾಲೆಯಲ್ಲಿ ಪ್ರವಚನದಲ್ಲಿ ತೊಡಗಿದ್ದ ವೇದಮೂರ್ತಿ ಗುರುಲಿಂಗಾರಾಧ್ಯರು ಮನೆಗೆ ಹಿಂದಿರುಗಿ ಬಂದು ಶಲ್ಯವೊಂದನ್ನು ಮೈಮೇಲೆ ಎಳೆದುಕೊಂಡು ಸಂಜೆಯ ಸಂಚಾ ರಕ್ಕೆಂಬಂತೆ ಮೌನವಾಗಿ ಮನೆಯಿಂದ ಹೊರಬಿದ್ದರು.

ಬುದ್ಧಿಯವರ ಮುಖಗಾಂಭೀರ್ಯದ ಇಂಗಿತವನ್ನರಿತ ಪತ್ನಿ ಭಾಗೀರಥಿ ಅವರನ್ನು ಪ್ರಶ್ನಿಸುವ ಗೋಜಿಗೆ ಹೋಗಲಿಲ್ಲ.

ಬೆವಾಜಡದ ಜನರ ವಿಹಾರ ಕ್ಷೇತ್ರವೆಂದರೆ ಸಮೀಪದ ಇಂದ್ರ ಕೀಲವೆ ತಾನೆ! ಅಷ್ಟೇನೂ ಎತ್ತರವಲ್ಲದ ತೀರಾ ಚಿಕ್ಕದೂ ಅಲ್ಲದ ಅದನ್ನು ಪರ್ವತವೆಂದು ಕರೆಯುತ್ತಾರೆ.

ಇಂದ್ರಕೀಲ ಪರ್ವತವು ಐತಿಹಾಸಿಕ ಪ್ರಖ್ಯಾತಿ ಪಡೆದಿರುವಂತೆ ಪೌರಾಣಿಕ ಪ್ರಸಿದ್ಧಿಗೂ ಕಾರಣವಾಗಿದೆ. ಬೆಟ್ಟದ ಮೇಲೆ ಅಲ್ಲಲ್ಲಿ ಕಡೆದು ನಿಲ್ಲಿಸಿರುವ ವೀರಗಲ್ಲುಗಳು ಹಿಂದೆ ಅಲ್ಲಿ ನಡೆದ ಉಗ್ರಕದನಗಳಿಗೆ ಸಾಕ್ಷಿಯಾಗಿದ್ದರೆ ಬೆಟ್ಟದಮೇಲಿನ ಕಂಭ ಮತ್ತು ಅದರ ನಾಲ್ಕೂ ಪಕ್ಕಗಳಲ್ಲಿ ಕಡೆದಿರುವ ಶಿಲ್ಪ ಅದರ ಪೌರಾಣಿಕ ಪ್ರಖ್ಯಾತಿಯನ್ನು ಸಾರುತ್ತದೆ. ಕೃಷ್ಣೆಯ ದಡದಲ್ಲಿರುವ ಪುರಾತನ ಶಿಲ್ಪಸೌಂದರ್ಯದಿಂದ ಕಂಗೊಳಿಸುವ ಮಲ್ಲೇಶ್ವರಾಲಯ ಕನಕದುರ್ಗಿಯ ಸನ್ನಿಧಿಗಳು ಈ ಐತಿಹ್ಯವನ್ನು ಸಮರ್ಥಿಸುತ್ತವೆ.

ಹಿಂದೆ ಪಾಂಡವ ಮಧ್ಯಮನೆನಿಸಿದ ಗಾಂಡೀವಿ ತಮಗೆ ಮುಂದೆ ಒದಗಲಿದ್ದ ಜ್ಞಾತಿಕಲಹದಲ್ಲಿ ಜಯಗಳಿಸಲು ಶಿವಕೃಪೆ ಪಡೆಯಲುವಾಗಿ ವೇದವ್ಯಾಸರ ಸಲಹೆಯಂತೆ ಈ ಪರ್ವತದಲ್ಲಿ ಉಗ್ರತಪಸ್ಸನ್ನು ಎಸಗಿದನೆಂಬ ಪ್ರತೀತಿ ಈ ಕ್ಷೇತ್ರದ ಹಿರಿಮೆಗೆ ಮತ್ತೊಂದು ಕಾರಣ. ಕನ್ನಡ ನಾಡಿನ ಸುಪ್ರಸಿದ್ಧ ಕವಿ ಹರಿಹರದೇವ ತನ್ನ ಗಿರಿಜಾಕಲ್ಯಾಣ ಮಹಾಕಾವ್ಯದಲ್ಲಿ ಶಿವನ ಒಲವು ಪಡೆಯಲೆಳಸಿದ ಗಿರಿಜೆಯನ್ನು ತಪವೆಸಗಲು ತುಂಗಭದ್ರೆಯ ತೀರದ ಹೇಮಕೂಟಕ್ಕೆ ಕರೆತಂದಂತೆ ಮಹಾಕವಿ ಷಡಕ್ಷರದೇವನೂ ಸಹ ತನ್ನ ಶಬರಶಂಕರ ವಿಲಾಸ ಮಹಾ ಕಾವ್ಯದಲ್ಲಿ ಅರ್ಜುನನ ತಪಸ್ಸಿಗೆ ಈ ಇಂದ್ರಕೀಲ ಪರ್ವತವನ್ನು ತನ್ನ ಕಾವ್ಯದಲ್ಲಿ ಉಲ್ಲೇಖಿಸಿರುವುದನ್ನು ಕಾಣುತ್ತೇವೆ.

ಕಿರಾತಾರ್ಜುನ ಕಂಭದ ನಾಲ್ದೆಸೆಗಳಲ್ಲಿ ಕಡೆದಿರುವ ಮಲ್ಲಿಕಾರ್ಜುನ ಲಿಂಗ. ಶಬರ-ಶಬರಿವೇಷದ ಶಿವ-ಪಾರ್ವತಿಯರು, ಅರ್ಜುನ ಶಬರರೂಪ ಶಂಕರನೊಡನೆ ಎಸಗಿದ ಮಲ್ಲಯುದ್ಧ, ಮತ್ತು ಭಕ್ತನ ವೀರಭಕ್ತಿಗೆ ಮೆಚ್ಚಿದ ಶಿವ-ಪಾರ್ವತಿಯರು ಅವನಿಗೆ ಅನುಗ್ರಹಿಸುತ್ತಿರುವ ವಿವಿಧ ಶಸ್ತ್ರಾಸ್ತ್ರ ಶಿಲ್ಪಗಳು. ಈ ಐತಿಹ್ಯವನ್ನು ನಿತ್ಯ ಸತ್ಯವನ್ನಾಗಿಸುತ್ತಿವೆ.

ಪುರಾಣಪ್ರಸಿದ್ಧವಾದ ಇಂದ್ರಕೀಲ ಪರ್ವತ ಬೆಜಡವಾಡದ ನಾಗರಿಕರಿಗೆ ಪ್ರಕೃತಿ ದತ್ತವಾದ ಒಂದು ವರಪ್ರಸಾದ. ಅದೊಂದು ಸೌಂದರ್ಯ ವಿಹಾರದ ಬೀಡು.

ಪ್ರತಿದಿನ ಮುಂಜಾನೆ ಮತ್ತು ಸಂಜೆಗಳಲ್ಲಿ ನಗರದ ಸ್ತ್ರೀಪುರುಷರು ಇಲ್ಲಿ ವಿಹರಿಸುತ್ತಾರೆ. ಮಾತ್ರವಲ್ಲದೆ ಇತ್ತೀಚೆಗೆ ಅದು ಅಂತರ ರಾಷ್ಟ್ರೀಯ ಪ್ರವಾಸ ಕೇಂದ್ರವೂ ಆಗಿರುವುದರಿಂದ ಪ್ರವಾಸಿಗರು ಬೆಟ್ಟದ ಮೇಲೆ ಮತ್ತು ಅದರ ತಪ್ಪಲುಗಳಲ್ಲಿನ ಗಿಡ ಮರ ಪೊದರುಗಳ ನಡುವೆ ಪ್ರಕೃತಿಸಿದ್ಧವಾದ ಹಾಸುಬಂಡೆಗಳ ಮೇಲೆ ನೆರಳಿನಲ್ಲಿ ಕುಳಿತು ಭೂಸ್ವರ್ಗಸುಖವನ್ನು ಸವಿಯುತ್ತಾರೆ.

ಬೆಜವಾಡದಲ್ಲಿ ಬುದ್ಧಿಯವರ ಹೆಸರು ಜನಜನಿತ. ಅವರ ನಿಜವಾದ ಅಭಿಧಾನ (ಹೆಸರು) ಗುರುಲಿಂಗಾರಾಧ್ಯರು. ಅವರು ನಿತ್ಯತೃಪ್ತರು. ಆಜಾನುಬಾಹು, ನಲವತ್ತು ನಲವತ್ತೈದರ ನಡುವಿನ ಹರಯ. ಮನೆಯಲ್ಲಿ ಅವರಿಗೆ ಹೆಚ್ಚು ಸಾಂಸಾರಿಕ ಗೊಂದಲವಿಲ್ಲ. ಹೆಂಡತಿ ಭಾಗೀರಥಿ ತನ್ನ ಹೆಸರಿಗೆ ತಕ್ಕಂತೆ ಪಾವಿತ್ರ್ಯದಲ್ಲಿ ಭಾಗೀರಥಿಯೆ ಆಗಿದ್ದಾಳೆ. ಈ ದಂಪತಿಗಳ ಏಕೈಕಪುತ್ರ ಶ್ರೀಪತಿ, ಐದುವರ್ಷದ ಹಸುಳೆ. ಉಜ್ವಲ ತೇಜಸ್ವಿ. ಮಲ್ಲೇಶ್ವರನಲ್ಲಿ ತಾವು ಸಲ್ಲಿಸಿದ ಹಲವಾರು ಸೋಂಪಿಗಳ ಫಲವಾಗಿ ಅವನು ತಮಗೆ ಲಭಿಸಿರುವನೆಂಬ ನಂಬುಗೆ ಆರಾಧ್ಯರದಾದರೆ, ಕನಕದುರ್ಗಿಯನ್ನು ತಾನು ದೃಢವಾಗಿ ಆರಾಧಿಸಿದ ಫಲವಾಗಿ ಆ ತಾಯಿ ಕರುಣಿಸಿದ ಕೂಸು ಶ್ರೀಪತಿ ಎಂಬ ದೃಢಭಕ್ತಿ ಭಾಗೀರಥಿಯದು. ಆದ್ದರಿಂದಲೇ ಅವರು ಈ ದೇವತಾ ದ್ವಯವನ್ನು ವಿಶೇಷ ಆಸ್ಥೆಯಿಂದ ಆರಾಧಿಸುತ್ತಿದ್ದರಲ್ಲದೆ ಶ್ರೀಪತಿಯನ್ನು ಅವರು ತಮ್ಮ ಕಣ್ಮಣಿಯಂತೆ ಬೆಳೆಸುತ್ತಿದ್ದಾರೆ.

ಮೂರು ವರ್ಷಕ್ಕೇ ಸ್ಪಷ್ಟವಾಗಿ ಮಾತನಾಡತೊಡಗಿದ್ದ ಶ್ರೀಪತಿ ಈಗ ಐದರ ಹಂತ ಏರಿದ್ದಾನೆ. ಈ ಎಳೆತನದಲ್ಲಿಯೇ ಅವನು ಕೇಳುವ ಅನೇಕ ಪ್ರಶ್ನೆಗಳಿಗೆ ಉತ್ತರಿಸುವುದು ಎಂಥವರಿಗೂ ಕಷ್ಟವೇ ಆಗುತ್ತಿತ್ತು. ಅವನ ಅನೇಕ ಪ್ರಶ್ನೆಗಳು ಅವನಲ್ಲಿ ಅರಳಿದ್ದ ಅಪ್ರತಿಮ ಪ್ರಜ್ಞೆಯ ಪ್ರತಿಭೆಯ ಮುಂಗಿರಣಗಳಂತೆ ಮಿನುಗುತ್ತಿದ್ದವು.

ಈ ಸುಸಂಸ್ಕೃತ ದಂಪತಿಗಳ ಸಾಂಸಾರಿಕ ಜೀವನದಲ್ಲಿ ಹಾಲು ಸಕ್ಕರೆಯ ಜೊತೆಗೆ ಜೇನು ಬೆರೆತಂತೆ ಅಧಿಕ ಮಾಧುರ್ಯವನ್ನು ಉಕ್ಕಿಸುತ್ತಿದ್ದವನು ಅವರ ನೆಚ್ಚಿನ ಪುತ್ರ ಶ್ರೀಪತಿ.

ಬೆಜವಾಡದ ನಾಗರಿಕರು ಮಲ್ಲೇಶ್ವರಸ್ವಾಮಿಯ ಪರಮಭಕ್ತರು. ಪರಸ್ಪರ ಸಹಕಾರ ಮತ್ತು ಐಕಮತ್ಯಕ್ಕೆ ಹೆಸರಾಂತವರು. ಅವರು ಶ್ರೀ ಮಲ್ಲೇಶ್ವರ ಮತ್ತು ಕನಕದುರ್ಗೆಯರ ಪೂಜಾ ಕೈಂಕರ್ಯಗಳನ್ನು ವ್ಯವಸ್ಥೆಗೊಳಿಸಿದ್ದರು.

ವಿಶಾಲವಾದ ದೇವಾಲಯ ಪ್ರಾಚೀನಶಿಲ್ಪಸೌಂದರ್ಯಕ್ಕೆ ಹೆಸರಾಂತದ್ದು. ಗರ್ಭಗುಡಿ ಶುಕನಾಸಿಗಳ ಮುಂದಿನ ನವರಂಗದ ಸ್ತಂಭಗಳಲ್ಲಿ ನವಗ್ರಹಗಳು, ಅಷ್ಟದಿಕ್ಪಾಲಕರು ಅವರರವರ ವಾಹನ ಗಳನ್ನೇರಿ ಸಪತ್ನೀಕರಾಗಿ ಸ್ವಾಮಿಯ ಸೇವೆಗೆ ಆಗಮಿಸುತ್ತಿರುವ ದೃಶ್ಯ ಕಲಾತ್ಮಕವಾಗಿ ಆಕರ್ಷಣೀಯವಾಗಿದೆ.

ದೇವಾಲಯದ ಸುತ್ತಲೂ ವಿಶಾಲವಾದ ಆವರಣ; ಎತ್ತರವಾದ ಪ್ರಾಕಾರ. ಮಹಾದ್ವಾರದ ಒಳಹೊಕ್ಕರೆ ಬಲಗಡೆ ವೇದ ಪಾಠಶಾಲೆ, ಅದಕ್ಕೆ ಹೊಂದಿಕೊಂಡಂತೆ ಸಂಸ್ಕೃತ-ಜ್ಯೋತಿಷ ಪಾಠಶಾಲೆಗಳು. ಉಚಿತ ವಿದ್ಯಾರ್ಥಿನಿಲಯ, ಉಪಾಧ್ಯಾಯರ ಬಿಡಾರಗಳು, ಪರಸ್ಥಳಗಳಿಂದ ಬರುವ ಭಕ್ತಾದಿಗಳಲ್ಲಿ ಸ್ವಾಮಿಯ ಕೈಂಕರ್ಯ ಸಲ್ಲಿಸಿ ಒಂದೆರಡು ದಿನ ಉಳಿದುಕೊಳ್ಳುವವರಿಗೆ ಚಿಕ್ಕ ಚಿಕ್ಕ ಬಿಡಾರಗಳು ಏರ್ಪಟ್ಟಿವೆ.

ಶ್ರೀಮಲ್ಲೇಶ್ವರ ಕೃಪಾಪೋಷಿತ ವೇದ, ಸಂಸ್ಕೃತ ಮತ್ತು ಜ್ಯೋತಿಷ್ಯ ಪಾಠಶಾಲೆಯ ಮುಖ್ಯೋಪಾಧ್ಯಾಯರು ವೇದಮೂರ್ತಿ ಗುರುಲಿಂಗಾರಾಧ್ಯರೇ. ಇವರ ಜೊತೆಗೆ ಸಂಸ್ಕೃತ ಮತ್ತು ಭಾಷಾಬೋಧಕರಾದ ನಾಲ್ಕಾರು ಮಂದಿ ವಿದ್ವಾಂಸರೂ ಅಲ್ಲಿ ಸಹಾಯೋಪಾಧ್ಯಾಯರಾಗಿ ನೇಮಕರಾಗಿದ್ದಾರೆ. ಶಾಲೆ ಮತ್ತು ವಿದ್ಯಾರ್ಥಿನಿಲಯಗಳನ್ನು ನಾಗರಿಕ ವಿಶ್ವಸ್ತ ಸಮಿತಿಯೊಂದು ಸುವ್ಯವಸ್ಥಿತವಾಗಿ ನಡೆಸುತ್ತಿದೆ.

ವೇ. ಆರಾಧ್ಯರು ಸಂಸ್ಕೃತದಲ್ಲಿ ನಾಟಕಾಂತಸಾಹಿತ್ಯದವರೆಗೆ ಅವರ ಖಾಸಾಭಾವಂದಿರಾದ ಮುದಗೊಂಡದ ಸೋಮ ಶಂಭು ದೀಕ್ಷಿತರಲ್ಲಿ ಅಭ್ಯಾಸಮಾಡಿದ್ದರು. ವೇ. ದೀಕ್ಷಿತರು ವಿದ್ವತ್ತಿಗೆ ಅನುಭಾವಕ್ಕೆ ಹೆಸರಾಂತ

ವರು. ಅವರು ಕಾಶಿಯ ವಿಶ್ವಾರಾಧ್ಯಮಹಾವಿದ್ಯಾಪೀಠದಲ್ಲಿ ಸಕಲಾಗಮ ಪ್ರವೀಣರೆನಿಸಿ ಪ್ರಾಚಾರ್ಯರಾಗಿದ್ದು ನಿವೃತ್ತರಾಗಿ ತಮ್ಮ ಜನ್ಮಭೂಮಿಗೆ ಹಿಂದಿರುಗಿ ಬಂದು ನೆಲೆಸಿದ್ದಾರೆ. ಮೇಲಾಗಿ ಆರಾಧ್ಯರು ವೇದ ಮತ್ತು ಜ್ಯೋತಿಷ್ಯಗಳಲ್ಲಿ ತಕ್ಕಷ್ಟು ಪರಿಣತಿ ಪಡೆದಿದ್ದಾರೆ.

ಆರಾಧ್ಯರು ಶಾಲೆಯ ಮುಖ್ಯೋಪಾಧ್ಯಾಯತ್ವದ ಜೊತೆಗೆ ದೇವಾಲಯದಲ್ಲಿ ಭಕ್ತರು ಆಗಾಗ್ಗೆ ಏರ್ಪಡಿಸುತ್ತಿದ್ದ ಮಹಾನ್ಯಾಸ ಪೂರ್ವಕ ಏಕವಾರ, ಏಕಾದಶವಾರ (ರುದ್ರೈಕಾದಶಿನೀ) ರುದ್ರಾಭಿಷೇಕ ಪೂರ್ವಕ ಶ್ರೀರುದ್ರಹೋಮಾದಿಗಳಲ್ಲಿ ಆಚಾರ್ಯರ ಪದವಿಯನ್ನು ಅಲಂಕರಿಸುತ್ತಿದ್ದರಲ್ಲದೆ ಅವರು ಬೆಜವಾಡದ ಆರಾಧ್ಯ ಬ್ರಾಹ್ಮಣ ಮತ್ತು ವೀರಶೈವ ಸಮಾಜದಲ್ಲಿ ನಡೆಯುವ ಹವ್ಯ-ಕವ್ಯ ಕಾರ್ಯಕಲಾಪಗಳಲ್ಲಿಯೂ ಭಾಗವಹಿಸುತ್ತಿದ್ದುದರಿಂದ ಅಲ್ಲಿಯ ನಾಗರಿಕರದೃಷ್ಟಿಯಲ್ಲಿ ಅವರೊಂದು ಕಲ್ಪವೃಕ್ಷವೇ ಆಗಿರುವರೆಂದರೆ ಅತ್ಯುಕ್ತಿಯಾಗುತ್ತಿರಲಿಲ್ಲ. ವೇದಮೂರ್ತಿ ಆರಾಧ್ಯರಿಗೆ ಸಂಗೀತಾದಿ ಕಲೆಗಳಲ್ಲಿಯೂ ಸಂಚಾರವಿತ್ತು. ಅವರು ತಮಗೆ ಮನೆಯಲ್ಲಿ ಬೇಸರವಾದಾಗ ಮಲ್ಲೇಶ್ವರಾಲಯಕ್ಕೆ ಬಂದು ತಂಬೂರಿಹಿಡಿದು ಸ್ವಾಮಿಯ ಸನ್ನಿಧಿಯಲ್ಲಿ ದೇವತಾ ಸ್ತೋತ್ರಗಳನ್ನು ಮನದಣಿಯೆ ಕೀರ್ತಿಸುತ್ತಿದ್ದರು. ಒಮ್ಮೊಮ್ಮೆ ವರ್ಣಕುಂಚವನ್ನು ಕೈಗೆತ್ತಿಕೊಂಡು ಬಿಡಿಸಿದ ಪೌರಾಣಿಕ ಮತ್ತು ಪ್ರಾಕೃತಿಕ ಚಿತ್ರಗಳು ದೇವಾಲಯದ ಪ್ರಾಂಗಣದಲ್ಲಿ ರಾರಾಜಿಸುತ್ತಿವೆ. ಅವುಗಳಲ್ಲಿ 'ಭಕ್ತಮಾರ್ಕಂಡೇಯ' 'ಬೇಡರ ಕಣ್ಣಪ್ಪ' ಮತ್ತು 'ಇಂದ್ರಕೀಲ'ದ ದೃಶ್ಯಗಳು ಸುಪ್ರಸಿದ್ಧವಾಗಿವೆ.

ಇಂದು ಸಂಜೆಯ ವಿಹಾರಕ್ಕೆಂದು ಮನೆಯಿಂದ ಹೊರಬಿದ್ದ ಬುದ್ಧಿಯವರು ಮಲ್ಲೇಶ್ವರ-ಕನಕದುರ್ಗೆಯರಿಗೆ ಮೂರು ಬಾರಿ ಬಲವಂದು ಸಾಷ್ಟಾಂಗ ಹಾಕಿ ಇಂದ್ರಕೀಲದ ಕಡೆ ಅಭಿಮುಖರಾದರು.

ಮನೆಬಿಡುವಾಗ ಬುದ್ಧಿಯವರು ಒಬ್ಬರೇ ಆದರೂ ಅವರು ದೇವಾಲಯವನ್ನು ಬಿಟ್ಟು ಮುನ್ನಡೆದಾಗ ನಾಲ್ಕಾರು ಮಂದಿ ಶಿಷ್ಯರು ಅವರನ್ನು

ಹಿಂಬಾಲಿಸಿ, ತಮ್ಮ ಕುಂದು-ಕೊರತೆಗಳನ್ನು ಅವರಲ್ಲಿ ತೋಡಿಕೊಳ್ಳು ವುದು ಪದ್ಧತಿ. ಆದರೆ ಈ ದಿನ ಬುದ್ಧಿಯವರು ತಳೆದಿರುವ ಸ್ವಭಾವ ಗಾಂಭೀರ್ಯ ಮುಖಚರ್ಯೆಯನ್ನು ಗಮನಿಸಿದ ಅವರು ಮೌನ ವಾಗಿಯೇ ಅವರಿಗೆ ವಂದಿಸಿ ಬೀಳ್ಕೊಡುತ್ತಿದ್ದರು.

ಆರಾಧ್ಯರು ಬೆಟ್ಟದ ನಡುನೆತ್ತಿಯವರೆಗೂ ಹತ್ತಿ ಅಲ್ಲಲ್ಲಿ ಸುತ್ತಾಡಿ ಬಂದು ನಿರ್ಜನವಾದ ಪೊದೆಯ ಪಕ್ಕದಲ್ಲಿದ್ದ ಬಂಡೆಯೊಂದರ ಮೇಲೆ ದೇವಾಲಯದ ಗರ್ಭಗುಡಿಗೆ ಎದುರಾಗಿ ಕುಳಿತರು. ಅಷ್ಟು ಹೊತ್ತಿಗೆ ಸೂರ್ಯದೇವ ಪಶ್ಚಿಮಾಂಬುಧಿಯಲ್ಲಿ ಮುಳುಗಿ ಮರೆಯಾಗಿದ್ದ.

ಕತ್ತಲು ಕವಿಯತೊಡಗಿತ್ತು. ಬರುಬರುತ್ತಾ ನೀಲಾಕಾಶದಲ್ಲಿ ಮಿನುಗತೊಡಗಿದ್ದ ತಾರೆಗೆಳು ಬೆಟ್ಟವನ್ನು ಬಳಸಿ ಹರಿಯುತ್ತಿದ್ದ ಕೃಷ್ಣೆಯ ನೀಲ ಜಲದಲ್ಲಿ ಪ್ರತಿಬಿಂಬಿಸುತ್ತಿದ್ದುದರಿಂದ ಗಿರಿಕನ್ಯೆ ನೀಲಾಂಬರವನ್ನುಟ್ಟು ಮಣಿಖಚಿತ ಸೆರಗು ಹೊದೆದು ಇರುಳರಸನಿಗಾಗಿ ಕಾಯ್ದಿರುವ ಅಭಿಸಾರಿಕೆಯಂತೆ ಕಾಣುತ್ತಿದ್ದಳು.

ಆರಾಧ್ಯರಿಗೆ ಇದಾವುದರ ಪರಿವೆಯೂ ಇದ್ದಂತಿರಲಿಲ್ಲ; ಏಕೆಂದರೆ ಅಂದು ಮುಂಜಾನೆ ಮನೆಯಲ್ಲಿ ನಡೆದ ಘಟನೆಯೊಂದು ಅವರ ಮನಸ್ಸನ್ನು ಆವರಿಸಿತ್ತು. ಅದೇ ಯೋಚನೆಯಲ್ಲಿಯೇ ಅವರಿಗೆ ಕಳೆದ ಕಾಲದ ಪರಿವೆ ಇರಲಿಲ್ಲ. ಅದೇ ಗುಂಗಿನಲ್ಲಿಯೇ ಅವರು ಬೆಟ್ಟದ ಮೇಲೆಲ್ಲಾ ಸುತ್ತಾಡಿ ಪೊದೆಯೊಂದರ ಬಳಿಯ ಬಂಡೆಯನ್ನೇರಿ ಕುಳಿ ತಿದ್ದರೂ ಅವರ ಮನಸ್ಸು ಬೆಳಗಿನ ಸಂದರ್ಭದ ಸುರುಳಿಯನ್ನು ಬಿಚ್ಚ ತೊಡಗಿತ್ತು.

ಆರಾಧ್ಯರು ಪ್ರತಿದಿನ ಉಷಃಕಾಲಕ್ಕೆ ಎಚ್ಚೆತ್ತು ಕೃಷ್ಣಾತೀರದ ತಮ್ಮ ತೋಟಕ್ಕೆ ತೆರಳಿ, ನದಿಯಲ್ಲಿನ ಹಾಸು ಬಂಡೆಗಳ ಮೇಲೆ ಬಟ್ಟೆಗಳನ್ನು ಮಡಿಮಾಡಿ, ಪತ್ರ ಪುಷ್ಪಾದಿಗಳನ್ನು ಬಿಡಿಸಿಕೊಂಡು ಮನೆಗೆ ಹಿಂದಿರು ಗ್ಗುವುದು ವಾಡಿಕೆ.

ಬುದ್ಧಿಯವರು ಮನೆಗೆ ಹಿಂದಿರುಗುವ ವೇಳೆಗೆ ಭಾಗೀರಥಿ ಶುಚಿ ರ್ಭೂತಳಾಗಿ ಮಗನಿಗೆ ಸ್ನಾನ ಮಾಡಿಸಿ, ಬಚ್ಚಲಲ್ಲಿ ಬುದ್ಧಿಯವರಿಗೆ ಮಡಿ-ವಸ್ತ್ರಗಳನ್ನು ಸಿದ್ಧಪಡಿಸಿರುತ್ತಿದ್ದರು.

ಸ್ನಾನ ಮಾಡಿದ ಬುದ್ಧಿಯವರು ಮಡಿಯುಟ್ಟು ಮೊದಲೇ ಸಿದ್ಧ ಪಡಿಸಿದ್ದ ವೇದಿಕೆಯ ಮೇಲೆ ಕುಳಿತು, ಸಂಧ್ಯಾವಂದನೆ, ಶಿವಾರ್ಚನೆ ಮುಗಿಸಿ, ನಿತ್ಯಾಗ್ನಿಹೋತ್ರದಲ್ಲಿ ತೊಡಗುವುದು ಪದ್ಧತಿ; ಇದು ಅವರ ದೈನಂದಿನ ಕಾರ್ಯಕ್ರಮ.

ಆ ವೇಳೆಗೆ ಭಾಗೀರಥೀತಾಯಿಯವರೂ ಮನೆಗೆಲಸಗಳನ್ನು ಒಪ್ಪಮಾಡಿ, ಅಗ್ನಿಶಾಲೆಯಲ್ಲಿಯೂ ಅಣಿಮಾಡಿದ್ದರು. ಬುದ್ಧಿಯವರು ಪತ್ನೀ ಸಮೇತರಾಗಿ ಪೀಠವನ್ನು ಅಲಂಕರಿಸಿದರು.

ಆರಾಧ್ಯರು ಆಚಮನಪ್ರಾಣಾಯಾಮಗಳನ್ನು ಮಾಡಿ, ಅನಾಮಿಕೆ ಯಲ್ಲಿ ಪವಿತ್ರವನ್ನು ಧರಿಸಿ. ಕುಸುಮಾಕ್ಷತೆಗಳನ್ನು ಪತ್ನಿಯ ಕೈಗೂ ಇತ್ತು, ತಮ್ಮ ಕರಸಂಪುಟದಲ್ಲಿ ಪುಷ್ಪಾಕ್ಷತೆ ಹಿಡಿದು —"ಅಸ್ಯಾಂ ಶುಭ ತಿಥೌ ಶ್ರೀ ಸಾಂಬಸದಾಶಿವ ಪ್ರೀತ್ಯರ್ಥಂ ನಿತ್ಯಾಗ್ನಿಹೋಮಂ ಕರಿಷ್ಯೆ" ಎಂದು ಸಂಕಲ್ಪಿಸಿ, ಗಣಪತಿಯನ್ನು ಪೂಜಿಸಿ ಯಜ್ಞೇಶ್ವರನನ್ನು ಉದ್ದೇಶಿಸಿ, ಮುಕುಳಿತಕರಪುಟರಾಗಿ "ಓಂ ಚತಾರಿಶೃಂಗಾ...." ಎಂಬ ಮಂತ್ರವನ್ನು ಪಠಿಸಿ ಕುಸುಮಾಕ್ಷತೆಗಳನ್ನು ಕುಂಡದಲ್ಲಿ ನಿಕ್ಷೇಪಿ ಸುತ್ತಿರುವಾಗ ಹಿಂಬದಿಯಲ್ಲಿ ಕುಳಿತಿದ್ದ ಚಿರಂಜೀವಿ ಶ್ರೀಪತಿ ಅದೇ ಮಂತ್ರವನ್ನು ಅಸ್ಖಲಿತವಾಣಿಯಿಂದ ಉಪಾಂಶು(ಮೆಲ್ಲಗೆ)ವಾಗಿ ಉಚ್ಚರಿ ಸುತ್ತಿರುವುದು ಬುದ್ಧಿಯವರ ಗಮನಕ್ಕೆ ಬಂತು. ಬುದ್ಧಿಯವರು ಹಿಂದಿರುಗಿ ನೋಡಿ ಗಾಬರಿಯಿಂದ-ಮಗನನ್ನು ಗಮನಿಸಿದರು.

ಶುಚಿರ್ಭೂತನಾಗಿ ಮಡಿಯುಟ್ಟು ಕಣ್ಣುಮುಚ್ಚಿ ಕೈ ಜೋಡಿಸಿ ಕೊಂಡು ಕುಳಿತಿರುವ ಶ್ರೀಪತಿ ತಮ್ಮ ಅರ್ಚನೆಯನ್ನು ನೋಡ ಬಂದ ಕಾರ್ತಿಕೇಯನಂತೆ ಕಂಡ. ಕುಮಾರಾವಸ್ಥೆಯ ಅಮರಗುರುವಿ

ನಂತೆಯೂ ಕಾಣಿಸಿಕೊಂಡ. ಆಶ್ಚರ್ಯಚಕಿತರಾದ ಅವರು ಆ ದಿವ್ಯ ತೇಜಸ್ಸಿಗೆ ಮಣಿದು, ಮತ್ತೆ ತಲೆ ಎತ್ತಿ ನೋಡಿದಾಗ ಅವರಿಗೆ ಭಸ್ಮರುದ್ರಾಕ್ಷ ಧರಿಸಿದ್ದ ಶ್ರೀಪತಿ ತಮ್ಮ ಆಹ್ನಿಕವನ್ನು ಪರಿಕ್ಷೀಸಲು ಬಂದ ಬಾಲ ಯಜ್ಞೇಶ್ವರನಂತೆಯೂ ಭಾಸವಾದ !

ಶೈವಾಗ್ನಿಹೋತ್ರದಲ್ಲಿ ಬರುವ ವಿಧಿಕ್ರಮದಂತೆ ಶಿವ-ಪಾರ್ವತಿಯರು ಶಿವಾಗ್ನಿಕುಮಾರನ ಜನನಕ್ಕಾಗಿ ಎಸಗುವ ಗರ್ಭಾಧಾನಾದಿ ಸಂಸ್ಕಾರ ಗಳು, ಶಿವಾಗ್ನಿಕುಮಾರನ ಜನನ ಮುಂತಾದ ಕ್ರಿಯೆಗಳು ಅವರ ಎದುರಿಗೆ ಬಂದು ನಿಂತಂತೆ ಆಗಿತ್ತು. ಅವರು ದಿಗ್ಮೂಢರಾಗಿ ಕ್ಷಣಕಾಲ ಮೌನಧರಿಸಿದರು. ಮತ್ತೆ ಎಚ್ಚತ್ತು ಮಗನ ಭವಿಷ್ಯವನ್ನು ನೆನೆದು ವ್ಯಸನಾಕ್ರಾಂತರಾದರು.

ಪ್ರತಿನಿತ್ಯವೂ ಬುದ್ಧಿಯವರ ಜೊತೆ ನಿತ್ಯಾಹ್ನಿಕಾದಿಗಳಲ್ಲಿ ಭಾಗ ಹಿಸುತ್ತಿದ್ದ ಶ್ರೀಪತಿಗೆ ಸಂಧ್ಯೆ-ಅರ್ಚನ, ಅಗ್ನಿಹೋತ್ರದ ಮಂತ್ರಗಳೆಲ್ಲ ಕಂಠಪಾಠವಾಗಿದ್ದವು. ಆದರೂ ಅವನು ತಂದೆಯವರ ಮುಂದೆ ಮಂತ್ರ ಗಳನ್ನು ಉಚ್ಚರಿಸಲು ಹೆದರಿಕೆಯೋ ಅಥವಾ ನಾಚಿಕೆಯೋ ? ಎಂಬಂತೆ ಮೌನವಾಗಿರುತ್ತಿದ್ದರೂ ಅವನ ನಾಲಗೆ ಉಪಾಂಶು (ಮೃದು) ವಾಗಿ ಮಂತ್ರ ಪಠನಮಾಡುತ್ತಿತ್ತು.

ಆದರೆ ಈ ದಿನ ಯಾವ ಪ್ರೇರಣೆಯೋ ತಿಳಿಯದು, ಅವನು ತಂದೆಯ ಹಿಂದೆ ಕುಳಿತು ಈಷತ್ ವಾಚಿಕ (ಸ್ವಲ್ಪಮೆಲ್ಲಗೆ) ವಾಗಿ ಮಂತ್ರಪಠಿ ಸುತ್ತಿದ್ದುದು ಬುದ್ಧಿಯವರ ಗಮನಕ್ಕೆ ಬಂದಿತ್ತು, ಬುದ್ಧಿಯವರು ಮಂತ್ರವನ್ನು ಉಚ್ಚರಿಸಿ ಸುಮ್ಮನಾದಗೂ ಅದರ ಮುಂದಿನ ಮಂತ್ರ ಭಾಗವನ್ನು ಶ್ರೀಪತಿ ಮುಂದುವರಿಸುತ್ತಿದ್ದ. ಇದರಿಂದ ಬುದ್ಧಿಯ ವರಿಗೆ ಆಶ್ಚರ್ಯ ಮತ್ತು ಗಾಬರಿಗಳೆರಡೂ ಏಕಕಾಲಕ್ಕೆ ಮೂಡಿ ಬಂದ ದ್ದರಿಂದ ಅವರು ವಿಹ್ವಲರಾದರು. ಆದರೆ ತಾಯಿಯವರಿಗೆ ಬುದ್ಧಿಯವರ ಇಂಗಿತ ಅರ್ಥವಾಗದೆ ಅವರು–

"ಹೇಳು ಮರಿ, ಹೆದರಬೇಡ! ತಪ್ಪಿದ್ದರೆ ಬುದ್ಧಿಯವರು ತಿದ್ದು ತ್ತಾರೆ! ಹೇಳಪ್ಪ ನೀನು !"

ಎಂದು ಪ್ರೋತ್ಸಾಹಿಸಿದರು ಮಗನನ್ನು.

ಆದರೆ ಬುದ್ಧಿಯವರು ಕುಪಿತರಾಗಿ

"ಹೇಳು ಮರಿ ಹೆದರ ಬೇಡ!" ಎಂದು ಪತ್ನಿಯನ್ನು ಹಂಗಿಸುತ್ತಾ.

"ಏನು ಹೇಳುವುದು! ಎಲ್ಲ ನಿನ್ನದೇ ಪ್ರೋತ್ಸಾಹ !" ಎಂದರು ಬುದ್ಧಿಯವರು ಸಿಡುಕಿನಿಂದ.

ಭಾಗೀರಥಿಗೆ ತಲೆಯಮೇಲೆ ಸಿಡಿಲೆರಗಿದಂತಾಗಿತ್ತು, ತಲೆ ಎತ್ತಿ ಪತಿಯ ಮುಖನೋಡಿದಾಗ ಅದು ತುಂಬಾ ಉದ್ವಿಗ್ನವಾಗಿತ್ತು. ಈ ಅಕಾಲದಲ್ಲಿ ಮಿಂಚು-ಗುಡುಗು-ಸಿಡಿಲುಗಳು ಒಮ್ಮೆಯೇ ಮೇಲೆರಗಿ ದಂತಾಗಿ ಅವರ ಕಣ್ಣುಗಳಲ್ಲಿ ಕಂಬನಿಯ ಬಿರುಮಳೆ ಸುರಿಯ ತೊಡಗಿತು. ಆದರೂ ಅವರು ಸಾವರಸಿಕೊಂಡು ಹೇಳಿದರು

"ಬುದ್ಧಿಯವರು ಕ್ಷಮಿಸಬೇಕು. ಶ್ರೀಪತಿಗೆ ನೀವು ಪ್ರತಿದಿನ ಹೇಳುವ ಮಂತ್ರಗಳೆಲ್ಲ ಬಾಯಿಪಾಠವಾಗಿವೆ!" ಎಂದರು ವಿನಯದಿಂದ ತಲೆತಗ್ಗಿಸಿ.

"ಹೌದಾ ಮರಿ!" ಎಂದ ಬುದ್ಧಿಯವರು ವಾತ್ಸಲ್ಯದಿಂದ "ಹೇಳು ಮರಿ, ನಿನಗೆ ಏನೇನು ಬರುತ್ತೆ ; ನಾಚಬೇಡ; ಧೈರ್ಯವಾಗಿಹೇಳು"

—ಎಂದು ಬುದ್ಧಿಯವರೂ ಪ್ರೋತ್ಸಾಹಿಸಿದರು.

ಆದರೆ ತಂದೆಯವರ ಈ ಕೋಪದ ಬಿರುನುಡಿ ಶ್ರೀಪತಿಯನ್ನು ದಿಗ್ಮೂಢನನ್ನಾಗಿಸಿತ್ತು. ತಂದೆಯವರಲ್ಲಿ ಆಗಿರುವ ಈ ಪರಿಸ್ಥಿತಿಯನ್ನು ಅವನು ಎಂದೂ ಕಂಡಿರಲಿಲ್ಲ, ಋಷ್ಯಾಶ್ರಮದಲ್ಲಿ ಬೆಳೆದ ಜಿಂಕೆಯಮರಿ ಬಿಸಿಲಿಗೆ ಒಣಹಾಕಿದ್ದಧಾನ್ಯವನ್ನು ಮೇಯಬಂದಾಗ ಋಷಿಕನ್ಯೆ ಹುಸಿ ಕೋಪವನ್ನು ನಟಿಸಿ ಮರಿಯನ್ನು ಹೊಡೆಯಲು ಎತ್ತಿದ ಕೋಲನ್ನೇ ಆ ಮರಿ ಮೂಸಿನೋಡುವಂತೆ ಶ್ರೀಪತಿ, ತಂದೆಯು ಕೋಪಿಸಿ ಕೊಂಡದ್ದನ್ನೇ ಎಂದೂ ಅರಿಯದಿದ್ದುದರಿಂದ ತಂದೆಯು ತನ್ನ ಬಗ್ಗೆ ತೋರಿದ ಪ್ರೋತ್ಸಾಹವನ್ನು ನಿಜವೆಂದೇ ಭಾವಿಸಿದನಲ್ಲದೆ ಈ ಪ್ರೋತ್ಸಾಹದಿಂದ

ವ್ಯೈಯುಬ್ಬಿದನೆಂಬಂತೆ ತನಗೆ ಕಂಠಪಾಠವಾಗಿದ್ದ ಎಲ್ಲ ಮಂತ್ರಗಳನ್ನೂ ಚ್ಯುಚು ತಪ್ಪದೆ ಪಾಠ ಒಪ್ಪಿಸಿದ.

ಕೇಳಿದ ಆರಾಧ್ಯರಿಗೆ ಮಗನ ಈ ಸಂಸ್ಕಾರಕ್ಕೆ ಹೆಮ್ಮೆ ಎನಿಸಿತು. ಅವನು ಸಾಮಾನ್ಯ ಬಾಲಕನಲ್ಲ ಅವನು 'ತೀವ್ರಾಧಿಕಾರಿ' ಎಂಬ ಅರಿವೂ ಮೂಡಿ ಬಂದಿತ್ತು. ಆದರೂ ಅವರು ಉದ್ವಿಗ್ನರಾದರು. ಅವರ ಮನಸ್ಸಿಗೆ ಆಗಿರುವ ಆತಂಕದ ಅರ್ಥ ಭಾಗೀರಥಿಗೆ ಆಗಲೇ ಇಲ್ಲ! ನಿರ್ವಾಹವಿಲ್ಲದೆ ಅವರು ಕೇಳಿದರು.

"ಬುದ್ಧಿಯವರ ಅಸಮಾಧಾನಕ್ಕೆ ಕಾರಣವೇನೆಂಬುದೇ ತಿಳಿಯು ಲ್ಲಿಲ್ಲ!" ಎಂದರು ನಮ್ರತೆ ಯಿಂದ ತಲೆತಗ್ಗಿಸಿ.

ಭಾಗೀರಥಿಯ ಸಂಶಯು ಸ್ಪಷ್ಟವಾಗಿತ್ತು. ಅದಕ್ಕೆ ತಕ್ಕ ಸಮ ಜಾಯಿಷಿ ಹೇಳುವುದು ಆರಾಧ್ಯರಿಗೂ ಕಷ್ಟವಾಗಿತ್ತು. ಆದರೂ ಅವರು ಹೇಳಿದರು.

"ಭಾಗು, ನಿನ್ನ ತರ್ಕ ಸರಿಯಾಗಿದೆ. ಆದರೆ ಸಂಪ್ರದಾಯದ ಪ್ರಕಾರ ಮಗನಿಗೆ ದ್ವಿಜತ್ವ ಸಿದ್ಧಿಗೆ ಕಾರಣವಾದದ್ದು ಉಪಯನ. ದ್ವಿಜ ನಲ್ಲದವನಿಗೆ ಪವಿತ್ರವಾದ ವೇದವನ್ನು ಪಠಿಸುವ ಅಧಿಕಾರವಿಲ್ಲ. ಶಾಸ್ತ್ರವು—

"ಸ್ತ್ರೀ ಶೂದ್ರರು ವೇದವನ್ನು ಪಠಿಸಬಾರದು. ಎಂದು" ನಿಧಿಸಿದೆ. ಆದರೆ ಅವನಿಗಿನ್ನೂ ಉಪನಯುವೇ ಆಗಿಲ್ಲಿ; ಉಪನಯನದ ಅಂಗವಾಗಿ ಗಾಯತ್ರಿಯ ಉಪದೇಶವೂ ಆಗಿಲ್ಲ, ಎಂದ ಮೇಲೆ ಅವನು ವೇದ ಮಂತ್ರ ಗಳನ್ನು ಉಚ್ಚರಿಸಬಹುದೆ? ಇದನ್ನು ತ್ರಿವರ್ಣದ ಬಂಧು ಬಾಂಧವರು ಕಂಡರೆ ಏನೆಂದಾರು? ಅವರು ಅನ್ನುವುದು ಹಾಗಿರಲಿ, ಅದು ಚಿರಂಜೀವಿಯ ಭವಿಷ್ಯಕ್ಕೆ ಹೆಚ್ಚಾಗಿ ನಮಗೂ ಪ್ರತ್ಯವಾಯವೇ (ದೋಷ) । ಮಾತ್ರ ವಲ್ಲದೆ ಅಪಾಯವೂ ತಪ್ಪಿದ್ದಲ್ಲ!

ಎಂದು ಆರಾಧ್ಯರು ತಲೆಯಮೇಲೆ ಕೈಇಟ್ಟುಕುಳಿತರು ಉದ್ವಿಗ್ನತೆಯನ್ನು ವ್ಯಕ್ತಪಡಿಸಿ.

"ಸ್ವಾಮಿ, ತಾವು ಸಂಪ್ರದಾಯಕ್ಕೆಶರಣರು! ವೇದಾಧ್ಯಯನವನ್ನು ಮಾಡುವ ಅಧಿಕಾರ ಸಿದ್ಧಿಸಬೇಕಾದರೆ ಉಪನಯನವಾಗಬೇಕಾದದ್ದು ಸರಿ! ಆದರೆ ಆದರ ಜೊತೆಗೆ ಸ್ತ್ರೀ ಮತ್ತು ಶೂದ್ರರಿಗೆ ವೇದವನ್ನು ಓದುವ ಅಧಿಕಾರವಿಲ್ಲ" ಎಂದು ಹೇಳಿದ ನಿಮ್ಮ ಶಾಸ್ತ್ರ ನನ್ನನ್ನೂ ಶೂದ್ರ ಶ್ರೇಣಿಯಲ್ಲಿ ಸೇರಿಸಿದ್ದು ಸರಿಯೆ?"

ಎಂದು ಆಕ್ಷೇಪಿಸಿದಳು. ಭಾಗೀರಥಿ ಧೈರ್ಯವನ್ನು ತಳೆದು.

"ಭಾಗು, ಇದು ಆಕ್ಷೇಪಿಸುವ ವಿಷಯವಲ್ಲ ಇದು ಶಾಸ್ತ್ರ. ವಿಧಿ ! ಶಾಸ್ತ್ರ ಎಂದರೇನು?"

"ಅದನ್ನು ನೀವೇ ವಿವರಿಸಬೇಕು!"

"ಶಾಸನಾತ್ ಶಾಸ್ತ್ರಮಿತ್ಯಾಹುಃ" ಎಂದರೆ 'ಶಾಸನ' (ORDER) ಮಾಡುವುದು ಶಾಸ್ತ್ರ. ಅದು ರಾಜಾಜ್ಞೆ. ರಾಜಾಜ್ಞೆ ಮೀರಿದರೆ ಶಿಕ್ಷೆ ಸಿದ್ಧ! ಏಕೆಂದರೆ ವೇದವನ್ನು 'ಪ್ರಭು ಸಮ್ಮಿತೆ' ಎಂದು ಕರೆದಿರುವುದು ಇದಾಕ್ಕಾಗಿಯೆ!

—ಎಂದರು ಆರಾಧ್ಯರು ಖಚಿತವಾಗಿ ಘೋಷಿಸಿ. ಭಾಗೀರಥಿ ಸುಮ್ಮನಾಗಲಿಲ್ಲ; ಅವರು ಮುಂದುವರಿದು ತಮ್ಮ ಸಂದೇಹವನ್ನು ಮಂಡಿಸಿದರು.

"ರಾಜಾಜ್ಞೆ ನಿರ್ದೋಷವಾಗಿರಬೇಕಲ್ಲವೆ?"

"ಹೌದು, ಆದರೆ ಅದನ್ನು ಪ್ರಶ್ನಿಸುವ ಹಕ್ಕು ನಮಗಿಲ್ಲ ರಾಜಾಜ್ಞೆ ನಿರ್ದೋಷವಷ್ಟೇ ಅಲ್ಲದೆ ಅದು ಜನಕ್ಕೆ ಹಿತಕರವೂ ಆಗಿರುತ್ತದೆ. ಅದನ್ನೇ ಪ್ರಭುತ್ವವು ಚೆನ್ನಾಗಿ ಪರ್ಯಾಲೋಚಿಸಿಯೇ ಆಜ್ಞೆ ಹೊರಡಿಸು

ತ್ತದೆಂದು ನಾವು ಭಾವಿಸ ಬೇಕು! ರಾಜ (ಸರ್ಕಾರ-ಪ್ರಭುತ್ವ) ನಿರುವುದು ಜನರ ಹಿತವನ್ನು ಕಾಯುವುದಕ್ಕಾಗಿಯೇ ಅಲ್ಲವೆ?"

—ಎಂದರು ಆರಾಧ್ಯರು ನಿರ್ಧಾರದ ಧಾಟಿಯಲ್ಲಿ.

"ಅದೂ ಆಗಲಿ; ಸ್ವಾಮಿ, ಶೂದ್ರತ್ವವು ಸ್ತ್ರೀಯರಿಗೂ ಇರುವುದಾದರೆ ಅವರು ಮಾಡಿದ ಅಡಿಗೆಯನ್ನು ಉಣ್ಣುವವರು ಮತ್ತು ಅವರ ಹೊಟ್ಟೆಯಲ್ಲಿ ಹುಟ್ಟಿದವರು ಏನಾಗುತ್ತಾರೆ ? ದಯಮಾಡಿ ಹೇಳಿ!"

"ಭಾಗು, ನೀನೇನು ಸಾಮಾನ್ಯಳಲ್ಲ! ಈ ಪ್ರಶ್ನೆಯನ್ನು ನೀನು ಕೇಳುವೆ ಎಂದು ನಾನು ಬಲ್ಲೆ. ಆದರೆ ಆ ಮಾತು ನಿನಗೆ ಅನ್ವಯಿಸುವುದಿಲ್ಲ. ಏಕೆಂದರೆ ಅದು ಪ್ರಾಕೃತ ದ್ವಿಜಸ್ತ್ರೀಯರಿಗೆ ಮಾತ್ರ ಅನ್ವಯಿಸುವ ವಿಷಯ. ನೀನಾದರೆ ಅಪ್ರಾಕೃತವೆನಿಸಿದ ಶಿವದೀಕ್ಷೆ ಪಡೆದ ಆರಾಧ್ಯ ಬ್ರಾಹ್ಮಣರ ಪೀಳಿಗೆಗೆ ಸೇರಿದವಳು. ಅತಿವರ್ಣಾಶ್ರಮವೆನಿಸಿದ ಲಿಂಗಧಾರಣಾತ್ಮಕವಾದ ಶಿವದೀಕ್ಷೆ ಪಡೆದು ಪ್ರತಿದಿನ ಇಷ್ಟಲಿಂಗಾರ್ಚನಾಸಕ್ತಳಾದ ನಿನಗೆ ಶೂದ್ರತ್ವ ಎಂದರೇನು ? ಸುಸಂಸ್ಕಾರಿ ಎನಿಸುವ ನಿನಗೆ ಶೂದ್ರತ್ವದ ಗಂಧವೂ ಇರುವುದಿಲ್ಲ.

"ತುಂಬಾ ಸಂತೋಷ ಸ್ವಾಮಿ ! ಆದರೆ ಅಪ್ರಾಕೃತ ಶಿವದೀಕ್ಷೆ ಪಡೆದಿರುವ ನನಗೆ ವೇದಾಧ್ಯಯನಾಧಿಕಾರ ಇರುವುದಾದರೆ ಶ್ರೀಪತಿ ನನ್ನ ಗರ್ಭದಲ್ಲಿರುವಾಗಲೇ ಎಂಟನೇ ತಿಂಗಳಿನಲ್ಲಿಯೇ ನೀವು ತಾಯಿಯ (ಗರ್ಭಕ್ಕೆ) ಲಿಂಗಧಾರಣ ಮಾಡಿದ್ದೀರಿ ! ಎಂದ ಮೇಲೆ ಅವನಲ್ಲಿ ನೀವು ಶೂದ್ರತ್ವವನ್ನು ಆರೋಪಿಸಬಹುದೆ? ಎಂದರು ಭಾಗೀರಥಿ ಸಂಶಯವನ್ನು ಸೂಚಿಸಿ.

"ನಿನ್ನ ಮಾತು ನಿಜ ಭಾಗು! ಆದರೂ ಗರ್ಭಸ್ಥ ಶಿಶುವಿಗೆ ಮಾಡುವ ಲಿಂಗಧಾರಣ ನಮ್ಮ ದೃಷ್ಟಿಯಿಂದ ಸಂಸ್ಕಾರವೇ ಸರಿ! ಆದರೆ ಶಿಶುವಿನಲ್ಲಿ ಚೈತನ್ಯ ಆಗ ಸುಪ್ತವಾಗಿರುತ್ತದೆ. ಅವನ ಎಂಟನೇ ವರ್ಷಕ್ಕೆ ಆ ಚೈತನ್ಯ

ಜಾಗ್ರತವಾಗಿರುವುದುದರಿಂದ ಆಗ ಉಪನಯನ ಮಾಡಬೇಕೆಂದು ಶಾಸ್ತ್ರ ವಿಧಿಸಿದೆ.

"ಪ್ರಾಕೃತರಲ್ಲಿಯೂ ಕೂಡ ಗರ್ಭನಾಳ ಛೇದಕ್ಕಿಂತ ಮೊದಲು ಮಾಡುವ ಸಂಸ್ಕಾರಕ್ಕೆ "ಮೇಧೋ ಜನನ" ಎಂದು ಹೆಸರು. ಆದರಿಂದ ತಂದೆಯ ಎಲ್ಲ ಕಲ್ಯಾಣಗುಣಗಳೂ ಶಿಶುವಿನಲ್ಲಿ ಒಡಮೂಡುತ್ತವೆ ಎಂದು ಹೇಳಲಾಗಿದೆ. ಆದರೆ ಅಂಥ ಸಂಸ್ಕಾರವನ್ನು ಪಡೆಯುವ ಭಾಗ್ಯ ಎಷ್ಟು ಜನಕ್ಕೆ ಲಭಿಸುತ್ತದೆ. ವೀರಶೈವದಲ್ಲಾದರೆ ಗರ್ಭವಾದ ಎಂಟನೇ (ಗರ್ಭಾಷ್ಟಮ) ತಿಂಗಳಲ್ಲಿ ಗರ್ಭಲಿಂಗಧಾರಣವಿಧಿಸಿದೆ!"

ಬುದ್ಧಿಯವರ ಶಾಸ್ತ್ರಾರ್ಥಚಿಂತನ ಆಪ್ಯಾಯಮಾನವಾಗಿದೆ! ಆದರೆ ಆದರಿಂದ ನನ್ನ ಸಂಶಯವೇನೂ ಪರಿಹಾರವಾದಂತಾಗಲಿಲ್ಲ. ಅದಕ್ಕೂ ಮುಂಚಿತವಾಗಿ ಮತ್ತೊಂದು ಸಂದೇಹವುಂಟಾಗಿದೆ ಅದೇನೆಂದರೆ ತಾವು ಮಾತು ಮಾತಿಗೂ ಪ್ರಾಕೃತರು ಮತ್ತು ಅಪ್ರಾಕೃತರು ಎಂದು ಹೇಳುತ್ತೀದ್ದೀರಿ. ಮಾನವರೆಲ್ಲರೂ ಬ್ರಹ್ಮಸೃಷ್ಟಿಗೆ ಸೇರಿದವರೇ ಎಂದ ಮೇಲೆ ಅವರಲ್ಲಿ ಪ್ರಾಕೃತ-ಅಪ್ರಾಕೃತ ಭೇದವೇಸು ಬಂತು?"

"ಹಾಗಲ್ಲ, ಮಾನವರೇ ಏಕೆ, ಇಡೀ ಪ್ರಾಣಿವರ್ಗವೆಲ್ಲವೂ ಬ್ರಹ್ಮ ಸೃಷ್ಟಿಗೆ ಸಂಬಂಧಿಸಿದ್ದು ಎಂಬಲ್ಲಿ ಎರಡು ಮಾತಿಲ್ಲ; ಆದರೆ ಆಚಾರ್ಯ ರೇಣುಕರು ಈ ದಿಸೆಯಲ್ಲಿ ಮಾಡಿರುವ ಮಾರ್ಗದರ್ಶನ ಹೀಗಿದೆ "ಮಾನವರಲ್ಲಿ ವಿಶುದ್ಧರು ಮತ್ತು ಪ್ರಾಕೃತರು ಎಂದು ಎರಡು ಬಗೆ ಇದೆ. ವಿಶುದ್ಧರೆಂದರೆ ಶಿವಸಂಸ್ಕಾರವನ್ನು ಪಡೆದವರು; ಉಳಿದವರು ಪ್ರಾಕೃತರು" ವರ್ಣಾಶ್ರಮಧರ್ಮದಲ್ಲಿಯೂ ಎರಡು ಬಗೆಯುಂಟು. ಶಿವನು ಶಿವಾಗಮಗಳಲ್ಲಿ ಹೇಳಿರುವ ಧರ್ಮಗಳು ಅಪ್ರಾಕೃತ. ಅವಕ್ಕೆ ಅತಿವರ್ಣಾಶ್ರಮ ಧರ್ಮಗಳೆಂದು ಹೆಸರು. ಇನ್ನು ಮನ್ವಾದಿ ಸ್ಮೃತಿಗಳಲ್ಲಿ ಉಕ್ತವಾದ ವರ್ಣಾಶ್ರಮ ಧರ್ಮಗಳು ಪ್ರಾಕೃತ."

"ಇವೆರಡರಲ್ಲಿರುವ ಮುಖ್ಯವಾದ ವ್ಯತ್ಯಾಸವೇನು? ಎಂದರೆ ಪ್ರಾಕೃತರಲ್ಲಿ ಬ್ರಾಹ್ಮಣ-ಕ್ಷತ್ರಿಯ ಮುಂತಾದ ವರ್ಣಗಳು ಮತ್ತು ಬ್ರಹ್ಮಚರ್ಯ

ಮುಂತಾದ ಆಶ್ರಮಗಳಿವೆ. ಅವು ಹುಟ್ಟಿನಿಂದ ಬಂದವುಗಳೆಂದು ಸ್ಮೃತಿಗಳಲ್ಲಿ ಹೇಳಿದೆ. ಆದರೆ ಶಿವಾಗಮಗಳಲ್ಲಿ ಹೇಳಿರುವ ವರ್ಣಾಶ್ರಮಧರ್ಮಗಳು ಮಾನವನ ಗುಣಶೀಲಗಳ ಮೇಲೆ ನಿರ್ಣಯ ಗೊಂಡಿವೆ. ಇದರ ವಿವೇಚನೆಯನ್ನು ವಿಸ್ತಾರವಾಗಿ ವಿವೇಚಿಸುವುದು ಅಗತ್ಯ ಆದರೆ ಈಗ ಬೇಡ.

"ಅದು ಸರಿ, ಆದರೆ ನಿಮ್ಮ ಅನಿಸಿಕೆಯ ಪ್ರಕಾರ ಶ್ರೀಪತಿ ಸಂಸ್ಕಾರ ವಿಲ್ಲದವನಲ್ಲ ಅಲ್ಲವೆ?

"ನಿಜ, ಅವನು ಅಸಂಸ್ಕಾರಿಯಲ್ಲ ; ಆದರೂ ಅವನಿಗೆ ಗರ್ಭದಲ್ಲಿ ರುವಾಗ ಮಾಡಿದ ಸಂಸ್ಕಾರ ಅವನ ಅಜ್ಞಾನಾವಸ್ಥೆಯಲ್ಲಿ ನಡೆದದ್ದು ಎಂದು ಹೇಳಿದೆನಲ್ಲವೆ ? ಅದಕ್ಕಾಗಿಯೇ ಅವನಿಗೆ ಈಗ ಎಂಟನೇ ವರ್ಷಕ್ಕೆ ಉಪನಯನ ಸಂಸ್ಕಾರವಾಗಲೇಬೇಕು. ಉಪನಯನವಿಲ್ಲದೆ ವೇದ ಪಠಿಸುವುದು ಶ್ರೇಯಸ್ಕರವಲ್ಲ."

"ಮೇಲಾಗಿ ಪ್ರಾಕೃತರಲ್ಲಿ ಉಪನಯನಕ್ಕೆ ಪ್ರಾಧಾನ್ಯವಿದೆ. ನಮ್ಮಲ್ಲಿ ಶಿವದೀಕ್ಷೆಗೆ ಪ್ರಾಧಾನ್ಯ ಕೊಡಲಾಗಿದೆ. ಏಕೆಂದರೆ ನಮ್ಮಲ್ಲಿ ಉಪನಯನ ಮಾಡಿದರೂ ಶಿವದೀಕ್ಷೆ ಆಗಲೇ ಬೇಕು. ಒಂದು ದೃಷ್ಟಿಯಿಂದ ಪ್ರಾಕೃತ ರಲ್ಲಿನ ಉಪನಯನ ನಮ್ಮಲ್ಲಿನ ಶಿವದೀಕ್ಷೆಗೆ ಸಮ ಎಂದು ಹೇಳ ಬಹುದು" ಎಂದರು ಬುದ್ಧಿಯವರು ನಿರ್ಧಾರದ ಗತ್ತಿನಲ್ಲಿ.

"ಈ ದಿಸೆಯಲ್ಲಿ ಬುದ್ಧಿಯವರು ಬೇರೆ ಭಾವಿಸದಿದ್ದರೆ, ನನ್ನದೊಂದು ಸಂದೇಹವುಂಟು ಅದನ್ನು ಪರಿಹರಿಸಬೇಕು."

"ಖಂಡಿತವಾಗಿ, ಅದೇನು ಹೇಳು ವಿಚಾರ ಮಾಡೋಣ!"

"ಇಲ್ಲಿ ನನ್ನ ಸಂದೇಹ ಇದು. ಎಂದರೆ ತಾವು ಪ್ರಾಕೃತರಲ್ಲಿನ ಉಪನಯನವನ್ನು ವೀರಶೈವದ ಅತ್ಯಾಶ್ರಮತ್ವ ಸೂಚಕವಾದ ಶಿವ ದೀಕ್ಷೆಗೆ ಹೋಲಿಸಿದ್ದು ಸರಿಯೇ ? ಎಂಬುದು ; ಏಕೆಂದರೆ ಪ್ರಾಕೃತರಲ್ಲಿ ಗರ್ಭಸಂಸ್ಕಾರದಲ್ಲಾಗಲಿ, ಜಾತಕರ್ಮದಲ್ಲಾಗಲಿ ಶಿಶುವಿಗೆ ಲಿಂಗಧಾರಣ ವಿಶುವುದಿಲ್ಲ. ಆದ್ದರಿಂದ ಅವರಿಗೆ ಉಪನಯನದವರೆಗೂ ಶೂದ್ರತ್ವ

ವಿಶುವುದು ಸ್ವಾಭಾವಿಕ. ವೀರಶೈವದಲ್ಲಾದರೆ ಗರ್ಭಲಿಂಗಧಾರಣದ ಜೊತೆಗೆ ಶಿಶು ಹುಟ್ಟಿದ ಮೇಲೆಯೂ ಜಾತಕರ್ಮದ ಅಂಗವಾಗಿ ಮತ್ತೆ ಲಿಂಗಧಾರಣ ಮಾಡುತ್ತೀರಿ. ಅಂದ ಮೇಲೆ ನೀವು ಅಂಥ ಉನ್ನತ ಸಂಸ್ಕಾರ ಪಡೆದಿರುವ ಶ್ರೀಪತಿಗೆ ಉಪನಯನವಾಗುವವರೆಗೆ ಶೂದ್ರತ್ವ ವನ್ನು ಒಪ್ಪುವುದಾದರೆ ಲಿಂಗಧಾರಣಕ್ಕಿಂತ ಉಪನಯನವೇ ಶ್ರೇಷ್ಠ ವೆಂದು ಹೇಳಿದಂತಾಗಲಿಲ್ಲವೆ ? ಇದನ್ನು ನೀವು ಚೆನ್ನಾಗಿ ಯೋಚಿಸಿ ಹೇಳಿ !"

ಭಾಗೀರಥಿಯ ಈ ಪ್ರಶ್ನೆ ಬುದ್ಧಿಯವರನ್ನು ಯೋಚಿಸುವಂತೆ ಮಾಡಿತ್ತು ! ಮಾತ್ರವಲ್ಲ ಅವರಿಗೆ ಉತ್ತರಿಸುವುದೇ ಕಷ್ಟವಾಯಿತು ! ಕಡೆಗೆ ಅವರೆಂದರು.

"ಭಾಗು, ನಿನ್ನ ಸಂದೇಹ ಯುಕ್ತವಾಗಿದೆ. ಏಕೆಂದರೆ ನಮ್ಮಲ್ಲಿ ಉಪನಯನವಾದ ಮೇಲೆಯೇ ಶಿವದೀಕ್ಷೆ ಮಾಡುತ್ತಿದ್ದೇವೆ. ಉಪನಯನ ವಿಲ್ಲದವನಿಗೆ ಶಿವದೀಕ್ಷೆ ಪಡೆವ ಅಧಿಕಾರವಿಲ್ಲ; ಉಪನಯನದಿಂದ ವಟುವಿಗೆ ವೇದಾಧಿಕಾರ ದೊರೆಯುತ್ತದೆ, ಆದರೂ ಅಷ್ಟರಿಂದ ಮೋಕ್ಷ ಸಾಧನೆ ಯಾಗುವುದಿಲ್ಲವೆಂದೇ ಶಿವದೀಕ್ಷೆಯನ್ನು ವಿಧಿಸಲಾಗಿದೆ. ಆದ್ದರಿಂದ ಉಪನಯನಕ್ಕಿಂತ ಶಿವದೀಕ್ಷೆ ಶ್ರೇಷ್ಠವೆಂದು ಸ್ವಯಂ ಸಿದ್ಧವೇ ಆಗುತ್ತದೆ. ಆದರಲ್ಲಿಯೂ ಲಿಂಗಧಾರಣದಂತಹ ಶ್ರೇಷ್ಠ, ಸಂಸ್ಕಾರವನ್ನು ಪಡೆದವನಿಗೆ ಶೂದ್ರತ್ವಕ್ಕೆ ಎಡೆ ಇನ್ನೆಲ್ಲಿಯದು ? ವಿಷಯ ತುಂಬಾ ಜಟಿಲವಾಗಿದೆ. ಆದ್ದರಿಂದ ಈ ವಿಷಯವನ್ನು ನನಗಿಂತ ಹಿರಿಯರಾದವರಲ್ಲಿ ಸಮಾಲೋ ಚಿಸಿ ನಿನ್ನ ಸಂದೇಹವನ್ನು ಪರಿಹರಿಸುವುದು ನನ್ನ ಕರ್ತವ್ಯ ! ಪ್ರಕೃತ ಈ ನಿತ್ಯವಿಧಿ ಮುಂದುವರಿಯಲಿ !.

ಎಂದು ಬುದ್ಧಿಯವರು ಅಗ್ನಿಕಾರ್ಯವನ್ನು ಮುಗಿಸಿದರು. ಸತಿ-ಪತಿಗಳ ಸಂವಾದ ಅಲ್ಲಿಗೆ ಮುಗಿಯಿತು.

ದಂಪತಿಗಳ ಸಂವಾದವನ್ನು ಕೇಳುತ್ತಿದ್ದ ಶ್ರೀಪತಿ ತಾಯಿಯ ಕಣ್ಸನ್ನೆಯ ಇಂಗಿತವನ್ನು ಅರಿತು ಅಲ್ಲಿಂದ ಮುಂದೆ ವೇದ ಮಂತ್ರ ಗಳನ್ನು ಪಠಿಸಲಿಲ್ಲ.

* * *

ಮಧ್ಯಾಹ್ನ ಪಾಠಶಾಲೆಯ ಪ್ರವಚನ ಮುಗಿಸಿದ ಬುದ್ಧಿಯವರು ಬೆಳಗಿನ ಘಟನೆಗೆ ಉತ್ತರವನ್ನು ಕಂಡು ಹಿಡಿಯುವ ಯೋಚನೆ ಯಲ್ಲಿಯೇ ಶಾಲೆಯಿಂದ ಮನೆಗೆ ಬಂದು ಸಂಚಾರ ಹೊರಟು ಇಂದ್ರ ಕೀಲದ ಹಾಸು ಬಂಡೆಯ ಮೇಲೆ ಹೋಗಿ ಕುಳಿತಿದ್ದರು.

ಅವರ ಸಂದೇಹಕ್ಕೆ ಇನ್ನೂ ಉತ್ತರವೇ ಸಿಕ್ಕಿರಲಿಲ್ಲ. ಮನಸ್ಸು ಬೆಳಗಿನ ಘಟನೆಯನ್ನು ಮೆಲುಕು ಹಾಕುತ್ತಿತ್ತು, ಅಷ್ಟು ಹೊತ್ತಿಗೆ ಮಲ್ಲೇಶ್ವರಾಲಯದ ಗರ್ಭಗುಡಿಯಲ್ಲಿ ಮಹಾಮಂಗಳಾರತಿಯ ಬೆಳಕು ಕಾಣಿಸಿತು. ಗಂಟೆ ಜಾಗಟೆಗಳು ಮೊಳದಗಿವು. ಅದನ್ನು ಕಂಡು ಕೇಳಿದ ಬುದ್ಧಿಯವರು

"ಓಹೋ ! ಇದು ಪೂಜಾ ಸಮಾಪ್ತಿಯ ಮಹಾಮಂಗ ಳಾರತಿ! ಅಂದರೆ ರಾತ್ರಿ ಹತ್ತು ಗಂಟೆ! ಎಂದು ಕೊಂತ ಬುದ್ಧಿಯವರಿಗೆ ಏನೋ ಹೊಳೆದಂತಾಗಿ ಮೇಲೆದ್ದರು. ಬೆಳಗಿನಿಂದ ಸಂದೇಹದ ಕಗ್ಗತ್ತ ಲಲ್ಲಿ ಪರಿತಪಿಸುತ್ತಿದ್ದ ಅವರಿಗೆ ಕಂಡ ಈ ಮಂಗಳಾರತಿಯ ಬೆಳಕು ದೇವರೇ ದಾರಿತೋರಿದಂತಾಗಿತ್ತು. ಅವರ ಸಂದೇಹಕ್ಕೆ ಇದು ಒಂದು ಸಮಾಧಾನದ ತೆರೆ ಎಳೆದಂತಾಗ್ತಿತು.



೨

# ಸಂದೇಹ-ಚಿಕಿತ್ಸೆ

## i

ಆರಾಧ್ಯರು ಇಂದ್ರಕೀಲದಿಂದ ಹಿಂದಿರುಗಿ ಬರುವಾಗ ವಿದ್ಯಾರ್ಥಿ ನಿಲಯಕ್ಕೆ ಭೇಟಿ ಇತ್ತರು. ವಿದ್ಯಾರ್ಥಿ ಶಿವಶಂಕರ ಬುದ್ಧಿಯವರ ನೆಚ್ಚಿನ ಶಿಷ್ಯ ಮನೆಮಕ್ಕಳಿಗೆಲ್ಲ ಅವನು ಅಚ್ಚುಮೆಚ್ಚು. ಬುದ್ಧಿಯವರ ಮನೆಗೆ ಬೇಕಾದ ತರಕಾರಿ ಮತ್ತು ಇತರ ಸಾಮಗ್ರಿಗಳನ್ನು ಪೇಟೆಯಿಂದ ತರುವ ವಹಿವಾಟು ಅವನದು. ಅದಕ್ಕಾಗಿ ಬೇಕಾಗುವ ಹಣವನ್ನು ಅಮ್ಮನವರಿಂದ ಪಡೆದು ವೆಚ್ಚಮಾಡಿ ಉಳಿದ ಲೆಕ್ಕ ಒಪ್ಪಿಸುವುದೆಲ್ಲ ಅವನ ಹೊಣೆ. ನಂಬಿಕೆಯಲ್ಲಿ ಅವನು ಮನೆಯ ಮಗನಿಗಿಂತ ಹೆಚ್ಚು. ಶ್ರೀಪತಿಯ ದೃಷ್ಟಿಯಲ್ಲಿ ಅವನು ಶಂಕರಣ್ಣ ! ಅಮ್ಮನವರನ್ನು ಅವನು ಸಂಬೋಧಿಸುವುದು ಭಾಗಕ್ಕನೆಂದೇ !

ಬುದ್ಧಿಯವರು ಶಿವಶಂಕರನನ್ನು ಹೊರಗೆ ಕರೆದು—

"ಶಿವು, ನೀನು ಈಗಲೇ ತೋಟಕ್ಕೆ ಹೋಗಿ, ರೈತ ರಾಮುಡುಗೆ ಈಗಲೇ ಮನೆ ಹತ್ತಿರ ಬರಹೇಳು !" ಎಂದರು.

ಶಿವಶಂಕರನ ಮಟ್ಟಿಗೆ ಬುದ್ಧಿಯವರ ಮಾತು ಶಿರೋಧಾರ್ಯ ! ಅದು ಸುಗ್ರೀವಾಜ್ಞೆಯೂ ಹೌದು. ಏಕೆ ? ಏನು ವಿಷಯ ? ಎಂದು ಪ್ರಶ್ನಿಸುವ ಅತಿಪ್ರಸಂಗಕ್ಕೆ ಅವನು ಎಂದೂ ಹೋದವನಲ್ಲ.

ಕೂಡಲೆ ಶಿವಶಂಕರ "ಆಗಲಿ, ಹೋಗಿ ಬರುತ್ತೇನೆ." ಎಂದವನೆ ತಾನು ಓದುತ್ತಿದ್ದ ಪುಸ್ತಕದ ಹಾಳೆಯ ನಡುವೆ ಗುರುತಿಗಾಗಿ ಒಂದು

ಕಾರ್ಡು ಇಟ್ಟು ಮೇಲೆದ್ದ, ಹೆಗಲಿಗೆ ಒಂದು ಶಲ್ಯ ಏರಿಸಿಕೊಂಡು ತೋಟದ ಹಾದಿಹಿಡಿದ.

ಬುದ್ಧಿಯವರು ಮನೆಗೆ ಬಂದವರೇ ಹೆಂಡತಿಯನ್ನು ಕರೆದು,

"ಭಾಗು, ನಾಳೆ ಬೆಳಿಗ್ಗೆ ಮಾವನವರನ್ನು ಕಾಣಲು ಮುದಿಗೊಂಡಕ್ಕೆ ಹೊರಟಿದ್ದೇನೆ. ಶ್ರೀಪತಿಯೂ ಜೊತೆಗೆ ಬರುತ್ತಾನೆ. ಗಾಡಿ ಕಟ್ಟಲು ರಾಮುಡುಗೆ ಹೇಳಿ ಕಳಿಸಿದ್ದೇನೆ. ನೀನು ಮುಂಜಾನೆ ನಮ್ಮ ಪ್ರಯಾಣಕ್ಕೆ ಸಿದ್ಧಪಡಿಸು.!" ಎಂದರು.

"ಓಹೋ ! ಇದೇನು ಬುದ್ಧಿಯವರದು !ಅಕಾಲದಲ್ಲಿ ಅತಿವೃಷ್ಟಿ !" ಎಂದಳು ಪತಿದೇವರನ್ನು ರೇಗಿಸುತ್ತಾ ಭಾಗೀರಥಿ.

"ಅಕಾಲವೂ ಇಲ್ಲ, ಅತಿವೃಷ್ಟಿಯೂ ಇಲ್ಲ ! ಅಗತ್ಯ ಬಿದ್ದರೆ ಎಲ್ಲಿಗಾದರೂ ಹೋಗಲೇ ಬೇಕು. ಮಾವನವರು ಪತಿಯ ನಾಮಕರಣಕ್ಕೆ ಬಂದದ್ದೇ ! ಅವನ ಜಾತಕ ಬರೆದು ಕಳಿಸುವುದಾಗಿ ಹೇಳಿಹೋದವರು ಐದು ವರ್ಷವಾದರೂ ಈ ಕಡೆ ತಲೆ ಇಡಲಿಲ್ಲ, ಯೋಗಕ್ಷೇಮಕ್ಕಾದರೂ ಒಂದು ಸುದ್ದಿ ಸಹ ಕಳಿಸಲಿಲ್ಲ. ಅಕ್ಕನಿಗಂತೂ ನಮ್ಮ ವಿಷಯ ಮರೆತಂತೆಯೇ ಕಾಣುತ್ತೆ !" ಎಂದರು ವಿಷಾದ ಸೂಚಿಸಿ.

ಮುದಿಗೊಂಡದ ಸೋಮಶಂಭುದೇಶಿಕರು ಬುದ್ಧಿಯವರ ಖಾಸಾ ಮಾವಂದಿರು. ಅವರು ಕಾಶಿಯ ವಿಶ್ವಾರಾಧ್ಯ ಮಹಾವಿದ್ಯಾಪೀಠದಲ್ಲಿ ಆಗಮ ವಿಭಾಗದ ಪ್ರಾಚಾರ್ಯರಾಗಿದ್ದು ಎರಡು ವರ್ಷದ ಹಿಂದೆ ನಿವೃತ್ತರಾದವರು. ಅವರ ಹಿರಿಯಮಗ ಶಂಭುಭಟ್ಟ ಆತ ಕಾಶಿಯಲ್ಲಿ ಹತ್ತಾರು ವರ್ಷಗಳಿಂದ ಸಂಸ್ಕೃತದಲ್ಲಿ ವೇದ ಮತ್ತು ಆಗಮಗಳನ್ನು ಗಾಢವಾಗಿ ಅಭ್ಯಾಸಮಾಡಿ ಕಾಮಿಕಾದಿ ಆಗಮಗಳಿಗೆ ಸಂಸ್ಕೃತದಲ್ಲಿ ವೃತ್ತಿ-ದೀಪಿಕೆಗಳನ್ನು ಬರೆದು ಈ ವರ್ಷ "ಸಕಲಾಗಮಾಚಾರ್ಯ" ಎಂಬ ಪ್ರಶಸ್ತಿಯನ್ನು ಪಡೆದಿದ್ದಾನೆ.

ದೇಶಿಕರದು ಅತ್ರಿಗೋತ್ರ, ಆರಾಧ್ಯರದು ಕೌಶಿಕಗೋತ್ರ. ಹಿಂದೆ ದೇಶಿಕರು ವಿದ್ಯಾಭ್ಯಾಸ ಮುಗಿಸಿ ಕಾಶಿಯಿಂದ ಹಿಂದಿರುಗಿದಾಗ ಆರಾಧ್ಯರ ತಂದೆಯವರು ತಮ್ಮ ಹಿರಿಯ ಮಗಳು ಮಣಿಕರ್ಣಿಕೆಯನ್ನು ಅವರಿಗೆ ಕೊಟ್ಟು ವಿವಾಹ ಮಾಡಿದ್ದರು. ಅವರ ಹಿರಿಯ ಮಗನೇ ಮೇಲೆ ಹೇಳಿದ ಶಂಭುಭಟ್ಟ. ಹಿರಿಯ ಮಗಳು ಭಾಗೀರಥಿ. ಅವಳು ಕಾಶಿಯ ಕನ್ಯಾಗುರುಕುಲದಲ್ಲಿ ಅಭ್ಯಾಸ ಮಾಡಿದವಳೇ! ದೇಶಿಕರು ಕಾಶಿಯಲ್ಲಿ ಆಗಮ ವಿಭಾಗದ ಪ್ರಾಚಾರ್ಯರಾಗಿದ್ದಾಗ ಆರಾಧ್ಯರೂ ಅವರ ಶಿಷ್ಯವೃತ್ತಿಯಲ್ಲಿದ್ದರು. ಆದರೆ ಅಲ್ಲಿಯೇ ಪೂರ್ಣ ವಿದ್ಯಾವಂತರಾಗುವ ಭಾಗ್ಯ ಅವರ ಹಣೆಯಲ್ಲಿ ಬರೆದಿರಲಿಲ್ಲ.

ಗುರುಲಿಂಗಾರಾಧ್ಯರ ತಂದೆ ನಾಗಲಿಂಗಶಾಸ್ತ್ರಿಗಳು, ತಾಯಿ ಶರ್ವಾಣಿ. ಅವರು ತಮ್ಮ ವೃದ್ಧಾಪ್ಯದ ಕಾರಣದಿಂದ ಮಗನನ್ನು ಹಠಾತ್ ದೇಶಕ್ಕೆ ಕಳುಹಿಸಬೇಕೆಂದು ಕಾಶಿಗೆ ಸುದ್ದಿ ಕಳಿಸಿದ್ದರು. ದೇಶಿಕರು ಯುಕ್ತ ವಯಸ್ಕಳಾಗಿದ್ದ ಭಾಗೀರಥಿಯನ್ನು ಆರಾಧ್ಯರಿಗೆ ಕೊಟ್ಟು ಮದುವೆ ಮಾಡಿ ಕಳಿಸುವ ಉದ್ದೇಶವನ್ನು ತಿಳಿಸಿದರು. ಅದನ್ನು ಕೇಳಿದ ಶಾಸ್ತ್ರಿ ದಂಪತಿಗಳಿಗೆ ಪರಮಾನಂದವಾಗಿತ್ತು.

ಆರಾಧ್ಯರು ಭಾಗೀರಥಿಯ ಕೈ ಹಿಡಿದು ದೇಶಕ್ಕೆ ಹಿಂದಿರುಗಿ ವಿಜಯವಾಡದಲ್ಲಿದ್ದ ಪಾಠಶಾಲೆಯಲ್ಲಿ ವೇದ ಮತ್ತು ಆಗಮ ವಿಭಾಗದ ಅಧ್ಯಾಪಕರೂ ಶಾಲೆಯ ಮುಖ್ಯೋಪಾಧ್ಯಾಯರೂ ಆಗಿ ಮಾತಾ-ಪಿತೃಗಳ ಸೇವೆಯ ಜೊತೆಗೆ ತಮ್ಮ ತೋಟ-ತುಡಿಕೆ ಜಮೀನುಗಳ ಆಬಾದು ಮಾಡಿಸಿ ಅಭಿವೃದ್ಧಿಪಡಿಸಿದರು.

ಭಾಗೀರಥಿ ಅತ್ತೆ-ಮಾವಂದಿರ ಸೇವೆಯಲ್ಲಿ ನಿರತಳಾದಳು. ಅವಳು ತನ್ನ ಸೌಜನ್ಯ-ಸೇವಾ ಮನೋಭಾವಗಳಿಂದ ಎಲ್ಲರ ಪ್ರೀತಿಗೆ ಪಾತ್ರಳಾದಳು.

ಮದುವೆಯಾಗಿ ಬಹುಕಾಲದವರೆಗೆ ಮಕ್ಕಳಾಗದೆ ಭಾಗೀರಥಿ ಅತ್ತೆ ಮಾವಂದಿರ ಒತ್ತಾಯದಿಂದ ಮಲ್ಲೇಶ್ವರನಿಗೆ ಮತ್ತು ಕನಕದುರ್ಗೆಯರಿಗೆ

ಅನೇಕ ನೋಂಪಿಗಳನ್ನು ಸಲ್ಲಿಸುತ್ತಿದ್ದಳು. ಅತ್ತೆ ಶರ್ವಾಣಿಯೂ ಸಹ ವಂಶಕ್ಕೆ ಅಲಂಕಾರ ಪ್ರಾಯನಾದ ಒಬ್ಬ ಮೊಮ್ಮಗನನ್ನು ಕರುಣಿಸ ಬೇಕೆಂದು ಮಲ್ಲೇಶ್ವರನಲ್ಲಿ ಹರಕೆ ಒಪ್ಪಿಸಿದ್ದಳು. ಶಾಸ್ತ್ರಗಳು ಈ ದಿಸೆಯಲ್ಲಿ ಎಸಗಿದ ಪೂಜೆಪುರಸ್ಕಾರಗಳ ಫಲವಾಗಿ ಭಾಗೀರಥಿ ಗರ್ಭಧರಿಸಿ ಶ್ರೀಪತಿಗೆ ಜನನವಿತ್ತಳು.

ಆದರೆ ಭಾಗೀರಥಿಯ ಅತ್ತೆ-ಮಾವಂದಿರು ಮೊಮ್ಮಗನ ಲಾಲನೆ ಪಾಲನೆಗಳ ಸೌಭಾಗ್ಯವನ್ನು ಕಂಡು ತಣಿವ ಪುಣ್ಯ ಪಡೆದು ಬಂದಿರಲಿಲ್ಲ ವೆಂಬಂತೆ ಅವರು ಮಗುವಿಗೆ ವರ್ಷ ತುಂಬುವುದರೊಳಗಾಗಿ ಕಣ್ಮರೆ ಯಾಗಿದ್ದರು.

ಶ್ರೀಪತಿಯ ನಾಮಕರಣೋತ್ಸವವು ಏರ್ಪಟ್ಟದ್ದಾಗ ಕಾಶಿಯಿಂದ ದೇಶಿಕರು ಪತ್ನೀ ಪುತ್ರರೊಂದಿಗೆ ಬೇಜವಾಡಕ್ಕೆ ಆಗಮಿಸಿದ್ದರು ಮತ್ತು ಅವರು ಶಿಶುವಿನ ಜನನಕಾಲವನ್ನು ಪರಿಶೋಧಿಸಿ ಅವನಿಗೆ ಶ್ರೀಪತಿ ಎಂದು ನಾಮಕರಣ ಮಾಡಲು ಸೂಚಿಸಿದಾಗ ಉಭಯ ಮಾತಾಮಹ ಪಿತಾಮಹ ವರ್ಗಕ್ಕೆ ಆದ ಆನಂದಕ್ಕೆ ಪಾರವಿಲ್ಲ.

ನಾಮಕರಣೋತ್ಸವದ ತರುವಾಯ ದೇಶಿಕರು ಪತ್ನೀ ಪುತ್ರರೊಡನೆ ಕಾಶಿಗೆ ಹಿಂದಿರುಗಿದರು. ಆರಾಧ್ಯರು ಮನೆಯ ಆಡಳಿತವನ್ನು ಪರಿಚಯಿಸಿ ಕೊಳ್ಳುತ್ತಿರುವುದರೊಳಗಾಗಿ ಅವರ ಮಾತಾಪಿತೃಗಳು ವಿಯೋಗ ವಾದದ್ದು ವಿಧಿವಿಲಾಸವೆನ್ನದೆ ವಿಧಿಯಿಲ್ಲ.

ಈ ಹಿಂದಿನ ಕತೆಯನ್ನು ಬುದ್ಧಿಯವರು ಪತ್ನಿಯ ಗಮನಕ್ಕೆ ತಂದು ತಮ್ಮ ಮುದಿಗೊಂಡದ ಪ್ರಯಾಣವನ್ನು ನಿರ್ಧರಿಸಿದ್ದರು.

ಎರಡನೆಯದಾಗಿ ತಮ್ಮ ಭಾವ-ಮೈದುನ ಶಂಭು ಭಟ್ಟನಿಗೆ ಈಚೆಗೆ ಮಹಾ ವಿದ್ಯಾಪೀಠವು ಗೌರವ ಪ್ರಶಸ್ತಿ ನೀಡಿ ಆದರಿಸಿದೆ. ಮಹಾವಿದ್ಯಾ ಪೀಠದ ಘಟಿಕೋತ್ಸವದಲ್ಲಿ ಕುಲಪತಿ ರಾಜಾವಿಕ್ರಮವರ್ಮ ಮಹಾರಾಜರ ಅಧ್ಯಕ್ಷತೆಯಲ್ಲಿ ಪ್ರಶಸ್ತಿ ನೀಡುವ ಸಮಾರಂಭಕ್ಕೆ ದೇಶಿಕರಿಗೂ ಕರೆ

ಬಂದಿತ್ತು. ಮಾವನವರು ತಾವು ನಿವೃತ್ತರಾದ ಮೇಲೆ ತೀರ್ಥಯಾತ್ರೆಯ ನಿಮಿತ್ತ ಕಾಶಿಗೆ ಪ್ರಯಾಣಿಸಿ, ಆ ಸಮಾರಂಭದಲ್ಲಿ ಭಾಗವಹಿಸಿದ್ದರಂತೆ. ಈಗತಾನೆ ದೇಶಕ್ಕೆ ಹಿಂದಿರುಗಿರುವ ಅವರಿಬ್ಬರ ಭೇಟಿ ಮಾಡಿ ಅಭಿನಂದಿಸುವುದು ನಮ್ಮ ಕರ್ತವ್ಯ.

ಕಡೆಯದಾಗಿ ನಮ್ಮ ಚಿರಂಜೀವಿಯ, ಜಾತಕವನ್ನು ಪ್ರಸ್ತಾಪಿಸಿ, ಅವನ ಭವಿಷ್ಯದ ಬಗೆಗೆ ಆಲೋಚಿಸುವುದೂ ನಮ್ಮ ಉದ್ದೇಶ.

—ಎಂದು ಬುದ್ಧಿಯವರು ಭಾಗೀರಥಿಗೆ ತಮ್ಮ ಪ್ರಯಾಣದ ಉದ್ದೇಶವನ್ನು ವಿವರಿಸಿದರು, ಮುಂದುವರಿದು ಆರಾಧ್ಯರು.

"ಈ ಸಂತೋಷದ ಸಮಯದಲ್ಲಿ ಅವರನ್ನು ನಮ್ಮಲ್ಲಿಗೆ ಬರಮಾಡಿಕೊಂಡು ಅಭಿನಂದಿಸುವುದು ಶ್ರೀಪತಿಯ ಪುರೋಭಿವೃದ್ಧಿಯ ದೃಷ್ಟಿಯಿಂದಲೂ ಸಹ ಅತ್ಯಗತ್ಯ."

—ಎಂದು ಪತ್ನಿಯನ್ನು ಪ್ರೇರೇಪಿಸಿದರು. ಪತಿದೇವರು ನಿರೂಪಿಸಿದ ವಿವರವನ್ನು ಕೇಳುತ್ತಿದ್ದ ಭಾಗೀರಥಿಗೆ ಒಳಗೊಳಗೇ ಪರಮಾನಂದ! ಆದರೂ ಆಗಲೇ ರಾತ್ರಿ ತುಂಬಾ ಹೊತ್ತಾಗಿದ್ದುದರಿಂದಲೂ ಹಾಗೂ ಬಚ್ಚಲು ಮನೆಯಲ್ಲಿ ಹಾಕಿದ್ದ ಮಡಿ ವಸ್ತ್ರಗಳು ಬುದ್ಧಿಯವರಿಗಾಗಿ ಕಾಯುತ್ತಿದ್ದುದರಿಂದಲೂ ಅವಳು ಬುದ್ಧಿಯವರನ್ನು ಸ್ನಾನಕ್ಕೆ ಒತ್ತಾಯಿಸಿದಳು.

ಆರಾಧ್ಯರು ಸ್ನಾನ-ಸಂಧ್ಯಾದಿಗಳನ್ನು ಸೂಕ್ಷ್ಮವಾಗಿ ಮುಗಿಸಿ ಪ್ರಸಾದ ಸೇವಿಸುವವರೆಗೂ ಭಾಗೀರಥಿ ಯಾವ ಮಾತನ್ನೂ ಆಡಲಿಲ್ಲ. ಮೇಲಾಗಿ ಬೆಳಗಿನಿಂದಲೂ ಬುದ್ಧಿಯವರು ಮೌನ ತಳೆದಿದ್ದುದರ ಗೂಢಾರ್ಥ ಇದೀಗ ಭಾಗೀರಥಿಗೆ ಅಂಗೈನೆಲ್ಲಿಕಾಯಿಯಂತೆ ಸ್ಪಷ್ಟವಾಗಿತ್ತು.

ಬುದ್ಧಿಯವರು ಪ್ರಸಾದ ಸೇವಿಸಿ ಹೊರಬರುವ ವೇಳೆಗೆ ರಾಮುಡು ಬಾಗಿಲ ಬಳಿ ಕಾಯ್ದಿದ್ದ. ಬುದ್ಧಿಯವರು ಹೊರಗೆ ಬಂದೊಡನೆಯೇ

"ಏಮಿ ರಾಮುಡು, ಬಾಗುನ್ನಾವಾ ? ಅಂದರೂ ಕ್ಷೇಮವಾ ?"

—ಎಂದರು ವಾತ್ಸಲ್ಯದಿಂದ.

ರಾಮುಡು ಈಚಿಗೆ ಕೆಲವು ದಿನಗಳಿಂದ ಬುದ್ಧಿಯವರನ್ನು ಭೇಟಿ ಮಾಡಿರಲಿಲ್ಲ ! ಅವನೆಂದ—

"ಅಂದರೂ ಬಾಗುನ್ನಾಮು ದ್ಯಾವರಾ ! ಮೀ ದಯುಚೇತ : ಅಯಿತೆ ಶಿವಶಂಕರಪ್ಪ ಇಂಟದಗ್ಗಿರ ವಚ್ಚಿಂಡೆ ; "ಬುದ್ಧಿಯವರು ಈಗಲೇ ಮನೆ ಹತ್ತಿರ ಬರಹೇಳಿದರು" ಅನಿ ಚೆಪ್ಪೆ ; ದಾನಿಕಿಗಾನೇ ವಚ್ಚಿಂದಿ ಬುದ್ಧಿ !" ಎಂದ ವಿನಯದಿಂದ ಕೈಜೋಡಿಸಿ.

"ರಾಮುಡು, ರೇಪು ತೆಲ್ಲವಾರಿಕೇ ಮುಡಿಗೊಂಡಂ ವೆಳ್ಳಾನು. ನೇನು ಚಿನ್ನಬುದ್ಧಿ ಇದ್ದರೇ! ಮುಡಿಗೊಂಡಂ ವೆಳ್ಳಿ ಮಾಮಗಾರಿ ದರ್ಶನಂ ತೀಸುಕೊನಿ ರಾವಲೆನು ಅನುಕೊನ್ನಾನು. ಗನುಕ ನೀವು ಪ್ರೊದ್ದುಕು ಮುನುಪೇ ಬಂಡಿ ಸಿದ್ಧಂ ಚೇಯಾಲಿ" ಎಂದರು ಬುದ್ಧಿಯವರು ಅವನ ಭಾಷೆಯಲ್ಲಿ.

"ಕಾನಿ ಸ್ವಾಮಿ. ಅಮ್ಮಯ್ಯ ವಚ್ಚಿಲ್ಲೇದಾ ಬುದ್ಧಿ !" ಎಂದ ರಾಮುಡು ತಲೆಬಾಗಿ ಸಲುಗೆಯಿಂದ.

"ಲೇದು ರಾಮುಡು! ರೆಂಡುರೋಜುಲಕು ವಾರೆಂದುಕು ? ಮೇಮಿದ್ದರೇ ವೆಳ್ಳೇದಿ- ಪ್ರಯಾಣಾನಿಕಿ ಏಮೇಮಿ ಸಿದ್ಧಂ ಚೇಯಾಲನಿ ನೀಕೇಮಿ ಚೆಪ್ಪನಕ್ಕರಲೇದುಗದಾ ? ಎಂಡವೇಡಿಮಿ ಬಲಿಚೇ ಮುನುಪೇ ಬಂಡಿ ತೀಸುಕೊನಿ ರಾಪೋ !" ಎಂದರು ಬುದ್ಧಿಯವರು ನಿರ್ಧಾರದ ಧಾಟಿಯಲ್ಲಿ.

"ಕಾನಿ ಬುದ್ಧಿ. ವಸ್ತಾನು." ಎಂದವನೇ ಬುದ್ಧಿಯವರಿಗೆ ಕೈ ಮುಗಿದು ಮನೆ ದಾರಿ ಹಿಡಿದ.

ಅಷ್ಟು ಹೊತ್ತಿಗೆ ಭಾಗೀರಥಿ ಮನೆಕೆಲಸವನ್ನೆಲ್ಲ ಮುಗಿಸಿ, ತಟ್ಟೆಯಲ್ಲಿ ತಾಂಬೂಲ, ಹಾಲು, ರಸಬಾಳೆಹಣ್ಣು ಸಿದ್ಧಪಡಿಸಿಕೊಂಡು ಶಯ್ಯಾಗೃಹದಲ್ಲಿ ಕಾಯ್ದಿದ್ದಳು. ಶ್ರೀಪತಿ ಮಂಚದ ಒಂದು ಭಾಗದಲ್ಲಿ ಮಲಗಿ ನಿದ್ದೆ ಹೋಗಿದ್ದ.

ಬುದ್ಧಿಯವರು ರೈತನನ್ನು ಮನೆಗೆ ಕಳುಹಿಸಿ ಒಳಕ್ಕೆ ಬಂದು ಮಂಚವನ್ನೇರಿದರು. ಈಗ ಭಾಗೀರಥಿಯೇ ಮೊದಲು ಮಾತು ಪ್ರಾರಂಭಿಸಿದಳು.

"ಬುದ್ಧಿಯವರು ಚಿರಂಜೀವಿಯ ಜಾತಕವನ್ನು ಅಪ್ಪಾಜಿಯವರಿಗೆ ತೋರಿಸಬೇಕೆಂದದ್ದು ಸರಿ ! ಆದರೆ ಮಗನ ಉಪನಯನ ಮತ್ತು ಶಿವದೀಕ್ಷೆ ವಿಷಯ ಮಾತನಾಡಬೇಕು ಎಂದಿರಲ್ಲ ಆ ಮಾತು ನನಗೆ ಅರ್ಥವಾಗಲಿಲ್ಲ ಸ್ವಾಮಿ ! ಅದನ್ನು ಬಿಡಿಸಿ ಹೇಳಬೇಕು" ಎಂದಳು ಭಾಗೀರಥಿ ಸಂದೇಹ ಸೂಚಿಸಿ.

"ಮಗನಿಗೆ ಉಪನಯನ-ಶಿವದೀಕ್ಷೆ ಮಾಡುವುದು ನಮ್ಮ ಕರ್ತವ್ಯವಲ್ಲವೇನೇ ?"

"ಹೌದು, ಅವನಿಗಿನ್ನೂ ಐದೂ ತುಂಬಿಲ್ಲ. ಉಪನಯನ ಮತ್ತು ಶಿವದೀಕ್ಷೆಗಳ ಮಾತು ಇನ್ನೂ ಮೂರು ವರ್ಷದ ಮೇಲಲ್ಲವೆ? ಅಂದ ಮೇಲೆ ಆದಕ್ಕೆ ಈಗೇನು ಅವಸರ ? ಎಂಬುದೇ ನನ್ನ ಸಂಶಯ, ಅದಕ್ಕಾಗಿ ಕೇಳಿದೆ."

—ಎಂದಳು ಭಾಗೀರಥಿ ಬುದ್ಧಿಯವರ ಮುಖ ನೋಡುತ್ತಾ.

"ಅದು ಸರಿ ಭಾಗು ! ಬೆಳಿಗ್ಗೆ ನೀನೆ ಹೇಳಿದೆ ಚಿರಂಜೀವಿಗೆ ನಾನು ಹೇಳುವ ಮಂತ್ರಗಳೆಲ್ಲ ಕಂಠ ಪಾಠವಾಗಿದೆ ಅಂತ ! "

"ಹೌದು, ಪ್ರತಿದಿನ ನಿಮ್ಮ ಜೊತೆ ಪೂಜಾದಿಗಳಲ್ಲಿ ಭಾಗವಹಿಸುತ್ತಿರುವ ನನಗೇ ಆ ಮಂತ್ರಗಳೆಲ್ಲ ಬಾಯಿಪಾಠವಾಗಿರುವಾಗ ಅವು ಪಾಪುಗೆ ಕಂಠ ಪಾಠವಾಗುವುದರಲ್ಲಿ ಏನು ಸೋಜಿಗ !"

"ನಿನಗೂ ಶ್ರೀಪತಿಗೂ ಅಜಗಜಾಂತರ ಕಣೆ! ಏಕೆಂದರೆ ಐದನೇ ವಯಸ್ಸಿಗೇ ಅದೆಷ್ಟು ಸ್ಪಷ್ಟ ಉಚ್ಚಾರ, ಉದಾತ್ತ-ಅನುದಾತ್ತ-ಸ್ವರಿತಗಳ ಸ್ವರಪರಿಷ್ಕಾರ, ಅಲ್ಪಪ್ರಾಣ-ಮಹಾಪ್ರಾಣ-ಹ್ರಸ್ವ-ದೀರ್ಘ-ಪ್ಲುತಗಳ ಕಾಲಮಿತಿ, ಇಂಪಾದ ಕಂಠಸ್ವನ! ಇದನ್ನೆಲ್ಲ ನೋಡಿದರೆ ಅವನನ್ನು

ಇನ್ನೂ ಮೂರು ವರ್ಷ ತರಗತಿಗೆ ಸೇರಿಸದೆ ಕೊಳೆಹಾಕುವುದು ಯಾವ ಧರ್ಮ ? ಹಾಗೆ ಮಾಡಿದರೆ ಅವನ ಉಜ್ವಲ ಭವಿಷ್ಯಕ್ಕೆ ನಾವೇ ಧಕ್ಕೆ ತಂದಂತೆ ಆಗುವುದಿಲ್ಲವೇ ?"

—ಎಂದರು ಬುದ್ಧಿಯುವರು ಹೆಂಡತಿಯನ್ನು ಹಂಗಿಸುವ ಧಾಟಿಯಲ್ಲಿ.

"ಹಾಗಿದ್ದರೆ ಮಗನನ್ನು ಈ ವರ್ಷವೇ ತರಗತಿಗೆ ಸೇರಿಸಿಕೊಂಡು ಅಕ್ಷರಾಭ್ಯಾಸ ಮಾಡಿಸಿ, ಪಾಠವನ್ನು ಆರಂಭಿಸಬಹುದಲ್ಲವೇ ?.

"ಶಿವಶಿವಾ ! ಈ ಹೆಂಗಸರ ಬುದ್ಧಿ ಎಂದರೆ ಇದೇ ! ಎಷ್ಟು ಹೇಳಿದರು ಅವರಿಗೆ ಗಹನ ವಿಷಯ ತಲೆಯ ಒಳಗೆ ತೂರುವುದೇ ಇಲ್ಲವಲ್ಲಾ!

"ಹೌದು ಸ್ವಾಮಿ, ಹೆಂಗಸರ ಬುದ್ಧಿ ಮೊಣಕಾಲುದ್ದ ! ಅಂತಲ್ಲವೆ ನೀವು ಹೇಳುವುದು! ಅದೂ ಆಗಲಿ ಸ್ವಾಮಿ, ಅದನ್ನು ವಿವರಿಸಿಯಾದರೂ ಹೇಳಿ."

—ಎಂದು ಅಂಗಲಾಚಿ ಕೇಳಿದಳು ಭಾಗೀರಥಿ.

"ಛೆ ಛೆ ! ಖಂಡಿತ ನಾನು ಹೆಂಗಸರ ಬುದ್ಧಿಯನ್ನು ಹಳಿಯುತ್ತಿಲ್ಲ ಭಾಗು ! ನೀನು ಉಪನಿಷತ್ಕಾಲದ ಗಾರ್ಗಿ, ಮೈತ್ರೇಯರಿಗಿಂತ ಏನು ಕಡಿಮೆ ! ಏಕೆಂದರೆ ನೀನು ಜಿಜ್ಞಾಸೆಗೆ ಕುಳಿತಾಗ ನಿನ್ನ ಪ್ರಶ್ನೆಗಳಿಗೆ ಉತ್ತರಿಸಲು ನಾನೇ ಎಷ್ಟೋ ಸಲ ತಡಕಾಡುವಂತೆ ಆಗುತ್ತೆ. ನೀನೇನು ಸಾಮಾನ್ಯಳೆ, ಆಗಮ ಪ್ರಾಚಾರ್ಯಸೋಮಶಂಭು ದೇಶಿಕರ ಮಗಳು ! ಸಾಲದ್ದಕ್ಕೆ "ಸಕಲಾಗಮಾಚಾರ್ಯ"ಬಿರುದಾಂಕಿತ ಶಂಭು ಭಟ್ಟನ ತಂಗಿ; ಎಂದ ಮೇಲೆ ಕೇಳಬೇಕೆ ?"

—ಎಂದರು ಬುದ್ಧಿಯುವರು ಹೆಂಡತಿಯನ್ನು ಮೇಲ್ಏರಿಸುವ ಭಂಗಿಯಲ್ಲಿ.

"ಶಿವಶಿವಾ ! ಈಗ ಅದೆಲ್ಲ ಬೇಕಿಲ್ಲ ಸ್ವಾಮಿ. ಆದರೆ ಎಂಟನೇ ವರ್ಷದಲ್ಲಿ ಏರ್ಪಡಬೇಕಾದ ಉಪನಯನ ಶಿವದೀಕ್ಷೆಗಳಿಗೆ ಈಗೇನು ಅವಸರ ? ಎಂಬುದೇ ನನ್ನ ಆತಂಕಕ್ಕೆ ಕಾರಣ. ಅದಷ್ಟು ವಿವರಿಸಿದ ರಾಯಿತು."

—ಎಂದಳು ಭಾಗೀರಥಿ ರಸಬಾಳೆಹಣ್ಣನ್ನು ಸುಲಿದು ಪತಿಯ ಬಾಯಲ್ಲಿಡುತ್ತಾ.

ಬುದ್ಧಿಯವರು ಹಣ್ಣನ್ನು ಸವಿದು, ಮಡದಿ ಬಾಯಿಗಿಡಿದ ಚಿನಿ ವಾಲನ್ನು ಕುಡಿದು ಅವಳ ಸೆರಗಿನ ತುದಿಯಿಂದಲೇ ತುಟಿ ವರೆಸಿ ಕೊಂಡು ಪ್ರತಿಕ್ರಿಯೆಯಾಗಿ ಅವಳ ಮುದ್ದುಮುಖಕ್ಕೊಂದು ಮೆಚ್ಚು ಕೊಟ್ಟು ಹೇಳತೊಡಗಿದರು.

"ಭಾಗು. ನಿನಗೆ ನಿನ್ನೆಯೇ ಹೇಳಿದ್ದೆ. ಉಪನಯನವಾದಲ್ಲದೆ ಅವನಿಗೆ ವೇದಪಾಠ ಹೇಳುವಂತಿಲ್ಲ" ಎಂದು ; ಏಕೆಂದರೆ ಇತರರಿಗೆ ಶಾಸ್ತ್ರ ಹೇಳುವ ಮುಖ್ಯೋಪಾಧ್ಯಾಯರೇ ಉಪನಯನವಿಲ್ಲದ ತಮ್ಮ ಮಗನಿಗೆ ವೇದಪಾಠ ಹೇಳಿಸುತ್ತಾರೆ ಎಂದು ಜನ ಆಡಿಕೊಳ್ಳುವುದಿಲ್ಲವೆ? ಅನಧಿಕಾರಿಗೆ ವೇದ ಪಾಠ ಹೇಳಿಸುವುದು ಬ್ರಾಹ್ಮಣ್ಯದ ಲಕ್ಷಣವೆ?" ಎಂದು ಬಂಧುಬಾಂಧವರ ಬಾಯಿಗೆ ನಾವು ಗುರಿಯಾಗಬಾರದು. ಅದಕ್ಕಾಗಿಯೇ ಅನುಭಾವಿಗಳೂ ಜ್ಞಾನ-ವಯೋವೃದ್ಧರೂ ಆದ ಮಾವನವರಲ್ಲಿ ಈ ಸಂದೇಹವನ್ನು ಚರ್ಚಿಸಿ ನಿರ್ಣಯಿಸಲು ನಾನು ಹೊರಟಿದ್ದೇನೆ. ಅವರು ಐದನೇ ವರ್ಷಕ್ಕೇ ಉಪನಯನಕ್ಕೆ ಶಾಸ್ತ್ರಸಮ್ಮತಿ ದೊರಕಿಸಿಕೊಟ್ಟರೆ ಚಿರಂಜೀವಿಗೆ ಈ ವರ್ಷವೇ ಮಾವನವರಿಂದ ಉಪನಯನ ಶಾಸ್ತ್ರ ಮುಗಿಸಿ ಸಂಸ್ಕೃತದ ಜೊತೆಗೆ ವೇದಾಧ್ಯಯನವನ್ನೂ ಆರಂಭಿಸಬಹುದು. ಮುಂದೆ ಐದಾರು ವರ್ಷಗಳ ವೇಳೆಗೆ ಅವನು ಇಲ್ಲಿಯ ವ್ಯಾಸಂಗ ಮುಗಿಸುವುದರಲ್ಲಿ ಯಾವ ಸಂದೇಹವೂ ಇಲ್ಲ. ಅವನ ಪ್ರೌಢಿಮೆಯನ್ನು ಶಂಭುಭಟ್ಟ ಕಂಡರೆ ಖಂಡಿತ ಅವನನ್ನು ಇಲ್ಲಿರಿಸುವುದೇ ಇಲ್ಲ. ಕಾಶಿಯ ಮಹಾ ವಿದ್ಯಾಪೀಠಕ್ಕೆ ಕರೆ ದೊಯ್ಯದೇ ಬಿಡುವುದಿಲ್ಲ. ಅಲ್ಲಿಂದ ಮುಂದೆ "ಭಾಗ್ಯಾಯತ್ತಮತಃಪರಂ ನ ಖಲುತದ್ವಾಚ್ಯಂ—" ಎಂದ ಮಹಾಕವಿ ವಾಕ್ಯದಂತೆ ಅವನ ಭವಿಷ್ಯ ವನ್ನು ನಾವು ಹೇಳಲಾಗುವುದಿಲ್ಲ."

—ಎಂದು ಬುದ್ಧಿಯವರು ಹೆಂಡತಿಯ ಸಂದೇಹಕ್ಕೆ ಸಮಾಪ್ತಿಯನ್ನು ಹಾಡಿದರು.

"ಒಳ್ಳೇದು ಬುದ್ಧಿ, ಹಾಗೆಯೇ ಮಾಡಿ. ಸುಖವಾಗಿ ಹೋಗಿ ಬನ್ನಿ. ನಿಮಗೆ ಸ್ವಲ್ಪ ತಿರುಗಾಡಿಕೊಂಡು ಬಂದಂತಾಗುತ್ತೆ. ಮಗನಿಗೂ ಬೆಟ್ಟ-ಗುಡ್ಡ-ಕಾಡು-ಬೀಡು ಕಂಡಂತಾಗುತ್ತದೆ!"

—ಎಂದಳು ಭಾಗೀರಥಿ ಕೃತಾರ್ಥತಾಭಾವದಿಂದ.

ಭಾಗೀರಥಿ ವೀಳೆಯವನ್ನು ಹದಮಾಡಿ ಪತಿಯ ಬಾಯಿಗಿಡುತ್ತಿರುವಾಗ್ಗೇ ಬುದ್ಧಿಯವರು ನಿದ್ರಾದೇವಿಯ ಆಲಿಂಗನಕ್ಕೆ ವಶರಾಗಿ ತಾಂಬೂಲ ಚರ್ವಣ ಮಾಡುತ್ತಾ ಮಡದಿಯ ಮುಖಕ್ಕೊಂದು ಮೆಚ್ಚುಕೊಟ್ಟು ಅವಳಿಗೂ ವಂಚನೆಯಾಗಬಾರದೆಂಬಂತೆ ಅವಳನ್ನೂ ತಬ್ಬಿ ಪವಡಿಸಿದರು.

ಆದರೆ ಭಾಗೀರಥಿ ಪತಿದೇವರು ನಿದ್ದೆಗೆ ವಶರಾದುದನ್ನು ಅರಿತು, ಅವರ ತೋಳತೆಕ್ಕೆಯಿಂದ ಬಿಡಿಸಿಕೊಂಡು ಅಡಿಗೆಮನೆ ಸೇರಿದಳು.

ii

ರಾಮುಡು ಬುದ್ಧಿಯವರ ಮನೆಯ ರೈತ. ಅವನು ಬುದ್ಧಿಯವರ ತೋಟ ತುಡಿಕೆಗಳಲ್ಲಿ ರೈತಾಪಿ ಕೆಲಸ ಮಾಡಿಕೊಂಡಿದ್ದಾನೆ. ರಾಮುಡು ವಂಶದವರು ಸುಮಾರು ಎರಡು ಮೂರು ತಲೆಮಾರುಗಳಿಂದ ಬುದ್ಧಿಯವರ ಮನೆತನಕ್ಕೆ ಒಗ್ಗಿಕೊಂಡಿದ್ದಾರೆ. ತೋಟದಲ್ಲಿಯೇ ಅವನಿಗೆ ಮನೆಕಟ್ಟಿಸಿ ಕೊಡಲಾಗಿದೆ. ಹೆಂಡತಿ ಮತ್ತು ಇಬ್ಬರು ಮಕ್ಕಳು ಅಷ್ಟೇ ಅವನ ಸಂಸಾರ.

ತೋಟದಲ್ಲಿ ಅಡಿಕೆ, ತೆಂಗು, ಬಾಳೆ, ಮಾವು, ಕಿತ್ತಳೆ, ಹಲಸು, ಅಂಜೂರ, ದಾಳಿಂಬೆ ಮುಂತಾದ ಫಲವೃಕ್ಷಗಳಿವೆ. ಈ ತೋಟಕ್ಕೆ ಹೊಂದಿಕೊಂಡಂತೆ ವೀಳೆಯದೆಲೆಯ ಅಂಬನ್ನು ಹೊಂದಿರುವ ಒಂದು ಭಾಗವೂ ಅಲ್ಲಿ ಇದೆ. ಮನೆಗೆ ಬೇಕಾದ ವಿವಿಧ ತರಕಾರಿ ಬೆಳೆಯನ್ನು ಅಲ್ಲಿ ಇಡ

ಲಾಗುತ್ತದೆ. ಮಳೆಗಾಲ ಮತ್ತು ಬೇಸಗೆಗಳಲ್ಲಿ ಭತ್ತ-ರಾಗಿ-ಜೋಳಗಳ ದವಸಧಾನ್ಯಗಳೂ ಅಲ್ಲಿ ಸಮೃದ್ಧಿಯಾಗಿ ಬೆಳೆಯುತ್ತವೆ. ಕೃಷ್ಣಾನದಿಯ ಆಸರೆಯು ಬುದ್ಧಿಯವರ ತೋಟ ಬಹುಮಟ್ಟಿಗೆ ನದೀಮಾತೃಕವೆಂದರೆ ತಪ್ಪಾಗಲಾರದು.

ಕಾಲಕಾಲಕ್ಕೆ ತಕ್ಕ ಬೆಳೆ ಇಟ್ಟು ಬೇಸಾಯ ಮಾಡುವ ಬಗೆಗೆ ಬುದ್ಧಿಯವರ ಆದೇಶವನ್ನೇನೂ ರಾಮುಡು ನಿರೀಕ್ಷಿಸುವ ಅಗತ್ಯವಿರಲಿಲ್ಲ. ಬೆಳೆ ತೆಗೆದು ಒಪ್ಪಮಾಡಿ ತನ್ನ ಧಣಿಗೆ ಅದನ್ನು ಒಪ್ಪಿಸುವುದು ಅವನ ಕೆಲಸ ; ಅದರಲ್ಲಿ ಯಾವ ಅಪೋಹವೂ ಇಲ್ಲ. ಬುದ್ಧಿಯವರೂ ರೈತನನ್ನು ತಮ್ಮ ಕುಟುಂಬದ ಒಬ್ಬನೆಂದೇ ಭಾವಿಸಿ, ಅವನ ಕುಟುಂಬದ ಜೀವನ ಭರಣವನ್ನು ವಹಿಸಿಕೊಂಡಿದ್ದಾರೆ ಎಂದ ಮೇಲೆ ಹೇಳುವುದಿನ್ನೇನು? ತಂದೆ-ಮಕ್ಕಳ ಬಾಂಧವ್ಯ ಅವರದು.

ಭಾಗೀರಥಿ ಮುಂಜಾನೆ ಹಾಸಿಗೆಯಿಂದ ಏಳುವ ಮೊದಲೆ ರಾಮುಡ ಹೆಂಡತಿ ವೆಂಕಟಮ್ಮ ಬಂದು ತಲೆಬಾಗಿಲ ಹೊರಗೆ ಕಸಗೂಡಿಸಿ, ಗೋಮದಿಂದ ಸಾರಿಸಿ, ರಂಗವಲ್ಲಿ ಹಾಕುತ್ತಿದ್ದಳು. ಮನೆಯೊಡತಿ ಹೊರಬಂದುದನ್ನು ಕಂಡ ವೆಂಕಟಮ್ಮ ಅವರಿಗೆ ವಂದಿಸಿ "ಅಮ್ಮಯ್ಯ, ಪೆದ್ದಸ್ವಾಮುಲು ಚಿನ್ನಸ್ವಾಮುಲು ಊರಿಕಿವೆಳ್ಳಾರಂಟ ! ಇಂಟಿಲೋ ಮಾವಾರು ಚೆಪ್ಪಿರಿ, ತೆಲ್ಲವಾರಿಕೇ ನನ್ನು ಲೇಪಿಂಚಿ, ಇಕ್ಕಡ ಪಂಪಿರಿ. ಮೀರೂ ಪೊಯ್ಯೇದಿ ಲೇದಾ ತಲ್ಲಿ !?" ಎಂದಳು ಸಂದೇಹ ಸೂಚಿಸಿ.

"ಲೇದು ವೆಂಕಟಮ್ಮ ! ಈ ಪೊದ್ದು ಪೊಯ್ಯೇದಿ, ರೇಪೇ ವಚ್ಚೇದಂಟ್ಟ ! ಇಂತ ಮಾತ್ರಾನಿಕಿ ಯಾಲಮ್ಮ ಎಂಡ ಮಾಮಿಡಿಪಂಡ್ಲು ತಿನೇಕಿ ಪೋವಲೆನಾ ?" ಎಂದಳು ಭಾಗೀರಥಿ ನಸುನಕ್ಕು.

"ಗನುಕ, ನೇನು ವೆಳ್ಳೇದೀದುಲೇ, ವಾರಿದ್ದರೇ ವೆಳ್ಳಾರು. !

ವೆಂಕಟಮ್ಮ ಮುಂದೆ ಪ್ರಶ್ನಿಸಲಿಲ್ಲ. ಅವಳು ನಡುವಿಗೆ ಸಿಕ್ಕಿಸಿದ್ದ ಅಡಿಕೆ ಎಲೆ ಚೀಲವನ್ನು ಹೊರತೆಗೆದು ಅಡಿಕೆ ಎಲೆ ಮೆದ್ದು ದವಡೆಗೆ ವತ್ತ

ರಿಸಿ ಬಾಯಿಗೆ ಕಡ್ಡಿಪುಡಿ ಹಾಕಿಕೊಂಡು "ಪುಂಚಿದಮ್ಮ !" ಎಂದವಳೇ ಕಸಮುಸುರೆ ಮುಗಿಸಿಕೊಂಡು ಮನೆದಾರಿ ಹಿಡಿದಳು.

ಭಾಗೀರಥಿ ಒಳಗಿನ ಕೆಲಸ ಮುಗಿಸಿ, ಸ್ನಾನ-ಪೂಜೆಗಳನ್ನೆಸಗುತ್ತಿದ್ದಳು.

ಮೂಡಲಲ್ಲಿ ಮೂಡಿಬಂದ ಅರುಣ ತನ್ನ ಕೆಂಗಿರಣಗಳಿಂದ ಪೂರ್ವ ದಿಗಂಗನೆಯನ್ನು ವಿಚ್ಛರಿಸಿದ್ದ. ಅವಳು ಅವನ ಕಿರಣಗಳನ್ನೇ ಪೊರಕೆ ಮಾಡಿಕೊಂಡು ಬಾನಂಗಳದಲ್ಲಿ ಅಲ್ಲಲ್ಲಿ ಮಿನುಗುವ ಕಿರು ತಾರೆಗಳನ್ನೆಲ್ಲ ಕಸಗೂಡಿಸುವಂತೆ ಗೂಡಿಸಿ, ಸ್ವಚ್ಛಮಾಡುತ್ತಿದ್ದಳು. ಇರುಳು ಮರಗಿಡಗಳಲ್ಲಿ ಅಡಗಿದ್ದ ಹಕ್ಕಿಗಳು ಚಲಪಿಲಿ ಗುಟ್ಟುತ್ತಾ ತಮ್ಮಗೂಡುಗಳನ್ನು ತೊರೆದು ಹೊರ ಹೊರಟ್ಟಿದ್ದವು.

ಬುದ್ಧಿಯವರು ಮಡಿಮಾಡುವ ಬಟ್ಟೆ ಸುರುಳಿಯನ್ನು ಕಂಕುಳಿಗೇರಿಸಿ ಹೂಬುಟ್ಟಿ ಹಿಡಿದು ಕೃಷ್ಣೆಯಕಡೆ ನಡೆದಿದ್ದರು.

ಭಾಗೀರಥಿ ಒಳಗಿನ ಕೆಲಸಗಳನ್ನೆಲ್ಲ ಮುಗಿಸಿ, ಸ್ನಾನ-ಪೂಜೆ ಪೂರೈಸಿ, ಅಡಿಗೆ ಮನೆ ಸೇರಿದ್ದಳು.

ಶ್ರೀಪತಿಗೆ ತಂದೆಯವರ ಯಾವ ನಿರ್ಧಾರವೂ ತಿಳಿಯದು. ಎಂದರೆ ಬುದ್ಧಿಯವರು ನೆನ್ನೆ ರಾತ್ರಿ ಮನೆಗೆ ಬರುವ ವೇಳೆಗೆ ಅವನು ಮಲಗಿ ನಿದ್ದೆಹೋಗಿದ್ದ. ಮುಂಜಾನೆ ಅವನು ಹಾಸಿಗೆಯಿಂದ ಏಳುವ ಮೊದಲೇ ಬುದ್ಧಿಯವರು ಸಂಚಾರ ಹೊರಟಿದ್ದರು.

ಇದೀಗ ಶ್ರೀಪತಿ ಹಾಸಿಗೆಯಲ್ಲಿ ಹೊರಳಾಡುತ್ತಾ "ಅಮ್ಮಾ! ಅಮ್ಮಾ!"ಎಂದು ಮೈ ಮುರಿಯುತ್ತಿದ್ದ. ಭಾಗೀರಥಿ ಹಾಸಿಗೆಯ ಬಳಿಬಂದು

"ಏಳು ಮರಿ, ಈ ಹೊತ್ತು ನಿನಗೆ ಹೊಸಸುದ್ದಿ ಕಾದಿದೆಯಪ್ಪ! ಏಳು, ಏಳು! ಎಂದಳು.

"ಏನಮ್ಮಾ, ಹೊಸಸುದ್ದಿ, ಹೇಳಮ್ಮಾ! ಎಂದು ಶ್ರೀಪತಿ ಕಣ್ಣು ಮುಚ್ಚಿಕೊಂಡು ಮೇಲೆ ಏಳುತ್ತಿದ್ದ.

"ಶಿವನೆ, ಗುರುವೆ ಎಂದು ಹೇಳುತ್ತಾ ಬಲಗಡೆ ಏಳಬೇಕಪ್ಪಾ!" ಎಂದು ಹೇಳುತ್ತಾ ಭಾಗೀರಥಿ ಶ್ರೀಪತಿಯನ್ನು ಮತ್ತೆ ಮಲಗಿಸಿ ಬಲಗಡೆ ಏಳುವಂತೆ ಪ್ರೇರಿಸಿದಳು, ಪತಿ ಮೇಲೆದ್ದು ಅಮ್ಮನ ಸೆರಗು ಹಿಡಿದು ಅವಳ ಜೊತೆ ಅಡಿಗೆಮನೆ ಸೇರಿದ.

ತಾಯಿ ಹೇಳಿದಳು. "ಈ ಹೊತ್ತು ನೀನು ಬುದ್ಧಿಯವರ ಜೊತೆ ಅಜ್ಜಿ-ತಾತ ನೋಡಲು ಊರಿಗೆ ಹೋಗಬೇಕಂತೆ! ನೋಡು ಆಗಲೇ ವೆಂಕಟಮ್ಮ ಬಂದು ಹೇಳಿ ಹೋದಳು. ರಾಮುಡು ಬಂಡಿ ಕಟ್ಟಿಕೊಂಡು ಇನ್ನೇನು ಬಂದು ಬಿಡುತ್ತಾನೆ! ನೀನು ಅಷ್ಟು ಹೊತ್ತಿಗೆ ಸ್ನಾನ ಮಾಡಿ ಬಟ್ಟೆತೊಟ್ಟು ಸಿದ್ಧವಾಗಬೇಕಂತೆ! ಅಷ್ಟರಲ್ಲಿ ನಾನು ನನ್ನನಿತ್ಯಾಗ್ನಿ ಕಾರ್ಯ ಆರಂಭಿಸಿದ್ದೇನೆ.

"ನಿತ್ಯಾಗ್ನಿಕಾರ್ಯ ಮಾಡೊರು ಅಪ್ಪಾಜಿ ಅಲ್ಲವೇನಮ್ಮ!"

"ಹೌದಪ್ಪ, ಅವರದೊಂದು ನಿತ್ಯಾಗ್ನಿಕಾರ್ಯ ನನ್ನದೂ ಒಂದು ನಿತ್ಯಾಗ್ನಿಕಾರ್ಯ!"

"ಬುದ್ಧಿಯವರು ಮಾಡುವ ನಿತ್ಯಾಗ್ನಿಕಾರ್ಯದಲ್ಲಿ ನೀನೂ ಜೊತೆಗೇ ಇರ್ತೀಯಲ್ಲಮ್ಮ! ಅದಲ್ಲದೆ ನೀನು ಮಾಡುವ ನಿತ್ಯಾಗ್ನಿ ಕಾರ್ಯ ಯಾವುದಮ್ಮ!

"ಹೌದುಮರಿ, ಬುದ್ಧಿಯವರು ಮಾಡುವ ನಿತ್ಯಾಗ್ನಿ ಕಾರ್ಯದಲ್ಲಿ ನಾನಿರೋದು ಶಾಸ್ತ್ರವಂತೆ! ಆದರೆ ನನ್ನ ನಿತ್ಯಾಗ್ನಿಕಾರ್ಯದಲ್ಲಿ ಬುದ್ಧಿ ಯವರು ಇರುವುದಿಲ್ಲ.

"ಅದು ಹೇಗಮ್ಮ? ನಿನ್ನ ನಿತ್ಯಾಗ್ನಿಕಾರ್ಯ ಯಾವುದಮ್ಮ?"

"ಅದೇಮರಿ, ನೀವು ಗಾಡಿ ಹತ್ತಿ ಹೊರಡುವ ಹೊತ್ತಿಗೆ ಹವಿಸ್ಸನ್ನು ಸಿದ್ಧ ಪಡಿಸಲು ನನ್ನ ನಿತ್ಯಾಗ್ನಿಕಾರ್ಯ ನಡೆಯಬೇಕಲ್ಲವೆ! ಮರಿ!

"ಹವಿಸ್ಸು ಎಂದರಲ್ಲ! ಆ ಹವಿಸ್ಸು ಯಾವುದಮ್ಮ!"

"ಬುದ್ಧಿಯುವರು ಮಾಡುವ ನಿತ್ಯಾಗ್ನಿಕಾರ್ಯದಲ್ಲಿ ಚರು (ಪಾಯಸ) ಸಿದ್ಧಪಡಿಸಿ ಅದಕ್ಕೆ ಆಜ್ಯ (ತುಪ್ಪ) ಬೆರೆಸಿ ಯಜ್ಞೇಶ್ವರನಿಗೆ ಮಂತ್ರಪಠಿಸುತ್ತಾ ಹವಿಸ್ಸು ಕೊಡುವುದಿಲ್ಲವೆ? ಅದರಂತೆ ನಿಮ್ಮೆಲ್ಲರಿಗೆ ಉದರದಲ್ಲಿ ಯಾವಾಗಲೂ ಉರಿಯುತ್ತಿರುವ ಹಸಿವು ಎಂಬ ಜಠರಾಗ್ನಿಗೆ ಪ್ರಸಾದವನ್ನು ಸಿದ್ಧಪಡಿಸಿ, ನಿಮಗೆಲ್ಲ ಬಡಿಸುವುದೇ ನಾನು ಸಿದ್ಧಪಡಿಸುವ ಹವಿಸ್ಸುಮರಿ! "

—ಎಂದು ಹೇಳುತ್ತಾ ಭಾಗೀರಥಿ ಪಾಕಮಾಡಿ ಸಿದ್ಧವಾದ ಪಾತ್ರೆಗಳನ್ನು ಮಡಿವಸ್ತ್ರದಿಂದ ಒರೆಸಿ? ಭಸ್ಮಧರಿಸಿದಳು.

"ಇದೇನಾ ನಿಮ್ಮ ನಿತ್ಯಾಗ್ನಿಕಾರ್ಯ! ಹಾಗಾದರೆ ಅದು "ಉದರಾಗ್ನಿಹೋತ್ರ!" ಅಲ್ಲವೇನಮ್ಮ! ಅಂದರೆ ನಮ್ಮ ಊಟಕ್ಕೇ ಮಾಡುವ ಅಡಿಗೆ. ಅದೇ ನಿಮ್ಮ ನಿತ್ಯಾಗ್ನಿಕಾರ್ಯ!"

"ಹೌದಪ್ಪ, ಮುಂಜಾನೆ ಸ್ನಾನಮಾಡಿ, ಮಡಿಯಿಂದ ಒಲೆಗೆ ಪೂಜೆ ಮಾಡಿ, ಅಗ್ನಿಪ್ರತಿಷ್ಠೆ ಮಾಡಬೇಕು. ಅದೇ ನನ್ನ ನಿತ್ಯಾಗ್ನಿಕಾರ್ಯ."

"ಇದೇನಮ್ಮ, ಪಾಕಮಾಡಿದ ಪಾತ್ರೆಗಳಿಗೆಲ್ಲ ವಿಭೂತಿ ಧರಿಸಿದ್ದೀರಿ? ಅದು ದೇವರೇನಮ್ಮ!

"ಹೌದು ಮರಿ, ಪಾತ್ರೆಯಲ್ಲಿ ಸಿದ್ಧವಾಗಿರುವುದು ಅನ್ನಬ್ರಹ್ಮ "ಅನ್ನಗತಃ ಪ್ರಾಣಃ" ಎನ್ನುತ್ತಾರೆ, ಆದ್ದರಿಂದ ಅನ್ನವೇ ದೇವರು. ಅದನ್ನೇ ಉಪನಿಷತ್ತಿನಲ್ಲಿ "ಅನ್ನಂ ಬ್ರಹ್ಮ" ಎಂದು ಕರೆಯಲಾಗಿದೆ."

"ಅನ್ನವನ್ನು ದೇವರು ಎಂದು ಯಾವ ಉಪನಿಷತ್ತಿನಲ್ಲಿ ಬರೆದಿದೆಯಮ್ಮ? "

"ದಿನದಿನವೂ ಅಪ್ಪಾಜಿ ಅಗ್ನಿಹೋತ್ರದ ತರುವಾಯ ಉಪನಿಷತ್ತು ಪಾರಾಯಣ ಮಾಡುವಾಗ "ಅನ್ನಂ ಬ್ರಹ್ಮೇತಿ ವ್ಯಜಾನಾತ್" ಎಂದು ಹೇಳುತ್ತಾರೆ. ಅವರನ್ನೇ ಕೇಳು ಮರಿ, ಚೆನ್ನಾಗಿ ಹೇಳುತ್ತಾರೆ.

"ಎಷ್ಟು ಚೆನ್ನಾಗಿ ಹೇಳಿದೆಯಮ್ಮ! ಅಡಿಗೆ ಮಾಡುವುದು ಒಂದು ಅಗ್ನಿಹೋತ್ರ, ಅನ್ನವೇ ದೇವರು. ನಮ್ಮ ಹಸಿವು ಉದರಾಗ್ನಿ; ಊಟ ಆ ಅಗ್ನಿಗೆ ಕೊಡುವ ಹವಿಸ್ಸು! ತುಂಬಾ ಚನ್ನಾಗಿ ಹೇಳಿದೆಯಮ್ಮಾ!" ಎಂದ ಶ್ರೀಪತಿ ಹರ್ಷಸೂಸಿ.

ಮಗನ ಮುದ್ದುಮಾತಿನ ಪ್ರಶಂಸೆ ಕೇಳಿ ಭಾಗೀರಥಿ ಕಣ್ಣಂಚಿನಲ್ಲಿ ಮೂಡಿಬರುತ್ತಿದ್ದ ಆನಂದಬಾಷ್ಪಗಳನ್ನು ಸೇರಗಿನಿಂದ ಒರೆಸುತ್ತಾ ಅವನ ಮುದ್ದು ಕೆನ್ನೆಗೆ ಮುತ್ತಿಟ್ಟು ನೆಟ್ಟಗೆ ತೆಗೆದಳು.

ಭಾಗೀರಥಿಗೆ ಹೊತ್ತಿಗೆ ಸರಿಯಾಗಿ ಅಡಿಗೆ ಮಾಡುವುದರ ಜೊತೆಗೆ ಮಗನಿಗೆ ಸ್ನಾನಮಾಡಿಸಿ ಪ್ರಯಾಣಕ್ಕೆ ಸಿದ್ಧಪಡಿಸುವ ಹೊಣೆಯೂ ಸೇರಿತ್ತು. ಅದಕ್ಕಾಗಿ ತಾಯಿ ಮಗನನ್ನು ಬಚ್ಚಲಿಗೆ ಕರೆದೊಯ್ದು ಸ್ನಾನಮಾಡಿಸುವಾಗಲೂ ಶ್ರೀಪತಿಯು ಪ್ರಶ್ನೆಗಳ ಸುರಿಮಳೆ ನಿಂತಿರಲಿಲ್ಲ.

"ಅಜ್ಜಿ-ತಾತ ಎಲ್ಲಮ್ಮ ಇರೋದು? ಯಾವುದಮ್ಮ ಅವರ ಊರು? ಎಷ್ಟುಹೊತ್ತಿಗಮ್ಮ ನಾವು ಹೊರಡುವುದು ? ಎಷ್ಟು ದೂರವಿದೆಯಮ್ಮ ಆ ಊರು?"

"ಮರಿ, ನಿಂದು ಪ್ರಶ್ನೆಗಳ ಸರಮಾಲೆ! ಅದಕ್ಕೆಲ್ಲ ಉತ್ತರಿಸ ಬೇಕಾದರೆ ನನಗೆ ಪುರುಸೊತ್ತಿಲ್ಲ ನೀನು ದಾರಿಯಲ್ಲಿ ಬುದ್ಧಿಯವರನ್ನೇ ಕೇಳಿದರೆ ಅವರು ವಿವರವಾಗಿ ಹೇಳ್ತಾರೆ"

—ಎಂದ ಭಾಗೀರಥಿ ಶ್ರೀಪತಿಗೆ ಸ್ನಾನಮಾಡಿಸಿ, ಹೊಸ ಬಟ್ಟೆ ತೊಡಿಸಿ ಅಡಿಗೆ ಮನೆ ಹೊಕ್ಕಳು.

ಅಷ್ಟರಲ್ಲಿ ಬುದ್ಧಿಯವರು ನಿತ್ಯ ವಿಧಿ ಮುಗಿಸಿ, ನದಿಯಲ್ಲಿ ಬಟ್ಟೆ ಮಡಿಮಾಡಿ, ಹೂ-ಪತ್ರೆ ಬಿಡಿಸಿ ಕೊಂಡು ಮನೆಯೊಳಕ್ಕೆ ಕಾಲಿಟ್ಟರು.

ಅವರನ್ನು ಕಂಡ ಶ್ರೀಪತಿ ಓಡಿ ಬಂದು ತಂದೆಯ ಪಾದಗಳಿಗೆ ನಮಸ್ಕಾರ ಮಾಡುತ್ತಿದ್ದಂತೆ ಬುದ್ಧಿಯವರು ಅವನ್ನೆತ್ತಿಕೊಂಡರು. ಶ್ರೀಪತಿ "ಅಜ್ಜಿ--ತಾತ ನೋಡುವುದಕ್ಕೆ ಯಾವಾಗ ಅಪ್ಪಾಜಿ ಊರಿಗೆ ಹೊರಡುವುದು?" ಎಂದು ಪ್ರಶ್ನಿಸಿದ.

"ಒಂಬತ್ತು ಗಂಟೆಗೆ. ರಾಹುಕಾಲ ಮುಗಿದ ಮೇಲೆ ಮರಿ! ನೀನೀಗಲೆ ಸಿದ್ಧವಾಗಿದ್ದೀಯಲ್ಲ!

"ರಾಹುಕಾಲ ಎಂದರೆ ಏನು ಅಪ್ಪಾಜಿ?"

"ಅದು ಜ್ಯೋತಿಶ್ಶಾಸ್ತ್ರದ ವಿಷಯ. ನಿನಗೆ ದಾರಿಯಲ್ಲಿ ಅದನ್ನೆಲ್ಲ ವಿವರವಾಗಿಹೇಳುತ್ತೇನೆ! ಎಂದ ಬುದ್ಧಿಯವರು ಬಚ್ಚಲ ಕಡೆ ಹೋಗಿ ಸ್ನಾನಕ್ಕೆ ಇಳಿದರು.

ಬುದ್ಧಿಯವರು ಸ್ನಾನ-ಸಂಧ್ಯೆ ಶಿವಾರ್ಚನೆ ಮತ್ತು ಅಗ್ನಿಕಾರ್ಯಗಳನ್ನು ಮುಗಿಸುವ ಹೊತ್ತಿಗೆ ಭಾಗೀರಥಿ ಭೋಜನಶಾಲೆಯಲ್ಲಿ ಪ್ರಸಾದ ಬಟ್ಟಲುಗಳಿಗೆ ಪಾಕಮಾಡಿದಪದಾರ್ಥಗಳನ್ನು ಬಡಿಸುತ್ತಿದ್ದಳು.

ತಂದೆ-ಮಕ್ಕಳು ಪ್ರಸಾದ ಸೇವಿಸಿ ಹೊರಬರುವ ಹೊತ್ತಿಗೆ ರಾಮುಡು ಪ್ರಯಾಣಕ್ಕೆ ಸಿದ್ಧಪಡಿಸಿದ ಬಂಡಿಯನ್ನು ಮನೆಯ ಮುಂದೆ ತಂದು ನಿಲ್ಲಿಸಿದ್ದ.

ಬುದ್ಧಿಯವರು ಪ್ರಯಾಣ ಹೊರಡುವುದು ಕಮಾನು ಗಾಡಿಯಲ್ಲಿ. ಬಂಡಿಯ ಪಲಗಡೆಯ ಮೇಲೆ ಕಟ್ಟಿರುದ ಕಮಾನು ರಾಮುಡು ನೈಪುಣ್ಯವನ್ನು ಸೂಚಿಸುತ್ತದೆ. ಪಲಗಡೆಗೆ ಎರಡೂ ಕಡೆ ಆರು ಆರು ಗುಜ್ಜಗಳನ್ನು ಬಂಧಿಸಿ, ಅದಕ್ಕೆ ಸಣ್ಣ ಬಿದಿರಿನಗಳನ್ನು ಕಮಾನು ಎರಡೂ ಕಡೆಗಳಿಂದ ಒಗಿಸಿ ಕಮಾನು ಮಾಡಿ, ಅದನ್ನು ನೂಲಿನ ಹುರಿಯಿಂದ ಸುತ್ತಿ ಸುತ್ತಿ ಬಿಗಿಯಲಾಗಿತ್ತು. ಪಲಗಡೆಯ ಮೇಲೆ ಮಾವಿನ ಹಲಗೆಗಳನ್ನು ನಾಜೂಕಾಗಿ ಜೋಡಿಸಿ, ಮೊಳೆಗಳನ್ನು ಹೊಡೆದು ಬಿಗಿಯಲಾಗಿತ್ತು. ಕಮಾನಿನ ಎರಡೂ ಪಕ್ಕಗಳಲ್ಲಿ ಕುಳಿತವರ ಭುಜದ ಆಳತೆಗೆ ಹಲಗೆಗಳನ್ನು ಅಳವಡಿಸಲಾಗಿದೆ. ಪಲಗಡೆಯ ಮೇಲೆಯೂ ಹಲಗೆಗಳನ್ನು ಜೋಡಿಸಿದ್ದುದರಿಂದ ಅದು ಒಂದು ಚಿಕ್ಕ ಕೊಠಡಿಯಂತೆ ಇತ್ತು. ಹಲಗೆಗಳ ಮೇಲೆ ಒತ್ತಾಗಿ ಹುಲ್ಲು ಹಾಸಿ, ಅದರ ಮೇಲೆ ಜಮಖಾನೆ ಹಾಸಿ ದಿಂಬುಗಳನ್ನಿಡಲಾಗಿತ್ತು. ಪಕ್ಕದ ಹಲಗೆಗಳ ಮೇಲೆ ಕಮಾನಿನಲ್ಲಿ ಅಲ್ಲಲ್ಲಿ ಬಿಡಿಸಿರುವ, ಕೆಲವು ಕಿರು ಕಿಂಡಿಗಳಿಗೆ ಕನ್ನಡಿಗಳನ್ನು ಜೋಡಿಸಲಾಗಿತ್ತು. ಮತ್ತೆ ಕೆಲವು ಕಿಂಡಿಗಳಿಂದ ಗಾಳಿ-ಬೆಳಕು ಒಳಕ್ಕೆ ಸರಾಗವಾಗಿ

ಬೀಸಿಬರಬಹುದಿತ್ತು. ಇದರಿಂದ ಗಾಡಿಯಲ್ಲಿ ಕುಳಿತವರಿಗೆ ಹಾಯೆನಿಸು ತ್ತಿತ್ತಲ್ಲದೆ ಹೊರಗಿನ ದೃಶ್ಯಾವಳಿಯನ್ನು ಕುಳಿತಲ್ಲಿಂದಲೇ ಕಾಣುವ ಅವಕಾಶವಿತ್ತು. ಬಂಡಿಯು ಹಿಂಭಾಗದಿಂದ ಹತ್ತಿ ಒಳಕ್ಕೆ ಬಂದು ಬಾಗಿಲು ಮುಚ್ಚಿ ಅಗುಳೆ ಹಾಕುವ ಸೌಕರ್ಯವಿದ್ದುದರಿಂದ ಪ್ರಯಾಣಿ ಸುವವರಿಗೆ ಅದು ಒಂದು ಸುಭದ್ರವಾದ ಕೊಠಡಿಯ ಅನುಭವ ವನ್ನುಂಟುಮಾಡಿತ್ತು.

ಬುದ್ಧಿಯವರ ಇಂಗಿತವನ್ನರಿತ ರಾಮುಡು ಹದವಾಗಿ ಮಾಗಿದ್ದ ಒಂದು ರಸಬಾಳೆಗೊನೆಯನ್ನು ೧೫-೨೦ ಎಳನೀರು, ಚೆನ್ನಾಗಿ ಮಾಗಿದ ಸುವಾಸನೆ ಬೀರುತ್ತಿದ್ದ ಎರಡು ಹಲಸು, ಒಂದು ನೂರು ಮಾವಿನ ಹಣ್ಣು ಮತ್ತು ಸಾಕಷ್ಟು ವಿವಿಧ ತರಕಾರಿಗಳನ್ನು ಬಂಡಿಯ ಹಿಂಭಾಗದಲ್ಲಿ ಸೇಖರಿಸಿದ್ದ.

ತವರಿಗೆ ಮುದ್ದು ಮಗನ ಜೊತೆ ಹೊರಟಿದ್ದ ಪತಿದೇವರನ್ನು ಬರಿಗೈಲಿ ಕಳಿಸಲು ಭಾಗೀರಥಿಗೆ ಮನಸ್ಸಾದರೂ ಹೇಗೆ ಬಂದೀತು? ಅವಳು ರಾತ್ರಿಯೇ ಪತಿದೇವರನ್ನು ಮಲಗಿಸಿ ಅಡಿಗೆ ಮನೆ ಸೇರಿದ್ದಳು. ಒಲೆಯ ಮೇಲೆ ಬಾಣಲೆ ಇಟ್ಟು ಚಕ್ಕುಲಿ, ಕಾರದ ಸೇವೆ, ಕೋಡುಬಳೆ, ರವೆಉಂಡೆ ಮತ್ತು ಮಿಠಾಯಿ ಮುಂತಾದ ಸಿಹಿ-ಖಾರಗಳ ತಿನಿಸುಗಳನ್ನು ಸಿದ್ಧಪಡಿಸಿ ಬೇರೆ ಬೇರೆ ಡಬ್ಬಿಗಳಲ್ಲಿ ತುಂಬಿ ಇರಿಸಿದ್ದಳು.

ಬಿಸಿಲಿನಲ್ಲಿ ಪ್ರಯಾಣಿಸುವಾಗ ಬಾಯಾರಿಕೆಯ ಉಪಶಮನಕ್ಕಾಗಿ ಸಕ್ಕರೆ, ನಿಂಬೆಹಣ್ಣು, ನೀರು ತುಂಬಿದ ತಿರುಗಣಿ ತಂಬಿಗೆಗಳನ್ನು ಹಾಕುವು ದನ್ನು ಅವಳು ಮರೆತಿರಲಿಲ್ಲ.

ಭಾಗೀರಥಿ ರಾಮುಡುವನ್ನು ಒಳಕ್ಕೆ ಕರೆದು ಅವನಿಗೆ ಊಟ ಬಡಿಸಿ ದಳು. ಎತ್ತುಗಳಿಗೆ ಬೆಳಗಿನ ಝಾವದಿಂದಲೇ ಕಡಲೆಹೊಟ್ಟು, ಹಿಂಡಿ, ನೆನೆಸಿರುವ ಹುರುಳಿನುಚ್ಚುಗಳನ್ನು ತಿನ್ನಿಸಿ, ನೀರು ಕುಡಿಸಿದ್ದುದರಿಂದ ಅವು ತುಂಬಿದ ನ್ಯೆಯಿಂದ ಮೆಲುಕು ಹಾಕುತ್ತಾ ಬುದ್ಧಿಯವರನ್ನು

ಕಂಡು ಹರ್ಷೋದ್ಗಾರ ಮಾಡಿದವು. ಬುದ್ಧಿಯವರು ಎತ್ತುಗಳ ಬಳಿ ಬಂದು ಮೈ ಸವರಿ ಕಣ್ಣು, ಕಿವಿಗಳ ಮೇಲ್ಭಾಗ, ಕೊಂಬುಗಳ ಬುಡವನ್ನು ತುರಿಸುತ್ತಾ ಕುತ್ತಿಗೆ ಕೆಳಗೆ ಕೈಯಾಡಿಸಿ ಅವನ್ನು ಮುದ್ದು ಮಾಡಿದರು.

ಎತ್ತುಗಳ ಕೊಂಬುಗಳಿಗೆ ಹಾಕಿದ್ದ ಬೆಳ್ಳಿಕುಪ್ಪುಗಳು. ಕುತ್ತಿಗೆಗೆ ತೊಡಿಸಿದ್ದ ಸಣ್ಣಗಂಟೆಗಳ ಕಂಠಪಟ್ಟಿಗಳು ಎತ್ತುಗಳು ತಲೆಯಾಡಿಸಿದಾಗ ನುಣ್ದನಿ ಬೀರುತ್ತಿದ್ದವು. ಚಕ್ರಗಳಿಗೆ ಅರಳೆಣ್ಣೆ ಬೆರೆಸಿದ ಎರೆ ಹಾಕಿ, ಕಡೆಗೀಲುಗಳನ್ನು ತೊಡಿಸಲಾಗಿತ್ತು. ಎರೆಕೊಂಬನ್ನು ಕಮಾನಿನ ಹೊರಗೆ ಬಿಗಿಯಲಾಗಿತ್ತು. ಗಾಡಿಯ ಎತ್ತರಕ್ಕೆ ಸಮವಾದ ಎತ್ತುಗಳನ್ನು ಕಟ್ಟಿದ ಬಂಡಿ ರಸ್ತೆಯಲ್ಲಿ ಬಂದರೆ ಜಮೀನುದಾರರ ಸಾರೋಟು ಬಂದಿತೆಂದು ಜನ ಭ್ರಾಂತಿಪಡುವಂತಿತ್ತು. ಎತ್ತುಗಳು ಚಲಿಸುವಾಗ ಕಂಠಪಟ್ಟಿ ಗೆಜ್ಜೆ-ಗಂಟೆಗಳ ಅನುರಣನ ದೂರದಿಂದ ಬರುವ ಬುದ್ಧಿಯವರ ಬಂಡಿಯ ಸೂಚನೆ ಕೊಡುವ ಹರಿಕಾರನಂತಿತ್ತು. ಅದನ್ನು ಕೇಳಿದ ಜನ ಅವರವರ ಮನೆಯ ಮುಂದೆ ಗಾಡಿ ಬಂದಾಗ ಎದ್ದು ನಿಂತು ಬುದ್ಧಿಯವರಿಗೆ ಶುಭಪ್ರಯಾಣ ಕೋರುವುದು ಅಂದಿನ ಪದ್ಧತಿಯಾಗಿತ್ತು. ಬುದ್ಧಿಯವರು ಶುಭ್ರ ವಸ್ತ್ರಗಳನ್ನು ಧರಿಸಿ ಚಿರಂಜೀವಿಯೊಡನೆ ದೇವಾಲಯ ಹೊಕ್ಕು, ಮಲ್ಲೇಶ್ವರ ಮತ್ತು ಕನಕಾಂಬೆಯರಿಗೆ ಬಲವಂದು ಮಂಗಳಾರತಿ ಮಾಡಿಸಿ, ತೀರ್ಥಪ್ರಸಾದ ಸ್ವೀಕರಿಸಿ ಬಂದರು.

ಭಾಗೀರಥಿ ಪೂಜಾ ಸಾಮಗ್ರಿಗಳನ್ನು ತಂದು, ಮೂಕಿಯ ಹತ್ತಿರ ನಿಂತು ಗಾಡಿ ಮತ್ತು ಎತ್ತುಗಳಿಗೆ ಪೂಜೆಸಲ್ಲಿಸಿದ್ದಳು. ತಂದೆ ಮಕ್ಕಳು ಗಾಡಿಗೆ ಪ್ರದಕ್ಷಣೆ ಮಾಡಿ ತೆಂಗಿನಕಾಯಿ ಒಡೆದು, ತೀರ್ಥವನ್ನು ಗಾಡಿ. ಎತ್ತುಗಳು ಮತ್ತುರಾಮುಡು ಮೇಲೆ ಪ್ರೋಕ್ಷಿಸಿ, ತಮ್ಮ ಮೇಲೆಯೂ ಚಿಮುಕಿಸಿ ಕೊಂಡರು. ಭಾಗೀರಥಿ ಕರ್ಪೂರದಾರತಿ ಬೆಳಗಿ. ಪತಿದೇವರ ಪಾದಗಳಿಗೆ ವಂದಿಸಿ, ಮಗನ ಹಣೆಗೆ ಆರತಿ ಕಾಡಿಗೆಯ ಬೊಟ್ಟನ್ನಿಟ್ಟು ಮುದ್ದಿಸಿ, ತಮ್ಮ ತಲೆಗೆ ನೆಟ್ಟಿಗೆ ತೆಗೆದು ಅರುಗಾದರು.

ಬುದ್ಧಿಯವರು ಮಗನೊಡನೆ ಗಾಡಿ ಏರಿದ ಮೇಲೆ ರಾಮುಡು ಮೂಕಿಗೆ ಶರಣುಮಾಡಿ, ಗಾಡಿ ಏರಿದ. ಬುದ್ಧಿಯವರು ಮನಸ್ಸಿನಲ್ಲಿಯೇ

ಜಯಕಾರ ಮಾಡಿ, ಮಡದಿಗೆ ಅಭಯ ಸೂಚಿಸಿ "ಬಂಡಿ ಮುಂದರ ಪೋನಿ!" ಎಂದು ಅನುಜ್ಞೆ ಇತ್ತರು. ರಾಮುಡು ಎತ್ತುಗಳ ಬಾಲಮೂಲವನ್ನು ಸ್ಪರ್ಶಿಸಿದೊಡನೆಯೇ ಗಾಡಿ ಹೊಸಹುರುಪಿನಿಂದ ಮುನ್ನಡೆಯಿತು. ಎತ್ತುಗಳ ಕಂಠಪಟ್ಟಿಯ ಗೆಜ್ಜೆ-ಗಂಟೆಗಳ ನುಣ್ದನಿ ಜಯಕಾರ ಮಾಡುವಂತಿತ್ತು.

ಭಾಗೀರಥಿ ಗಾಡಿ ಕಾಣುವವರೆಗೆ ಅಲ್ಲಿಯೇ ಮರವಟ್ಟು ನಿಂತಿದ್ದು ಕಣ್ಣಂಚಿನಲ್ಲಿ ಮೂಡಿಬಂದಿದ್ದ ಆನಂದಬಾಷ್ಪಗಳನ್ನು ಸೆರಗಿನ ತುದಿಯಿಂದ ಒರಸಿಕೊಂಡು ಮನೆಗೆ ಹಿಂದಿರುಗಿದಳು.



೩

# ಮುದಿಗೊಂಡದ ಹಾದಿಯಲ್ಲಿ

ಬೆಜವಾಡದಿಂದ ಉತ್ತರಕ್ಕೆ ಏಲೂರಿಗೆ ಹೋಗುವ ಹಾದಿಯಲ್ಲಿ ಸುಮಾರು ಹತ್ತು ಹರಿದಾರಿ ನಡೆದರೆ ಮುದಿಗೊಂಡಂ ತಲುಪಬಹುದು. ನಗರದಿಂದ ಸುಮಾರು ಎರಡು ಮೂರು ಹರಿದಾರಿಯವರೆಗೆ ಕಣ್ಣು ತಣಿಸುವಷ್ಟು ದೂರ ಕಾಣುವ ಕೃಷ್ಣಾ ಪರಿಸರದ ಗದ್ದೆ ಬಯಲು; ಹಸಿರು ಮುಕ್ಕಳಿಸುವ ಕಣ್ಗೆಡ್ಡ (ನಯನಮನೋಹರ) ಮಾದ ಸುಂದರ ದೃಶ್ಯ: ಹಸಿರುಡೆಯುಟ್ಟ ಭೂರಮೆ ವನಪು ವಯ್ಯಾರದಿಂದ ನಲಿದು ನರ್ತಿಸುವ ರಂಗಮಂಚವೆಂಬಂತಿರುವ ವಿಶಾಲ ಮೈದಾನ.

ಹಾಲು ತುಂಬಿದ ಭತ್ತದ ತೆನೆಗಳು ಸುಳಿಗಾಳಿಗೆ ತೂಗುತ್ತಾ, ಹಾಲುಣಲು ಬಂದ ಪುಟ್ಟ ಗುಬ್ಬಚ್ಚಿಗಳೊಡನೆ ಚಲ್ಲಾಟವಾಡುತ್ತಿವೆ. ಈ ಸೋಜಿಗವನ್ನು ಕಂಡು ನಲಿ ನಲಿದು ಚಪ್ಪಾಳೆ ತಟ್ಟಿ ನಗುತ್ತಿರುವ ಶ್ರೀಪತಿ ರಾಮುಡು ಹಿಂದೆ ನಿಂತು ಆನಂದಿಸುತ್ತಿದ್ದಾನೆ. ಗಾಡಿಯ ಹಿಂದಿನ ಜಲ್ಲೆ ಗೂಡಿನಲ್ಲಿ ಶೇಖರಿಸಿದ್ದ ಗಂಟು ಮೂಟೆಗಳ ನಡುವೆ ಸದುವು ಮಾಡಿ ಕೊಂಡು ಕಾಲೂರಿ ಹಿಂಬದಿಯಲ್ಲಿ ಕಾಣುವ ಮಂಜುಳ ದೃಶ್ಯವನ್ನೊಮ್ಮೆ, ಕಮಾನಿನ ಕಿಂಡಿಗಳ ಬಳಿ ಬಂದು ನಿಂತು; ಕೆಲವು ಸಲ ಅಕ್ಕ ಪಕ್ಕದ ರಮ್ಯ ದೃಶ್ಯಗಳನ್ನು ಕಂಡು ಪುಳಕಿತನಾಗುತ್ತಿದ್ದ ಶ್ರೀಪತಿ ತಂದೆಯ ತೊಡೆಯೇರಿ, ತಾನುಕಂಡ ದೃಶ್ಯಗಳನ್ನು, ಸೋಜಿಗಗಳನ್ನು ಮುದ್ದು ಮುದ್ದಾಗಿ ಬುದ್ಧಿಯವರಿಗೆ ಬಿತ್ತರಿಸುತ್ತಿದ್ದ.

ಅಷ್ಟು ಹೊತ್ತಿಗೆ ಗಾಡಿ ಗದ್ದೆಯ ಬಯಲನ್ನು ಹಿಂದಿಟ್ಟು ಕಾಡು ದಾರಿಯಲ್ಲಿ ಮುನ್ನಡೆದಿತ್ತು. ಶ್ರೀಪತಿಗೆ ಕಾಡಿನ ಕುತೂಹಲ ಕಡಿಮೆ

ಯಾಗಿತ್ತು. ಅವನು ಬುದ್ಧಿಯವರ ಎದೆಗವಚಿಕೊಂಡು ಏನೇನೋ ನೆನೆಸಿಕೊಂಡು ಕೇಳ ತೊಡಗಿದ್ದ.

"ಅಪ್ಪಾಜಿ, ಮುಂಜಾನೆ ನಾನು ಎಷ್ಟು ಹೊತ್ತಿಗೆ ಹೊರಡೋದು ಎಂದು ಕೇಳಿದಾಗ ನೀವು 'ರಾಹುಕಾಲ ಕಳೆದ ಮೇಲೆ' ಎಂದು ಹೇಳಿದಿರಲ್ಲವೆ ?"

"ಹೌದು ಮರಿ,"

"ರಾಹುಕಾಲ ಎಂದರೇನು ಅಪ್ಪಾಜಿ ? ರಾಹು ಎಂದರೆ ಯಾರು ? ರಾಹುಕಾಲ ಕಳೆದ ಮೇಲೆ ಎಂದರೆ ಏನು ಅಪ್ಪಾಜಿ?" ಎಂದು ಕೇಳಿದ ಶ್ರೀಪತಿ ಬುದ್ಧಿಯವರಿಗೆ ಕುತೂಹಲದಿಂದ.

ಅಚ್ಚರಿಯಾಯಿತು ಅವನ ಜ್ಞಾಪಕ ಶಕ್ತಿಯನ್ನು ಕಂಡು ಬುದ್ಧಿಯವರಿಗೆ, ಮೇಲಾಗಿ ಅವನ ಪ್ರಶ್ನೆಗಳು ಬುದ್ಧಿಯವರ ವಿದ್ಯೆ ಮತ್ತು ಅನುಭವಗಳಿಗೆ ಒಂದು ಸವಾಲಾಗಿತ್ತು. ಆದರೂ ಅವರು ಅವನ ಪ್ರಶ್ನೆಗಳಿಗೆ ಉತ್ತರಿಸಲು ತಬ್ಬಿಬ್ಬಾದರು.

"ಮರಿ, ರಾಹುಕಾಲ ಎಂಬುದು ಜ್ಯೋತಿಷ್ಯ ಶಾಸ್ತ್ರದಲ್ಲಿ ಬರುವ ಮಾತು. ಪಂಚಾಂಗಗಳಲ್ಲಿ ಕಾಲವನ್ನು ರಾಹುಕಾಲ, ಗುಳಿಕಕಾಲ, ಯಮಗಂಡಕಾಲ, ಮತ್ತು ಅರ್ಧಪ್ರಹರ ಕಾಲ ಎಂದು ವಿಂಗಡಿಸಿದ್ದಾರೆ. ಈ ಕಾಲಗಳು ಪ್ರತಿದಿನ ೨೪ ಗಂಟೆಗಳಲ್ಲಿ ಒಂದೊಂದೂ ಅದು ಆರಂಭವಾದಾಗಿನಿಂದ ಒಂದೂವರೆ ಗಂಟೆಯುವರೆಗೆ ಇರುತ್ತವೆ. ಭಾನುವಾರದಿಂದ ಶನಿವಾರದವರೆಗೆ ಪ್ರತಿದಿನವೂ ಇವು ಬದಲಾಗುತ್ತಿರುತ್ತವೆ. ಇವುಗಳಲ್ಲಿ ಒಳ್ಳೆಯ ಕೆಲಸಗಳನ್ನು ಮಾಡುವುದಿಲ್ಲ.

ಇದಲ್ಲದೆ 'ಗೌರೀ ಪಂಚಾಂಗ'ವೆಂಬ ಒಂದು ಕಾಲ ವಿಭಾಗವೂ ಇದೆ. ಅದರಲ್ಲಿ ಬರುವ ಅಮೃತಗಳಿಗೆ, ಶುಭ, ಜ್ವರ, ವಿಷ, ರೋಗ, ಲಾಭ, ಧನ, ಉದ್ಯೋಗ ಮುಂತಾಗಿ ಕಾಲವನ್ನು ಆರಿಸಿಕೊಂಡು ನಾವು ಮಾಡುವ ಕೆಲಸಗಳನ್ನು ಗೊತ್ತು ಮಾಡಿಕೊಳ್ಳುತ್ತೇವೆ." — ಎಂದರು ಬುದ್ಧಿಯವರು ಈ ಪ್ರಶ್ನೆಯಲ್ಲಿ ಗೆದ್ದೆನೆಂಬ ಹೆಮ್ಮೆಯಿಂದ.

ಆದರೆ ಶ್ರೀಪತಿ ಅಲ್ಲಿಗೆ ಸುಮ್ಮನಾಗಲಿಲ್ಲ. ಅವನು ಕೇಳಿದ—

"ರಾಹು ಎಲ್ಲಿರುತ್ತಾನೆ ಅಪ್ಪಾಜಿ?"

"ರಾಹು ಆಕಾಶದಲ್ಲಿರುವ ಸೂರ್ಯ, ಚಂದ್ರ ಗ್ರಹಗಳಲ್ಲಿ ಸೇರಿದವನು. ಅವನು ಸೂರ್ಯಚಂದ್ರರಂತೆ ನಮಗೆ ಕಾಣುವುದಿಲ್ಲ. ಅವನನ್ನು ಛಾಯಾ (ನೆರಳು) ಗ್ರಹ ಎಂದು ಕರೆಯುತ್ತಾರೆ.

ಕಳೆದ ವರ್ಷ ನಿನಗೆ ಸೂರ್ಯಗ್ರಹಣ ಮತ್ತು ಚಂದ್ರಗ್ರಹಣಗಳು ಆದಾಗ ತೋರಿಸಲಿಲ್ಲವೆ?

"ಹೌದು ಅಪ್ಪಾಜಿ, ಆ ಗ್ರಹಣಗಳು ಆದಾಗ ಸೂರ್ಯ–ಚಂದ್ರರು ಕಾಣುತ್ತಿರಲಿಲ್ಲ; ಎಲ್ಲೆಲ್ಲೂ ಕತ್ತಲು ಕವಿಯಿತು! ಅದೇಕೆ ಅಪ್ಪಾಜಿ ಹಾಗೆ ಆದದ್ದು?

"ಅದನ್ನೇ ಪಂಚಾಂಗದಲ್ಲಿ ರಾಹುಗ್ರಸ್ತ ಚಂದ್ರಗ್ರಹಣ, ಅಥವಾ ಕೇತುಗ್ರಸ್ತ ಸೂರ್ಯಗ್ರಹಣ ಮುಂತಾಗಿ ಬರೆದಿರುತ್ತದೆ."

"ಈ ರಾಹು ಮತ್ತು ಕೇತುಗಳು ಸೂರ್ಯ–ಚಂದ್ರರನ್ನು ಏನು ಮಾಡುತ್ತಾರೆ ಅಪ್ಪಾಜಿ?"

ಪುರಾಣದಲ್ಲಿ ಇದರ ಕತೆ ಹೀಗಿದೆ; ರಾಹು ಒಬ್ಬ ಅಸುರ. ಅವನು ಸೂರ್ಯ–ಚಂದ್ರರ ಶತ್ರು !

"ಅದೇಕೆ, ರಾಹು ಅವರಿಗೆ ಶತ್ರುವಾದ ಅಪ್ಪಾಜಿ?"

"ಅದು ಬಹು ದೊಡ್ಡ ಕತೆ ಮರಿ!"

"ಆ ಕತೆ ಹೇಳಿ ಅಪ್ಪಾಜಿ, ಕೇಳಬೇಕು!"

" ಹಿಂದೆ ಸುರರಿಗೆ ಮತ್ತು ಅಸುರರಿಗೆ ಜಗಳವಾಯಿತಂತೆ!"

"ಆ ಸುರ ಮತ್ತು ಅಸುರರು ಯಾರು ಅಪ್ಪಾಜಿ!'

"ಹಿಂದೆ ಕಶ್ಯಪಬ್ರಹ್ಮನಿಗೆ ನಾಲ್ವರು ಹೆಂಡತಿಯರು! ಅವರ ಹೆಸರು ದಿತಿ, ಅದಿತಿ, ವಿನತಾ ಮತ್ತು ಕದ್ರು ಎಂದು. ದಿತಿಯ ಮಕ್ಕಳೇ ದೈತ್ಯರು. ಅದಿತಿಯ ಮಕ್ಕಳು ಆದಿತೇಯರು. ಆದಿತೇಯರಿಗೆ ಸುರರೆಂದು

ಹೆಸರು. ದೈತ್ಯರು ಸುರರಲ್ಲದ್ದರಿಂದ ಅಸುರರೆನಿಸಿದರು. ಅದರಂತೆ ವಿನತೆಯ ಮಕ್ಕಳು ವೈನತೇಯರು. ಕದ್ರುವಿನ ಮಕ್ಕಳು ಕಾದ್ರವೇಯರು.

ವಿನತೆಯ ಮಕ್ಕಳಲ್ಲಿ ಗರುಡ-ಅರುಣ ಮುಂತಾದ ಪಕ್ಷಿಜಾತಿ ಉದಿಸಿತು. ಇನ್ನು ಕಾದ್ರವೇಯರೆಂದರೆ ಸರ್ಪಜಾತಿ. ಅವರು ಸಾವಿರ ಮಂದಿ. ಇವರಲ್ಲಿ ಹಿರಿಯನು ಆದಿಶೇಷ. ಅವನಿಗೆ ಸಾವಿರ ಹೆಡೆ. ಸರ್ಪಗಳ ವಾಸಸ್ಥಳ ಪಾತಾಳ. ದೇವರ ಆದೇಶದಂತೆ ಆದಿಶೇಷ ಭೂಮಿಯನ್ನು ತನ್ನಹೆಡೆಗಳ ಮೇಲೆ ಹೊತ್ತುಕೊಂಡ ಉಳಿದವರಲ್ಲಿ ಎರಡನೆಯವ ವಾಸುಕಿ. ಅವನು ಸರ್ಪಲೋಕದ ರಾಜನಾದ. ಕಾಳಿಂಗ-ತಕ್ಷಕ ಐರಾವತ–ಧನಂಜಯ–ಕರ್ಕೋಟಕ-ಶಂಖ ಮತ್ತು ಅನಂತಎಂಬುವವರಿಗೆ ಅಷ್ಟನಾಗಗಳೆಂದು ಹೆಸರು"

'ಈ ಸುರ ಮತ್ತು ಅಸುರರಿಗೆ ಜಗಳವಾಯಿತು' ಎಂದಿರಿ ! ಏಕೆ ಅಪ್ಪಾಜಿ?"

"ಇವರಿಗೆ ತಾಯಿ ಬೇರೆಯಾದರೂ ತಂದೆ ಒಬ್ಬನೇ ಅಲ್ಲವೆ? ಆದುದರಿಂದ ಅವರು ಅಣ್ಣ-ತಮ್ಮಂದಿರು; ಅಥವಾ ದಾಯಾದಿಗಳು.

"ದಾಯಾದಿಗಳೆಂದರೆ?"

"ದಾಯ ಎಂದರೆ ಹಂಚಿಕೆಯಾಗಬೇಕಾದ ಅಪ್ಪನ ಆಸ್ತಿ. ಅದು ಅಣ್ಣತಮ್ಮಂದಿರಿಗೆ ಯಥೋಚಿತವಾಗಿ ಹಂಚಿಕೆಯಾಗಬೇಕು. ಹಾಗೆ ಹಂಚುವಾಗ ಜಗಳ ಹುಟ್ಟುತ್ತೆ. ಇದೇ ಕಾರಣದಿಂದ ಸುರ ಮತ್ತು ಅಸುರರಿಗೆ ಆಗಾಗ ಜಗಳ ಆಗುತ್ತಿತ್ತು.

"ಅದು ಸರಿ ಅಪ್ಪಾಜಿ, ರಾಹುವಿಗೆ ಸೂರ್ಯ ಚಂದ್ರರ ಮೇಲೆ ವೈರ ಬೆಳೆಯುವುದಕ್ಕೆ ಕಾರಣವೇನು? "

"ಅದೇ ಹೇಳುತ್ತಾ ಇದೀನಿ, ಒಂದೇ ಮನಸ್ಸಿನಿಂದ ಕೇಳು! ಹಿಂದೆ ಕ್ಷೀರ (ಹಾಲು) ಸಾಗರದಲ್ಲಿ ಅಮೃತವಿದೆಯೆಂದೂ ಅದನ್ನು ಕಡೆದರೆ ಅಮೂಲ್ಯ ವಸ್ತುಗಳು ದೊರೆಯುವುವೆಂದೂ 'ದೈವವಾಣಿ' ನುಡಿಯಿತಂತೆ"

"ದೈವವಾಣಿ" ಎಂದರೆ ಏನು ಅಪ್ಪಾಜಿ?"

"ದೇವರ ಪ್ರೇರಣೆಯಿಂದ ಆಕಾಶದಲ್ಲಿ ಕೇಳಿಬರುವ ಮಾತು! ಅದಕ್ಕೆ "ಆಕಾಶವಾಣಿ" ಎಂದೂ ಹೆಸರು"

"ಕ್ಷೀರಸಾಗರ ಎಂದರೆ ಯಾವುದು ಅಪ್ಪಾಜಿ?"

ಕ್ಷೀರ ಎಂದರೆ ಹಾಲು. ಸಾಗರ ಎಂದರೆ ಸಮುದ್ರ. ಅಂಥ ಸಮುದ್ರಗಳು ಏಳು ಇವೆ. ಈ ಸಪ್ತಸಾಗರಗಳಲ್ಲಿ ಕ್ಷೀರ ಸಾಗರವೂ ಒಂದು ಹಾಲನ್ನು ಕಡೆದರೆ ಬೆಣ್ಣೆ ಬರುವುದಿಲ್ಲವೆ? ಅದರಂತೆ ಕ್ಷೀರ ಸಾಗರವನ್ನು ಕಡೆದರೆ ಅಮೃತ ಹುಟ್ಟುತ್ತೆ!"

ಅಮೃತ. ಎಂದರೆ ಏನು ಅಪ್ಪಾಜಿ?

ಅಮೃತ ಎಂದರೆ ಮರಣವಿಲ್ಲದ್ದು, ಎಂದರೆ ಅಮೃತಪಾನ ಮಾಡಿದವರು ಸಾಯುವುದಿಲ್ಲವಂತೆ!

"ಹೌದಾ ಅಪ್ಪಾಜಿ ?" ಮುಂದೆ ಹೇಳಿ! ಹಾಲು ಸಮುದ್ರವನ್ನು ಕಡೆದದ್ದು ಹೇಗೆ ಅಪ್ಪಾಜಿ?"

ಅದೊಂದು ಅದ್ಭುತ ಕತೆ! ಸಮುದ್ರವನ್ನು ಕಡೆಯಬೇಕಾದರೆ, ಕಡಗೋಲು, ಹಗ್ಗ ಬೇಕಲ್ಲವೆ?

"ಹೌದು ;ಕಡಗೋಲು ಯಾವುದು! ಹಗ್ಗ ಯಾವುದು?"

"ಹಾಲಿನ ಸಮುದ್ರದಲ್ಲಿ ಮೇರು ಪರ್ವತವನ್ನು ಇಳಿಸಿ, ಕಡಗೋಲುಮಾಡಿದರು. ಸಮುದ್ರದಲ್ಲಿ ಮೇರುಪರ್ವತ ಮುಳುಗಲಿಲ್ಲವೆ?"

"ಮುಳುಗದೆ ಇರುತ್ತದೆಯೆ? ಮುಳುಗಿತು. ಆಗ ತ್ರಿಮೂರ್ತಿಗಳಲ್ಲಿ ಒಬ್ಬನಾದ ವಿಷ್ಣು ತಾನು ಕೂರ್ಮ(ಆಮೆ)ವಾಗಿ ಅದರ ಕೆಳಗೆ ಕುಳಿತ."

ಆಮೆಯ ಮೇಲೆ ಮೇರು ಪರ್ವತವಿದ್ದುದರಿಂದ ಕಡೆಯಲು ಅನುಕೂಲವಾಯಿತು. ಆ ಪರ್ವತಕ್ಕೆ ಆದಿಶೇಷನ ಸಾವಿರಾರು ಮಾರುದ್ದದ ದೇಹವೇ ಹಗ್ಗವಾಯಿತು. ಅಂಥ ಹಗ್ಗವನ್ನು ದೇವತೆಗಳು ಮತ್ತು ಅಸುರರು ಒಂದೊಂದು ಕಡೆ ಹಿಡಿದು ಕಡೆದರು.

"ಆಮೇಲೆ ಏನಾಯಿತು ಅಪ್ಪಾಜಿ?"

"ಅಸುರರು ಆದಿಶೇಷನ ತಲೆಯ ಕಡೆ ಹಿಡಿದಿದ್ದರು. ದೇವತೆಗಳು ಬಾಲದ ಕಡೆ ಹಿಡಿದಿದ್ದರು.

"ಆಮೇಲೆ"

"ಹಾಗೆ ಕಡೆಯುವಾಗ ಮೊದಲು "ಕಾಲಕೂಟ" ಎಂಬ ವಿಷ ಹುಟ್ಟಿತು. ಅದು ಬೆಂಕಿ ಉರಿಯಾಗಿ ಭುಗಿಲ್ ಭುಗಿಲ್ ಎಂದು ಉರಿ ಹರಡಿ ಲೋಕಗಳನ್ನೆಲ್ಲ ಸುಡಲು ಪ್ರಾರಂಭಿಸಿತು. ಸುರರು-ಅರಸುರರು ಹಗ್ಗವನ್ನು ಕೈಬಿಟ್ಟು ಓಡಿದರು. ಮೇರು ಪರ್ವತದ ಕೆಳಗೆ ಆಮೆಯಾಗಿದ್ದ ವಿಷ್ಣು ಸಂಟ್ಟುಕರ(ಇದ್ದಿಲು)ಕಾದ! ಸುರ-ಅರಸುರೆಲ್ಲ "ಶಿವಧೊ! ಶಿವಧೊ! ಎಂದು ಶಿವನ ಮೊರೆ ಹೊಕ್ಕರು. ಕರುಣಾಳು ಶಿವ, ಆ ವಿಷವನ್ನೆಲ್ಲ ಅಂಗೈಗೆ ಆಕರ್ಷಿಸಿದ; ಮತ್ತು ಲೋಕಗಳನ್ನು ರಕ್ಷಿಸುವುದಕ್ಕಾಗಿ ಆ ಕಾಲಕೂಟವಿಷವನ್ನು ತಾನೆ ಕುಡಿದು ಬಿಟ್ಟ!"

"ಅಬ್ಬ! ವಿಷಕುಡಿದ ಶಿವ ಬದುಕುವುದುಂಟೆ ಅಪ್ಪಾಜಿ!"

"ವಿಷಕುಡಿದರೂ ಶಿವನು ಸಾಯಲಿಲ್ಲ ! ಏಕೆಂದರೆ ಅವನು ಮೃತ್ಯುಂಜಯ! ಮೃತ್ಯುವನ್ನು ಗೆದ್ದವನು ಜಗತ್ತಿನಲ್ಲಿ ಶಿವನೊಬ್ಬನೆ! ಕಾಲಕಾಲನೆಂದೂ ಅವನಿಗೆ ಹೆಸರು, ಕಾಲನೆಂದರೆ ಮೃತ್ಯು. ಕಾಲನನ್ನು ಗೆದ್ದವನು ಕಾಲಕಾಲ. ಶಿವ!

"ಆಮೇಲೆ"

"ಅಷ್ಟರಲ್ಲಿ ಲೋಕಮಾತೆಯಾದ ಪಾರ್ವತಿ ಆ ವಿಷವನ್ನು ಕಂಠದಲ್ಲಿ ತಡೆದಳು!"

"ಪಾರ್ವತಿ ಅದನ್ನೇಕೆ ತಡೆದಳು ಅಪ್ಪಾಜಿ? ಶಿವ ವಿಷ ಕುಡಿದುದರಿಂದ ಪಾರ್ವತಿ ಹೆದರಿದಳೆ ಅಪ್ಪಾಜಿ?"

"ಹಾಗಲ್ಲ; ಶಿವ ಎಂದರೆ ಇಡಿಯ ಜಗತ್ತು. ಅವನು ಜಗನ್ಮಯ. ಅಂಥ ಜಗತ್ತನ್ನು ತನ್ನ ಗರ್ಭದಲ್ಲಿಉಳ್ಳವನು ಶಿವ. ಆ ವಿಷವು ಜಗತ್ತಿನಲ್ಲಿನ ಪ್ರಾಣಿಗಳಿಗೆ ಸೋಂಕಿದರೆ ಅವು ಸಾಯುತ್ತವೆ ಎಂಬ ಹೆದರಿಕೆ ಪಾರ್ವತಿಗೆ. ಆದ್ದರಿಂದಲೇ ಪಾರ್ವತಿ ಆ ವಿಷವನ್ನು ಕಂಠದಲ್ಲಿ ತಡೆದಳು. ಆದ್ದರಿಂದ

ಶಿವನಿಗೆ ನೀಲಕಂಠ, ವಿಷಕಂಠ, ನಂಜುಂಡ ಮುಂತಾದ ಹೆಸರುಗಳು ಉಂಟಾಗಿವೆ.

"ಆಮೇಲೆ ಏನಾಯಿತು ಹೇಳಿ ಅಪ್ಪಾಜಿ?"

ತರುವಾಯ ದೇವಾಸುರರು ಮತ್ತೆ ಸಾಗರವನ್ನು ಕಡೆಯಲು ಆರಂಭಿಸಿದರು. ಆಗ ಸಮುದ್ರದಿಂದ ಲಕ್ಷ್ಮಿ, ಐರಾವತ ಎಂಬ ಆನೆ, ಉಚ್ಚೈಃಶ್ರವಸ್ಸುಎಂಬ ಕುದುರೆ, ಕಾಮಧೇನು (ಹಸು) ಕಲ್ಪವೃಕ್ಷ (ಮರ) ಚಿಂತಾಮಣಿ (ರತ್ನ) ಮುಂತಾದ ವಸ್ತುಗಳು ಹುಟ್ಟಿದವು. ಇವುಗಳಲ್ಲಿ ಸಮುದ್ರರಾಜ ಮೇರುವಿನ ಕೆಳಗೆ ಇದ್ದು ಕರಕಾಗಿದ್ದ ವಿಷ್ಣುವಿಗೆ ಲಕ್ಷ್ಮಿಯನ್ನು ಕೊಟ್ಟು ಮದುವೆಮಾಡಿದ. ಉಳಿದವಸ್ತುಗಳು ದೇವೇಂದ್ರನಿಗೆ ಸೇರಿದವು!

"ಈ ಹಸು, ಮರ, ರತ್ನಗಳ ಹಿರಿಮೆ ಏನು ಅಪ್ಪಾಜಿ?"

"ಇವು ಕೇಳಿದವರಿಗೆ ಕೇಳಿದ್ದನ್ನು ಕೊಡುವ ಮಹಿಮೆಯುಳ್ಳವುಗಳು.

"ಮುಂದೆ ಏನಾಯಿತು, ಅಪ್ಪಾಜಿ?"

"ಕಡೆಯಲ್ಲಿ ಅಮೃತ ಕಲಶ ಹುಟ್ಟಿತು. ಅಮೃತ ಪಾನಮಾಡಲು ಎಲ್ಲರಿಗೂ ಆಸೆ. ಅದು ತನಗೆ ಬೇಕು, ತನಗೆ ಬೇಕು, ಎಂದು ದೇವಾಸುರರಲ್ಲಿ ಜಗಳ ಆರಂಭವಾಯಿತು. ಅಷ್ಟು ಹೊತ್ತಿಗೆ ವಿಷ್ಣು ಒಂದು ಉಪಾಯ ಕಂಡುಹಿಡಿದ!"

"ಏನು ಉಪಾಯ ಅಪ್ಪಾಜಿ!"

"ತಾನೆ ಮೋಹಿನೀರೂಪು ಧರಿಸಿ, ಅಲ್ಲಿ ಪ್ರತ್ಯಕ್ಷನಾದ. ಅವಳನ್ನು ಕಂಡ ಅಸುರರು ಅವಳ ರೂಪಿಗೆ ಮರುಳಾಗಿ "ಅಮೃತಕಲಶವನ್ನು ಮೋಹಿನಿಯ ಕೈಗೆ ಕೊಡಿ. ಅವಳು ಎಲ್ಲರಿಗೂ ಅಮೃತವನ್ನು ಬಡಿಸಲಿ" ಎಂದು ಹಠಹಿಡಿದರು. ಮೋಹಿನಿ ದೇವಾಸುರರನ್ನು ಬೇರೆ ಬೇರೆ ಸಾಲಾಗಿ ಕೂರಿಸಿ ಅಮೃತವನ್ನು ಬಡಿಸುತ್ತಿದ್ದಳು. ಅದನ್ನು ಕಂಡು ಅಸುರರ ಗುಂಪಿಗೆ ಸೇರಿದ ರಾಹುವಿಗೆ ಸಂದೇಹವುಂಟಾಯಿತು. ಅವನು ದೇವತೆಗಳ ಪಂಕ್ತಿಯಲ್ಲಿ ಸೂರ್ಯ-ಚಂದ್ರರ ನಡುವೆ ಬಂದುಕುಳಿತದ್ದು ಯಾರಿಗೂಗೋತ್ತಾಗಲಿಲ್ಲ.

ಆದರೆ ಅವನ ಅಕ್ಕಪಕ್ಕಗಳಲ್ಲಿ ಕುಳಿತಿದ್ದ ಸೂರ್ಯಚಂದ್ರರಿಗೆ ಅವನ ಮೇಲೆ ಸಂದೇಹ ಬಂತು. ಅಷ್ಟರಲ್ಲಿ ಮೋಹಿನಿ ಅಮೃತವನ್ನು ಸುರರಿಗೆ ಸುರಿದಂತೆ ರಾಹುಗೂ ಸುರಿದಿದ್ದಳು. ಅದಿನ್ನೂ ಕಂಠದಲ್ಲಿದ್ದಂತೆಯೇ ಸೂರ್ಯಚಂದ್ರರು ಕಣ್ಣುಮಿಟುಕಿಸಿ ಮೋಹಿನಿಗೆ ಸೂಚಿಸಿದರು. ಕೂಡಲೇ ಮೋಹಿನೀರೂಪದ ವಿಷ್ಣು ತನ್ನ ಸುದರ್ಶನ ಚಕ್ರಕ್ಕೆ ಆಜ್ಞೆಮಾಡಿದ. ಚಕ್ರವು ರಾಹುವಿನ ಕತ್ತನ್ನು ಕತ್ತರಿಸಿತು. ಆದರೆ ರಾಹು ಅಮೃತಪಾನ ಮಾಡಿದ್ದರಿಂದ ಅವನು ಸಾಯಲಿಲ್ಲ. ಅವನ ತಲೆಯ (ರುಂಡ) ಭಾಗ ರಾಹುವಾಯಿತು. ಮುಂಡವು ಕೇತುವೆನಿಸಿತು.

ಮೋಹಿನಿ ಮುಂದುವರೆದು ಅಸುರರಿಗೆ ಅಮೃತಕ್ಕೆ ಬದಲಾಗಿ ಸುರೆಯನ್ನು ಬಡಿಸಿದಳು. ಅಮೃತ ಕುಡಿದ ಸುರರು ಅಮರರಾದರು. ಸುರೆಯನ್ನು ಕುಡಿದವರು ಮರ್ತ್ಯರಾದರು.

"ಮೋಹಿನಿ ಮಾಡಿದ್ದು ಮೋಸವಲ್ಲವೆ ಅಪ್ಪಾಜಿ!"

"ನಿಜ! ಮೋಸವೆ! ಸಂದೇಹವೇ ಇಲ್ಲ!"

"ಆದ್ದರಿಂದಲೇ ರಾಹು-ಕೇತುಗಳು ತಮ್ಮಗುಟ್ಟನ್ನು ಮೋಹಿನಿಗೆ ಕಣ್ಣು ಸನ್ನೆಮಾಡಿ ಸೂಚಿಸಿದ್ದರಿಂದ ಆ ಸೂರ್ಯ-ಚಂದ್ರರನ್ನು ಆಗಾಗ್ಗೆ ಗ್ರಹಣರೂಪದಿಂದ ಹಿಡಿದು ನುಂಗಿ ಅನಂತರ ಹೊರಕ್ಕೆ ಬಿಡುತ್ತಾರೆ. ಗ್ರಹಣ ಹಿಡಿದಾಗ ಕತ್ತಲು ಕವಿಯುವುದು ಇದಕ್ಕಾಗಿ ಎಂದು ಕತೆಯಲ್ಲಿ ಹೇಳಿದೆ."

"ಈ ಕತೆ ನಿಜವೆ ಅಪ್ಪಾಜಿ?"

"ಅಪ್ಪಾ ಇದು ಪುರಾಣದಲ್ಲಿ ಹೇಳಿರುವ ಕತೆ! ಆದರೆ ಜ್ಯೋತಿಷ್ಯ ಶಾಸ್ತ್ರದಲ್ಲಿ ರಾಹು ಕೇತುಗಳನ್ನು ಛಾಯಾ (ನೆರಳು) ಗ್ರಹಗಳೆಂದು ಹೇಳಿದೆ. ಆದ್ದರಿಂದ ಎಲ್ಲ ಗ್ರಹಗಳೂ ಸೂರ್ಯನ ಸುತ್ತೂ ತಿರುಗುತ್ತವೆ. ತಿರುಗುವಾಗ ಭೂಮಿಗೂ ಸೂರ್ಯನಿಗೂ ಮಧ್ಯೆ ಚಂದ್ರನು ಬಂದು ಸೂರ್ಯ ಮರೆಯಾಗಿ ಸೂರ್ಯಗ್ರಹಣವೂ, ಸೂರ್ಯ ಚಂದ್ರರ ಮಧ್ಯೆ ಭೂಮಿ ಬಂದಾಗ ಚಂದ್ರಗ್ರಹಣವೂ ಉಂಟಾಗುತ್ತವೆ ಎನ್ನಲಾಗಿದೆ. ಇಲ್ಲಿ ಒಂದರ ನೆರಳು ಮತ್ತೊಂದರ ಮೇಲೆ ಬೀಳುವುದರಿಂದ, ಅವುಗಳನ್ನು ಛಾಯಾ ಗ್ರಹಗಳೆಂದು ಕರೆಯಲಾಗಿದೆ. ಆಗ ಕತ್ತಲು ಕವಿವುದು ಸಹಜ."

ಕತೆ ಕೇಳುತ್ತಿದ್ದ ಶ್ರೀಪತಿಗೆ ನಿದ್ದೆ ಬಂದಿರುವುದನ್ನು ಬುದ್ಧಿಯವರು ಗಮನಿಸಿದರು. ಅವರು ಶ್ರೀಪತಿ ತಲೆಗೆ ದಿಂಬಿನ ಆಸರೆ ಕೊಟ್ಟು ಮಲಗಿಸಿದರು. ಗಾಡಿ ಮೌನವಾಗಿ ಮುನ್ನಡೆಯುತ್ತಿತ್ತು.

ಹೊತ್ತು (ಸೂರ್ಯ) ಆಗಲೇ ನಡು ನೆತ್ತಿಯಿಂದ ಕೆಳಗೆ ಇಳಿಮುಖವಾಗಿತ್ತು. ಬಿಸಿಲಿನತಾಪ ಕಡಿಮೆಯಾಗ ತೊಡಗಿತ್ತು. ಬೆಟ್ಟಗುಡ್ಡಗಳು ಸಮೀಪಿಸುತ್ತಿದ್ದುದರಿಂದ ಅವುಗಳ ತಪ್ಪಲಿನ ದಟ್ಟವಾದ ಕಾಡಿನ ಕಡೆಯಿಂದ ತಂಗಾಳಿ ಮೆಲ್ಲ ಮೆಲ್ಲನೆ ಬೀಸುತ್ತಿತ್ತು.

ಮುಂದೆ ದಾರಿಗೆ ಅಡ್ಡಲಾಗಿ ಒಂದು ಸಣ್ಣನದಿ ಹರಿಯುತ್ತಿತ್ತು. ಅಲ್ಲಲ್ಲಿ ನೀರು ತೆಳುವಾಗಿ ಹರಿಯುತ್ತಿತ್ತು. ಬಾಯಾರಿದ ದಾರಿಗರು ಅಲ್ಲಲ್ಲಿ ನದಿಯಲ್ಲಿ ಚಿಲುಮೆಗಳನ್ನು ತೋಡಿ ಮರಳಿನಲ್ಲಿ ಊರಿಬರುವ ತಿಳಿನೀರನ್ನು ಕುಡಿದಿದ್ದ ಗುರುತುಗಳು ಕಾಣುತ್ತಿದ್ದವು.

ರಾಮುಡು ಗಾಡಿಯನ್ನು ಒಂದು ಮರದ ನೆರಳಿನಲ್ಲಿ ಬಿಚ್ಚಿ ಎತ್ತುಗಳಿಗೆ ನೀರುಕುಡಿಸಲು ಕೊಂಡೊಯ್ದ. ಬುದ್ಧಿಯವರೂ ಗಾಡಿಯಿಂದಿಳಿದರು. ಗಾಡಿಬಿಚ್ಚಿದಾಗ ಮೂಕಿ ಕೆಳಗಿಳಿದಂತಾಗಿ ಶ್ರೀಪತಿಗೆ ಎಚ್ಚರವಾಯಿತು. ಅವನು ಕಣ್ಣೊರಸಿಕೊಂಡು ಮೇಲೆದ್ದ ! ಅಲ್ಲಿ ನಿಂತಿದ್ದ ಅಪ್ಪಾಜಿಯನ್ನು ಕುರಿತು—

"ಅಪ್ಪಾಜಿ, ಈಗ ಎಲ್ಲಿಗೆ ಬಂದಿದ್ದೇವೆ? ಎಂದ. ಬುದ್ಧಿಯವರು ಎಚ್ಚೆತ್ತಿದ್ದ ಮಗನನ್ನು ಎತ್ತಿ ಹೆಗಲಿಗೇರಿಸಿಕೊಂಡರು. ಅವರು ಒಂದು ಚಿಲುಮೆ ಹತ್ತಿರ ಮಗನನ್ನು ಇಳಿಸಿ, ಚಿಲುಮೆಯಿಂದ ನೀರು ಚೆಲ್ಲತೊಡಗಿದ್ದರು. ಶ್ರೀಪತಿ ಮರಳಿನಲ್ಲಿ ಓಡಾಡಿ ಹರ್ಷಿತನಾದ.

ಅಷ್ಟುಹೊತ್ತಿಗೆ ರಾಮುಡು ಎತ್ತುಗಳನ್ನು ದಟ್ಟವಾಗಿ ಹುಲ್ಲುಬೆಳೆದಿದ್ದ ಒಂದು ಕಡೆ ಕಟ್ಟಿಹಾಕಿ ಗಾಡಿಯ ಹತ್ತಿರ ಬಂದು, ಬುತ್ತಿಗಂಟುಗಳನ್ನು ಬುದ್ಧಿಯವರ ಹತ್ತಿರ ತಂದಿರಿಸಿದ.

ಬುದ್ಧಿಯವರು ಮೂರು ಬಾಳೆ ಎಲೆಗಳ ಮೇಲೆ ಡಬ್ಬಿಗಳಲ್ಲಿ ತುಂಬಿದ್ದ ಸಾರನ್ನ, ಮೊಸರನ್ನಗಳನ್ನು ಬಡಿಸಿದರು. ಉಪ್ಪಿನಕಾಯಿ ನೆಂಚಿಕೊಂಡು ಮೂವರು ಊಟಮಾಡಿದರು. ಶ್ರೀಪತಿ ಸುತ್ತು ಮುತ್ತಿನ ರಮ್ಯದೃಶ್ಯವನ್ನು

ನೋಡುತ್ತಾ ತನಗಾಗಿದ್ದ ಸಂತೋಷವನ್ನು ಅಪ್ಪಾಜಿ ಮುಂದೆ ಮುದ್ದು ಮುದ್ದಾಗಿ ಬಿತ್ತರಿಸುತ್ತಿದ್ದ.

ಅಷ್ಟರಲ್ಲಿ ರಾಮುಡು ಗಾಡಿಯಿಂದ ಜಮಖಾನೆ ದಿಂಬು ತಂದು ನೆರಳಿನಲ್ಲಿ ಹಾಸಿಕೊಟ್ಟ. ಬುದ್ಧಿಯವರು ದಿಂಬಿಗೆ ತಲೆಯಿಟ್ಟು ತಂಗಾಳಿಗೆ ಮೈಯೊಡ್ಡಿ ಒಂದು ಗಂಟೆ ವಿಶ್ರಮಿಸಿದರು. ಶ್ರೀಪತಿ ರಾಮುಡು ಜೊತೆ ಎತ್ತುಗಳನ್ನು ಎಳೆಗರಿಕೆ ದಟ್ಟವಾಗಿದ್ದ ಕಡೆ ಮೇಯಿ ಸುತ್ತಿದ್ದ. ಬುದ್ಧಿಯವರು ಎಚ್ಚೆತ್ತದ್ದನ್ನು ಅರಿತ ರಾಮುಡು ಗಾಡಿ ಹತ್ತಿರ ಬಂದು ಎಳನೀರು, ಹಣ್ಣು, ಸಿಹಿ–ಖಾರ ತಿನಿಸುಗಳನ್ನು ತಂದು ಅವರ ಮುಂದಿರಿಸಿದ. ಎಲ್ಲರೂ ಉಪಾಹಾರವನ್ನು ಮುಗಿಸಿ ಉಲ್ಲಾಸ ಗೊಂಡುದನ್ನು ಕಂಡ ರಾಮುಡು ಎತ್ತುಗಳನ್ನು ಹಿಡಿದುತಂದು ಗಾಡಿ ಕಟ್ಟಿದ.

ಗಾಡಿ ಬೆಟ್ಟದ ಕಿಬ್ಬದಿಯಲ್ಲಿ ಮುನ್ನಡೆಯ ತೊಡಗಿತ್ತು. ಶ್ರೀಪತಿ ಬುದ್ಧಿಯವರ ಪಕ್ಕದಲ್ಲಿ ಕುಳಿತು ಕೇಳಿದ—

"ಈಗ ನಾವು ಹೋಗುತ್ತಿರುವುದು ಎಲ್ಲಿಗೆ ಅಪ್ಪಾಜಿ? ಎಂದು"

"ಮುದಿಗೊಂಡಂ ಎಂದು ಮನೆಯಲ್ಲಿ ಹೇಳಿದೆನಲ್ಲವೆ, ಮರಿ!"

"ಹೌದು, ಹೇಳಿದಿರಿ ! ಅಲ್ಲಿ ಯಾರಿದ್ದಾರೆ ಅಪ್ಪಾಜಿ?"

"ಅಜ್ಜಿ-ತಾತ!"

"ಅಜ್ಜಿ ಎಂದರೆ?

"ನನ್ನ ಅಕ್ಕ, ಅಥವಾ ನಿನ್ನ ತಾಯಿಯ ತಾಯಿ! ತಾತ ಎಂದರೆ ನಿನ್ನ ಅಮ್ಮನ ತಂದೆ ಅಥವಾ ನನ್ನ ಮಾವನವರು. ಅವರನ್ನು ನೋಡು ವುದಕ್ಕೆ ನಾವು ಹೊರಟಿರುವುದು ಎಂದರು ಬುದ್ಧಿಯವರು ಮಗನನ್ನು ಅಪ್ಪಿಕೊಂಡು."

"ಅಪ್ಪಾಜಿ, ನಾನು ಅಜ್ಜಿ-ತಾತ ಅವರನ್ನು ನೋಡೇ ಇಲ್ಲ, ಅಲ್ಲವಾ?"

"ಇಲ್ಲ, ಮರಿ! ಅವರು ನಿನ್ನ ನಾಮಕರಣಕ್ಕೆ ಬಂದಿದ್ದರು. ಆಗ ನೀನು ಎಳೇ ಮಗು! ಐದು ವರ್ಷವಾಯಿತು. ಮತ್ತೆ ಅವರು ಬರಲಿಲ್ಲ!

"ನೀವೂ ಅವರನ್ನು ನೋಡೋಕೆ ಹೋಗಲಿಲ್ಲವಾ ಅಪ್ಪಾಜಿ?"

"ಇಲ್ಲ ಮರಿ! ತಾತನವರ ದೊಡ್ಡಮಗ ಶಂಭುಮಾವ ಕಾಶಿಯಲ್ಲಿ ಓದುತ್ತಿದ್ದ. ತಾತನವರು ಅಲ್ಲೇ ಪ್ರಾಧ್ಯಾಪಕರಾಗಿದ್ದುದರಿಂದ ಅವರು ಊರಿಗೆ ಬರುವುದರ ಸುಳಿವು ನಮಗೆ ತಿಳಿವುದೇ ಕಷ್ಟ.

"ಕಾಶಿ ಎಲ್ಲಿದೆ ಅಪ್ಪಾಜಿ"

"ಕಾಶಿ ಇಲ್ಲಿಂದ ಬಹುದೂರ ಸುಮಾರು ಮುನ್ನೂರು ಹರಿದಾರಿ ಎಂದು ಹೇಳುತ್ತಾರೆ. ಅಲ್ಲಿಗೆ ಹೋಗುವುದು-ಬರುವುದು ತುಂಬಾ ಕಷ್ಟ !

"ಕಾಶಿಯಲ್ಲಿ ಏನೇನಿದೆ? ನಾನೂ ಅಲ್ಲಿಗೆ ಹೋಗೋಲ್ವೆ ಅಪ್ಪಾಜಿ?"

"ಕಾಶಿ ಬಹುದೊಡ್ಡ ಪಟ್ಟಣ. ಅದು ಗಂಗಾನದಿ ದಡದಲ್ಲಿದೆ. ಅಲ್ಲಿ ವಿಶ್ವಾರಾಧ್ಯ ಗುರುಕುಲ, ಮಹಾವಿದ್ಯಾಪೀಠ, ಕನ್ಯಾಗುರುಕುಲ ಮುಂತಾದ ವಿದ್ಯಾಸಂಸ್ಥೆಗಳಿವೆ. ನೂರಾರು ಮಂದಿ ವಿದ್ಯಾರ್ಥಿಗಳು ಅಲ್ಲಿ ಓದುತ್ತಿದ್ದಾರೆ. ನಮ್ಮ ನೆಂಟರಲ್ಲಿ ಬಹುಮಂದಿ ಅದೇ ಗುರುಕುಲ ಮತ್ತು ವಿದ್ಯಾಪೀಠಗಳಲ್ಲಿ ಓದಿ ವಿದ್ವಾಂಸರಾಗಿದ್ದಾರೆ. ನಿನ್ನ ಅಮ್ಮ ಮತ್ತು ಅಜ್ಜಿಯುವರೂ ಅಲ್ಲಿಯೇ ಓದಿದವರು. ನೀನೂ ಚೆನ್ನಾಗಿ ಓದಿದರೆ ನಿನ್ನನ್ನೂ ಕಾಶಿಗೆ ಕಳಿಸುತ್ತೇನೆ."

"ಅಲ್ಲಿ ಇನ್ನೂ ಏನೇನಿದೆ ಅಪ್ಪಾಜಿ?"

"ಅಲ್ಲಿ ಹರಿಯುವ ಗಂಗಾನದಿ ನಮ್ಮಲ್ಲಿರುವ ಕೃಷ್ಣೆಗಿಂತ ಬಹು ದೊಡ್ಡದು. ಅದು ಹಿಮಾಲಯದಿಂದ ಹರಿದು ಬರುತ್ತದೆ.

"ಹಿಮಾಲಯ ಎಂದರೆ?

"ಹಿಮ ಎಂದರೆ ನಮ್ಮಲ್ಲಿ ಮಳೆಗಾಲದಲ್ಲಿ ಬಿರುಗಾಳಿ ಬೀಸಿದಾಗ ಮೋಡದಿಂದ ಆಲಿಕಲ್ಲು ಬೀಳುವುದಿಲ್ಲವೆ?

"ಹೌದು, ಹೌದು! ನಾನು ಆಲಿಕಲ್ಲು ಬಿದ್ದಾಗ ಬೀದಿಗೆ ಓಡಿಹೋಗಿ ಮಳೆಯಲ್ಲಿ ಆಡ್ಡಾಡಿ ಆಲಿಕಲ್ಲು ಬಾಯಿಗೆ ಹಾಕಿಕೊಂಡು ನುಂಗಿದ್ದೇನೆ! ಎಷ್ಟು ತಣ್ಣಗಿರುತ್ತೆ ಆಲಿಕಲ್ಲು ಅಪ್ಪಾಜಿ!"

"ಸರಿ, ಆ ಆಲಿಕಲ್ಲಿಗೆ ಹಿಮ ಎಂದು ಹೆಸರು. ಅಂಥ ಆಲಿಕಲ್ಲಿನ ಬೆಟ್ಟಕ್ಕೆ ಹಿಮಾಲಯ, ಹಿಮಗಿರಿ ಎಂದು ಹೆಸರು.

"ಹಾಗಾದರೆ ಹಿಮಾಲಯ ಎಂದರೆ ನಮ್ಮ ಇಂದ್ರಕೀಲದಂತೆ ಒಂದು ಬೆಟ್ಟವೆ ?"

"ಹೌದು, ಆದರೆ ಅದು ಅನೇಕ ಹರಿದಾರಿ, (ಸುಮಾರು ಮೂವತ್ತು ಸಾವಿರ ಅಡಿ) ಎತ್ತರವಿದೆ ಎಂದು ಹೇಳುತ್ತಾರೆ."

"ಅಬ್ಬಾ, ಎಷ್ಟು ದೊಡ್ಡ ಬೆಟ್ಟ ಅದು!"

"ಅಂತಹ ದೊಡ್ಡ ಬೆಟ್ಟವನ್ನು 'ಪರ್ವತ' ಎಂದು ಕರೆಯುತ್ತಾರೆ."

"ಅಲ್ಲಿ ಇನ್ನೂ ಏನೇನಿದೆ ಅಪ್ಪಾಜಿ?"

"ಗಂಗಾನದಿಯ ದಡದಲ್ಲಿ "ವಿಶ್ವನಾಥಸ್ವಾಮಿ ಮತ್ತು ಅನ್ನಪೂರ್ಣಾದೇವಿ" ಮುಂತಾದ ದೇವತಾ ಮಂದಿರಗಳಿವೆ. ವಿಶ್ವನಾಥನಿಗೆ ಗಂಗಾಜಲದಿಂದ ಅಭಿಷೇಕ ಎಂದರೆ ತುಂಬಾ ಇಷ್ಟ!"

"ವಿಶ್ವನಾಥ ಎಂದರೆ ಯಾರು ಅಪ್ಪಾಜಿ?"

"ವಿಶ್ವ ಎಂದರೆ ಪ್ರಪಂಚ, ಅದಕ್ಕೆ ಒಡೆಯ ವಿಶ್ವನಾಥ. ನಮ್ಮ ಎದುರಿಗೆ ಕಾಣುವ ಈ ನೆಲ, ನೀರು ಬೆಂಕಿ ಗಾಳಿ ಮತ್ತು ಬಯಲುಗಳೆಲ್ಲವೂ ಸೇರಿ ವಿಶ್ವ ಅಥವಾ ಪ್ರಂಪಚವೆನಿಸುತ್ತದೆ. ನಮ್ಮ ಕಣ್ಣಿಗೆ ಕಾಣುವುದೆಲ್ಲವೂ ಈ ಪ್ರಪಂಚದಲ್ಲಿ ಸೇರಿದೆ. ಈ ಪ್ರಪಂಚ, ನಾನು, ನೀನು, ಅಮ್ಮ, ರಾಮುಡು ಇವರೆಲ್ಲ ಹುಟ್ಟಿದ್ದು ಆ ವಿಶ್ವನಾಥಸ್ವಾಮಿಯ ಕೃಪೆಯಿಂದಲೇ ಮರಿ!"

"ಅವನ ಕೃಪೆಯಾದರೆ ಪ್ರಪಂಚ ಹುಟ್ಟಬಲ್ಲುದೆ?"

"ಹೌದು, ನಾನು-ಅಮ್ಮ ಹೇಗೆ ನಿನಗೆ ತಂದೆ-ತಾಯಿಂದಿರೊ, ಅದರಂತೆ ಈ ಪ್ರಂಪಂಚಕ್ಕೆ ವಿಶ್ವನಾಥ ಮತ್ತು ಅನ್ನಪೂರ್ಣೆಯರು ತಂದೆ ತಾಯಿದಿರು!"

"ಅಪ್ಪಾಜಿ, ನೆಲ ನೀರು ಬೆಟ್ಟಗಳೆಲ್ಲ ಪ್ರಂಪಚ ಎಂದಿರಿ! ಆದರೆ ಅವುಗಳಿಗೆ ವಿಶ್ವನಾಥ-ಅನ್ನಪೂರ್ಣೆಯರು ತಂದೆ-ತಾಯಿಗಳೆಂದರೆ ನನಗೆ ಅರ್ಥವೇ ಆಗಲಿಲ್ಲ!"

"ಹೌದು, ಮರಿ! ಈ ಪ್ರಂಪಚ ಆ ವಿಶ್ವನಾಥ--ಅನ್ನಪೂರ್ಣೆಯರ ಒಂದು ಲೀಲೆ(ಆಟ)ಗಾಗಿ ಏರ್ಪಟ್ಟುದು. ಅವರ ವಿನೋದಕ್ಕಾಗಿ ಈಜಗತ್ತು

ಹುಟ್ಟಿತು. ಅವರ ಕೃಪೆಯಿಂದ ಇದು ಬದುಕಿ ಬೆಳೆಯುತ್ತದೆ. ಅವರಿಗೆ ಬೇಡವಾದಾಗ ಇದು ನಾಶವಾಗುತ್ತದೆ.

"ಅದು ಹೇಗೆ ಅಪ್ಪಾಜಿ?"

"ನೋಡು ಮರಿ, ನೀವು ಮಕ್ಕಳು ಎಲ್ಲಾ ಸೇರಿ ನಿಮಗೆ ಬೇಕಾದ ಹಾಗೆ ಮನೆ ಆಟ, ತೋಟದ ಆಟ, ಬೊಂಬೆಆಟ, ಮದುವೆಆಟ ಮುಂತಾಗಿ ಆಟವಾಡುತ್ತೀರಿ. ಕಡೆಗೆ ಅದೆಲ್ಲವನ್ನು ಅಳಿಸಿ ಮನೆಗೆ ಬರುವುದಿಲ್ಲವೆ? ಅದರಂತೆ ಪ್ರಪಂಚದ ತಂದೆ-ತಾಯಿಗಳಾದ ಆ ವಿಶ್ವನಾಥ ಅನ್ನಪೂರ್ಣೆಯರ ವಿನೋದಕ್ಕಾಗಿ ಏರ್ಪಟ್ಟ ಈ ಪ್ರಪಂಚದ ಹುಟ್ಟು ಬದುಕು-ನಾಶ (ಲಯ) ಗಳ ಗುಟ್ಟು ಇದೇಯೋ !"

ಅವರಿಗೆ ಬೇಕು ಎನಿಸಿದಾಗ ಈ ಪ್ರಂಪಚ ಬೇಡ ಎನಿಸಿದಾಗ ನಾಶ (ಪ್ರಳಯ), ಮತ್ತೆಬೇಕೆನಿಸಿದಾಗ ಈ ಸೃಷ್ಟಿ-ದೃಷ್ಟಿಗಳೇ ? ಅಪ್ಪಾಜಿ !

"ಹೌದು ಮರಿ, ಎಷ್ಟು ಚನ್ನಾಗಿ ಗ್ರಹಿಸಿದೆಯಪ್ಪ!" ನೀನು, ನಿನ್ನ ಪ್ರಶ್ನೆಗಳು ಅದ್ಭುತವಪ್ಪ! ನಿನ್ನ ಪ್ರಶ್ನೆಗಳಿಗೆ ಉತ್ತರ ಕೊಡವುದು ನನಗೂ ಕಷ್ಟವಾಗಿದೆ."

---ಎಂದು ಬುದ್ಧಿಯವರು ಪೇಚಾಡುತ್ತಿರುವಾಗ ಗಾಡಿ ನಿಲ್ಲಿಸಿ ರಾಮುಡು ಚೆನ್ನಾಗಿಮಾಗಿ ಸುವಾಸನೆ ಬೀರುತ್ತಿರುವ ಮಾವಿನ ಹಣ್ಣುಗಳನ್ನು, ಚಾಕು ಮತ್ತು ಬಾಳೆ ಎಲೆಗಳನ್ನು ಅವರ ಮುಂದೆ ತಂದಿಟ್ಟ.

ಬುದ್ಧಿಯವರು ಮಾವಿನ ಹಣ್ಣನ್ನು ಚಾಕುವಿನಿಂದ ಹೋಳು ಮಾಡಿ ಪತಿಯುಮುಂದೆ ಇಡುತ್ತಾ

"ನೋಡು, ಮರಿ! ಈ ಮಾವಿನಹಣ್ಣನ್ನು ನೀನು ನೋಡಿರುವೆಯಲ್ಲವೆ?"

"ಹೌದು, ಅದನ್ನು ನೀವು ಚಾಕುವಿನಿಂದ ಹೋಳುಮಾಡಿ ನನಗೆ ತಿನ್ನಲು ಕೊಡುತ್ತಿದ್ದೀರಿ!"

"ನಿಜ, ಹಣ್ಣನ್ನು ಹಚ್ಚಿ ಹೋಳುಮಾಡಿದ ಮೇಲೆ ಕಡೆಯಲ್ಲಿ ಈ ಓಟೆ ಉಳಿದಿದೆ. ಅದನ್ನು ಯಾರಾದರೂ ತಿನ್ನುತ್ತಾರೆಯೇ?"

"ಇಲ್ಲ, ಅದು ಓಟೆ!"

"ಜಾಣ ಮರಿ, ಇದು ಓಟೆ ಎಂದರೆ ಆ ಮರದ ಬೀಜ. ಬೀಜದಿಂದ ಮರವು ಭೂಮಿಯಲ್ಲಿ ಹುಟ್ಟುವುದರಿಂದ ಅದು ಭೂಜ. ಈ ಬೀಜವನ್ನು ಹದವಾಗಿ ಒಣಗಿಸಿ, ನೆಲದಲ್ಲಿ ಹೂಳಿ ನೀರೆರೆದರೆ ಅದು ಮೊಳೆತು ಚಿಗುರಿ ಗಿಡವಾಗಿ ಮರವಾಗಿ ಹೂಬಿಟ್ಟು ಹೀಚಾಗಿ ಮಿಡಿಯಾಗಿ ಕಾಯಾಗಿ ಕಡೆಗೆ ಮಾಗಿ ಹಣ್ಣಾಗುತ್ತದೆ. ಮತ್ತೆ ಅದರಲ್ಲಿನ ಓಟೆ ಉಳಿದು ಬೀಜ ವಾಗಿ, ಅದೇ ಮುಂದೆ ಭೂಜ (ಮರ)ವಾಗುತ್ತದೆಯಲ್ಲವೆ?"

ಬುದ್ಧಿಯವರ ವಿವರಣೆ ಶ್ರೀಪತಿಯ ಮನಸ್ಸಿಗೆ ಸೋಜಿಗವಾಗಿ ಕಂಡರೂ ಬುದ್ಧಿಯವರ ತರ್ಕ ಅವನ ಎಳೆಯ ಮನಸ್ಸಿನ ಮೇಲೆ ಬಲ ವಾದ ಪರಿಣಾಮವನ್ನುಂಟುಮಾಡಿತ್ತು.

ಪತಿ ಮಾವಿನಹಣ್ಣು ತಿನ್ನುವುದನ್ನು ಮರೆತು ಗಾಢವಾದ ಯೋಚನೆಯಲ್ಲಿ ಮುಳುಗಿದ್ದ. ಆಗ ಬುದ್ಧಿಯವರೇ ಹಣ್ಣುತಿನ್ನಲು ಎಚ್ಚರಿ ಸಿದರು.

ಶ್ರೀಪತಿಯ ವಯಸ್ಸು ಎಳೆಯದಾದರೂ ಅವನು ಇನ್ನೂ ಅಕ್ಷರ ವನ್ನು ಸಹ ಕಲಿಯದಿದ್ದರೂ ವಿಚಕ್ಷಣತೆಯಿಂದ ಕೂಡಿದ ಅವನ ಪ್ರಶ್ನೆಗಳು ಅವನು ಜಗತ್ತನ್ನು ಕಾಣುವ ಕಣ್ಣು, ಪ್ರತಿಭೆಗಳು ಬುದ್ಧಿಯವರಿಗೂ ದಿಗ್ಭ್ರಮೆಯನ್ನು ಹುಟ್ಟಿಸುತ್ತಿದ್ದವು.

"ಓಟೆಯಿಂದ ಮರ, ಮರದಿಂದ ಓಟೆ" ಎಂದು ಶ್ರೀಪತಿ ಮತ್ತೆ ಮತ್ತೆ ಮೆಲುಕು ಹಾಕುತ್ತಿದ್ದ. ಅದನ್ನೆ ಬುದ್ಧಿಯವರು ಮುಂದುವರೆಸಿ.

"ಬೀಜದಿಂದ ಭೂಜ, ಭೂಜದಿಂದ ಬೀಜ; ಮೊಟ್ಟೆಯಿಂದ ನವಿಲು, ನವಿಲಿನಿಂದ ಮೊಟ್ಟೆ" ಎಂದು ಹೋಲಿಸಿ ವಿವರಿಸುತ್ತಿದ್ದರು.

ನವಿಲಿನ ಮೊಟ್ಟೆಯಲ್ಲಿನ ರಸದಲ್ಲಿ ಮುಂದೆ ಅದು ನವಿಲಾಗುವ ರೆಕ್ಕೆ-ಪುಕ್ಕ, ಗರಿಗಳಲ್ಲಿನ ಬಣ್ಣ ಬಣ್ಣದ ಕಣ್ಣು ಮುಂತಾದವುಗಳೆಲ್ಲವೂ ಸೂಕ್ಷ್ಮರೂಪದಿಂದ ಅಡಗಿದ್ದು, ತಾಯಿ ನವಿಲು ಮೊಟ್ಟೆಯ ಮೇಲೆ ಕುಳಿತು; ಅವಿಯ ಬಿಸಿಯಿಂದ ಸಕಾಲದಲ್ಲಿ ಪರಿಪಕ್ವವಾಗಿ ಮೊಟ್ಟೆ ಒಡೆದಾಗ, ಪುಟ್ಟ ನವಿಲ ಮರಿ ಹೊರಬರುವಂತೆ, ಬೀಜವು ಮೊಳೆತು

ಭೂಜವಾಗುವುದರ ರಹಸ್ಯವನ್ನು ಶಾಸ್ತ್ರಕಾರರು 'ಬೀಜ-ಭೂಜನ್ಯಾಯು!' ಮತ್ತು 'ಮಯೂರಾಂಡ-ರಸನ್ಯಾಯು'-ಗಳಿಂದ ಜಗತ್ತಿನ ಸೃಷ್ಟಿ ರಹಸ್ಯ ವನ್ನು ಬೋಧಿಸುತ್ತಾರೆ. ಆದನ್ನು ಬುದ್ಧಿಯವರು ಶ್ರೀಪತಿಗೂ ಮತ್ತೆ ಮತ್ತೆ ವಿವರಿಸಿ ಪಾಠಮಾಡಿಸಿದರು. ಆದರೂ ಶ್ರೀಪತಿಗೆ ಅದಷ್ಟರಿಂದಲೇ ಸಮಾಧಾನವಾದಂತೆ ಕಾಣಲಿಲ್ಲ. ಅವನು ಇನ್ನೂ ಆಳಕ್ಕೆ ಇಳಿದು ಯೋಚಿಸುತ್ತಿದ್ದುದು ಕಾಣಿಸಿತು. ಅವನು ತನ್ನ ಸಂದೇಹಕ್ಕೆ ಸರಿಯಾದ ಉತ್ತರ ಸಿಗದೆ ಪರಿತಪಿಸುತ್ತಿದ್ದುದನ್ನು ಗಮನಿಸಿದ ಬುದ್ಧಿಯವರು—

"ಇನ್ನೂ ಏನಪ್ಪಾ ನಿನ್ನ ಸಂದೇಹ? ಹೆದರಬೇಡ ಹೇಳು" ಎಂದು ಮಗನ ಬೆನ್ನು ಚಪ್ಪರಿಸಿದರು.

ಶ್ರೀಪತಿ ಕೇಳಿದ"ನವಿಲು-ಮೊಟ್ಟೆ; ಬೀಜ-ಭೂಜ ನ್ಯಾಯುಗಳೇನೋ ತಿಳಿದವು ಅಪ್ಪಾಜಿ ! ಆದರೆ ಈ ವಿಶ್ವನಾಥ-ಅನ್ನಪೂರ್ಣೆಯರಿಂದ ಪ್ರಪಂಚ ಆದದ್ದು ಹೇಗೆ? ಎಂಬುದೇ ನನಗೆ ಅರ್ಥವಾಗಲಿಲ್ಲ, ಅಪ್ಪಾಜಿ!" ಎಂದ.

"ಓಹೊ, ಅದೋ ನಿನ್ನ ಪ್ರಶ್ನೆ? ಕೇಳು-ನಾನು ಮತ್ತು ನಿನ್ನ ತಾಯಿಯವರಿಲ್ಲವೆ? ನಿನಗೆ ತಂದೆ-ತಾಯಿಯರು! ನೀನೂ ಮುಂದೆ ದೊಡ್ಡವನಾಗಿ ನಮ್ಮಂತೆ ಆದಾಗ ನೀನೂ ಒಂದು ದಿನ ತಂದೆ ಎನಿಸುವೆ ಯಲ್ಲವೆ?" ಎಂದರು ಪತಿಯು ಮನಸ್ಸಿನ ಇಂಗಿತವನ್ನು ಗಮನಿಸಿ. ಆದರೆ ಶ್ರೀಪತಿ ಅಲ್ಲಿಗೇ ಸುಮ್ಮನಾಗಲಿಲ್ಲ. ಅವನು ಮತ್ತೆ ಕೇಳಿದ.

"ಅಪ್ಪಾಜಿ, ಈಕತೆ ನನಗೆ ತಿಳಿಯಿತು. ಆದರೆ ಮಾನವರಿಂದ ಮಾನವರು ಹುಟ್ಟುವಂತೆ, ಮಾನವರಿಂದ ಮರಗಿಡಗಳು, ಬೆಟ್ಟಗುಡ್ಡ ಗಳು ಹುಟ್ಟಬಹುದೆ? ಈ ಸಂದೇಹಕ್ಕೆ ಏನು ಉತ್ತರ ಅಪ್ಪಾಜಿ?"

"ಬುದ್ಧಿಯವರು ಅವನ ಪ್ರಶ್ನೆಗೆ ತತ್ತರಿಸಿದರು. ಮತ್ತು ತಲೆ ದೂಗಿದರು.

"ಹಾಗೋ ನಿನ್ನ ಸಂದೇಹ ? ಅರ್ಥವಾಯಿತು. ಮರಿ, ನಿನ್ನ ವಯಸ್ಸಿಗೆ ಮೀರಿದ ಪ್ರಶ್ನೆ ಅಪ್ಪ ಇದು! ಆದರೆ ನನಗೆ ತಿಳಿದಷ್ಟು ಹೇಳುತ್ತೇನೆ ಕೇಳು.

"ಬೀಜ-ಭೂಜ, ನವಿಲು-ತತ್ತಿ ಎಂಬುದನ್ನು ಹೇಳಿದೆನಲ್ಲವೆ? ಅಲ್ಲಿ ಬೀಜ ಮತ್ತು ಬೀಜದಲ್ಲಿ ಮೊಳೆಯುವ ಶಕ್ತಿ ಎಂಬ ಎರಡು ವಸ್ತುಗಳಿವೆಯಲ್ಲವೆ? ಅಲ್ಲಿ ಬೀಜವೇ ವಸ್ತು, ಮೊಳೆವ ಶಕ್ತಿಯೇ ಚೈತನ್ಯ ಎನಿಸಿಸುತ್ತವೆ. ಈ ವಸ್ತು ಮತ್ತು ಶಕ್ತಿಗಳಿಲ್ಲದೆ ಯಾವ ಸೃಷ್ಟಿಯೂ ಆಗುವುದಿಲ್ಲ. ಈ ಬಗೆಯ ಎರಡು ವಸ್ತುಗಳು ಮಾನವರಲ್ಲಿ, ಪ್ರಾಣಿಗಳಲ್ಲಿ ಗಿಡ-ಮರಗಳಲ್ಲಿಯೂ ಇರುತ್ತವೆ. ಇಲ್ಲಿ ವಸ್ತುವನ್ನು ವಿಶ್ವನಾಥನೆಂದೂ, ಆ ಶಕ್ತಿಯನ್ನು ಅನ್ನಪೂರ್ಣೆಯೆಂದೂ, ಹಿರಿಯರು ಕರೆದಿದ್ದಾರೆ. ನನಗೆ ತಿಳಿಯೋದು ಇಷ್ಟೇ ಮರಿ! ಹೆಚ್ಚಿನ ವಿಷಯಗಳನ್ನು ನನಗಿಂತಲೂ ತಿಳಿದವರಾದ ನಿನ್ನ ತಾತನವರನ್ನು ಕೇಳಿದರೆ ಹೇಳುತ್ತಾರೆ!"

---ಎಂದು ಹೇಳಿದಾಗ ಪತಿ ಯೋಚನೆಯಲ್ಲಿ ಮುಳುಗಿದ.

ಅಷ್ಟುಹೊತ್ತಿಗೆ ಗಾಡಿ ಮುದಿಗೊಂಡದ ಹೊರವಲಯವನು ತಲುಪಿತ್ತು. ಊರಿನ ಹೊರಗೆ ದೀಕ್ಷಿತರ-ತೋಟದ ಹೆಬ್ಬಾಗಿಲನು ಕಂಡ ರಾಮುಡು ಗಾಡಿಯನ್ನು ಅಲ್ಲಿ ನಿಲ್ಲಿಸಿದ.

ತೋಟದ ಮನೆಯ ಮುಂದೆ ಹಾಸು ಗಲ್ಲುಗಳ ಮೇಲೆ ಕುಳಿತು ದೀಕ್ಷಿತರು ಮಗನೊಡನೆ ಶಾಸ್ತ್ರಜಿಜ್ಞಾಸೆಯಲ್ಲಿ ತೊಡಗಿದ್ದರು. ತಂದೆ ಮಕ್ಕಳು ರಾಮುಡುನನ್ನು ಗುರ್ತಿಸಿ ಮೇಲೆದ್ದರು.

ಆಕಸ್ಮಿಕವಾಗಿ ಆಗಮಿಸಿದ ಚಿರಂಜೀವಿ ಮತ್ತು ಅಳಿಯಂದಿರನು, ಕಂಡು ಅವರು ಸೋಜಿಗಗೊಂಡರು. ಶಂಭುಭಟ್ಟರು ಶ್ರೀಪತಿಯನ್ನು ಎತ್ತಿಕೊಂಡು ತಾತನವರಿಗೆ ಒಪ್ಪಿಸಿದರು. ಕಿರಿಯ ಮಗ ವಿಶ್ವಣ್ಣ ತಾಯಿಗೆ ಸುದ್ದಿ ಮುಟ್ಟಿಸಲು ಮನೆಯ ದಾರಿ ಹಿಡಿದ. ಅಕ್ಕರೆಯ ಮೊಮ್ಮಗನನ್ನೆತ್ತಿಕೊಂಡ ದೇಶಿಕರು ಆನಂದಸಮುದ್ರದಲ್ಲಿ ಮುಳುಗಿದವರಂತೆ ತನ್ಮಯರಾದರು.

ಪರಸ್ಪರ ಕುಶಲ ಪ್ರಶ್ನೆಗಳನ್ನು ಮಾಡುತ್ತಾ ಎಲ್ಲರೂ ಸಂಜೆಯ ಹೊಂಬಿಸಿಲಿನಲ್ಲಿ ಪಾದಯಾತ್ರೆಯಿಂದ ಮನೆ ಸೇರಿದರು.

ರಾಮುಡು ಗಾಡಿಯನ್ನು ತೋಟದಲ್ಲಿ ಬಿಟ್ಟು ತೋಟದ ರೈತನೊಡನೆ ಕ್ಷೇಮ-ಚಿಂತನೆಯಲ್ಲಿ ಮಗ್ನನಾದ.

ಮಣಿಕರ್ಣಿಕೆ ಮೊಮ್ಮಗನನ್ನೆತ್ತಿಕೊಂಡು ಅವನ ಮುದ್ದು ಮಾತುಗಳಿಗೆ ಹಿಗ್ಗಿ ಹೀರೆಕಾಯಿಯಾದರು.

ಎಲ್ಲರಿಗೂ ಫಲಾಹಾರ-ಉಪಾಹಾರ ಮತ್ತು ತಂಪಾದ ಪಾನೀಯ ಗಳ ವಿತರಣೆಯ ಹೊಣೆಯನ್ನು ವಿಶ್ವಣ್ಣ ಹೊತ್ತಿದ್ದ.



ಳ

# ಮಂಥನ

ಮುದಿಗೊಂಡಂ ಎಂಬುದು ಅಲ್ಲಿನ ಬೆಟ್ಟದ ಮೇಲಿನ ಮುದ್ದು ಲಿಂಗೇಶ್ವರಸ್ವಾಮಿಯ ಹೆಸರಿನ ತದ್ಭವ. ತೆಲುಗಿನಲ್ಲಿ 'ಕೊಂಡ' ಎಂದರೆ ಬೆಟ್ಟ. ಬೆಟ್ಟದ ಮೇಲಿನ ಮುದ್ದುಲಿಂಗೇಶ್ವರ ದೇವಾಲಯ ಬಹು ಪುರಾತನವಾದದ್ದು. ದೇವಾಲಯ ಮತ್ತು ಅದರ ಮುಂದಿನ ವಿಶಾಲವಾದ ದೋಣೆಗಳು ಈ ಕ್ಷೇತ್ರದ ಹಿರಿಮೆಗೆ ಬಹುಮಟ್ಟಿಗೆ ಕಾರಣ.

ಮೊದಲನೆಯದಾಗಿ ಮುದ್ದುಲಿಂಗೇಶ್ವರ ಲಿಂಗ ಮಾನವ ಪ್ರತಿಷ್ಠಿತವಲ್ಲ. ಹಿಂದೆ ದೇವಾಸುರರ ಯುದ್ಧವಾಗುವುದೆಂದು ತಿಳಿದು ಭೀತರಾದ ದೇವತೆಗಳು ಮತ್ತು ಋಷಿ-ಮುನಿಗಳು ಪರಶಿವನ ಮೊರೆ ಹೊಕ್ಕರು. ಭಕ್ತ ಪರಾಧೀನನಾದ ಪರಮ ಶಿವನು ಅವರಿಗೆ ಮುದ್ದು ಮಗುವಾಗಿ ಕಾಣಿಸಿಕೊಂಡ. ಮುಂದೆ ಶಿವನ ಕುಮಾರನೆನಿಸಿ, ಅಸುರರನ್ನು ನಿಗ್ರಹಿಸಿ, ಆರ್ತರನ್ನು ಸಂರಕ್ಷಿಸಿದ. ಅದರ ಕುರುಹಾಗಿ ಇಲ್ಲಿ ಉದ್ಭವಿಸಿದ ಜ್ಯೋತಿರ್ಲಿಂಗವೇ ಮುದ್ದುಲಿಂಗೇಶ್ವರ. ಅದರ ಮುಂದಿರುವ ದೋಣೆಯಲ್ಲಿ ನೀರು ಬತ್ತಿದ್ದನ್ನು ಇದುವರೆಗೆ ಯಾರೂ ಕಂಡಿಲ್ಲವೆಂದು ಹೇಳುತ್ತಾರೆ.

ಇಂದಿಗೂ ಈ ದೇವಾಲಯದಲ್ಲಿ ರಾತ್ರಿಯ ಹೊತ್ತು ಯಾರೂ ತಂಗುವುದಿಲ್ಲ. ಏಕೆಂದರೆ ರಾತ್ರಿ ಸರಿ ಹೊತ್ತಿನಲ್ಲಿ ದೇವಾಲಯದ ಒಳಗಡೆ ಗಂಟೆ, ಜಾಗಟೆ, ಶಂಖನಾದಗಳು ಮೊಳಗುತ್ತಿರುವುದನ್ನು ವೇದ-ಘೋಷವಾಗುತ್ತಿರುವುದನ್ನು ಕೇಳಿದವರಿದ್ದಾರೆ. ಆ ವೇಳೆಯಲ್ಲಿ ದೇವ ಮುನಿ-ಗಂಧರ್ವರು ಇಲ್ಲಿಗೆ ಬಂದು ಕೊಳದಲ್ಲಿ ಮಿಂದು ಸ್ವಾಮಿಯನ್ನು ಆರಾಧಿಸುವರೆಂದೂ ಹೇಳಿಕೆ ಇದೆ.

ಶ್ರಾವಣ, ಕಾರ್ತಿಕ, ಮತ್ತು ಧನುರ್ಮಾಸಗಳಲ್ಲಿ ದೇವಾಲಯದಲ್ಲಿ ನಂದಾ ದೀಪ (ಅಖಂಡಲ) ವನ್ನು ಇಡಿಸಿ, ಭಕ್ತರು ವಿಶೇಷ ಪೂಜೆಗಳನ್ನು ಏರ್ಪಡಿಸುವ ಪದ್ಧತಿ ಇದೆ.

ನವರಾತ್ರಿ, ಶಿವರಾತ್ರಿ ಮುಂತಾದ ಪರ್ವಕಾಲಗಳಲ್ಲಿ ಸಹಸ್ರಾರು ಮಂದಿ ಭಕ್ತರು ಇಲ್ಲಿ ನೆರೆದು ಶಿವನನ್ನು ಆರಾಧಿಸುತ್ತಾರೆ. ಸ್ವಾಮಿಯ ಭಕ್ತರು ತಮಗೆ ಕಷ್ಟ ನಷ್ಟಗಳುಂಟಾದಾಗ, ರೋಗ–ರುಜಿನಗಳು ಉಲ್ಬಣಿಸಿದಾಗ ಸ್ವಾಮಿಗೆ ಹರಕೆ ಹೊತ್ತು ವಿವಿಧ ಸೇವೆಗಳನ್ನು ಸಲ್ಲಿಸುವುದು ವಾಡಿಕೆ. ರಾತ್ರಿಹೊತ್ತು ಅಲ್ಲಿ ತಂಗುವ ಭಕ್ತರಿಗಾಗಿ ದೊಣೆಯ ಆಚೆ ದಡದಲ್ಲಿ ವಸತಿ ಗೃಹಗಳನ್ನು ಭಕ್ತರು ಕಟ್ಟಿಸಿದ್ದಾರೆ.

ಸೋಮಶಂಭು ದೇಶಿಕರ ಹಿರಿಯರು ಮೂಲತಃ ಮುದಿಗೊಂಡದವರೇ. ಅವರದು ಅತ್ರಿಗೋತ್ರ. ಅವರು ಪ್ರೌಢವಿದ್ಯಾಭ್ಯಾಸಕ್ಕಾಗಿ ಕಾಶಿಗೆ ತೆರಳಿ ವಿದ್ಯಾವಂತರಾಗಿ ಜಗದ್ಗುರು ವಿಶ್ವಾರಾಧ್ಯ ಮಹಾವಿದ್ಯಾಪೀಠದಲ್ಲಿ ಪ್ರಾಚಾರ್ಯರಾಗಿ ಮಹಾವಿದ್ಯಾಪೀಠದ ಮಹಾಪೋಷಕರಾಗಿರುವ ಜಗದ್ಗುರು ಮಹಾಸನ್ನಿಧಿಯವರನ್ನು ಆಶ್ರಯಿಸಿ, ಪೀಠದ ಜಂಗಮವಾಟಿಕೆಯಲ್ಲಿ ನೆಲೆಸಿದ್ದವರು.

ದೇಶಿಕರು ವಿದ್ಯಾಪೀಠದಲ್ಲಿ ಆಗಮ ವಿಭಾಗದಲ್ಲಿ ಪ್ರಾಚಾರ್ಯರಾಗಿದ್ದು ನಿವೃತ್ತರಾಗಿದ್ದರು. ದೇಶಿಕರ ಹಿರಿಯಮಗ ಶಂಭುಭಟ್ಟ, ಆತ ಕಾಮಿಕಾದಿಶಿವಾಗಮಗಳಿಗೆ ಸಂಸ್ಕೃತದಲ್ಲಿ ವೃತ್ತಿದೀಪಿಕೆಗಳನ್ನು ಬರೆದು ಮಹೋಪಾಧ್ಯಾಯನೆನಿಸಿ, ತಮ್ಮ ತಂದೆಯವರು ನಿವೃತ್ತರಾದ ಮೇಲೆ ಅವರ ಸ್ಥಾನದಲ್ಲಿ ಪ್ರಾಧ್ಯಾಪಕ ಪದವಿಯಲ್ಲಿ ನೇಮಿತನಾಗಿದ್ದ.

ಶಂಭುಭಟ್ಟರಿಗೆ ವೆಂಗಿದೇಶದ ದ್ರಾಕ್ಷಾರಾಮದ ಶ್ರೀಭೀಮೇಶ್ವರ ಲಿಂಗದ ಪುರೋಹಿತರಾದ ಭೀಮನ ಪಂಡಿತ ಮತ್ತು ಗೌರಾಂಬಿಕೆಯರು ತಮ್ಮ ಪುತ್ರಿ ಶ್ರೀದೇವಿಯನ್ನು ಕೊಟ್ಟು ಲಗ್ನಮಾಡಿದ್ದರು. ಭೀಮನ ಪಂಡಿತರದು ಕಾಶ್ಯಪ ಸಗೋತ್ರ.

ಭಟ್ಟರ ಸುಪುತ್ರನೇ "ಮಂಚಣ ಪಂಡಿತ" ಮಂಚಣ ಪಂಡಿತನ ಗುರು ಕೋಟಿಪಲ್ಲಾರಾಧ್ಯರು. ಇವರ ನಿಜವಾದ ನಿವಾಸ ಆಂಧ್ರದೇಶದ "ವನಿಪುರ"

ಇವರೂ ಕಾಶಿಯಮಹಾವಿದ್ಯಾಪೀಠದಲ್ಲಿ ದರ್ಶನ ವಿಭಾಗದಲ್ಲಿ ಪ್ರಾಚಾರ್ಯ ರಾಗಿದ್ದರು.

ಮಂಚಣನೂ ಅದೇ ವಿದ್ಯಾಪೀಠದಲ್ಲಿ ದರ್ಶನ ವಿಭಾಗದಲ್ಲಿ ಸ್ನಾತಕೋತ್ತರ ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣನಾಗಿ ದರ್ಶನಗಳ ಮೇಲೆ ಸಂಸ್ಕೃತದಲ್ಲಿ ವಿಶೇಷ ಪ್ರಬಂಧವೊಂದನ್ನು ಬರೆದು ಮಹೋಪಾಧ್ಯಾಯ ಪ್ರಶಸ್ತಿಯನ್ನು ಗಳಿಸಿದ್ದ, ವಿದ್ಯಾಪೀಠವು ದರ್ಶನಗಳ ಮೇಲೆ ಮಂಚಣನಿಗಿದ್ದ ಪ್ರೌಢಿಮೆಯನ್ನು ಗುರ್ತಿಸಿ, ಆತನನ್ನು ದರ್ಶನ ವಿಭಾಗದಲ್ಲಿ ಸಹಾಯೋಪಾಧ್ಯಾಯನನ್ನಾಗಿ ನೇಮಿಸಿತ್ತು. ಮಂಚಣ ಪಂಡಿತನು ಬರೆದ ಪ್ರಬಂಧ 'ಮಂಚಣಪಂಡಿತೀಯ.'

ಈ ಎರಡೂ ಶುಭಸಮಾಚಾರಗಳನ್ನು ಪೂಜ್ಯ ತಂದೆಯವರಿಗೆ ನಿವೇದಿಸುವ ಸಲುವಾಗಿ ಶಂಭು ಭಟ್ಟರು ಮುದಿಗೊಂಡಕ್ಕೆ ಬಂದಿದ್ದರು.

ದೇಶಿಕರು ಕಾಶಿಯಲ್ಲಿದ್ದಾಗಲೂ ಸಹ ಅವರು ಆಗಾಗ್ಗೆ ಜನ್ಮ ಭೂಮಿಗೆ ಆಗಮಿಸಿ ಮಾತಾಪಿತೃಗಳನ್ನು ಸಂದರ್ಶಿಸಿ ಹಿಂದಿರುಗುತ್ತಿದ್ದರು.

ಪ್ರಕೃತ ದೇಶಿಕರು ನಿವೃತ್ತರಾದ ಮೇಲೆ ಅವರು ಮುದಿಗೊಂಡದಲ್ಲಿ ನೆಲಸಿ ತಮ್ಮ ಕಿರಿಯ ಮಗ ವಿಶ್ವಾರಾಧ್ಯನ ಜೊತೆ ತಮಗೆ ಪರಂಪರೆ ಯಿಂದ ಬಂದ ಮುದ್ದು ಲಿಂಗೇಶ್ವರನ ಅರ್ಚನೆ ಮತ್ತು ಆಗಮಿಕ ಕಾರ್ಯಕ ಗಳಲ್ಲಿ ತೊಡಗಿದ್ದಾರೆ. ಮೇಲಾಗಿ ಪಿತ್ರಾರ್ಜಿತವಾಗಿ ಬಂದಿದ್ದ ತಮ್ಮ ತೋಟ-ತುಡಿಕೆಗಳನ್ನು ಅಭಿವೃದ್ಧಿ ಪಡಿಸಿದ್ದಾರೆ.

ವಿಶ್ವಾರಾಧ್ಯನಿಗೆ ಭಾರದ್ವಾಜ ಗೋತ್ರದ ವೇಮನಾರಾಧ್ಯರ ಮಗಳು ವೇದವತಿಯನ್ನು ತಂದು ವಿವಾಹಕಾರ್ಯವನ್ನು ನೇರವೇರಿಸಲಾಗಿತ್ತು. ಶಂಭು ಭಟ್ಟರ ವಿವಾಹವು ತುರ್ತಾಗಿ ಕಾಶಿಯಲ್ಲಿ ಏರ್ಪಟ್ಟದ್ದರಿಂದ ಗುರುಲಿಂಗಾರಾಧ್ಯರು ಆ ಸಮಾರಂಭದಲ್ಲಿ ಭಾಗವಹಿಸಲಾಗಿರಲಿಲ್ಲ. ಪ್ರಕೃತ ಶಂಭುಭಟ್ಟರೊಬ್ಬರೇ ಇಲ್ಲಿಗೆ ಬಂದಿದ್ದುದರಿಂದ ಆರಾಧ್ಯರಿಗೆ ಭಟ್ಟನ ಕುಟುಂಬವರ್ಗದ ಭೇಟಿಯಾಗುವ ಅವಕಾಶವಿಲ್ಲವಾಗಿತ್ತು.

ಮಣಿಕರ್ಣಿಕೆಗೆ ಈಗ ಪೈತುಂಬಾ ಕೆಲಸ. ಅವಳ ಮೊಮ್ಮಗನ ಪ್ರಶ್ನೆಗಳಿಗೆ ಉತ್ತರ ಹೇಳಬೇಕು. ಜೊತೆಗೆ ಅಪರೂಪಕ್ಕೆ ಬಂದಿರುವ ತಮ್ಮ-ಅಳಿಯಂದಿರು ಮತ್ತು ಶ್ರೀಪತಿಯ ಆರೈಕೆಯನ್ನೂ ಮಾಡಬೇಕು.

ಅವರಿಗೆ ಮೊಮ್ಮಗನನ್ನು ಎತ್ತಿಕೊಂಡು ಎಷ್ಟು ಮುಂಡಾಡಿದರೂ ತೃಪ್ತಿಯಿಲ್ಲ. ಈ ಸಂಭ್ರಮದಲ್ಲಿ ಮಣಿಕರ್ಣಿಕೆಗೆ ಭಾಗೀರಥಿಯ ಕ್ಷೇಮ ಚಿಂತನೆ ಮಾಡುವುದಕ್ಕೆ ಅವಕಾಶವೆಲ್ಲಿ ಬರಬೇಕು! ಮುಖ್ಯವಾಗಿ ಅವರ ಮನಸ್ಸು ಪ್ರಾಯಃ ಶ್ರೀಪತಿಯು ಹುಟ್ಟಿ ಐದುವರ್ಷವಾಗಿದ್ದರೂ ಸಹ ಅವಳಿಗೆ ಮತ್ತೆ ನೀರ್ನಿಂತುದರ ಕುರುಹು ಕಾಣದಿರುವುದರ ಕಾರಣ ಹುಡುಕುತ್ತಿತ್ತು ಎಂದು ಕಾಣುತ್ತೆ !

ದೇಶಿಕರು ಮೊಮ್ಮಗ ಮತ್ತು ಅಳಿಯಂದಿರ ಸ್ನಾನ ಪೂಜಾದಿಗಳಿಗೆ ಅಗ್ರತೆಯಿತ್ತು ತರುವಾಯ ತಾವು ಸ್ನಾನಮಾಡುವುದಾಗಿ ಹೆಂಡತಿಗೆ ಸೂಚನೆ ಇತ್ತಿದ್ದರು.

ಪ್ರಸಾದ ಮುಗಿಸಿ ಬಂದ ಪುಟ್ಟ (ಶ್ರೀಪತಿ) ನನ್ನು ಎತ್ತಿಕೊಂಡು ರಮಿಸಿದ ದೇಶಿಕರು, ಬಿಸಿಲಿನಲ್ಲಿ ಬಂದ ಮಾರ್ಗಾಯಾಸದಿಂದಲೆಂಬಂತೆ ನಿದ್ದೆಗಣ್ಣಿನ ಮೊಮ್ಮಗನನ್ನು ಹೆಚ್ಚು ರಮಿಸುವ ಗೋಜಿಗೆ ಹೋಗದೆ ಅವನನ್ನು ತಮ್ಮ ಶಯನ ಗೃಹದಲ್ಲಿ ಮಲಗಿಸುವಂತೆ ವಿಶ್ವನಿಗೆ ಸೂಚಿಸಿದ್ದರು.

ದೇಶಿಕರು ಅಳಿಯಂದಿರು ಮತ್ತು ಮಕ್ಕಳೊಡನೆ ಪ್ರಸಾದ ಸೇವಿಸಿ ಅವರ ಶಯನಕ್ಕೆಸಿದ್ಧ ಪಡಿಸಲು ಮಗನಿಗೆ ಸೂಚಿಸಿ ಮನೆಯ ಕೈತೋಟದಲ್ಲಿ ಸುತ್ತಾಡಿ ಬಂದು ಮನೆಯ ಮುಂದಿನ ಹಾಸುಗಲ್ಲಿನ ಮೇಲೆ ಕುಳಿತರು.

ಆರಾಧ್ಯರೂ ಮಾವನವರನ್ನು ಹಿಂಬಾಲಿಸಿ ಸುತ್ತಾಡಿ ಬಂದು ಅವರ ಎದುರಿನ ಬಂಡೆಯ ಮೇಲೆ ಕುಳಿತು ತಾವು ಬಂದ ಕಾರಣವನ್ನು ಸೂಚಿಸುವುದಕ್ಕೆ ಪೀಠಿಕೆಯಾಗಿ ದಾರಿಯಲ್ಲಿ ಬರುವಾಗ ಶ್ರೀಪತಿಯು ಕೇಳುತ್ತಿದ್ದ ರಾಹುಕಾಲದ ಪ್ರಸ್ತಾಪದಿಂದ ಆರಂಭಿಸಿ, ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳ ವಿಚಾರದಲ್ಲಿ ಅವನ ಗಹನವಾದ ಪ್ರಶ್ನೆಗಳು ಅದಕ್ಕೆ ಉತ್ತರವಾಗಿ ತಾವು ವಿವರಿಸಿದ ಬೀಜ-ಭೂಜನ್ಯಾಯ ಮತ್ತು ಮಯೂರಾಂಡರಸ ನ್ಯಾಯಗಳು ಹಾಗೂ ಶಿವ-ಶಕ್ತಿಗಳವಿಲಾಸದಿಂದ ಜಗತ್ತಿನ ಸ್ಥಿತಿ-ಗತಿಗಳ ವಿಷಯದಲ್ಲಿ ತಾವು ಸಮಾಧಾನ ಮಾಡಿದ ಸಂಗತಿ ಮತ್ತು

ಈ ದಿಸೆಯಲ್ಲಿ ಅವನಿಗೆ ವೇದ ಪಾಠವನ್ನು ಆರಂಭಿಸುವ ಬಗ್ಗೆ ತಮ್ಮ ಸೌಭಾಗ್ಯವತಿಗೂ ತಮಗೂ ನಡೆದ ವಿಚಾರ ಸಂಕಿರಣದ ಸಾರಾಂಶವನ್ನೂ ಸೂಕ್ಷ್ಮವಾಗಿ ವಿವರಿಸಿದರು.

ಈ ವಿವರಣೆಯಲ್ಲಿ ದೇಶಿಕರು, ಶಂಭು ಮತ್ತು ವಿಶ್ವರು ಮಾತ್ರವಲ್ಲದೆ ಅಡಿಗೆ ಮನೆಯಲ್ಲಿದ್ದ ಮಣಿಕರ್ಣಿಕೆ ಸಹ ಕಣ್ಣು-ಕಿವಿಯಾಗಿ ಕೇಳಿ, ಸೋಜಿಗಗೊಂಡರು. ಇಷ್ಟು ಗಹನವಾದ ವಿಷಯಗಳ ಮೇಲೆ ಜಿಜ್ಞಾಸೆ ನಡೆಸಿದ ಪುಟ್ಟನ ಪ್ರಜ್ಞಾಶಕ್ತಿಯ ಬಗ್ಗೆ ದೇಶಿಕರಿಗೆ ಆಶ್ಚರ್ಯವಾಯಿತು. ಶಂಭುಭಟ್ಟನಂತೂ ಮೂಕ ವಿಸ್ಮಿತನಾಗಿ ಕುಳಿತ.

ಶ್ರೀಪತಿಯ ನಾಮಕರಣಕ್ಕೆ ಬೆಜವಾಡಕ್ಕೆ ಬಂದಿದ್ದ ದೇಶಿಕರು ಮಗುವಿನ ಜಾತಕ ಬರೆದು ಕಳಿಸುವುದಾಗಿ ಹೆಂಡತಿಯೊಡನೆ ಹಿಂದಿರುಗಿದ ಮೇಲೆ ಮತ್ತೆ ಚಿರಂಜೀವಿಯ ಬಗೆಗೆ ಏನೊಂದೂ ತಿಳಿಸಲಿಲ್ಲವಾಗಿ ಭಾಗೀರಥಿ ಅನೇಕ ಸಲ ತವರಿನವರನ್ನು ನೆನೆದ ಬಗ್ಗೆ ಆರಾಧ್ಯರು ಮಾವನವರ ಗಮನಕ್ಕೆ ತಂದರು.

ದೇಶಿಕರು ಹೇಳಿದರು.

"ಗುರುಲಿಂಗು, ನಿನ್ನ ಆತಂಕ ನನಗೆ ತಿಳಿಯದೆ ಇಲ್ಲ, ನಾನು ಸಹ ಅವನ ಜಾತಕವನ್ನು ಬರೆದು ಮುಗಿಸಿದ್ದೇನೆ. ಬಾಲಗ್ರಹದ ಅವಧಿ ಮುಗಿದ ಮೇಲೆ ಚಿರಂಜೀವಿಯ ಉಜ್ವಲ ಭವಿಷ್ಯವನ್ನು ನಿನಗೆ ಸಮಕ್ಷ ತಿಳಿಸಬೇಕೆಂದು ಭಾವಿಸಿ ನಿನಗೆ ಸುದ್ದಿ ತಿಳಿಸಲಿಲ್ಲ. ಈಗ ನೀನು ಬಂದದ್ದು ಒಳ್ಳೆಯದೇ ಆಯಿತು. ಇದೇ ಸಮಯಕ್ಕೆ ಶಂಭುವೂ ಬಂದಿದ್ದಾನೆ. ಚಿರಂಜೀವಿಯ ಪ್ರಗತಿಯನ್ನು ಕುರಿತು ನಾಳೆ ವಿಸ್ತಾರವಾಗಿ ಮಾತನಾಡೋಣ, ಈಗಾಗಲೇ ತುಂಬ ಹೊತ್ತಾಗಿದೆ. ನೀನೂ ಮಾರ್ಗಾಯಾಸದಿಂದ ದಣಿದಿದ್ದೀಯೇ! ಆದಕ್ಕಾಗಿ ವಿಶ್ರಾಂತಿ ಪಡೆ" ಎಂದು ಹೇಳಿ ದೇಶಿಕರು ಮಲಗುವ ಕೋಣೆಯ ಕಡೆ ನಡೆದರು.

ಮಣಿಕರ್ಣಿಕೆ ಮೊಮ್ಮಗನನ್ನು ತಮ್ಮ ಹಾಸಿಗೆಯ ಪಕ್ಕದಲ್ಲಿಯೇ ಮಲಗಿಸಿಕೊಂಡಿದ್ದುದು ದೇಶಿಕರಿಗೆ ಸಮಾಧಾನವನ್ನುಂಟು ಮಾಡಿತ್ತು.

* * *

ಮರುದಿನ ಮುಂಜಾನೆಯೇ ಎದ್ದು ತೋಟದ ದಾರಿ ಹಿಡಿದಿದ್ದ ಮಾವನವರನ್ನು ಆರಾಧ್ಯರು ಹಿಂಬಾಲಿಸಿದ್ದರು. ತೋಟದ ರೈತನೊಡನೆ ಪೂರ್ವಪರಿಚಯ ಪಡೆದಿದ್ದ ರಾಮುಡು ತನ್ನ ಎತ್ತುಗಳಿಗೆ ಹುಲ್ಲು–ನೀರು ತೋರಿಸಿ ಮನೆಗೆ ಬಂದು ಊಟವಾಗಿಸಿ ಬಂದು ಅಲ್ಲಿಯೇ ಮಲಗಿದ್ದ.

ದೇಶಿಕರು ಅಳಿಯಂದಿರ ಜೊತೆ ನಿತ್ಯ ಕರ್ಮ ನೆರವೇರಿಸಿ, ಮನೆಗೆ ಹಿಂದಿರುಗುವ ವೇಳೆಗೆ ವಿಶ್ವಾರಾಧ್ಯ ಎಲ್ಲರ ಬಟ್ಟೆ ಮಡಿಮಾಡಿ ಹೂ-ಪತ್ರೆ ಬಿಡಿಸಿ ತಂದು, ಮಡಿವಸ್ತ್ರ ಒಣಹಾಕುತ್ತಿದ್ದ.

ಶ್ರೀಪತಿ ನಿದ್ದೆಯಿಂದ ಎಚ್ಚತ್ತು ನಿತ್ಯಕರ್ಮ ಮಗಿಸಿ, ಅಜ್ಜಿ ಜೊತೆ ಗಿಣಿ ಮಾತುಗಳನ್ನಾಡುತ್ತಾ ಸ್ನಾನ ಮಾಡಿಸಿಕೊಂಡು ಮಡಿವಸ್ತ್ರ ಧರಿಸಿ ಹೊರಗೆ ನಿಂತಿದ್ದ. ತಾತ ಮತ್ತು ತಂದೆಯವರು ಮನೆಯೊಳಗೆ ಅಡಿ ಇಟ್ಟೊಡನೆಯೇ ಶ್ರೀಪತಿ "ತಾತ-ಅಪ್ಪಾಜಿ ಬಂದರು!" ಎಂದು ಹರ್ಷೋದ್ಗಾರಮಾಡಿ, ಇಬ್ಬರ ಪಾದಗಳಿಗೂ ಮುಡಿಯಿಟ್ಟು ವಂದಿಸಿದ. ಬುದ್ಧಿಯವರು "ಮರಿ, ಪಕ್ಕದಲ್ಲಿಯೇ ಶಂಭುಮಾವ ಇದ್ದಾರೆ. ಅವರಿಗೂ ಶರಣು ಮಾಡು" ಎಂದರು.

ಶ್ರೀಪತಿ ಶಂಭು ಮತ್ತು ವಿಶ್ವಣ್ಣರಿಗೂ ನಮಸ್ಕಾರ ಮಾಡಿದ್ದಲ್ಲದೆ ಅಡಿಗೆ ಮನೆಯಲ್ಲಿದ್ದ ಅಜ್ಜಿಗೂ ಶರಣುಮಾಡುವುದನ್ನು ಮರೆಯಲಿಲ್ಲ. "ನೂರು ವರ್ಷ ಬಾಳಪ್ಪ!" ಎಂದು ಅಜ್ಜಿಯವರು ಹರಸಿದರು.

ಶಂಭು "ಏನು ಬೆರಳು ತೋರಿಸಿದರೆ ಹಸ್ತಾನೆ ನುಂಗುತಾನೆ! ಅಂದಹಾಗೆ ಅಪ್ಪಾಜಿ, ಶಂಭುಮಾವನಿಗೆ ನಮಸ್ಕಾರ ಮಾಡು ಎಂದರೆ ಉಳಿದವರಿಗೆಲ್ಲ ನಮಸ್ಕಾರ ಮಾಡಿದೆಯಲ್ಲ !" ಎಂದರು. ಅದಕ್ಕೇ ಶ್ರೀಪತಿ ತಲೆತಗ್ಗಿಸಿ, "ಅವರೆಲ್ಲ ನನಗಿಂತ ಹಿರಿಯರಲ್ಲವೆ?" ಎಂದು ಕಾಲ ಹೆಬ್ಬೆರಳಿನಿಂದ ನೆಲ ಕೆರೆಯುತ್ತಿದ್ದ.

"ಹಾಗಾದರೆ ಅಜ್ಜಿಗೆ ಬೆಳಿಗ್ಗೆ ನಮಸ್ಕಾರ ಮಾಡಿರಲಿಲ್ಲವಲ್ಲವೆ?" ಎಂದು ಶಂಭು ಪತಿಯನ್ನು ಕೆಣಕಿದರು.

"ಮಾಡುತ್ತಿದ್ದೆ. ಆದರೆ ತಾತನಿಗೆ ಮಾಡಿ, ಆ ಮೇಲೆ ಅಜ್ಜಿ ವಂದಿಸಲು ಕಾಯ್ದಿದ್ದೆ!" ಎಂದ ಶ್ರೀಪತಿ ನಸುನಾಚಿ.

"ಹಾಗಾದರೆ ತಾತನಿಗೆ ಮಾಡದೆ ಅಜ್ಜಿಗೆ ನಮಸ್ಕಾರ ಮಾಡಬಾರದೆ?" ಎಂದು ರೇಗಿಸಿದ ಶಂಭು. ಶ್ರೀಪತಿ ಅದಕ್ಕೆ ಉತ್ತರಿಸದೆ ತಂದೆ ಮುಖ ನೋಡಿ ಅವರ ಹಿಂದೆ ಸರಿದ.

"ತಾತ-ಅಪ್ಪಾಜಿ ತೋಟಕ್ಕೆ ಹೋಗುವಾಗ ನನ್ನನ್ನು ಬಿಟ್ಟೇ ಹೋಗಿದ್ದರು!" ಎಂದು ಆಕ್ಷೇಪಿಸಿದ ಪತಿ.

"ನೀನು ಏಳಿಯುವನು ಮರಿ, ಇನ್ನೂ ನಿದ್ದೆಯಲ್ಲಿದ್ದುದರಿಂದ ನಿನ್ನನ್ನು ಎಬ್ಬಿಸಬಾರದೆಂದು ತೋಟದ ಕಡೆ ಹೋಗಿದ್ದೆವು. ಈಗ ಪ್ರಸಾದ ಮುಗಿಸಿಕೊಂಡು ಎಲ್ಲರೂ ತೋಟಕ್ಕೆ ಹೋಗೋಣ!"

—ಎಂದು ದೇಶಿಕರು ಶ್ರೀಪತಿಯ ತಲೆ ನೇವರಿಸಿ ಗಲ್ಲ ಸವರಿ ಬೆನ್ನು ಚಪ್ಪರಿಸಿದರು.

ದೇಶಿಕರು ಮನೆಗೆ ಬರುವ ವೇಳೆಗೆ ಮಣಿಕರ್ಣಿಕೆ ಪೂಜಾದಿಗಳಿಗೆ ಸಿದ್ಧತೆ ಮಾಡಿ ಅಡಿಗೆ ಮನೆ ಸೇರಿದ್ದಳು.

ದೇಶಿಕರು ಸ್ನಾನ-ಸಂಧ್ಯೆ ಶಿವಾರ್ಚನೆಗಳನ್ನು ಮುಗಿಸಿ ಅಗ್ನಿವೇದಿಕೆಯ ಬಳಿ ಬಂದಾಗ ಶ್ರೀಪತಿಯೂ ಮಡಿಯುಟ್ಟು ಮಾವನೊಡನೆ ಅಲ್ಲಿಯೇ ನಿಂತಿದ್ದ. ಅದನ್ನು ಕಂಡ ದೇಶಿಕರಿಗೆ ಬಾಲಯಜ್ಞೇಶ್ವರನ ನೆನಪಾಯಿತು. ಅಗ್ನಿಕುಂಡದ ಪಶ್ಚಿಮದಲ್ಲಿ ದೇಶಿಕರು ಆಸನವನ್ನು ಅಲಂಕರಿಸಿದ ಮೇಲೆ ಅವರ ಬಲಗಡೆಯ ಪೀಠದಲ್ಲಿ ಮಣಿಕರ್ಣಿಕೆ ಮೊಮ್ಮಗನ ಜೊತೆ ಕುಳಿತಳು. ಆರಾಧ್ಯರು, ಶಂಭು-ವಿಶ್ವರು ಕುಂಡದ ಇಕ್ಕೆಲಗಳಲ್ಲಿದ್ದ ಪೀಠಗಳ ಮೇಲೆ ಆಸೀನರಾದರು—

ದೇಶಿಕರು ಶುದ್ಧಾಚಮನವನ್ನು ಆಚರಿಸಿ ಘಂಟಾನಾದ ಮಾಡಿ, ಸಂಕಲ್ಪಿಸಿ, ಕೈ ಜೋಡಿಸಿ ಕುಳಿತು—

"ಮರಿ, ನಿನಗೆ ಅಗ್ನಿಮುಖದ ಮಂತ್ರಗಳೆಲ್ಲ ಕಂಠಪಾಠವಾಗಿವೆ ಎಂದು ಅಪ್ಪಾಜಿ ಹೇಳಿದರು! ಹೇಳು ಮರಿ!" ಎಂದರು

ಆರಾಧ್ಯರು ಸಹ. "ಆಗಬಹುದು ಹೇಳು ಮರಿ!" ಎಂದರು.

"ಶ್ರೀಪತಿ ಓಂ ಚತ್ವಾರಿಶೃಂಗಾ" ಎಂದು ಅಗ್ನಿಮುಖ ಪಾಠವನ್ನು ಗಂಭೀರವಾಣಿಯಿಂದ ಹೇಳ ತೊಡಗಿದ. ಅವನ ಮಧುರವಾದ ಕಂಠ

ಸ್ವನ, ಸ್ಫುಟವಾದ ಉಚ್ಚಾರ, ಸ್ವರ ಪರಿಷ್ಕಾರಗಳನ್ನು ಕಂಡ ದೇಶಿಕರು ಮುಗ್ಧರಾದರು. ಶಂಭು ಚಕಿತನಾದ.

ಶ್ರೀಪತಿ ಅಗ್ನಿಕಾರ್ಯದ ಯಾವ ವಿನ್ಯಾಸವನ್ನು ಗಮನಿಸದೆ ಅಗ್ನಿಹೋತ್ರ ಮತ್ತು ಪೂಜಾವಿಧಿಯ ಪೂರ್ಣ ಪಾಠವನ್ನು ಒಪ್ಪಿಸಿದ.

ಯಾರೂ ಮಾತನಾಡಲಿಲ್ಲ. ಎಲ್ಲರ ಕಣ್ಣುಗಳಲ್ಲಿ ಆನಂದ ಬಾಷ್ಪಗಳು ತುಳುಕಿದವು.

ಶ್ರೀಪತಿಯ ವಾಕ್ಪಟುತ್ವ, ಜ್ಞಾಪಕಶಕ್ತಿ, ಪ್ರತಿಭೆ ಮತ್ತು ಮುಖದ ಉಜ್ವಲ ತೇಜಸ್ಸುಗಳನ್ನು ಕಂಡ ದೇಶಿಕರು, ಮಣಿಕರ್ಣಿಕೆ ತನ್ನ ನೇತ್ರ ಪ್ರಾಂತಗಳಲ್ಲಿ ಉಕ್ಕಿಬಂದ ಹರ್ಷಾಶ್ರುಗಳನ್ನು ಶೆರಗಿನ ತುದಿಯಿಂದ ಒರೆಸುತ್ತಿರುವುದನ್ನೂ ಗಮನಿಸಿದರು. ಮತ್ತು ಅಜ್ಜಿ ಶ್ರೀಪತಿಯನ್ನೆತ್ತಿ ಎದೆಗವಚಿಕೊಂಡು ಮುತ್ತಿಟ್ಟು ನೆಟ್ಟಗೆ ತೆಗೆದರು.

ನಿತ್ಯಾಹ್ನಿಕವನ್ನು ಪೂರ್ಣಗೊಳಿಸಿದ ದೇಶಿಕರು ಎಲ್ಲರ ಜೊತೆ ಉಪಾಹಾರ ಮುಗಿಸಿದರು. ಶಂಭುಭಟ್ಟನು ಶ್ರೀಪತಿಯೊಡನೆ ರಮಿಸುತ್ತಾ "ಮರಿ, ನೀನು ಈ ವರ್ಷವೇ ವೇದಪಾಠಶಾಲೆಗೆ ಸೇರಿಬಿಡು, ನಿನ್ನ ಪ್ರಾಥಮಿಕ ಶಿಕ್ಷಣ ಮುಗಿಸಿದೊಡನೆಯೇ ನಿನ್ನನ್ನು ನಾನೇ ಕಾಶಿಗೆ ಕರೆದುಕೊಂಡು ಹೋಗುತ್ತೇನೆ. ನಿನ್ನ ಮುಂದಿನ ಪ್ರಗತಿ ನನ್ನದು" ಎಂದು ಅವನ ಬೆನ್ನು ಚಪ್ಪರಿಸಿದರು. ದೇಶಿಕರು ಹೇಳಿದರು—

"ಗುರುಲಿಂಗು, ನೀನೆ ಅದೃಷ್ಟಶಾಲಿ ಕಣಯ್ಯ! ನಿನ್ನ ಮಗನ ಭವಿಷ್ಯ ಉಜ್ವಲವಾಗಿದೆ. ಅವನ ಜಾತಕದಲ್ಲಿ ಐದು ಗ್ರಹಗಳು ಉಚ್ಚಸ್ಥಾನದಲ್ಲಿವೆ. ಜನ್ಮದಲ್ಲಿ ಗುರು, ಲಾಭದಲ್ಲಿ ಬುಧ, ಮುಂತಾದ ಶುಭಲಕ್ಷಣಗಳುಳ್ಳ ಜಾತಕ ಸಾವಿರಕ್ಕೆ ಒಂದು ಸಹ ಸಿಕ್ಕುವುದಿಲ್ಲ. ಸಕಲಶಾಸ್ತ್ರ ಪಾರಂಗತನಾದ ಇವನಿಗೆ "ಗಜಕೇಸರಿ ಯೋಗ" ವಿದೆ! ದರ್ಶನ ಶಾಸ್ತ್ರ ವಿಶಾರದನಾದ ಇವನು ಮುಂದೆ ಎದುರಾಳಿಗಳು ಸೋತು ಶರಣಾಗುತ್ತಾರೆ. ಒಳ್ಳೆಯ ಕಳತ್ರಯೋಗ! ದ್ವಿಪುತ್ರಲಾಭವಿದೆ. ಯೋಗಕಾರರು ಬುಧ ಶುಕ್ರರು "ಪುರುಷ ಸರಸ್ವತಿ" ಎಂದು ಹೆಸರಾಂತ ಇವನು ಶತಾಯುವಾದರೂ. ಈತ ತನ್ನ ಐವತ್ತನೆಯ ವಯಸ್ಸಿಗೇ ವೈರಾಗ್ಯ ತಳೆದು ಜೀವನ್ಮುಕ್ತನಾಗಿ ಪರಮಹಂಸನೂ ಲೋಕಪೂಜ್ಯನೂ ಆಗುತ್ತಾನೆ."

—ಎಂದು ಜಾತಕದ ಮುಖ್ಯಾಂಶಗಳನ್ನು ವಿವರಿಸಿ ಹೇಳಿ ಜಾತಕ ವನ್ನು ಅಳಿಯನ ಕೈಗೆ ಕೊಟ್ಟರು.

ಆರಾಧ್ಯರು ಮಾವನವರ ಮುಖದಿಂದ ಮಗನ ಪ್ರಶಂಸೆಯನ್ನು ಕೇಳಿ ಆನಂದದಿಂದ ಉಬ್ಬಿಹೋದರು. ಶಂಭುಭಟ್ಟನಂತೂ --

"ಭಾವ, ನೀನು ಈ ವರ್ಷವೇ ಅವನಿಗೆ "ಅಕ್ಷರಾಭ್ಯಾಸ" ಸಂಸ್ಕಾರ ಮಾಡಿಸಿ, ಅವನನ್ನು ವೇದ-ಸಂಸ್ಕೃತ ತರಗತಿಗಳಿಗೆ ಸೇರಿಸು" ಎಂದು ಒತ್ತಾಯಿಸುತ್ತಿದ್ದ.

ಅಷ್ಟರಲ್ಲಿ ವಿಶ್ವಾರಾಧ್ಯ ಬೆಟ್ಟದ ಪೂಜೆಗೆಂದು ಹೊರಡಲು ಸಿದ್ಧನಾಗಿ ದೇಶಿಕರಿಗೆ ನಿವೇದಿಸಲು ಬಂದಿದ್ದ. ಶ್ರೀಪತಿ "ನಾನು ಬರುತ್ತೇನೆ ಮಾವ ಬೆಟ್ಟ ನೋಡಬೇಕು" ಎಂದು ವಿಶ್ವಣ್ಣನನ್ನು ಹಿಂಬಾಲಿಸಿದ.

ಶ್ರೀಪತಿ ವಿಶ್ವಣ್ಣನ ಹಿಂದೆ ಬೆಟ್ಟಕ್ಕೆ ನಡೆದ ಮೇಲೆ ಆರಾಧ್ಯರು ಶಂಭುವನ್ನು ಕುರಿತು.

"ಶಂಭು, ನೀನು "ಸಕಲಾಗಮ ಪ್ರವೀಣ" ಎಂದು ಬಿರುದು ಪಡೆದದ್ದು ನಮಗೆಲ್ಲ ಸಂತೋಷವೇ! ಆದರೆ ಇಂಥ ಶಾಸ್ತ್ರವಿಚಾರದಲ್ಲಿ ನೀನು ಆಲೋಚಿಸದೆ ನಿರ್ಣಯ ಕೊಡುವುದು ಸರಿಯೆ? ಶ್ರೀಪತಿಯನ್ನು ಈ ವರ್ಷವೇ ಪಾಠಶಾಲೆಗೆ ಸೇರಿಸಿ, ವೇದ ಮತ್ತು ಸಂಸ್ಕೃತ ತರಗತಿಗಳಿಗೆ ಸೇರಿಸು!" ಎಂದೆಯಲ್ಲವೆ ? ಆದರೆ ಅದರಲ್ಲಿ ಸಂಸ್ಕೃತ ತರಗತಿಗೆ ಸೇರಿಸು ವುದರಲ್ಲಿ ಯಾವ ಬಾಧಕವೂ ಇಲ್ಲ, ಆದರೆ ವೇದ ತರಗತಿಗೆ ಸೇರಿಸಲು ಸಾಧ್ಯವೇ ? ಯೋಚನೆ ಮಾಡು!"

"ಏನು? ಏಕೆ ಸೇರಿಸಬಾರದು? ವಾಕ್‌ಶುದ್ಧಿ, ಎಷ್ಟು ಚೆನ್ನಾಗಿದೆ! ಅವನಿಗೆ ಎಳೆತನದಲ್ಲಿಯೇ ಮಕ್ಕಳಿಗೆ ಕಂಠಪಾಠ ಮಾಡಬೇಕಾದ ನಿಘಂಟು, ಧಾತುಪಾಠ, ಅಷ್ಟಾಧ್ಯಾಯೀ ಸೂತ್ರಪಾಠ ಮತ್ತು ತೈತ್ತಿರೀಯದ ಶಿಕ್ಷಾವಲ್ಲಿ ಮುಂತಾದುವನ್ನು ಸಂತೆ* ಮಾಡಿಸಿದರೆ ಅದು ಕಡೆಯುವರೆಗೂ ಮರೆಯುವುದಿಲ್ಲ!"

---

* ವೇದಪಾಠ ಮಾಡುವಾಗ ಗುರು ಒಮ್ಮೆ ಹೇಳಿದ್ದನ್ನು ಶಿಷ್ಯ ಎರಡು ಸಲ ಪುನರುಚ್ಚರಿಸುವುಕ್ಕೆ "ಸಂತೆ" ಎಂದು ಹೆಸರು.

"ಅಪ್ಪ ಶಂಭು, ನೀನು ಭಾಗು ತಮ್ಮನಲ್ಲವೆ? ಸಾರ್ಥಕವಾಯಿತು! ಅವಳೂನಿನ್ನ ಹಾಗೆಯೇ ವಾದಿಸಿದಳು. ಅದಕ್ಕಾಗಿಯೇ ನಾನು ಶ್ರೀಪತಿಯನ್ನು ಕರೆದುಕೊಂಡು ಭಾವನವರ ಅಭಿಪ್ರಾಯ ತಿಳಿಯಲು ಬಂದದ್ದು!"

"ಏನು, ನಿಮಗಿರುವ ಆತಂಕ? ಯಾಕೆ ಹೀಗೆ ಸಂಶಯ ಪಡುತ್ತಿದ್ದೀರಿ?" ಎಂದ ಶಂಭುಭಟ್ಟ ಭಾವನನ್ನು ಕೆಣಕುವ ದನಿಯಲ್ಲಿ.

ಆರಾಧ್ಯರು "ನೋಡು ಶಂಭು, ವಿಜಯವಾಡದಲ್ಲಿ ನಮ್ಮ ಬೀದಿಗೆ, ಆರಾಧ್ಯ-ಬ್ರಾಹ್ಮಣರ ಬೀದಿ" ಎಂತಲೇ ಹೆಸರು. ಇವರೆಲ್ಲರಿಗೂ ಬ್ರಾಹ್ಮಣ್ಯದ ಹೆಚ್ಚಳವಿದೆ." ಪಾಠಶಾಲೆಯ ಮುಖ್ಯೋಪಾಧ್ಯಾಯನಾದ ಈ ಆರಾಧ್ಯ ಉಪನಯನವೇ ಇಲ್ಲದೆ ತನ್ನ ಮಗನನ್ನು ವೇದಪಾಠಕ್ಕೆ ಸೇರಿಸಿದ್ದಾನೆ!" ಎಂದು ನಗುವುದಿಲ್ಲವೆ ? ಅವಗಿನ್ನೂ ಐದು ವರ್ಷ! ಐದನೇ ವರ್ಷಕ್ಕೇ ಉಪನಯನ ಮಾಡಬೇಕೆಂದು ಯಾವ ಸ್ಮೃತಿಯಲ್ಲಿ ಹೇಳಿದೆ? ಇದಿಷ್ಟೂ ಪರಿಜ್ಞಾನವಿಲ್ಲದೆ ಭಾಗು ನನ್ನನ್ನು ದಿಕ್ಕುತಪ್ಪಿಸಿದಳು! ಅವಳಂತೆಯೇ ನೀನೂ ವಾದಿಸುತ್ತಿದ್ದೀಯೆ! ಏನು ಹೇಳಬೇಕು!"

—ಎಂದು ಆರಾಧ್ಯರು ತಮ್ಮ ವಾದವನ್ನು ಮಂಡಿಸಿದರು.

ಮಗ ಮತ್ತು ಅಳಿಯಂದಿರ ವಾಗ್ವಾದವನ್ನು ಸಾವಧಾನವಾಗಿ ಕೇಳುತ್ತಿದ್ದ ದೇಶಿಕರು ನಸುನಕ್ಕು ಹೇಳಿದರು—

"ಗುರುಲಿಂಗು, ನಿನ್ನ ವಾಕ್ಚಾತುರ್ಯ ಅತ್ಯದ್ಭುತವಪ್ಪ ! ಇಷ್ಟಿಲ್ಲದಿದ್ದರೆ ನೀನು ವಿಜಯವಾಡದ ಹಾಗೂ ಮಹಾ ಅಭಿಮಾನಿಗಳಾದ ಆರಾಧ್ಯ ಬ್ರಾಹ್ಮಣರ ಶ್ರೇಣಿಯಲ್ಲಿ ತಲೆ ಎತ್ತಿ ತಿರುಗಲಾಗುತ್ತಿತ್ತೆ? ಅಷ್ಟೇ ಅಲ್ಲದೆ ಕಾಶಿಯ ಮಹಾವಿದ್ಯಾಪೀಠದಲ್ಲಿ "ಸಕಲಾಗಮ ಪ್ರವೀಣ" ಎಂದು ಪ್ರಶಸ್ತಿ ಪಡೆದ ಶಂಭುವನ್ನು ಪ್ರತಿಭಟಿಸುತ್ತಿರುವುದಕ್ಕೆ ನಿನಗೂ ಒಂದು ಒಳ್ಳೆಯ ಪ್ರಶಸ್ತಿಯನ್ನು ಏಕೆ ಕೊಡಿಸಬಾರದು ಎಂದೆನಿಸುತ್ತೆ!"

—ಎಂದ ಮಾವನವರ ವ್ಯಂಗ್ಯೋಕ್ತಿಯನ್ನು ಕೇಳಿ ಆರಾಧ್ಯರು ಸ್ವಲ್ಪ ನಾಚಿ ಹೇಳಿದರು.

"ಏಕೆ ಭಾವ, ನಾನು ಆಡಿದ್ದರಲ್ಲಿ ಏನಾದರೂ ತಪ್ಪಿದ್ದರೆ ಹೇಳಿ ಒಪ್ಪಿಕೊಳ್ಳುತ್ತೇನೆ. ನಾವು ಮಕ್ಕಳಿಗೆ ಗರ್ಭಾಷ್ಟಮದಲ್ಲಿ ಉಪನಯನ ಮತ್ತು ಶಿವದೀಕ್ಷೆಗಳನ್ನು ಮಾಡುತ್ತಿದ್ದೇವೆ! ಹಾಗಿಲ್ಲವೆ ಶಾಸ್ತ್ರ ಮರ್ಯಾದೆ ಯನ್ನು ಬದಿಗಿಟ್ಟು, ಐದನೇ ವರ್ಷಕ್ಕೆ ಉಪನಯನ ಮಾಡಲು ಸಾಧ್ಯವೇ? ಹಾಗೆ ಮಾಡಿದರೆ ಅದನ್ನು ವಿಧಿಸುವ ಶಾಸ್ತ್ರಕೆ ಏನು ಬೆಲೆ? ಶಾಸ್ತ್ರವಿರುದ್ಧವಾಗಿ ಸಂಸ್ಕಾರವನ್ನು ಮಾಡುವುದರಿಂದ ಪ್ರತ್ಯವಾಯ (ದೋಷ) ಬರುವುದಿಲ್ಲವೆ? ಎಂದರು ಗತ್ತಿನಧಾಟಿಯಲ್ಲಿ ಆರಾಧ್ಯರು.

ದೇಶಿಕರಿಗೆ ಒಳಗೊಳಗೇ ನಗು! ಅವರು ಕೇಳಿದರು.

"ಗುರುಲಿಂಗು, ನೀನು ಶಾಸ್ತ್ರವನ್ನು ಪೂರ್ಣವಾಗಿ ಅಭ್ಯಾಸ" ಮಾಡಲಿಲ್ಲ! ನಾಟಕಾಂತಸಾಹಿತ್ಯಕ್ಕೇ ನಿನ್ನ ಓದು ಮುಕ್ತಾಯ ವಾಯಿತು. ಅಷ್ಟುಹೊತ್ತಿಗೆ ನಮ್ಮ ಭಾಗೀರಥಿಯೂ ಅಷ್ಟಿಷ್ಟು ಸಂಸ್ಕೃತ ಓದಿಕೊಂಡು ಕೈಗೆ ಬಂದಿದ್ದಳು. ಆವಳ ಕೈ ಹಿಡಿದಮೇಲೆ 'ವಿವಾಹೋ ವಿದ್ಯಾನಾಶಾಯ' ಎಂಬಂತೆ ನಿನ್ನ ಮುಂದಿನ ವಿದ್ಯಾಭ್ಯಾಸಕ್ಕೆ ಕಲ್ಲು ಬಿತ್ತು!"

ಅದಿರಲಿ, ಪ್ರಕೃತ ನೀನು ಶಾಸ್ತ್ರದ ವಿಚಾರ ಎತ್ತಿದ್ದೀಯ! ಶಾಸ್ತ್ರದಲ್ಲಿ ಸಾಮಾನ್ಯವಿಧಿ (GENERAL RULE) ವಿಶೇಷವಿಧಿ (EXCEPTIONAL RULE) ಎಂಬ ಎರಡು ಬಗೆಯ ವಿಧಿಗಳಿವೆ. ಉದಾಹರಣೆಗೆ ಆರೋಗ್ಯ ಶಾಸ್ತ್ರದಲ್ಲಿ ಸರ್ವೇಭ್ಯೋ ದಧಿ ದೀಯತಾಂ, ಕೌಂಡಿನ್ಯಾಯ ತಕ್ರಂ" ಎಂಬ ಒಂದು ನ್ಯಾಯವಿದೆ.

'ಎಲ್ಲರಿಗೂ ಮೊಸರು ಬಡಿಸು; ಕೌಂಡಿನ್ಯನಿಗೆ ಮಾತ್ರ ಮಜ್ಜಿಗೆ' ಎಂದು ಅದರ ಅರ್ಥ. ವಿದ್ಯಾರ್ಥಿನಿಲಯದಲ್ಲಿ ಬಂದಿರುವ ಮಾತು ಇದು ಅಲ್ಲಿ ಪ್ರತಿದಿನವೂ ಊಟದ ಕಡೆಯಲ್ಲಿ ವಿದ್ಯಾರ್ಥಿಗಳಿಗೆ ಮೊಸರು ಬಡಿ ಸುವುದು ಪದ್ಧತಿ. ಆ ದಿನ ಕೌಂಡಿನ್ಯನೆಂಬವನಿಗೆ ಆರೋಗ್ಯ ಕೆಟ್ಟು

ಪ್ರವೃತ್ತಿ (ಭೇದಿ) ಯಾಗುತ್ತಿತ್ತು. ವೈದ್ಯರು ಅವನಿಗೆ ಮೊಸರು ಬೇಡ ಮಜ್ಜಿಗೆ ಮಾತ್ರ ಬಡಿಸಬೇಕೆಂಬ ಪಥ್ಯವಿಟ್ಟಿದ್ದರು. ಅದನ್ನು ತಿಳಿದಿದ್ದ ನಿಲಯದ ಅಧಿಕಾರಿ ಊಟಕ್ಕೆ ಬಡಿಸುವವನಿಗೆ ಈ ಸೂಚನೆ ನೀಡಿದ್ದ. ಇಲ್ಲಿ ಎಲ್ಲರಿಗೂ ಮೊಸರು ಬಡಿಸುವಂತೆ ಸಾಮಾನ್ಯವಿಧಿಯಿಂದ ಕೌಂಡಿನ್ಯನಿಗೂ ಮೊಸರು ಬಡಿಸಬೇಕಾಗಿತ್ತು. ಆದರೆ 'ಕೌಂಡಿನ್ಯಾಯ ತಕ್ರಂ' (ಕೌಂಡಿನ್ಯನಿಗೆ ಮಾತ್ರ ಮಜ್ಜಿಗೆ) ಎಂಬ ವಿಶೇಷ ವಿಧಿ, ಸಾಮಾನ್ಯ ವಿಧಿಯನ್ನು ತಡೆದು ಅವನಿಗೆ ಮಾತ್ರ ಮಜ್ಜಿಗೆ ಬಡಿಸುವಂತೆ ವಿಧಿಸಿತು. ಆದರಂತೆ ಇಲ್ಲಿ ಶಾಸ್ತ್ರವು "ದ್ವಿಜರ ಮಕ್ಕಳೆಲ್ಲರಿಗೂ ಹುಟ್ಟಿದ ಎಂಟನೇ ವರ್ಷಕ್ಕೆ ಉಪನಯನ ಮಾಡಲು ವಿಧಿಸಿದೆ. ಆದರೆ ಶ್ರೀಪತಿಯಂಥ ತೀವ್ರಾಧಿಕಾರಿಗೆ ಆ ಸಾಮಾನ್ಯ ವಿಧಿ ಅನ್ವಯಿಸುವುದಿಲ್ಲ. ಏಕೆಂದರೆ ಮಕ್ಕಳಲ್ಲಿ ಮಂದಾಧಿಕಾರಿಗಳೇ ಹೆಚ್ಚು. ಅದಕ್ಕಾಗಿ ಶಾಸ್ತ್ರವು ಅಂಥವರಿಗೆ ಎಂಟು ವರ್ಷಕ್ಕೆ ಉಪನಯನ ಮಾಡಬೇಕು ಎಂದು ವಿಧಿಸಿದೆ. ಇದು ಸಾಮಾನ್ಯ ವಿಧಿ.

ವಿದ್ಯಾರ್ಥಿಗಳಲ್ಲಿ ಮಂದ-ಮಧ್ಯ-ತೀವ್ರ ಎಂಬ ಮೂರು ಹಂತದ ತಿಳಿವಳಿಕೆಯುಳ್ಳವರುಂಟು. ಶ್ರೀಪತಿ ಕೆಳಗಿನ ಎರಡು ಹಂತಗಳನ್ನು ಮೀರಿದ "ತೀವ್ರಾಧಿಕಾರಿ!" ಆದ್ದರಿಂದ ಅವನ ಉಪನಯನಕ್ಕೆ ವಯಸ್ಸಿನ ಮಿತಿಯ ಯಾವ ಶಾಸ್ತ್ರವೂ ಅಡ್ಡ ಬರುವುದಿಲ್ಲ.

ಪುರಾಣದಲ್ಲಿ ಬಂದಿರುವ ಒಂದು ಸಂದರ್ಭವು ಇಲ್ಲಿ ನೆನಪಿಗೆ ಬರುತ್ತದೆ.

"ಶಿವನು ಕುಮಾರ (ಷಣ್ಮುಖ)ನಿಗೆ ವಿದ್ಯೆ ಕಲಿಸಲು ಚತುರ್ಮುಖ ಬ್ರಹ್ಮನನ್ನೇ ಅಧ್ಯಾಪಕನನ್ನಾಗಿ ನೇಮಿಸಿದ.

ಚತುರ್ಮುಖನು ಕುಮಾರನಿಗೆ "ಅಕ್ಷರಾರಂಭ" ಮಾಡಿ "ಓಂ ನಮಃಶಿವಾಯ" ಎಂದು ಕಪ್ಪು ಹಲಗೆಯ ಮೇಲೆ ಬರೆದು ಅದನ್ನು ತಿದ್ದಲು ಹೇಳಿದ. ಕುಮಾರ ಕೇಳಿದ. "'ಓಂ' ಎಂದರೆ ಏನು?" ಎಂದು. ಚತುರ್ಮುಖ ಹೇಳಿದ—"ಅಪ್ಪ, ಓಂಕಾರಕ್ಕೆ ಅರ್ಥ ಹೇಳಬೇಕಾದರೆ ನಿನಗೆ ಅದಕ್ಕೆ ತಕ್ಕ ಅರ್ಹತೆ ಬೇಕು. ಮೊದಲು ಅಕ್ಷರ ಕಲಿ!" ಎಂದು.

ಕುಮಾರ ಕೇಳಿದ—"ಅರ್ಥವಿಲ್ಲದ ಓದು ವ್ಯರ್ಥ ಅಲ್ಲವೆ ಗುರುಗಳೆ! ಎಂದುದಲ್ಲದೆ ಮುಂದುವರಿದು ಅವನು "ಅಕ್ಷರ" ಎಂದರೇನು ? ಹೇಳಿ ಗುರುಗಳೆ!" ಎಂದ.

" 'ಅಕ್ಷರ' ಎಂದರೆ ನಾಶವಿಲ್ಲದ್ದು" ಎಂದ ಬ್ರಹ್ಮ.

"ನಾಶವಿಲ್ಲದ್ದು ಯಾವುದು ?"

"ಅದೇ ಪ್ರಣವರೂಪವಾದ ಓಂಕಾರ!"

"ಅಂದ ಮೇಲೆ, ಅಂಥ ಪ್ರಣವಕ್ಕೆ ಅರ್ಥವಿಲ್ಲವೆ ?"

"ಇದೆ. ಆದರೆ ಆ ಪ್ರಣವಕ್ಕೆ ಒಂದು ಲಕ್ಷ ಗ್ರಂಥ*ಗಳಷ್ಟು ಅರ್ಥಗಳಿವೆ" ಎಂದು ಬ್ರಹ್ಮ ವಿವರಿಸಿದ.

ಕುಮಾರನಿಗೆ ರೇಗಿತು. ಏಕೆಂದರೆ ಅವನಿಗೆ ಬ್ರಹ್ಮನ ವಿವರಣೆ ಹಿಡಿಸಲಿಲ್ಲ. ಅವನೆಂದ—

"ಸ್ವಾಮಿ, ಪ್ರಣವಕ್ಕೆ ಒಂದು ಕೋಟಿ ಗ್ರಂಥಗಳಷ್ಟು ಅರ್ಥವಿರುವಾಗ ನೀವು ಒಂದು ಲಕ್ಷಗ್ರಂಥವೆನ್ನಬಹುದೆ?" ಎಂದು ತನ್ನ ಕಶಾಯುಧದಿಂದ ಬ್ರಹ್ಮನ ಕೆನ್ನೆಗೆ ಬಾರಿಸಿ ಎದ್ದು ಹೋದ ಕುಮಾರ.

ಖಿನ್ನನಾದ ಬ್ರಹ್ಮ ಶಿವನಲ್ಲಿ ಕುಮಾರನ ಮೇಲೆ ದೂರು ಕೊಟ್ಟ. ಶಿವ ಕುಮಾರನನ್ನು ಕರೆಸಿ ಕೇಳಿದಾಗ ಕುಮಾರನೆಂದ—

"ಅಪ್ಪಾಜಿ, ನಾನು ಅಮ್ಮನ ಗರ್ಭದಲ್ಲಿರುವಾಗ ನೀವು ಅಮ್ಮನಿಗೆ ಪ್ರಣವಕ್ಕೆ ಒಂದು ಕೋಟಿ ಗ್ರಂಥಗಳಷ್ಟು ಅರ್ಥ ಹೇಳಲಿಲ್ಲವೆ ? ಆದರೆ ಈ ಉಪಾಧ್ಯಾಯರು "ಅದಕ್ಕೆ ಒಂದು ಲಕ್ಷ ಗ್ರಂಥಗಳಷ್ಟು ಅರ್ಥ ಎಂದು ಹೇಳಬಹುದೆ ? ಅದಕ್ಕಾಗಿ ನಾನು ಹೊಡೆದದ್ದು ನಿಜ!" ಎಂದ.

ಕುಮಾರನನ್ನು ತೀವ್ರಾಧಿಕಾರಿಯೆಂದು ಮನಗಂಡ ಶಿವ ಮತ್ತು ಬ್ರಹ್ಮರು "ಅವನಿಗೆ ಶಿಕ್ಷಣದ ಅಗತ್ಯವಿಲ್ಲ. ಅವನು ಜ್ಞಾನಸ್ವರೂಪ" ಎಂದು ನಿರ್ಧರಿಸಿದರು.

---

* ಗ್ರಂಥವೆಂದರೆ ೩೨ ಅಕ್ಷರಗಳ ಒಂದು ಶ್ಲೋಕ

ಪ್ರಕೃತ ಶ್ರೀಪತಿಗೆ ಉಪನಯನ ಮಾಡುವ ವಿಷಯದಲ್ಲಿ ಶಾಸ್ತ್ರದ ಸಾಮಾನ್ಯ ವಿಧಿ ಅನ್ವಯವಾದೀತೆ?" ಎಂದ. ದೇಶಿಕರ ಶಾಸ್ತ್ರಪ್ರೌಢಿಮೆಗೆ ತಲೆದೂಗಿದರು ಆರಾಧ್ಯರು.

"ಭಾವ, ನನಗೆ ಇಷ್ಟು ಶಾಸ್ತ್ರಪರಿಜ್ಞಾನವಿದ್ದಿದ್ದರೆ ನಾನೇಕೆ ಇಲ್ಲಿಗೆ ಬರುತ್ತಿದ್ದೆ ? 'ತಲೆಗೆಲ್ಲ ಒಂದೇ ಮಂತ್ರ'ವೆಂಬಂತೆ ನಾನು ಸಾಮಾನ್ಯ ವಿಧಿಯನ್ನೇ ನಂಬಿಕೊಂಡು ಶ್ರೀಪತಿಗೆ ಐದನೇ ವರ್ಷಕ್ಕೆ ಉಪನಯನ ಮಾಡುವಂತಿಲ್ಲವಲ್ಲಾ ಎಂದು ಒದ್ದಾಡುತ್ತಿದ್ದೇನೆ" ಎಂದು ಅಂಗಲಾಚಿಕೊಂಡರು ಆರಾಧ್ಯರು.

ಮುಂದುವರಿದು ದೇಶಿಕರು ಹೇಳಿದರು — "ಈ ವಿಷಯದಲ್ಲಿ ಮತ್ತೊಂದು ಉದಾಹರಣೆಯನ್ನು ನಿನಗೆ ಪರಿಚಯ ಮಾಡಿಕೊಟ್ಟಿರುತ್ತೇನೆ. ಸಂದರ್ಭಾನುಸಾರ ನಿನಗೆ ಬೇಕಾಗುತ್ತೆ ಕೇಳು."

"ಹೇಳಿ ಭಾವ, ಸಾವಧಾನವಾಗಿ ಕೇಳುತ್ತೇನೆ. ಏಕೆಂದರೆ ನನಗೆ ಈ ಜನ್ಮದಲ್ಲಿ ಇಂಥ ಅವಕಾಶ ಎಂದಿಗಾದರೂ ದೊರೆತೀತೆ ?" ಎಂದು ಸಮಾಧಾನಚಿತ್ತರಾಗಿ ಕುಳಿತರು ಆರಾಧ್ಯರು,

"ಪಿಪೀಲಿಕಾ ವಿಹಂಗಮು"ಎಂಬ ಒಂದು ನ್ಯಾಯವಿದೆ! "ಪಿಪೀಲಿಕಾಃ" ಎಂದರೆ ಇರುವೆಗಳು. "ವಿಹಂಗಮು" ಎಂದರೆ ಹಕ್ಕಿ.

ಒಂದು ಮರದ ತುದಿಯಲ್ಲಿ ಹದವಾಗಿ ಮಾಗಿದ ಮಧುರವಾದ ಹಣ್ಣೊಂದಿದೆ ಎಂದು ಭಾವಿಸೋಣ ! ಅದನ್ನು ಸವಿಯಲು ಇರುವೆಗಳು ಮತ್ತು ಹಕ್ಕಿಗಳೂ ಆಸೆ ಪಡುತ್ತವೆ. ಇರುವೆಗಳಿಗೆ ದೈವದತ್ತವಾದ ಒಂದು ವರವಿದೆ. ಅವು ಮರದ ಬುಡವನ್ನು ಮೂಸಿ, ಆ ಹಣ್ಣು ಯಾವ ಕೊಂಬೆಯಲ್ಲಿದೆ ಎಂದು ಗುರ್ತಿಸಬಲ್ಲವು. ಹಾಗೆ ಗುರ್ತಿಸಿದ ಇರುವೆಗಳು ಸಾಲುಗಟ್ಟಿ ಮರವನ್ನೇರುತ್ತವೆ. ಹತ್ತುವಾಗ ಗಾಳಿ–ಮಳೆ ಮುಂತಾದ ಅಪಘಾತಗಳಿಗೆ ಸಿಕ್ಕಿ ಕೆಲವು ಕೆಳಕ್ಕೆ ಬೀಳುತ್ತವೆ. ಆದರೂ ಅವು ಮತ್ತೆ ಮತ್ತೆ ಮರ ಹತ್ತಿ ಹಣ್ಣನ್ನು ಸವಿಯುತ್ತವೆ. ಅದರಂತೆ ಹಕ್ಕಿಗಳಿಗೆ ಇರುವ ದೈವದತ್ತವಾದ ವರ ಸೂಕ್ಷ್ಮದೃಷ್ಟಿ. ತಾನು ಆಕಾಶದಲ್ಲಿ ಎಷ್ಟೇ ದೂರದಲ್ಲಿ ಹಾರುತ್ತಿದ್ದರೂ ಅದು ಆ ಹಣ್ಣನ್ನು ಗುರ್ತಿಸಿ ಅಲ್ಲಿಗೆ ಹಾರಿ

ಬಂದು ತುದಿಗೊಂಬೆಯ ಮೇಲೆ ಕುಳಿತು ಹಣ್ಣಿನ ರಸ ಹೀರುತ್ತದೆ. ಇದೇ "ಪಿಪೀಲಿಕಾ ವಿಹಂಗಮ ನ್ಯಾಯ." ಅದರಂತೆ ಇಲ್ಲಿ ಸಾಮಾನ್ಯರು ಪ್ರಯತ್ನಪಟ್ಟು ಇರುವೆಯ ಸಾಲಿನಂತೆ ಕ್ರಮವಾಗಿ ತರಗತಿಗಳನ್ನು ದಾಟಿ ವಿದ್ಯೆಯ ಕಡೆಯ ಹಂತವನ್ನೇರಿ, ವಿದ್ವಾಂಸರೆನಿಸುತ್ತಾರೆ. ಆದರೆ ಶ್ರೀಪತಿಯಂತಹವರು ವಿಹಂಗಮದಂತೆ ಒಮ್ಮಿಂದೊಮ್ಮೆಗೇ ಉನ್ನತೋನ್ನತ ಪರೀಕ್ಷೆಗಳಿಗೆ ಕುಳಿತು, ಉತ್ತಮ ದರ್ಜೆಯಲ್ಲಿ ಉತ್ತೀರ್ಣರಾಗಿ ಪ್ರಕಾಂಡ ಪಂಡಿತರೆನಿಸುತ್ತಾರೆ. ಇಂಥವರ ಗ್ರಹಣಶಕ್ತಿ ತೀವ್ರತಮವಾದದ್ದು. ಇಂಥವರಲ್ಲಿಯೂ 'ಏಕಸಂಧಿಗ್ರಾಹಿ', 'ದ್ವಿಸಂಧಿಗ್ರಾಹಿ' ಮತ್ತು 'ತ್ರಿಸಂಧಿಗ್ರಾಹಿ' ಎಂಬ ಪ್ರಭೇದಗಳಿವೆ.

"'ಏಕಸಂಧಿಗ್ರಾಹಿ' ಎಂದರೇನು ?"

"ಇವನಿಗೆ ಗುರು ಪಾಠವನ್ನು ಒಮ್ಮೆ ಹೇಳಿದರೆ ಸಾಕು. ಅವನು ಇತರರಂತೆ ಅದನ್ನು ಕಂಠಪಾಠ ಮಾಡಿ ಅರಗಿಸಿಕೊಳ್ಳುವ ಅಗತ್ಯವಿಲ್ಲ. ಅವನ ಪ್ರಜ್ಞಾಶಕ್ತಿ ಮತ್ತು ಸ್ಮರಣಶಕ್ತಿಗಳು ಉಜ್ವಲವಾಗಿರುವುದರಿಂದ ಎಂಥ ಕಠಿಣ ವಿಷಯವನ್ನಾದರೂ ಅವನು ಗ್ರಹಿಸಿ ನೆನಪಿಡುತ್ತಾನೆ."

"ಭಾವ, ಇಲ್ಲಿ ನನ್ನದೊಂದು ಸಂದೇಹ!"

"ಏನು ಹೇಳು ?"

"ಹಾಗೆ ಒಂದು ಸಲ ಕೇಳಿದರೆ ಅದನ್ನು ಗ್ರಹಿಸಬಲ್ಲವರು ಯಾರಾದರೂ ಇದ್ದಾರೆಯೆ?"

"ನಿಸ್ಸಂದೇಹವಾಗಿ, ಆ ಬಗ್ಗೆ ನಿನಗೆ ಸಂದೇಹ ಬೇಡ ! ಈ ವಿಷಯದಲ್ಲಿ ನಡೆದ ಅನೇಕ ಪ್ರಸಂಗಗಳಿವೆ. ಹಿಂದೆ ಒಬ್ಬ ರಾಜನಿದ್ದ. ಆ ರಾಜ ಪಂಡಿತರನ್ನು ಕವಿಗಳನ್ನು ಕಂಡರೆ ತುಂಬಾ ಅಭಿಮಾನ. ಹೊಸ ಹೊಸ ಕಾವ್ಯಗಳನ್ನು ತಂದು ಓದಿದರೆ ಅವರಿಗೆ ಮುಕ್ತಹಸ್ತದಿಂದ ಹೊನ್ನು ಕೊಡುತ್ತಿದ್ದ. ಇದನ್ನು ಕಂಡ ಪಂಡಿತರು ಅವನಿಗೆ "ಅಕ್ಷರಕ್ಕೆ ಲಕ್ಷ ಹೊನ್ನು ಕೊಡುವ ಪ್ರಭು! ಎಂದು ಕರೆಯುತ್ತಿದ್ದರು."

ದಿನ ದಿನವೂ ಪಂಡಿತರು ಬಂದು ರಾಜನ ಆಸ್ಥಾನದಲ್ಲಿ ತಮ್ಮ ಕೃತಿಗಳನ್ನು ಓದಿ ಪುಷ್ಕಳ ಹೊನ್ನು ಪಡೆಯುತ್ತಿದ್ದರು. ಇದರಿಂದ

ದಿನದಿನಕ್ಕೆ ರಾಜನ ಬೊಕ್ಕಸ ಬರಿದಾಗುತ್ತಿತ್ತು. ಇದನ್ನು ಕಂಡ ಮುಖ್ಯ ಮಂತ್ರಿ ಅದನ್ನು ತಡೆಯಲು ಒಂದು ಉಪಾಯ ಹುಡುಕಿದ. ರಾಜಾಸ್ಥಾನಕ್ಕೆ ಬರುವ ಕವಿಗಳಿಗೆ ಒಂದು ನಿರ್ಬಂಧ ಹಾಕಿದ. ಹಿಂದೆ ಯಾರೂ ಬರೆಯದಿದ್ದ ನೂತನ ಕೃತಿಗೆ ಮಾತ್ರ ಹೊನ್ನು ಕೊಡುವುದಾಗಿ ಪ್ರಕಟಿಸಿದ. ಕವಿಗಳು ರಾಜನ ಆಸ್ಥಾನಕ್ಕೆ ಬರುವ ಹಾದಿಯನ್ನು ಬೇರ್ಪಡಿಸಿದ. ಆ ಹಾದಿಯ ಮೂರು ಬಾಗಿಲುಗಳಲ್ಲಿ ಪ್ರತಿಭಾಶಾಲಿಗಳಾದ ಮೂವರು ಪಂಡಿತರನ್ನು ಕೂರಿಸಿದ. ರಾಜನ ಆಸ್ಥಾನಕ್ಕೆ ಬರುವ ಪಂಡಿತ ಮೊದಲ ಬಾಗಿಲಿಗೆ ಬಂದಾಗ ಅಲ್ಲಿರುವ ಏಕಸಂಧಿಗ್ರಾಹಿ ಪಂಡಿತ ಅವನನ್ನು ತಡೆದು 'ನೀವು ಬರೆದಿರುವ ಆ ನೂತನ ಕಾವ್ಯ ಯಾವುದು ಓದಿ' ಎಂದು ಪ್ರಶ್ನಿಸುವ. ಬಂದ ಪಂಡಿತ ತನ್ನ ಕಾವ್ಯವನ್ನು ಅವನೆದುರಿಗೆ ಪಠಿಸಿದಾಗ, ಏಕಸಂಧಿಗ್ರಾಹಿಯಾದ ಅವನು 'ಇದೇನೂ ಹೊಸದಲ್ಲ. ಇದು ನನಗೆ ಮೊದಲೇ ಗೊತ್ತಿದೆ' ಎಂದು ಆ ಕಾವ್ಯವನ್ನು ತಾನೂ ಮತ್ತೊಮ್ಮೆ ಹೇಳಿಬಿಡುತ್ತಿದ್ದ. ಅದನ್ನು ಕೇಳಿದ ನೂತನ ಪಂಡಿತ ಖಿನ್ನನಾಗಿ ಹಿಂದಿರುಗುತ್ತಿದ್ದ. ಆದರೂ ಅದರಲ್ಲಿ ಕೆಲವರು ಧೃತಿಗೆಡದೆ ಎರಡನೇ ಬಾಗಿಲಿಗೆ ಹೋದಾಗ, ಅಲ್ಲಿರುವ ದ್ವಿಸಂಧಿಗ್ರಾಹಿ, ಮೊದಲ ಬಾಗಿಲಲ್ಲಿ ಇಬ್ಬರು ಹೇಳಿದ್ದನ್ನು ಗ್ರಹಿಸಿ, 'ಈ ಕಾವ್ಯ ನನಗೆ ಚೆನ್ನಾಗಿ ಗೊತ್ತು' ಎಂದು ಅದನ್ನು ಹೇಳಿಬಿಡುತ್ತಿದ್ದ. ಅದನ್ನು ಕೇಳಿಯೂ ಹೆದರದೆ ಕೆಲವರು ಮೂರನೇ ಬಾಗಿಲಿಗೆ ಹೋದ ಒಡನೆಯೇ ಅಲ್ಲಿರುವ ತ್ರಿಸಂಧಿಗ್ರಾಹಿ 'ಅದು ತನಗೆ ಬಹು ಹಿಂದೆಯೇ ತಿಳಿದಿತ್ತು' ಎಂದು ಆ ಕಾವ್ಯವನ್ನು ಉದಾಹರಿಸಿ ಬಂದವನನ್ನು ಹಿಂದಕ್ಕೆ ಅಟ್ಟುತ್ತಿದ್ದ.

"ಹಾಗಾದರೆ, ಅಲ್ಲಿಂದ ಮುಂದೆ ಯಾರೂ ರಾಜನ ಮುಂದೆ ಬರದಂತೆ ಆಗಲಿಲ್ಲವೆ ?"

"ಬರದಂತೆ ಆಗಲಿಲ್ಲ ಅಲ್ಲ. ಆದರೆ ಬರುವವರ ಸಂಖ್ಯೆ ವಿರಳವಾಯಿತು. ಏಕೆಂದರೆ ಈ ಮೂವರನ್ನು ನಿಗ್ರಹಿಸುವ ಸಹಜ ಪ್ರತಿಭಾಸಂಪನ್ನರಾದ ಕವಿಗಳು ತಮ್ಮಲ್ಲಿ ನವನವೋನ್ಮೇಷಶಾಲಿ (ಹೊಸಹೊಸದಾಗಿ ಹೊಳೆಯುವ) ಯಾದ ಬುದ್ಧಿವೈಭವದಿಂದ ಒಬ್ಬೊಬ್ಬನಲ್ಲಿಗೆ ಬಂದಾಗ ಒಂದೊಂದು

ವಿನೂತನ ಕೃತಿಯನ್ನೇ ಓದಿ ಆ ಏಕ ಸಂಧಿಗ್ರಾಹಿ ಮುಂತಾದವರನ್ನು ನಿಗ್ರಹಿಸಿ ರಾಜಾಸ್ಥಾನವನ್ನು ಸೇರಿ, ರಾಜನಿಂದ ಸನ್ಮಾನಿತರಾಗುತ್ತಿದ್ದರು. ಆದ್ದರಿಂದ ನಿನ್ನ ಮಗ ಇಂಥ ಅಪೂರ್ವ ಪಂಡಿತರಲ್ಲಿ ಅಗ್ರಸ್ಥಾನ ಪಡೆಯುವುದರಲ್ಲಿ ಸಂದೇಹವಿಲ್ಲ" ಎಂದು ಶ್ರೀಪತಿಯ ಉಜ್ವಲ ಪ್ರತಿಭೆ ಮತ್ತು ಭವಿಷ್ಯಗಳನ್ನು ಪ್ರಶಂಸಿದರು.

ಆರಾಧ್ಯರು ಭಾವನವರಿಗೆ ಮತ್ತೆ ವಂದಿಸಿ, "ಭಾವ, ನನಗಿರುವ ಒಂದೆರಡು ಸಂದೇಹಗಳನ್ನು ತಮ್ಮಲ್ಲಿ ನಿವೇದಿಸಬೇಕೆಂದಿದ್ದೇನೆ. ದಯ ಮಾಡಿ ನನಗೆ ಅವನ್ನು ತಿಳಿಯಹೇಳಬೇಕು" ಎಂದರು ವಿನಯದಿಂದ.

ದೇಶಿಕರು ಶ್ರೀಪತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಮಾಡಿದ ಉಪದೇಶವನ್ನು ಕೇಳಿದ ಮಣಿಕರ್ಣಿಕೆ ಮತ್ತು ಶಂಭುಭಟ್ಟರು ತುಂಬಾ ಸಂತೋಷಪಟ್ಟರು. ಆ ವೇಳೆಗೆ ಮುದ್ದುಲಿಂಗೇಶ್ವರನ ಅರ್ಚನೆಗೆ ಬೆಟ್ಟಕ್ಕೆ ಹೋಗಿದ್ದ ವಿಶ್ವಾರಾಧ್ಯ ಶ್ರೀಪತಿಯೊಡನೆ ಹಿಂದಿರುಗಿದ. ಮಣಿಕರ್ಣಿಕೆ–

"ಈಗ ಪ್ರಸಾದಕ್ಕೆ ವೇಳೆಯಾಗಿದೆ. ಮರಿ, ಬೆಟ್ಟ ಹತ್ತಿ ಇಳಿದು ಹಸಿದು ಬಳಲಿದ್ದಾನೆ. ಎಲ್ಲರೂ ಪ್ರಸಾದ ಸ್ವೀಕರಿಸಿರಿ. ಮತ್ತೆ ಬೇಕಾದರೆ ಸಂಜೆ ಈ ಪ್ರವಚನ ಮುಂದುವರಿಯಲಿ. ನಾನೂ ಕೆಲಸ ಮುಗಿಸಿ ನಿಮ್ಮ ಜೊತೆ ಸೇರಿಕೊಳ್ಳುತ್ತೇನೆ. ಗಾಳಿ ಬಂದಾಗ ತೂರಿಕೊಳ್ಳುವುದು ಒಳಿತಲ್ಲವೆ ?" ಎಂದಳು.

ಮಧ್ಯಾಹ್ನದ ಪ್ರಸಾದವು ಪ್ರಾಯಃ ಬೀಗರೂಟವೇ ಆಗಿತ್ತು. ಅದು ಬಗೆಬಗೆಯ ಸಿಹಿ-ಖಾರ ಮುಂತಾದ ಲೇಹ್ಯ, ಚೋಹ್ಯ ಮತ್ತು ಉಪದಂಶನ ಪ್ರಕಾರಗಳಿಂದ ಕೂಡಿದ ಷಡ್ ರುಚಿಗಳ ಸಮಾರಾಧನೆಯಾಗಿತ್ತು.

ಮಧ್ಯಾಹ್ನದ ಪ್ರವಚನ ಮತ್ತೆ ಹಗಲು ನಾಲ್ಕನೆಯ ಝಾವ ಆರಂಭವಾಯಿತು. ದೇಶಿಕರು ಮಧ್ಯಾಹ್ನದ ವಿಶ್ರಾಂತಿ ಮುಗಿಸಿ, ಮುಖ ತೊಳೆದು, ಭಸ್ಮಧಾರಣ ಮಾಡಿಕೊಂಡು, ಧೋತ್ರ ಹೊದೆದು ಮನೆಯ ಮುಂದಿನ ಹಜಾರದಲ್ಲಿ ಬಂದು ಕುಳಿತರು. ಆರಾಧ್ಯರೂ ಶುಚಿಸ್ಮಿತರಾಗಿ ಭಾವನವರಿಗೆ ವಂದಿಸಿ, ಅವರ ಎದುರುಗಡೆಯ ಆಸನದಲ್ಲಿ ಕುಳಿತರು.

ಅವರ ಜೊತೆ ಶಂಭು, ಶ್ರೀಪತಿ ಮತ್ತು ವಿಶ್ವಾರಾಧ್ಯರು ಹಾಜರಾದರು. ಮಣಿಕರ್ಣಿಕೆ ಸಿದ್ಧಪಡಿಸಿದ ಹುರಿಗಾಳು, ಕೊತ್ತುಂಬರಿ ಕಾಫಿ ಮತ್ತು ಸೊಗದೆಬೇರಿನ ಷರಬತ್ತು ಮುಂತಾದುವನ್ನು ವಿಶ್ವ ಒಳಗಿನಿಂದ ತಂದು ಎಲ್ಲರಿಗೂ ಹಂಚಿದ.

ಉಪಾಹಾರದ ತರುವಾಯ ದೇಶಿಕರು ತಾವೇ ಮಾತು ಆರಂಭಿಸಿದರು.

"ಗುರುಲಿಂಗು, ಏನೋ ಕೆಲವು ಸಂದೇಹಗಳನ್ನು ಪರಿಹರಿಸಿಕೊಳ್ಳಲು ಇಲ್ಲಿಗೆ ಬಂದೆ ಎಂದು ಬೆಳಿಗ್ಗೆ ಹೇಳಿದೆಯಲ್ಲವೆ ? ಅವನ್ನು ಬಿಡಿಸಿ ಹೇಳು. ಸಾಧ್ಯವಾದರೆ ಅವಕ್ಕೆ ಪರಿಹಾರವನ್ನು ಯೋಚಿಸೋಣ" ಎಂದರು ಲೋಕಾಭಿರಾಮವಾಗಿ ಅಳಿಯಂದಿರ ಮುಖ ನೋಡಿ.

ಈಗ ಎಲ್ಲರ ದೃಷ್ಟಿ ಆರಾಧ್ಯರ ಮೇಲೆ ಬಿತ್ತು.

"ಭಾವನವರಲ್ಲಿ ಮುಚ್ಚುಮರೆ ಏನಿದೆ ? ಈಗ ನನ್ನ ಸಂದೇಹ ಇಷ್ಟು. ನಾವು ಶೈವ ಬ್ರಾಹ್ಮಣರು. ಆರಾಧ್ಯರೆಂದೂ ಹೇಳಿಕೊಳ್ಳುತ್ತೇವೆ. ವಾಡಿಕೆಯಲ್ಲಿ ನಮ್ಮನ್ನು ಆರಾಧ್ಯ-ಬ್ರಾಹ್ಮಣರೆಂದೂ ಕರೆಯಲಾಗುತ್ತದೆ. ಇತರ ಬ್ರಾಹ್ಮಣರಂತೆ ಉಪನಯನದಲ್ಲಿ ನಮಗೆ ಯಜ್ಞೋಪವೀತ ಧಾರಣ ಮತ್ತು ಗಾಯತ್ರೀ ಮಂತ್ರೋಪದೇಶವಾಗುತ್ತದೆ. ಅನಂತರ ವೀರಶೈವರಂತೆ ಶಿವದೀಕ್ಷೆ ಪಡೆದು ಇಷ್ಟಲಿಂಗವನ್ನೂ ಧರಿಸಿಕೊಳ್ಳುತ್ತಿದ್ದೇವೆ. ಈ ವಿಚಿತ್ರ ಪರಿಸ್ಥಿತಿಗೆ ಕಾರಣವೇನು ಎಂಬುದೇ ನನ್ನ ಮುಖ್ಯ ಸಂದೇಹ!"

"ಅನೇಕ ಸಭೆ ಸಮಾರಂಭಗಳಲ್ಲಿ ಈ ಬಗ್ಗೆ ವಿಚಾರ ಸಂಕಿರಣಗಳು ನಡೆದಿದ್ದರೂ ನನ್ನ ಸಂದೇಹಕ್ಕೆ ತಕ್ಕ ಸಮಾಧಾನ ಸಿಕ್ಕಿಲ್ಲ. ಮತ್ತೊಂದು ದೃಷ್ಟಿಯಿಂದ ನಾವು ಇತ್ತ ಪೂರ್ತಿ ಬ್ರಾಹ್ಮಣರೂ ಅಲ್ಲ. ಅತ್ತ ಪೂರ್ತಿ ವೀರಶೈವರೂ ಅಲ್ಲದ ಈ ತ್ರಿಶಂಕು ಪರಿಸ್ಥಿತಿ ನಮಗೆ ಏಕೆ ಬಂತು ಎಂಬುದೇ ನನ್ನ ಸಂದೇಹ!" ಎಂಬ ಮುಖ್ಯ ಸಮಸ್ಯೆಯನ್ನು ಭಾವನವರ ಮುಂದಿಟ್ಟು ಆರಾಧ್ಯರು ಮೌನ ಧರಿಸಿದರು.

ದೇಶಿಕರು ನಸುನಕ್ಕು ಹೇಳಿದರು—

"ಗುರು, ನಿನ್ನ ಪ್ರಶ್ನೆ ಸಾಧುವಾದದ್ದೆ. ಅದರಲ್ಲಿ ಯಾವ ಸಂದೇಹವೂ ಇಲ್ಲ. ಎರಡನೆಯದಾಗಿ ಈ ದಿಸೆಯಲ್ಲಿ ನಿನ್ನೊಂದಿಗೆ ಮಾತನಾಡುವ ಅವಕಾಶ ಹಿಂದೆ ಎಂದೂ ದೊರೆತಿದ್ದಿಲ್ಲ ನನಗೆ. ಈಗ ಕೂಲಂಕಷವಾಗಿ ವಿವರಿಸುತ್ತೇನೆ"

—ಎಂದು ಪೀಠಿಕೆ ಹಾಕಿಕೊಂಡ ದೇಶಿಕರು

"ನೀನು ಹೇಳಿದಂತೆ ನಾವು ಬ್ರಾಹ್ಮಣರೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ನಮ್ಮ ಗೋತ್ರ ಪುರುಷರಾದ ಕೌಶಿಕ, ಕಾಶ್ಯಪ, ಭಾರದ್ವಾಜ, ಅತ್ರಿ ಮತ್ತು ಗೌತಮರು ಸಾಮಾನ್ಯರಲ್ಲ. ಅವರು ಕ್ರಮವಾಗಿ ಪರಶಿವನ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನ ಎಂಬ ಪಂಚಮುಖಗಳಿಂದ ನೇರವಾಗಿ ಶಿವದೀಕ್ಷೆ ಪಡೆದು, ಶೈವ ಕ್ಷೇತ್ರಗಳಲ್ಲಿರುವ ಜ್ಯೋತಿರ್ಲಿಂಗ, ಸ್ಥಾವರಲಿಂಗ ಮುಂತಾದವುಗಳ ಅರ್ಚನೆಯನ್ನು ವಿಧ್ಯುಕ್ತವಾಗಿ ಮಾಡುವ ಅಧಿಕಾರ ಪಡೆದವರು."

"ಭಾವ, ಇಲ್ಲಿ ಒಂದು ಪ್ರಶ್ನೆಯುಂಟು. ಅದನ್ನು ಈಗಲೇ ಹೇಳಿಬಿಡುತ್ತೇನೆ."

"ಆಗಬಹುದು. ಅದೇನು ಹೇಳು."

"ಏನೆಂದರೆ, ವೇದಕಾಲದಲ್ಲಿ 'ಋಷಿ' ಎಂದರೆ ಮಂತ್ರದ್ರಷ್ಟಾರರು. ಎಂದರೆ ಮಂತ್ರಗಳನ್ನು ಸಾಕ್ಷಾತ್ಕಾರ ಮಾಡಿಕೊಂಡವರು. ಅಂಥ ಋಷಿಗಳು ಅನೇಕರಿದ್ದಾರೆ. ಆದರೆ ಅವರಲ್ಲಿ ಈ ಐವರು ಮಾತ್ರ ಪರಶಿವನ ಪಂಚಮುಖಗಳಿಂದ ದೀಕ್ಷೆ ಪಡೆಯುವುದಕ್ಕೆ ಕಾರಣವೇನು ಎಂದು ಕೇಳಬಹುದಲ್ಲವೆ ?"

"ಆಗತ್ಯವಾಗಿ ಕೇಳಬಹುದು. ಆದರೆ ಇಲ್ಲಿ ಕಾರಣವನ್ನು ಪ್ರಶ್ನಿಸುವುದಕ್ಕಿಂತ ಆಗ ನಡೆದದ್ದೇನು ಎಂದು ತಿಳಿಯುವುದು ಒಳ್ಳೇದು."

ಪರಮೇಶ್ವರನು ಸಕಲ, ಸಕಲನಿಷ್ಕಲ ಮತ್ತು ನಿಷ್ಕಲ ಎಂಬ ಮೂರು ಹಂತಗಳಲ್ಲಿ ಅಧಿಕಾರಿ ಭೇದದಿಂದ ಭಕ್ತರಿಗೆ ಗೋಚರವಾಗುತ್ತಾನೆ ಎಂಬುದು ವೇದಾಗಮ ಸಿದ್ಧಾಂತ. ಇಲ್ಲಿ ಶಾಸ್ತ್ರಕಾರರು ಈ

ವಿಷಯವನ್ನು ಸುಲಭವಾಗಿ ಗ್ರಹಿಸಲು "ಘೃತ-ಕಾಠಿನ್ಯ ನ್ಯಾಯ"ವನ್ನು ಉದಾಹರಿಸಿ ವಿಷಯವನ್ನು ಸ್ಪಷ್ಟಪಡಿಸುತ್ತಾರೆ.

'ಘೃತ' ಎಂದರೆ ತುಪ್ಪ. ತುಪ್ಪವು ಬಿಸಿಯಾದಾಗ ತಿಳಿಯಾಗಿದ್ದು, ಅನಂತರ ಹೆಪ್ಪುಗಟ್ಟಿ ಗಟ್ಟಿಗೊಳ್ಳುತ್ತದೆ. ಅದರಂತೆ ನಿಷ್ಕಲ (ನಿರಾಕಾರ) ನಾದ ಪರಮೇಶ್ವರನು ತಿಳಿದುಪ್ಪ (ಕರಗಿದ ತುಪ್ಪ)ದಂತೆ ಎಲ್ಲೆಲ್ಲಿಯೂ ಎಂದರೆ ಅಣು-ರೇಣು-ತೃಣ-ಕಾಷ್ಠಾದಿಗಳಲ್ಲೆಲ್ಲ ವ್ಯಾಪಿಸಿದ್ದಾನೆ. ನಿರಾಕಾರ ನಾದ ಅವನನ್ನು ಎಲ್ಲರೂ ಅರಿಯಲಾಗುವುದಿಲ್ಲ. ಅವನು ಭಕ್ತರನ್ನು ಅನುಗ್ರಹಿಸಲು ತುಪ್ಪವು ಗಟ್ಟಿಗೊಳ್ಳುವಂತೆ ಮೂರ್ತಿಗೊಂಡು, ಭಕ್ತ ರಿಂದ ಪೂಜೆಗೊಂಡು ಅವರನ್ನು ಅನುಗ್ರಹಿಸುತ್ತಾನೆ."

"ಓಹೋ, ಹಾಗಾದರೆ ನಾವು ಆರಾಧಿಸುವ ಶಿವಲಿಂಗ ಮತ್ತು ಆ ಚಂದ್ರಶೇಖರಾದಿ ಶಿವನ ಲೀಲಾಮೂರ್ತಿಗಳು ಶಿವನ ಸಕಲ (ಸಗುಣ) ರೂಪು ಎಂದಂತಾಯಿತು!"

"ಅಹುದು, ಚೆನ್ನಾಗಿ ಗ್ರಹಿಸಿದ್ದೀಯೆ. ನಿರಾಕಾರನಾದ ದೇವರು ಭಕ್ತರ ಪ್ರಾರ್ಥನೆಯಂತೆ ಸಾಕಾರನಾಗುತ್ತಾನೆ. ಆಗಮಗಳಲ್ಲಿ ವರ್ಣಿಸಿ ರುವ ಆಯಾ ದೇವತೆಯ ಧ್ಯಾನ ಶ್ಲೋಕಗಳ ಆಧಾರದ ಮೇಲೆ ಶಿಲ್ಪಿಗಳು ನಿರ್ಮಿಸಿದ ಮೂರ್ತಿಗಳಲ್ಲಿ, ಅದೇ ಆಗಮೋಕ್ತ ವಿಧಿಯಂತೆ ಕಲಾ ವಾಹನಾದಿಗಳಿಂದ ಪ್ರತಿಷ್ಠಿಸಲ್ಪಡುತ್ತಾನೆ. ಅದಕ್ಕೆ "ಅರ್ಚಾವತಾರ" ಎಂದು ಹೆಸರು. ಹಾಗೆ ಅವನು ಅರ್ಚಾವತಾರಿ ಎಂದೆನಿಸಿದಾಗ ಅವನ ಅರ್ಚನೆಗೆ ಅರ್ಹತೆ ಪಡೆಯಲು ಈ ದೀಕ್ಷೆ ವಿಹಿತವಾಗಿದೆ. ಈ ದೀಕ್ಷೆ ಯನ್ನು ಪರಶಿವನ ಪಂಚಮುಖಗಳಿಂದ ಮೊದಲು ಪಡೆದವರು ಕೌಶಿಕಾದಿ ಋಷಿಗಳು. ಅವರ ವಂಶದಲ್ಲಿ ಬಂದವರೇ ಶಿವದ್ವಿಜರೆನಿಸಿದ ಅಸ್ಮದಾದಿ ಗಳು. ನಾವು ಶೈವ ದೇವಾಲಯಗಳಲ್ಲಿ ಅರ್ಚನಾದಿಗಳನ್ನು ನೆರವೇರಿಸು ತ್ತಿದ್ದೇವೆ."

"ಅದು ಸರಿ, ಈ ಶಿವದ್ವಿಜರಲ್ಲಿ ಆಗಮ ಪ್ರಭೇದಗಳುಂಟಾಗುವು ದಕ್ಕೆ ಕಾರಣವೇನು ?"

"ಶೈವ ಆಗಮಗಳಿರುವುದು ಒಟ್ಟು ಇಪ್ಪತ್ತೆಂಟು. ಅವುಗಳಲ್ಲಿ ಶೈವ ಮತ್ತು ರುದ್ರ ಎಂಬ ಪ್ರಭೇದಗಳಿವೆ. ಪ್ರತಿಯೊಂದು ಆಗಮದಲ್ಲಿಯೂ 'ಕ್ರಿಯಾ'–'ಚರ್ಯಾ'-'ಯೋಗ' ಮತ್ತು 'ವಿದ್ಯಾ' (ಜ್ಞಾನ) ಎಂಬ ನಾಲ್ಕು ನಾಲ್ಕು ಪಾದಗಳಿವೆ.

ಕ್ರಿಯಾಪಾದದಲ್ಲಿ ದೇವಾಲಯಗಳ ರಚನೆ, ಮೂರ್ತಿಶಿಲ್ಪಕ್ಕೆ ಸಂಬಂಧಿಸಿದ ಹಾಗೂ ವಾಸ್ತುಶಿಲ್ಪಕ್ಕೆ ಸಂಬಂಧಿಸಿದ ವಿಷಯಗಳಿವೆ.

ಚರ್ಯಾಪಾಡದಲ್ಲಿ ಆ ಮೂರ್ತಿಗಳಲ್ಲಿ ಆಯಾ ದೇವತೆಯ ಕಲಾಸ್ಥಾಪನೆ ಮತ್ತು ಆ ಮೂರ್ತಿಗಳನ್ನು ಅರ್ಚಿಸುವ ವಿಧಿ-ವಿಧಾನಗಳಿವೆ. ಇವು ಈ ಆಗಮಗಳ ಪೂರ್ವ ವಿಭಾಗಕ್ಕೆ ಸೇರಿದವುಗಳು. ಶಿವದ್ವಿಜರ ಕರ್ತವ್ಯಗಳು ಈ ಪೂರ್ವಭಾಗಕ್ಕೆ ಮೀಸಲು.

ಇನ್ನು ಯೋಗ ಮತ್ತು ವಿದ್ಯಾ ಪಾದಗಳು. ಆಗಮ ಸಿದ್ಧಾಂತ ಮತ್ತು ಅದರ ಸಾಧನೆಗೆ ಸಂಬಂಧಿಸಿವೆ.

ಈ ವಿಧಾನಗಳು ಆಯಾ ಆಗಮಗಳಲ್ಲಿ ಬೇರೆ ಬೇರೆ ಇರುವುದರಿಂದ ಶಿವದ್ವಿಜರಲ್ಲಿಯೂ ಆಗಮ ಪ್ರಭೇದಗಳು ಉಂಟಾಗಿವೆ."

"ಇಲ್ಲಿ ಮತ್ತೊಂದು ಸಂದೇಹವು ನನ್ನನ್ನು ಬಾಧಿಸುತ್ತಿದೆ."

"ಅದೇನು ಹೇಳು!"

"ಅದೆಂದರೆ- ಉಪನಯನದಲ್ಲಿ ನಾವು ನಮ್ಮ ತಂದೆಯವರಿಂದ ಗಾಯತ್ರೀ ಮಂತ್ರೋಪದೇಶ ಪಡೆಯುತ್ತೇವೆ. ಅನಂತರ ಶಿವದೀಕ್ಷೆ ಪಡೆದು, ಅದೇ ತಂದೆಯವರಿಂದಲೇ ಲಿಂಗಧಾರಣ ಮತ್ತು ಪಂಚಾಕ್ಷರೀ ಮಂತ್ರೋಪದೇಶವನ್ನು ಸಹ ಪಡೆಯುತ್ತೇವೆ. ಈ ಎರಡರಲ್ಲಿ ಯಾವುದಾದರೂ ಒಂದು ಸಾಕಲ್ಲವೆ? ಎರಡರ ಪ್ರಯೋಜನವೂ ಒಂದೇ ಆಗಿರುವಾಗ ವೃಥಾ ಶ್ರಮವೇಕೆ ?"

"ಗುರುಲಿಂಗು, ಇಲ್ಲಿಯೇ ನಾವು ಎಡವಿರುವುದು ! ಎರಡನೆಯದಾಗಿ ಉಪನಯನದ ಗುರಿ ಬೇರೆ. ಶಿವದೀಕ್ಷೆಯ ಗುರಿ ಬೇರೆ. ಆದ್ದರಿಂದ ಈ ವಿಧಿಗಳು ವ್ಯರ್ಥವಲ್ಲ."

"ಭಾವ, ಇದನ್ನು ವಿವರಿಸಿದಲ್ಲದೆ ನಮಗೆ ತಿಳಿಯುವುದು ಕಷ್ಟ."

"ಮೊದಲನೆಯದಾಗಿ ಉಪನಯನದ ಗುರಿ ಏನು ? ಉಪನಯನ ವಾಗುವುದು ಕರ್ಮಾಧಿಕಾರಸಿದ್ಧಿಗಾಗಿ. ದ್ವಿಜನಲ್ಲದವನಿಗೆ ಕರ್ಮಾಧಿ ಕಾರವಿಲ್ಲ. ಉಪನಯನವಿಲ್ಲದೆ ದ್ವಿಜತ್ವವಾಗಲಿ, ವೇದಾಧಿಕಾರವಾಗಲಿ ಸಿದ್ಧಿಸುವುದಿಲ್ಲ. ಏಕೆಂದರೆ ಕರ್ಮಗಳಲ್ಲಿ ವೇದಮಂತ್ರಗಳ ಬಳಕೆ ವಿಪುಲ ವಾಗಿದೆ. ಆದ್ದರಿಂದಲೇ ಉಪನಯನದ ಅಂಗವಾಗಿ ವೇದದ ತಾಯಿ ಎನಿಸಿರುವ ಗಾಯತ್ರಿಯನ್ನು ಉಪದೇಶಿಸಲಾಗುತ್ತದೆ."

"ಹಾಗಾದರೆ, ಉಪನಯನವು ದ್ವಿಜತ್ವಸಿದ್ಧಿಗೆ ಕಡ್ಡಾಯವೆಂದ ಹಾಗಾಯಿತು. ಅಷ್ಟರಿಂದಲೇ ದೇವತಾರ್ಚನಾದಿ ಕರ್ಮಭಾಗವೆಲ್ಲವೂ ನಿರ್ವಾಹವಾಗುತ್ತಿರುವಾಗ ಈ ಶಿವದೀಕ್ಷೆಯ ಅಗತ್ಯವೇನಿದೆ ?"

—ಎಂದು ಆರಾಧ್ಯರು ಮತ್ತೆ ಬಾಯಿ ಹಾಕಿ ಪ್ರಶ್ನಿಸಿದರು. ದೇಶಿ ಕರು ತಮ್ಮ ಮಾತನ್ನು ಮುಂದುವರಿಸುತ್ತಾ—

"ಅಪ್ಪ, ದೀಕ್ಷೆ ಎರಡು ವಿಧ. ನಮ್ಮಲ್ಲಿ ಬಳಕೆಯಲ್ಲಿರುವ ದೀಕ್ಷೆಗೂ ವೀರಶೈವದಲ್ಲಿ ಏರ್ಪಡುವ ಶಿವದೀಕ್ಷೆಗೂ ತುಂಬಾ ಅಂತರವಿದೆ. ಅವೆರಡಕ್ಕೆ ಅಜ (ಆಡು) ಮತ್ತು ಗಜ (ಆನೆ)ಗಳಿಗೆ ಇರುವಷ್ಟು ವ್ಯತ್ಯಾಸ."

"ಈ ಶಿವದೀಕ್ಷೆ ಶೈವ ಬ್ರಾಹ್ಮಣರಿಗೆ ಗಂಟು ಬಿದ್ದದ್ದು ಯಾವಾಗ ? ಅದನ್ನು ಬಯಸಿದವರು ಯಾರು ?"

"ಶಿವದೀಕ್ಷೆಯ ಹಿರಿಮೆಯನ್ನು ನಿಮ್ಮ ಗಮನಕ್ಕೆ ತರುವ ಮೊದಲು ಅದು ನಮ್ಮಲ್ಲಿ ಯಾವಾಗಿನಿಂದ ಆರಂಭವಾಯಿತು ? ಎಂಬುದನ್ನು ಹೇಳುವ ಒಂದು ಕತೆ ನಮ್ಮಲ್ಲಿ ಪರಂಪರೆಯಿಂದ ಕೇಳಿಬರುತ್ತಿದೆ.

ಇದು ಸುಮಾರು ನೂರಾರು ವರ್ಷಗಳ ಹಿಂದಿನ ಮಾತು. ಆಂಧ್ರ ಕರ್ನಾಟಕ ದೇಶಗಳಾದ್ಯಂತ ಪ್ರಾಯಃ ಹರಡಿರುವ ಆರಾಧ್ಯ ಬ್ರಾಹ್ಮಣ ಶ್ರೇಣಿ ಶಿವದೀಕ್ಷೆಯನ್ನು ಪಡೆಯುವ ಮುಂಚೆ ಅವರು ಕೇವಲ ಶಿವದ್ವಿಜ ರೆನಿಸಿದ್ದರು. ಅವರಿಗೆ 'ಆರಾಧ್ಯ' ಎಂಬ ವಿಶೇಷಣ ಆಗ ಇದ್ದಿಲ್ಲ. ಭಾರತಾದ್ಯಂತ ಇರುವ ಶೈವ ದೇವಾಲಯಗಳಲ್ಲೆಲ್ಲ ಈ ಶಿವದ್ವಿಜರದೇ ಪರಮಾಧಿಕಾರ. ಅಲ್ಲಿ ನಡೆವ ಅರ್ಚನೆ ಮತ್ತು ಆಗಮಿಕ ಕ್ರಿಯಾ

ವ್ಯವಹಾರಕ್ಕೆ ಇವರೇ ಬಾಧ್ಯರು. ಅವರಲ್ಲಿ ಆಂಧ್ರ ಪ್ರಾಂತದ ಶಿವದ್ವಿಜರು ತಮಗೆ ಸಮೀಪದ ಮತ್ತು ತಮ್ಮ ಅರ್ಚನಾಧಿಕಾರಕ್ಕೆ ಸಂಬಂಧಿಸಿದ ಶ್ರೀಶೈಲ ಮಲ್ಲಿಕಾರ್ಜುನ ಜ್ಯೋತಿರ್ಲಿಂಗದ ಸೇವೆಗೆ ವರ್ಷಕ್ಕೊಮ್ಮೆ ಶ್ರೀಶೈಲಕ್ಕೆ ಹೋಗಿ ಬರುವ ಪದ್ಧತಿ ಇತ್ತು.

ಓಮ್ಮೆ ಈ ದ್ವಿಜಶ್ರೇಣಿ ಶ್ರೀಶೈಲಕ್ಕೆ ತೆರಳಿ, ಜ್ಯೋತಿರ್ಲಿಂಗಕ್ಕೆ ತಮ್ಮ ಸೇವೆಯನ್ನು ಸಲ್ಲಿಸಿ, ದೇವಾಲಯದ ಹೊರ ವಲಯದಲ್ಲಿದ್ದ ಜಗದ್ಗುರು ಪೀಠಕ್ಕೂ ಭೇಟಿ ಕೊಟ್ಟಿತು.

ಪೀಠದ ದರ್ಶನಕ್ಕಾಗಿ ಆಗಮಿಸಿದ್ದ ದ್ವಿಜಶ್ರೇಣಿಯನ್ನು ಜಗದ್ಗುರುಗಳು ತುಂಬಾ ಗೌರವದಿಂದ ಬರಮಾಡಿಕೊಂಡು ಆದರಿಸಿದರು. ಇದರಿಂದ ಪ್ರಸನ್ನರಾದ ದ್ವಿಜರಲ್ಲಿ ಕೆಲವರು ಜಗದ್ಗುರುಗಳಲ್ಲಿ ಜಿಜ್ಞಾಸೆ ನಡೆಸಲು ಬಯಸಿದರು. ಆ ಜಿಜ್ಞಾಸೆಯ ವಿಷಯ ಹೀಗಿತ್ತು.

"ಸನ್ನಿಧಿಯಲ್ಲಿ ನಮ್ಮದೊಂದು ಬಿನ್ನಹ. ನಾವು ಹೀಗೆ ಕೇಳುತ್ತಿರುವೆವೆಂದು ತಾವು ಚಿತ್ತದಲ್ಲಿ ಅನ್ಯಥಾ ಭಾವಿಸಬಾರದು."

"ಏನು ಬೇಕಾದರೂ ಕೇಳಿ, ಅಡ್ಡಿಯಿಲ್ಲ. ಆದರೆ ಆ ಬಗೆಗೆ ನಮಗೆ ತಿಳಿದಷ್ಟು ಮಾತ್ರ ಸಮಾಧಾನ ಹೇಳಲಾಗುತ್ತದೆ. ಸಂಕೋಚ ಬೇಡಿ ಹೇಳಿ" ಎಂದರು ಜಗದ್ಗುರುಗಳು ಹಸನ್ಮುಖರಾಗಿ.

"ಬುದ್ಧಿ, ಶಿವದೀಕ್ಷೆಯಲ್ಲಿ ಶಿವಲಿಂಗವನ್ನೇ ಏಕೆ ಧರಿಸಬೇಕು ?"

"ಜಗತ್ತು ಲಿಂಗಸ್ವರೂಪದಲ್ಲಿದೆ. 'ಸರ್ವಂ ಲಿಂಗಮಯಂ ಜಗತ್' ಎಂಬ ಶ್ರುತಿಯಂತೆ ಸೂರ್ಯಾದಿಗ್ರಹಗಳೆಲ್ಲವೂ ಲಿಂಗರೂಪದಲ್ಲಿಯೇ ಇವೆ. ಬ್ರಹ್ಮ, ವಿಷ್ಣು ಮತ್ತು ರುದ್ರಾದಿಗಳಿಗೂ ಮೂಲವಾದದ್ದು ಶಿವಲಿಂಗವೇ! ಕೇನೋಪನಿಷತ್ತಿನ ಕಡೆಯಲ್ಲಿ ದೇವತೆಗಳು ತಮಗೆ ಆದ ಅಪೂರ್ವ ಅಸುರ ವಿಜಯಕ್ಕಾಗಿ ಹೆಮ್ಮೆ ಪಡುತ್ತಿದ್ದರು. ಆಗ ಕಾಣಿಸಿಕೊಂಡ ಯಕ್ಷವು ಜ್ಯೋತಿರ್ಲಿಂಗರೂಪ. ಅದನ್ನು ಪರೀಕ್ಷಿಸಲು ಹೋದ ಅಗ್ನಿ-ವಾಯುಗಳು ಅದನ್ನು ಕದಲಿಸುವುದಕ್ಕಾಗಲಿ, ಸುಡುವುದಕ್ಕಾಗಲಿ, ಅರಳೆಯಂತೆ

ಹಾರಿಸುವುದಕ್ಕಾಗಲಿ ಸಾಮರ್ಥ್ಯವಿಲ್ಲದೆ ಹಿಂದಿರುಗಿದಾಗ ಗಗನದಲ್ಲಿ ಕಾಣಿಸಿಕೊಂಡ ಹೈಮವತಿ ಉಮೆಯು ದೇವತೆಗಳಿಗೆ ಯಕ್ಷ (ಜ್ಯೋತಿರ್ಲಿಂಗ) ರೂಪವಾದ ಪರವಸ್ತುವಿನ ಸ್ವರೂಪವನ್ನು ಪರಿಚಯಿಸಿದ್ದಾಳೆ."

"ಬುದ್ಧಿ, ಆ ಕತೆ ನಮಗೆ ಗೊತ್ತಿದೆ. ಆದರೆ ಪ್ರಕೃತಿಯಲ್ಲಿ ಲಿಂಗ ಸ್ವರೂಪವು ನಿಸರ್ಗಸಿದ್ಧವಾಗಿ ಎಲ್ಲಿಯಾದರೂ ಮೂಡಿದೆಯೆ ? ದಯ ಮಾಡಿ ಅಪ್ಪಣೆ ಮಾಡಿ."

'ಕರವೀರ' ಎಂದರೆ ಕಣಗಿಲೆ. ಅದರ ಹೂವಿನ ಕೇಸರ ಗಳಮಧ್ಯೆ ಕರ್ಣಿಕೆ ಇದೆ. ಅದನ್ನು ನೀವು ಹೂವಿನ ದಳಗಳನ್ನು ಬಿಡಿಸಿ ನೋಡಿರಿ. ಅಲ್ಲಿ ಪಾಣಿಪಾಟ ಮತ್ತು ಲಿಂಗವು ಸ್ಪಷ್ಟವಾಗಿ ಕಾಣುತ್ತದೆ. ಎರಡನೆಯದಾಗಿ, 'ಶಿವಲಿಂಗಪುಷ್ಪ' ವಂತೂ ಅದೇ ಹೆಸರಿನಿಂದ ಸುಪ್ರಸಿದ್ಧವಾಗಿದೆ. ಮನೋಹರವಾದ ಸುಗಂಧವುಳ್ಳ ಆ ಕುಸುಮ ಮಧ್ಯದಲ್ಲಿ ದಟ್ಟವಾದ ಕೇಸರಗಳ ನಡುವೆ ವಿರಾಜಿಸುವ ಶಿವಲಿಂಗವನ್ನು ಆದಿಶೇಷನು ಅಲಂಕರಿಸಿರುವ ದೃಶ್ಯ ಅತ್ಯದ್ಭುತ! ನೀವು ಗಮನಿಸಿದರೆ ಶಿವಲಿಂಗದ ಮಹತ್ವವು ವೇದ್ಯವಾಗುತ್ತದೆ.

ಜಗದ್ಗುರುಗಳವರ ಸಮಾಧಾನವು ದ್ವಿಜಶ್ರೇಣಿಗೆ ತುಂಬಾ ಅಪ್ಯಾಯಮಾನವಾಗಿತ್ತು. ಮುಂದುವರಿದು ಅವರು—

"ಗುರುದೇವಾ, ಆಗಮಗಳಲ್ಲಿ ಏಳು ಬಗೆಯ ಶೈವಗಳು ಉಕ್ತವಾಗಿವೆ. ಇವುಗಳಲ್ಲಿ ವೀರಶೈವ ಮತ್ತು ಶೈವ ಎಂಬ ಎರಡೇ ಮುಖ್ಯವಾದವು. ಇವೆರಡರಲ್ಲಿ ಶಿವನ ಪಂಚಮುಖಗಳಿಂದ ದೀಕ್ಷೆ ಪಡೆದ ಕೌಶಿಕಾದಿ ಋಷಿಗಳ ವಂಶಜರಾದ ನಾವು ಉಪನಯನ ಸಂಸ್ಕಾರವನ್ನು ಪಡೆದು,ದ್ವಿಜತ್ವವನ್ನು ಹೊಂದಿರುವ ದ್ವಿಜರೆನಿಸಿ,ದೇವತಾರಾಧನೆಗೆ ಅರ್ಹತೆ ಪಡದಿದ್ದೇವೆ. ಆದರೆ ವೀರಶೈವವೂ ಶಿವೋಪಾಸನೆಯನ್ನು ಪ್ರಧಾನವಾಗಿ ಇಟ್ಟುಕೊಂಡಿದೆ. ಆದರೆ ಅದು ಶೈವದಂತೆ ಉಪನಯನಕ್ಕೆ ಪ್ರಾಧಾನ್ಯವನ್ನು ಕೊಡದೆ ಕೇವಲ ಶಿವದೀಕ್ಷಾಸಂಸ್ಕಾರವನ್ನು ಮಾತ್ರ ಸ್ವೀಕರಿಸಿ, ಇಷ್ಟಲಿಂಗಾರ್ಚನೆ ಮತ್ತು ಸ್ಥಾವರ ಲಿಂಗಾರ್ಚನೆಗಳೆರಡನ್ನೂ ಮಾಡುತ್ತಿರುವುದು ಶಾಸ್ತ್ರ ವಿರೋಧವೆನಿಸುವುದಿಲ್ಲವೆ ? ದ್ವಿಜರಿಗೆ ಉಪನಯನವೇ

ಮುಖ್ಯ. ಉಪನಯನದಲ್ಲಿ ಆಗುವ ಗಾಯತ್ರೀ ಮಂತ್ರೋಪದೇಶದಿಂದ ದ್ವಿಜತ್ವ ಸಿದ್ಧಿಸಿ ವೇದಾಧಿಕಾರ ಮತ್ತು ಕರ್ಮಾಧಿಕಾರಗಳು ದೊರೆಯುವುದರಿಂದ ಅಂಥವನು ಸ್ಥಾವರ ಲಿಂಗಾರ್ಚನೆಗೆ ಅರ್ಹನೆನಿಸುತ್ತಾನೆ. ವೀರಶೈವದಲ್ಲಿ ಉಪನಯನವಿಲ್ಲದ ಮೇಲೆ ಅವನಿಗೆ ದ್ವಿಜತ್ವವೇ ಇಲ್ಲದಿರುವುದರಿಂದ ಸ್ಥಾವರ ಲಿಂಗಾರ್ಚನಾಧಿಕಾರವೂ ಇರುವುದಿಲ್ಲವಲ್ಲವೆ ?"

—ಎಂಬ ದ್ವಿಜಶ್ರೇಣಿಯ ಜಿಜ್ಞಾಸೆಗೆ ಜಗದ್ಗುರುಗಳ ಉತ್ತರ ಹೀಗಿತ್ತು—

"ದ್ವಿಜೋತ್ತಮರೆ, ನಿಮ್ಮ ಸಂದೇಹ ಒಂದು ದೃಷ್ಟಿಯಿಂದ ಸರಿಯಾದದ್ದೆ! ಆದರೆ ಇಲ್ಲಿ ನೀವು ಉಪನಯನ ಮತ್ತು ಶಿವದೀಕ್ಷೆಗಳ ನಿಜಸ್ವರೂಪವನ್ನು ಸರಿಯಾಗಿ ತಿಳಿದಿದ್ದ ಪಕ್ಷದಲ್ಲಿ ನಿಮಗೆ ಈ ಬಗೆಯ ಸಂದೇಹ ಬರುತ್ತಿರಲಿಲ್ಲ. ಅದಿರಲಿ !

ಪರಶಿವನ ಪಂಚಮುಖಗಳಿಂದ ದೀಕ್ಷೆ ಪಡೆದ ಕೌಶಿಕಾದಿ ಋಷಿಗಳು ಮತ್ತು ಅವರ ವಂಶೀಯರಾದ ನೀವು ಪಡೆವ ಉಪನಯನ ಮತ್ತು ದೀಕ್ಷೆಗಳು ಹೊರಗಿನ ಸ್ಥಾವರ ಲಿಂಗಾದಿಗಳ ಅರ್ಚನಾದಿಗಳನ್ನು ಮಾತ್ರ ನಡೆಸುವುದಕ್ಕೆ ಸಂಬಂಧಿಸಿದವು. ಆದ್ದರಿಂದ ಅವು ಬಾಹ್ಯ. ಅದು ವರ್ಣಧರ್ಮಕ್ಕೆ ಸಂಬಂಧಿಸಿದ್ದು. ಬ್ರಾಹ್ಮಣಾದಿ ವರ್ಣಗಳು, ಬ್ರಹ್ಮಚರ್ಯಾದಿ ಆಶ್ರಮಗಳು ಪ್ರಾಕೃತ. ಅವು ಮನ್ವಾದಿ ಸ್ಮೃತಿಗಳಲ್ಲಿ, ಆಪಸ್ತಂಭಾದಿ ಸೂತ್ರಗಳಲ್ಲಿ ಉಕ್ತವಾಗಿವೆ. ಬ್ರಾಹ್ಮಣಾದಿ ವರ್ಣಗಳಲ್ಲಿ ಮತ್ತು ಬ್ರಹ್ಮಚರ್ಯಾದಿ ಆಶ್ರಮ ಧರ್ಮಗಳಲ್ಲಿ ಉಚ್ಚ (ಶ್ರೇಷ್ಠ), ನೀಚ (ಕನಿಷ್ಠ) ಎಂಬ ಭೇದಭಾವಗಳುಂಟು. ಈ ಧರ್ಮಗಳನ್ನು ಆಚರಿಸುವವರಿಗೆ ಸ್ವರ್ಗಾದಿ ಲೋಕಗಳುಂಟು. ವೇದಗಳ ಪೂರ್ವಭಾಗವೆನಿಸಿರುವ ಬ್ರಾಹ್ಮಣಗಳಲ್ಲಿ ಉಕ್ತವಾದ ಯಜ್ಞ ಯಾಗಾದಿಗಳು ಅಸ್ಥಿರವಾದ ಸ್ವರ್ಗ ಸುಖಗಳನ್ನು ವಿಧಿಸಿವೆ. ಮೇಲೆ ಕಂಡ ಸ್ಮೃತಿ–ಸೂತ್ರಗಳಲ್ಲಿ ಹೇಳಿರುವ ಕರ್ಮಾಚರಣೆಯಿಂದ ಪುಣ್ಯವು ಲಭಿಸುತ್ತದೆ. ಪುಣ್ಯದಿಂದ ಸ್ವರ್ಗ ಎಂದರೆ ಸುಖವು ಲಭಿಸುತ್ತದೆ. ಸ್ಮೃತಿವಿರುದ್ಧವಾದ ಕರ್ಮಾಚರಣೆಯಿಂದ ಪಾಪವು ಸಂಘಟಿಸುತ್ತದೆ. ಪಾಪದಿಂದ ನರಕ (ದುಃಖ)ವುಂಟಾ

ಗುತ್ತದೆ. ಪುಣ್ಯದಿಂದ ಸ್ವರ್ಗ; ಪಾಪದಿಂದ ದುಃಖ ಸಂಭವಿಸುತ್ತದೆ. ಯಾದರೂ ಅವೆರಡೂ ಅನಿತ್ಯ.

ಪುಣ್ಯವು ಮುಗಿದ ಮೇಲೆ ಸ್ವರ್ಗದಿಂದ ಮತ್ತು ಪಾಪವು ಮುಗಿದ ಮೇಲೆ ನರಕದಿಂದ ಹಿಂದಿರುಗಿ ಮತ್ತೆ ಮರ್ತ್ಯದಲ್ಲಿ ಜನ್ಮ ತಳೆಯಲೇಬೇಕು. ಇವರಿಗೆ "ಪುನರಪಿ ಜನನಂ ಪುನರಪಿ ಜನನೀ ಜಠರೇ ಶಯನಂ" ಎಂಬ ಭವದಬಲೆ ತಪ್ಪಿದ್ದಲ್ಲ.

ಹೀಗೆ ಕರ್ಮಠರಿಗೆ ಸ್ವರ್ಗ, ಪಿತೃಲೋಕ, ಅಲ್ಲಿಂದ ಮತ್ತೆ ಹುಟ್ಟು' ಕಡೆಗೆ ಸಾವು, ಹೀಗೆ ಇದೊಂದು ಭವ ಚಕ್ರ. ಕರ್ಮಠರು ಇದರಿಂದ ಪಾರಾಗುವಂತೆಯೇ ಇಲ್ಲ!"

"ಗುರುದೇವ, ಈ ಭವ ಚಕ್ರದಿಂದ ಪಾರಾಗುವ ಉಪಾಯವು ಯಾವುದು?"

"ಆ ಉಪಾಯವನ್ನು ವಿಧಿಸುವುದೇ ಅಪ್ರಾಕೃತವೆನಿಸಿರುವ ವೀರಶೈವ!"

"ಈ ಅಪ್ರಾಕೃತಧರ್ಮವನ್ನು ವಿಧಿಸಿದವರು ಯಾರು! ಆ ಧರ್ಮವನ್ನು ನಿರೂಪಿಸುವ ಗ್ರಂಥಗಳು ಯಾವುವು?"

"ಆ ಗ್ರಂಥಗಳೇ ಶಿವಾಗಮಗಳು. ಇವು ಕಾಮಿಕವೊದಲು ವಾತುಲ ಕಡೆಯಾದ ಇಪ್ಪತ್ತೆಂಟು. ಆಗಮಗಳ ಉತ್ತರ ಭಾಗದಲ್ಲಿ ವೀರಶೈವವು ಉಕ್ತವಾಗಿದೆ."

"ಭಾರತೀಯರಿಗೆ ವೇದಗಳು ಪ್ರಮಾಣ ವೇದೋಕ್ತ ಧರ್ಮಗಳನ್ನು ಆಚರಿಸದ ವೀರಶೈವ ಅವೈದಿಕ ವೆನಿಸುವುದಿಲ್ಲವೆ?"

"ನೀವು ತಿಳಿದಿರುವುದು ತಪ್ಪು. ವೇದ-ಆಗಮಗಳೆರಡೂ ಶಿವೋಕ್ತವೇ! ಎರಡಕ್ಕೂ "ಶ್ರುತಿ" ಎಂಬ ಹೆಸರಿದೆ "ವೈದಿಕೀ ತಾಂತ್ರಿಕೀ ಚೈವ ದ್ವಿವಿಧಾ ಶ್ರುತಿ ಕೀರ್ತಿತಾ (ಮನುಸ್ಮೃತಿ ವ್ಯಾಖ್ಯಾನ) ಎನ್ನಲಾಗಿದೆ. ಆದ್ದರಿಂದ ವೀರಶೈವವೂ ವೈದಿಕವೇ!"

ಎರಡನೆಯದಾಗಿ ವೇದಗಳು.

"ಯಸ್ಯ ನಿಶ್ವಸಿತಂ ವೇದಾಃ" ಎಂಬ ಉಕ್ತಿಯಂತೆ ಪರಶಿವನ ಪ್ರಾಣಾನಿಲ ಎಂಬಂತೆ ಆಗಮಗಳು ಪರಶಿವನ ವಾಗ್ ರೂಪವಾದವುಗಳು. ವೇದಗಳು ನಿಃಶ್ವಸಿತವಾದ್ದರಿಂದ ಅಲ್ಲಿನ ಅರ್ಥವು ಅಸ್ಪಷ್ಟ. ಆದ್ದರಿಂದಲೇ ವೇದೋಕ್ತಿಗಳಲ್ಲಿ ಸಂದೇಹಕ್ಕೆ ಎಡೆಯಿದೆ. ಆದರೆ ಆಗಮಗಳು ಪರಶಿವನ ಮುಖದಿಂದ ಹೊರಟ ಸ್ಪಷ್ಟವಾಣಿ ಆದರಿಂದ ಇಲ್ಲಿ ಸಂದೇಹಕ್ಕೆ ಎಡೆ ಇಲ್ಲ. ಈ ದೃಷ್ಟಿಯಿಂದ ಶಿವೋಕ್ತವಾದ ನಿಗಮ ಮತ್ತು ಆಗಮಗಳಲ್ಲಿ ಆಗಮಗಳಿಗೆಹೆಚ್ಚು ಪ್ರಾಶಸ್ತ್ಯವಿದೆ ಆಗಮಗಳ ಪೂರ್ವ ಭಾಗದಲ್ಲಿ ಹಿಂದೆ ಹೇಳಿದಂತೆ ದೇವಾಲಯಗಳ ಸ್ಥಾಪನೆ, ದೇವತಾರ್ಚನೆ, ಆಯಾದೇವತಾ ಕೃಪೆಯಿಂದ ಮತ್ತೆ ಐಹಿಕ ಸುಖ ಭೋಗಗಳುಂಟಾಗುತ್ತವೆ ಎಂದ ಮೇಲೆ ಆಗಮಗಳೂ ಪ್ರಾಕೃವೇ ಆಗಲಿಲ್ಲವೆ?"

"ಇಲ್ಲ; ಆಮಮಗಳ ಪೂರ್ವಭಾಗವೆನಿಸಿರುವ ಕ್ರಿಯ ಮತ್ತು ಚರ್ಯಾಪಾದಗಳಲ್ಲಿ ಸಕಾಮ ಕರ್ಮವೆನಿಸಿದ ಪೂಜಾದಿಗಳು ಉಕ್ತವಾಗಿದ್ದರೂ ಅದೇ ಆಗಮಗಳ ಉತ್ತರಭಾಗವೆನಿಸಿರುವ ಯೋಗ ಮತ್ತು ಜ್ಞಾನ ಪಾದಗಳಲ್ಲಿ ನಿತ್ಯ ಸುಖವನ್ನುಂಟು ಮಾಡುವ ಮೋಕ್ಷ ಸಾಧನೆಗೆ ಅಗತ್ಯವಾದ ಅಪ್ರಾಕೃತ ಶಿವದೀಕ್ಷೆ ಉಕ್ತವಾಗಿದೆ."

ವೀರಶೈವ ಶಿವದೀಕ್ಷೆ ಉಕ್ತವಾಗಿರುವುದು ಶಿವಾಗಮಗಳ ಉತ್ತರ ಭಾಗದಲ್ಲಿ. ಅದು ಜೀವನಿಗೆ ಎಸಗುವ ಸಂಸ್ಕಾರವಾದ್ದರಿಂದ ಅದು ಆಂತರ; ಎಂದರೆ ಒಳಗಿನದು.

ಆಚಾರ್ಯ ರೇಣುಕರು ಆಗಸ್ತ್ಯಮಹರ್ಷಿಗೆ "ಜೀವನಸಿದ್ಧಾಂತ"ವನ್ನು ಆಗಮೋಕ್ತವಾಗಿ ನಿರ್ಣಹಿಸಿ ಹೇಳಿದ್ದಾರೆ. ವೇದ ವ್ಯಾಸರು ತಮ್ಮ "ಬ್ರಹ್ಮಸೂತ್ರ" ಗಳಲ್ಲಿ ಬ್ರಹ್ಮನ ಜಿಜ್ಞಾಸೆ ಮಾಡಿದ್ದರೆ ರೇಣುಕರು ಜೀವನ ಸಿದ್ಧಾಂತ (ಸಿದ್ಧಾಂತ ಶಿಖಾಮಣಿ) ವನ್ನು ನಿರೂಪಿಸಿದ್ದಾರೆ.

ಈ ಅವಿದ್ಯೆಗೆ ವಶವಾದ ಚೈತನ್ಯವು ಮಲತ್ರಯವನ್ನು ಹೊತ್ತು ಜೀವನೆನಿಸಿದೆ.

ಆಚಾರ್ಯರೇಣುಕರು ಜೀವನ ಸ್ವರೂಪವನ್ನು ಹೇಳುವಾಗ "ಅನಾದಿಮಲಸಂಬಂದಾತ್ ಶಿವಾಂಶೋ ಜೀವನಾಮಕಃ" ಎಂದರೆ

ಅನಾದಿಯಾದ ಮಲಸಂಬಂಧದಿಂದ ಶಿವನ ಅಂಶವೇ ಜೀವ ಎಂದು ಹೇಳಿದ್ದಾರೆ.

ಈ ಜೀವನು ಪ್ರಾಕೃತವಾದ ಉಪನಯನ ಮತ್ತು ದೀಕ್ಷೆಗಳನ್ನು ಪಡೆದು ದ್ವಿಜನಾಗಿ ಕರ್ಮಠನೆನಿಸಿ, ಪ್ರಾಕೃತ ಧರ್ಮ (ಕರ್ಮ) ಗಳನ್ನು ಆಚರಿಸಿ, ಅನೇಕ ಜನ್ಮಗಳಲ್ಲಿ ಮಾಡಿದ ಪಾಪವನ್ನು ಕಳೆದು "ಪಿಂಡ" ನೆನಿಸುತ್ತಾನೆ."

"ಪುಣ್ಯಾಧಿಕಃ ಕ್ಷೀಣಪಾಪಃ ಪಿಂಡ ಇತ್ಯಭಿಧೀಯತೆ" ಇಲ್ಲಿ ಪಿಂಡ ಎಂಬುದು ಪಾರಿಭಾಷಿಕ ಪದ. ಪುಣ್ಯವು ಹೆಚ್ಚಾಗಿ ಪಾಪವು ನಾಶವಾದ ಜೀವನಿಗೆ "ಪಿಂಡ" ಎಂದು ಹೆಸರು. ಅಂತಹ ಜೀವನ ಮೇಲೆ ಶಿವಕೃಪೆ ಬೀಳುತ್ತದೆ. ಇದಕ್ಕೆ 'ಶಕ್ತಿಪಾತ' ಎಂದು ಹೆಸರು. ಪರಶಿವನ್ನ ಕೃಪಾಶಕ್ತಿ ಜೀವನ ಮೇಲೆ ಬಿದ್ದಾಗ ಅವನಲ್ಲಿ ಕೆಲವು ಬದಲಾವಣೆಗಳಾಗುತ್ತವೆ. ಆಗ ಅವನು ಗುರುವಿಗೆ ಶರಣಾಗುತ್ತಾನೆ. ಆಗಮುದಲ್ಲಿ ಶಕ್ತಿಪಾತದ ಬಗೆಗೆ ಕೊಟ್ಟಿರುವ ವಿವರಣೆ ಹೀಗಿದೆ.

ಶಕ್ತಿಪಾತ ಆದೊಂದು ಸಂಜೀವಿನಿ! ಇದರ ಪ್ರಭಾವದಿಂದ ಜೀವನಲ್ಲಿ ಸಂಸಾರದಲ್ಲಿ ಜಿಗುಪ್ಸೆ, ಶಿವನಲ್ಲಿ ಶಿವಶಾಸ್ತ್ರಾದಿಗಳಲ್ಲಿ ಶಿವಭಕ್ತರಲ್ಲಿ ಭಕ್ತಿ ಶ್ರದ್ಧೆಗಳುಂಟಾಗುತ್ತವೆ. ಸ್ಥಿರವಾಗಿರುವ ಇವೇ ಮುಂತಾದ ಲಕ್ಷಗಳನು ಗುರ್ತಿಸಿದ ಗುರು ಅವನಿಗೆ ಒಲಿದು ಶಿವದೀಕ್ಷೆ ಮಾಡುತ್ತಾನೆ.

ಶಿವದೀಕ್ಷೆಯುಲ್ಲಿ ಗುರು ಅವನ ಮಸ್ತಕದ ಮೇಲೆ ತನ್ನ ವರದ ಹಸ್ತವನ್ನಿಟ್ಟಾಗ (ವೇಧಾದೀಕ್ಷೆ) ಅವನಲ್ಲಿದ್ದ ಅಣವ ಮಲ, ನಷ್ಟವಾಗುತ್ತದೆ. ಶಿವಷಡಕ್ಷರ ಮಹಾ ಮಂತ್ರೋಶ್ರ ಉದೇಶ (ಮಂತ್ರದೀಕ್ಷೆ) ಮಾಡಿದಾಗ ಮಾಯಾಮಲ (ಅಜ್ಞಾನ) ನಷ್ಟವಾಗುತ್ತದೆ. ಕ್ರಿಯಾದೀಕ್ಷೆಯಿಂದ ಕಾರ್ಮ ಮಲವು ನಷ್ಟವಾಗಿ ಆತ ಅಪರಂಜಿಯುಂತೆ ಪರಿಶುದ್ಧನಾಗುತ್ತಾನೆ. ಇದರಿಂದ ಜೀವನಲ್ಲಿದ್ದ ಕಿಂಚಿಜ್ಞತ್ವ (ನಾನು ಅಲ್ಪಜ್ಞ) ಕಿಂಚಿತ್ ಕರ್ತೃತ್ವ (ನಾನು ಅಲ್ಪಶಕ್ತ) ಮತ್ತು ಕಿಂಚಿತ್‌ವ್ಯಾಪಕತ್ವ ಮುಂತಾದ ತಿಳಿವುನಷ್ಟವಾಗಿ ತಾನು ಸ್ವರ್ವಜ್ಞ (ಎಲ್ಲವನ್ನು ಬಲ್ಲವಶವನು, ಸರ್ವಶಕ್ತ ಮತ್ತು ಸರ್ವವ್ಯಾಪಕ ಎಂಬ ಭಾವ ಮೂಡಿರುವುದರಿಂಧ

ಗುರುವು ಅವನ ಆಧಾರ-ಹೃದಯ ಮತ್ತು ಭ್ರೂಮಧ್ಯಗಳಲ್ಲಿ ಸದಾ ಬೆಳಗುತ್ತಿರುವ ಜ್ಯೋತಿರ್ಲಿಂಗ ಕಲೆಯನ್ನು ವಿಧ್ಯುಕ್ತವಾಗಿ ಪರಿಶುದ್ಧಗೊಳಿಸಿರುವ ಲಿಂಗದಲ್ಲಿ ಆಕರ್ಷಿಸಿ ಅದನ್ನು ಶಿಷ್ಯನಿಗೆ ಧಾರಣ ಮಾಡುತ್ತಾನೆ. ಇದರಿಂದ ಆ ಭಕ್ತನ ಜೀವಭಾವವು ಅಳಿದು ಅವನು 'ಅಂಗ'ನೆನಿಸುತ್ತಾನೆ. 'ಅಂಗ' ಎಂದರೆ ಅಂ-ಶಿವ ; ಶಿವನ ಕಡೆ ಅಭಿಮುಖನಾದವನು ಅಂಗನೆನಿಸುತ್ತಾನೆ. ಹುಟ್ಟು ಸಾವುಗಳಿಗೆ ಮೂಲವಾದ ಭವಿತ್ವವು ಅಳಿದು, ಭವ (ಶಿವ)ನ ಕಡೆ ತಿರುಗುವುದೇ ಅಂಗನ ಲಕ್ಷಣ.

ಈ ಶಿವದೀಕ್ಷೆಯ ಕಾಲದಲ್ಲಿ ಗುರುವು ಶಿಷ್ಯನಿಗೆ ಮಾಡುವ ಉಪದೇಶ ಬಹು ಮಹತ್ವವಾದದ್ದು. ಮಾನವನನ್ನು ಸಂಸಾರ ಸಾಗರದಿಂದ ಮೇಲೆತ್ತಿ ಅವನು ತಾನೇ ಶಿವ (ಅಹಂ ಬ್ರಹ್ಮಾಸ್ಮಿ)ನಾದೆ ಎಂಬ ಭಾವವು ಉದಿಸುವುದಕ್ಕಾಗಿ ಯೋಗಶಾಸ್ತ್ರೋಕ್ತವಾದ ಅನೇಕ ರಹಸ್ಯಗಳನ್ನು ಬೋಧಿಸುತ್ತಾನೆ. ಉದಾಹರಣೆಗೆ ಮಾನವನ ಶರೀರದಲ್ಲಿ ಆಧಾರ (ಗುದ), ಸ್ವಾಧಿಷ್ಠಾನ (ಗುಹ್ಯ), ಮಣಿಪೂರಕ (ನಾಭಿ), ಅನಾಹತ (ಹೃದಯ), ವಿಶುದ್ಧಿ (ಕಂಠ), ಮತ್ತು ಆಜ್ಞೇಯ (ಭ್ರೂಮಧ್ಯ)ಗಳಲ್ಲಿ ಮತ್ತು ಸಹಸ್ರಾರ (ಮಸ್ತಕ) ಶಿಖಾ ಹಾಗೂ ಪಶ್ಚಿಮ ಎಂಬ ನವಚಕ್ರಗಳಲ್ಲಿ ಕ್ರಮವಾಗಿ ಆಚಾರ–ಗುರು–ಶಿವ–ಚರ-ಪ್ರಸಾದ-ಮಹಾಲಿಂಗ ಎಂಬ ಆರುಲಿಂಗಗಳನ್ನೂ ಸಹಸ್ರಾರ-ಶಿಖಾ-ಪಶ್ಚಿಮ ಚಕ್ರಗಳಲ್ಲಿ ಕ್ರಮವಾಗಿ ಇಷ್ಟ-ಪ್ರಾಣ ಮತ್ತು ಭಾವಲಿಂಗಗಳನ್ನು 'ಏತತ್ ಸೋಮಸ್ಯ ಸೂರ್ಯಸ್ಯ ಸರ್ವಲಿಂಗಗ್ಂ ಸ್ಥಾಪಯತಿ' ಎಂಬ ಮಂತ್ರದಿಂದ ಸ್ಥಾಪಿಸಿ ಈ ನವಲಿಂಗಗಳನ್ನು ಉಪಾಸನ ಮಾಡುವ ಕ್ರಮವನ್ನು ಇಷ್ಟಲಿಂಗದ ಮೂಲಕವಾಗಿಯೇ ನಡೆಸುವ ರಹಸ್ಯಾರ್ಥಗಳನ್ನು ಗುರು ಬೋಧಿಸುತ್ತಾನೆ.ಇದಲ್ಲದೆ ಮಾನವನ ಐದು ಜ್ಞಾನೇಂದ್ರಿಯ ಮತ್ತು ಐದು ಕರ್ಮೇಂದ್ರಿಯ ಹಾಗೂ ಮನಸ್ಸುಗಳಲ್ಲಿಯೂ ಕೂಡ ಮೇಲೆ ಹೇಳಿದ ಆಚಾರ ಮುಂತಾದ ಆರು ಲಿಂಗಗಳನ್ನು ಆರಾಧಿಸುವ ರಹಸ್ಯ ವಿಷಯಗಳನ್ನು ಬೋಧಿಸಿ, ಪದಾರ್ಥಕಾಯ ನೆನಿಸಿದ್ದ ಜೀವನನ್ನು ಪ್ರಸಾದಕಾಯನನ್ನಾಗಿ ಪರಿವರ್ತಿಸುತ್ತಾನೆ. ಇದನ್ನು ಯೋಗಶಾಸ್ತ್ರದಲ್ಲಿ 'ಅಹಂಗ್ರಹೋಪಾಸನೆ' ಎಂದು ಕರೆಯಲಾಗಿದೆ. ಕರುಣಾಸಾಗರನೆನಿಸಿದ

ಗುರುವಿನಿಂದ ಶಿವದೀಕ್ಷೆಪಡೆದ ಶಿಷ್ಯನು ತನ್ನ ಸಾಧನಕ್ರಮದಲ್ಲಿ ಮುನ್ನಡೆದು ಭಕ್ತ-ಮಾಹೇಶ-ಪ್ರಸಾದಿ-ಪ್ರಾಣಲಿಂಗಿ-ಶರಣ ಮತ್ತು ಐಕ್ಯ ಎಂಬ ಆರು ಹಂತಗಳನ್ನು ಏರಿ, ಜೀವಭಾವವನ್ನು ಸಂಪೂರ್ಣವಾಗಿ ಕಳೆದುಕೊಂಡು ಶಿವಭಾವ ಎಂದರೆ (ಸೋಽಹಂ) ಅವನೇ ನಾನು ಎಂಬ ಭಾವವು ಅಳವಟ್ಟು ನೀರಿನಲ್ಲಿ ನೀರು, ಬೆಂಕಿಯಲ್ಲಿ ಬೆಂಕಿ ಬೆರೆಯುವಂತೆ ಶಿವನಲ್ಲಿ ಸಮರಸ ನಾಗುತ್ತಾನೆ. ಇದನ್ನು ಶ್ರುತಿಯಲ್ಲಿ ನದೀ-ಸಮುದ್ರನ್ಯಾಯದ ಮೂಲಕ ವಿವರಿಸಲಾಗಿದೆ. ಎಂದರೆ ಬೇರೆ ಬೇರೆ ಕಡೆಗಳಿಂದ ಬೇರೆ ಬೇರೆ ರಸ ರುಚಿ-ಹೆಸರುಗಳಿಂದ ಕೂಡಿದ ನದಿಗಳು ತಮ್ಮ ತಮ್ಮ ನಾಮ ರೂಪು ರಸ-ರುಚಿಗಳನ್ನು ಬಿಟ್ಟು ಸಮುದ್ರದಲ್ಲಿ ಬೆರೆಯುವಂತೆ ಅಂಗನು ಲಿಂಗ ವಾಗುತ್ತಾನೆ. ಇದು ಜೀವನು ಪಡೆವ ಜೀವನ್ಮುಕ್ತ ಸ್ಥಿತಿ. ಈ ಸ್ಥಿತಿಗೆ ಬಂದಾಗ ಅವನು ಲಿಂಗೋದ್ಭವನೆನಿಸುತ್ತಾನೆ. ಲಿಂಗನಡೆ, ಲಿಂಗನುಡಿಗಳು ಅಳವಟ್ಟವನು ಬಾಹ್ಯದಲ್ಲಿ ಇತರ ಮಾನವನಂತೆ ಅನ್ನಾ ಹಾರಗಳನ್ನು ತೆಗೆದುಕೊಳ್ಳುತ್ತಿದ್ದರೂ ಅವನು "ಉಂಡೂ ಉಪವಾಸಿ, ಬಳಸಿಯೂ ಬ್ರಹ್ಮಚಾರಿ" ಕೆಸರಿನಲ್ಲಿದ್ದರೂ ಕೆಸರು ಅಂಟದ ಕುಂಬಾರ ಹುಳುವಿನಂತೆ, ನೀರಿನಲ್ಲಿದ್ದರೂ ನೆನೆಯದ ಕಮಲದ ಎಲೆಯಂತೆ ಅವನು ಸಂಸಾರದಿಂದ ನಿರ್ಲಿಪ್ತನಾಗಿರುವ ಈ ಸ್ಥಿತಿಯನ್ನು ಗೀತೆ 'ಅನಾಸಕ್ತ ಯೋಗ, ಸ್ಥಿತಪ್ರಜ್ಞ' ಎನ್ನುತ್ತದೆ. ವೀರಶೈವ ಪರಿಭಾಷೆಯಲ್ಲಿ ಅವನು ಶರಣನೆನಿಸುತ್ತಾನೆ. ಆಗಮವು ಈ ಸ್ಥಿತಿಯನ್ನು 'ಪ್ರಾಪಂಚಿಕ ಸುಖಂ ನಾಸ್ತಿ ಶರಣಸ್ಥಲಮುತ್ತಮಂ' ಎನ್ನುತ್ತದೆ.

ಆಚಾರ್ಯ ರೇಣುಕರ ಸಿದ್ಧಾಂತ ಶಿಖಾಮಣಿ ಈ ದಿಸೆಯಲ್ಲಿ ನೂರೊಂದು (ಏಕೋತ್ತರಶತ) ಸ್ಥಳಗಳ ಏಣಿಯನ್ನು ಏರ್ಪಡಿಸಿದೆ. ಶಿವದೀಕ್ಷೆಯಿಂದ ವಿದೇಹ ಮುಕ್ತಿಯವರೆಗೆ ಏರುವ (೧೦೧) ಮೆಟ್ಟಿಲು ಗಳನ್ನು ವಿಸ್ತಾರವಾಗಿ ಬೋಧಿಸಿದೆ.

ಸ್ಪರ್ಶಮಣಿ ಸೋಂಕಿದ ಕಬ್ಬಿಣವು ಚಿನ್ನವಾಗುವಂತೆ, ರಸವೇಧ ದಿಂದ ಲೋಹವು ಸುವರ್ಣವಾಗುವಂತೆ ಶಿವದೀಕ್ಷೆಯಿಂದ ನರನು ಶರಣ ನಾಗಿ ಮುಂದೆ ಹರನಾಗುತ್ತಾನೆ. ಉರಿಯುಂಡ ಕರ್ಪೂರದಂತೆ ಶಿವನಲ್ಲಿ ಬೆರೆತು ಬೇರಿಲ್ಲದಂತಾಗುತ್ತಾನೆ. ಇದನ್ನೇ 'ಪರಿಪೂರ್ಣಯೋಗ' ಎಂದೂ

'ಶೂನ್ಯ ಸಂಪಾದನೆ' ಎಂದೂ ಶರಣ ಪರಿಭಾಷೆ ಸಮರ್ಥಿಸಿದೆ. "ಪೂರ್ಣ ಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೆ" ಎಂಬ ಶ್ರುತಿ ಈ ಸ್ಥಿತಿಯನ್ನೆ ಅಭಿವ್ಯಕ್ತಗೊಳಿಸಿದೆ. ಇಲ್ಲಿ ಹೇಳಿರುವ ಶೂನ್ಯವು ಬೌದ್ಧರ ಅಭಾವ ರೂಪವಾದ ಶೂನ್ಯವಲ್ಲ. ಅದು ಎಲ್ಲವನ್ನು ಒಳಗೊಂಡಿರುವ ನಿಃಶೂನ್ಯ. ಋಗ್ವೇದ ನಾಸದೀಯ ಸೂಕ್ತದಲ್ಲಿ ಬರುವ "ಅನೀದವಾತಂ ಸ್ವಧಯಾ ತರ್ದೇಕಂ" ಎಂದರೆ ಅವಾತಂ ವಾಯುಃವಿಲ್ಲದಿದ್ದರೂ ಅದರಲ್ಲಿ ಅನೀತ್‌ಚೈತನ್ಯ ಸ್ಫುರಣವಿತ್ತು" ಎಂಬ ಸ್ಥಿತಿ. ಹೀಗೆ ಪರಶಿವನಲ್ಲಿ ಸಮರಸನಾದ ಶರಣನು ಮತ್ತೆ ಭವಕ್ಕೆ ಹಿಂದಿರುಗುವುದಿಲ್ಲ. ಅವನಿಗೆ ಮತ್ತೆಹುಟ್ಟು ಸಾವುಗಳ ಹಂಗಿಲ್ಲ. "ಏಕೇನ ಜನ್ಮನಾ ಮುಕ್ತಿಃ ವೀರಾಣಾಂ ತು ಮಹೇಶ್ವರಿ" ಎಂಬ ಶಿವನ ಉಕ್ತಿಯು ಷಟ್‌ಸ್ಥಲ ಮಾರ್ಗದಿಂದ ಮುಕ್ತರಾದವರ ಸ್ಥಿತಿಯನ್ನು ವರ್ಣಿಸಿದೆ.

ನಿತ್ಯ ಮುಕ್ತಸ್ಥಿತಿಗೆ ಬಂದವನು ನಿತ್ಯಾನಂದ ನಿತ್ಯ ಸುಖಿಯಾಗುತ್ತಾನೆ!"

ಜಗದ್ಗುರುಗಳವರ ಉಪದೇಶವನ್ನು ಆಲಿಸಿದ ದ್ವಿಜ ಶ್ರೇಣಿ ದಿಗ್ಮೊಢವಾಯಿತು. ಶ್ರುತಿ, ಸ್ಮೃತಿ, ಸೂತ್ರಗಳ ಅನುಭವ ರಸಾಯನವನ್ನು ಆಸ್ವಾದಿಸಿದ ದ್ವಿಜಶ್ರೇಣಿ ಜಗದ್ಗುರುಗಳವರಿಗೆ ಮತ್ತೆ ಸಾಷ್ಟಾಂಗ ಹಾಕಿ ಬಿನ್ನೈಸಿತು.

ಗುರುದೇವಾ, ತಮ್ಮ ದಿವ್ಯ ಉಪದೇಶದಿಂದ ನಾವು ಪಾವನರಾಗಿದ್ದೇವೆ. ಸಕಾಮ ಭಕ್ತಿಯಿಂದ ಕೂಡಿದ ಅರ್ಚನಾದಿ ಕ್ರಿಯೆಗಳಿಗೆ ಅರ್ಹತೆಯನ್ನುಂಟುಮಾಡುವ ಉಪನಯನ ಮತ್ತು ಸಾಮಾನ್ಯ (ಪ್ರಾಕೃತ) ದೀಕ್ಷೆಗಿಂತಲೂ ನಿಷ್ಕಾಮ ಭಕ್ತಿಯಿಂದ ಕೂಡಿದ ವೀರಶೈವ ಅಪ್ರಾಕೃತ ದೀಕ್ಷೆಯು ನಿತ್ಯ ಸುಖವನ್ನು ಕೊಡುವುದರಿಂದ ಪರಮಶ್ರೇಷ್ಠ ಎಂಬ ಅರಿವು ನಮಗೆ ಮೂಡಿದೆ. ಇದರಿಂದ ನಾವೂ ಸಹ ಈ ಅಪ್ರಾಕೃತ ಶಿವದೀಕ್ಷೆ ಪಡೆಯಲು ಕಾತರರಾಗಿದ್ದೇವೆ. ಎಂದು ಜಗದ್ಗುರುಗಳಿಗೆ ಪ್ರಣಾಮಮಾಡಿ ಹಿಂದಿರುಗಿದರು.

"ಓಹೋ, ಹಾಗಾಗುವುದಾದರೆ ನಾವು ಮಾಡುತ್ತಿರುವ ಶಿವದೀಕ್ಷೆಯೂ ವೀರಶೈವ ದೀಕ್ಷೆಯೇ ಆಯಿತಲ್ಲ!"

"ಇಲ್ಲ, ಹಾಗಾಲಿಲ್ಲ. ಈ ದ್ವಿಜಶ್ರೇಣಿ, ಜಗದ್ಗುರುಗಳನ್ನು ವಂದಿಸಿ ಬೀಳ್ಕೊಂಡ ಮೇಲೆ ಮತ್ತೆ ಸಭೆ ಸೇರಿ, ಈ ವಿಷಯವನ್ನು ಚರ್ಚಿಸಿತು!"

"ಆ ಚರ್ಚೆಯಲ್ಲಿ ಆದ ನಿರ್ಣಯವೇನು ?"

"ಆ ಸಭೆಯಲ್ಲಿ ಅನೇಕರು ವೀರಶೈವ ದೀಕ್ಷೆ ಪಡೆಯಲು ಬಲವಾದ ಒತ್ತಾಯವನ್ನೇ ಮಾಡಿದರು. ಆದರೆ ಬ್ರಾಹ್ಮಣ್ಯದ ಹೆಮ್ಮೆಯಿಂದ ಕುಬ್ಜ (ಸಂಕುಚಿತ) ರಾದ ಕೆಲವರಿಗೆ ಅದು ಹಿಡಿಸಲಿಲ್ಲ. ಅವರು ಹೇಳಿದರು.

"ವೀರಶೈವ ದೀಕ್ಷೆಪಡೆಯಬೇಕಾದರೆ ಅದನ್ನು ವೀರಶೈವ ಗುರುವಿನಿಂದಲೇ ಪಡೆಯಬೇಕು. ಎಂಬ ನಿಯಮವಿದೆ. ಅದೆಂದಿಗೂ ಸಾಧ್ಯವಿಲ್ಲ. ವರ್ಣಗಳಲ್ಲಿ ಶ್ರೇಷ್ಠನಾದ ಬ್ರಹ್ಮ ವಂಶಜರಾದ ನಾವು ವೀರಶೈವ ಗುರುವಿಗೆ ತಲೆಬಾಗುವುದೆಂದ ರೇನು? ಅದೆಂದಿಗೂ ಖಂಡಿತ ಸಾಧ್ಯವಿಲ್ಲ! ಹಾಗೆ ಶಿವದೀಕ್ಷೆ ಪಡೆಯಬೇಕೆಂಬ ಹಂಬಲ ಉಳ್ಳವರು ಈಗ ಉಪನಯನದಲ್ಲಿ ತಮ್ಮ ತಂದೆಯಿಂದಲೇ ಗಾಯತ್ರೀ ಮಂತ್ರೋಪದೇಶ ಪಡೆಯುತ್ತಿರುವಂತೆ. ಲಿಂಗಧಾರಣ ಶಿವದೀಕ್ಷೆಯನ್ನು ತಂದೆಯಿಂದಲೇ ಪಡೆದು ಅವನಿಂದಲೇ ಮಂತ್ರೋಪದೇಶವನ್ನೂ ಪಡೆಯಬಹುದು ಎಂಬ ತೀರ್ಮಾನಕ್ಕೆ ಬಂದರು. ಅದನ್ನು ಎಲ್ಲರೂ ಒಪ್ಪಿಕೊಂಡರು. ಶಿವದೀಕ್ಷೆ ಪಡೆವುದು ಮುಕ್ತಿಗಾಗಿ ಆ ಮುಕ್ತಿಯು ಇಷ್ಟರಿಂದಲೇ ದೊರೆಯುವುದಾದರೆ ಏಕೆ ಆಗಬಾರದು" ಎಂದು ಸಮಾಧಾನ ಪಟ್ಟರು.

ಆರಾಧ್ಯರು ಮತ್ತೆ ಕೇಳಿದರು.

"ಭಾವ, ನಿರ್ಣಯ ಸಾಧುವಾಗಿದೆಯಲ್ಲವೆ?" ಇದರಲ್ಲಿ ತಪ್ಪೇನಿದೆ?" ಎಂದರು.

ದೇಶಿಕರು ಮುಂದುವರೆದು ಹೇಳಿದರು. "ಗುರುಲಿಂಗು ಈ ವಿಷಯದಲ್ಲಿ ನೀನೂ ಆಳಕ್ಕೆ ಇಳಿದು ಯೋಚಿಸು! ಪ್ರಾಕೃತ ಜನ್ಮಕ್ಕೆ ಕಾರಣನಾದವನು ತಂದೆ. ಅಂಥವನು ಅಪ್ರಾಕೃತವಾದ ಮುಕ್ತಿಗೆ ಕಾರಣವಾದ ಮಹಾ ಮಂತ್ರೋಪದೇಶ ಮಾಡುವ ಅರ್ಹತೆ ಪಡೆದಿರುವನೆ?

ಆಚಾರ್ಯ ರೇಣುಕರು ಸಿದ್ಧಾಂತ ಶಿಖಾಮಣಿಯ ಗುರುಕಾರುಣ್ಯ ಸ್ಥಳ ದಲ್ಲಿ "ಗುರುವಿನ ಕಾರುಣ್ಯಕ್ಕೆ ಪಾತ್ರನಾದ ಶಿಷ್ಯನು ಆ ಗುರುಮುಖದಿಂದ ಶಿವದೀಕ್ಷೆ ಪಡೆಯಬೇಕೆಂದು ಹೇಳಿದೆ. "ವೇದಮಾತಾ ತು ಗಾಯತ್ರೀ" ಗಾಯತ್ರೀ ಮಂತ್ರವು ವೇದಕ್ಕೆ ತಾಯಿ ಎಂದಿದೆ. ಆದರೆ ಪಂಚಾಕ್ಷರ ಮಹಾ ಮಂತ್ರವು "ಮಂತ್ರಮಾತಾ ಷಡಕ್ಷರೀ" ಇಡೀ ಮಂತ್ರಕ್ಕೇ ತಾಯಿ. ಈ ಮಹಾ ಮಂತ್ರವು ಶ್ರೀರುದ್ರಾಧ್ಯಾಯದ ಎಂಟನೆಯ ಅನುವಾಕ ಮಧ್ಯದಲ್ಲಿ ಪಠಿತವಾಗಿದೆ.

"ವಿದ್ಯೆಗಳಲ್ಲಿ ಶ್ರುತಿಯು ಶ್ರೇಷ್ಠ, ಶ್ರುತಿಗಳಲ್ಲಿ ಯಜುರ್ವೇದ. ಅದರಲ್ಲಿ ಶ್ರೀರುದ್ರಾಧ್ಯಾಯದ ಮಧ್ಯದಲ್ಲಿರುವ ಎಂಟನೆಯ ಅನುವಾಕ ಮಧ್ಯದಲ್ಲಿದೆ. ಅಲ್ಲಿಯೂ ಶಿವ ಎಂಬ ಅಕ್ಷರದ್ವಯ ಅತಿಶ್ರೇಷ್ಠ"

ಎಂಬ ಮಾತೊಂದಿದೆ. ಮಹತ್ವ ಪೂರ್ಣವಾದ ಈ ಮಹಾಮಂತ್ರ ವನ್ನು ಬೋಧಿಸಲು ಕೇವಲ ಉಪನಯನ ಹೊಂದಿದ ಹಾಗೂ ಗುರುಮುಖದಿಂದ ಷಟ್‌ಸ್ಥಲ ಕ್ರಮವಾಗಿ ಶಿವದೀಕ್ಷೆ ಪಡೆಯದ ತಂದೆ ಸಂಪೂರ್ಣ ಅಸಮರ್ಥ!"

"ಮಹಾಮಂತ್ರೋಪದೇಶವನ್ನು ತಂದೆಯಿಂದ ಪಡೆದರೆ ಶ್ರೇಯಸ್ಸಾ ಗುವುದಿಲ್ಲವೆ?"

"ಇಲ್ಲ; ಏಕೆಂದರೆ ಶ್ರೇಯವೆಂದರೆ ಅಭ್ಯುದಯ, ಐಹಿಕ ಸಂಪತ್ ಪ್ರಾಪ್ತಿ. ಶಿವದೀಕ್ಷೆಯಿಂದ ಲಭಿಸಬೇಕಾದದ್ದು ನಿಃಶ್ರೇಯಸ್ಸು ಎಂದರೆ ಮತ್ತೆ ಮತ್ತೆ ಹುಟ್ಟು-ಸಾವುಗಳ ಭವಚಕ್ರಕ್ಕೆ ದೂರವಾದ ನಿತ್ಯಾನಂದ ರೂಪವಾದ ಮೋಕ್ಷ. ಅಂಥ ಮೋಕ್ಷವು ಮೇಲೆ ಹೇಳಿದಂತೆ ಷಟ್‌ಸ್ಥಲ ಕ್ರಮದಿಂದ ಶಿವದೀಕ್ಷೆಯನ್ನು ಗುರುಮುಖದಿಂದ ಪಡೆಯದ ನಮಗೆ ಲಭಿಸೀತೆ!"

ನಮ್ಮಲ್ಲಿ ಉಪನಯನಕ್ಕೆ ಇರುವ ಪ್ರಾಧಾನ್ಯ ಶಿವದೀಕ್ಷೆಗೆ ಇರುವು ದಿಲ್ಲ! ಉಪನಯನದಿಂದ ವೇದಾಧಿಕಾರ, ವರ್ಣಧರ್ಮದ ಹೆಚ್ಚಳವುಳ್ಳ

ಬ್ರಾಹ್ಮಣ್ಯವು ಸಿದ್ಧಿಸಿ ಅದರ ಮೇಲೆ ಆರಾಧ್ಯತ್ವವನ್ನೂ ಹೊಂದಿರುವ ನಮ್ಮಲ್ಲಿ ಸ್ವಾಭಿಮಾನ ತುಂಬಿದೆ. ವೀರಶೈವದಲ್ಲಾದರೆ "ಎನಗಿಂತ ಕಿರಿಯರಿಲ್ಲ; ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂಬ ಕೈಂಕರ್ಯದ ಮೇಲೆ ಶಿವಭಕ್ತಿಯ ಹೆಚ್ಚಳ ನಿಂತಿದೆ. ಸ್ವಯಮಾಚಾರ್ಯರೆಂದು ಬೀಗುವ ನಾವು ಉಳಿದ ಶಿವಭಕ್ತರಿಗೆ ಮಣಿಯುವುದುಂಟೆ? ವೀರಶೈವನಿಗೆ ಎಲ್ಲೆಡೆಯೂ ಶಿವಭಾವವು ತುಂಬಿರುವುದರಿಂದ ನಾನು-ನನ್ನದು ಎಂಬ ಅಹಂಕಾರ ಮಮಕಾರಗಳು ಕಾಣೆಯಾಗಿರುತ್ತವೆ.

ಅಣು-ರೇಣು-ತೃಣ-ಕಾಷ್ಟಗಳಲ್ಲೆಲ್ಲ ಶಿವನ ಅಸ್ತಿತ್ವವನ್ನು ಕಂಡ ಶರಣನಲ್ಲಿ "ದಾಸೋಽಹಂಭಾವವು ತಾನೇ ತಾನಾಗಿರುತ್ತದೆ"

"ದಾಸೋಽಹಂಭಾವ" ಎಂದರೇನು?"

"ಶಿವಾಗಮಗಳಲ್ಲಿ" ದಾಸೋಽಹಂಭಾವ*ದ ಲಕ್ಷಣವನ್ನು ಹೀಗೆ ಹೇಳಲಾಗಿದೆ

"ತನು–ಮನ ಧನ"ಗಳನ್ನು ಕ್ರಮವಾಗಿ ಗುರು-ಲಿಂಗ ಜಂಗಮರಿಗೆ ಸಮರ್ಪಿಸಬೇಕು ಎಂದರೆ ತನ್ನ ದೆಲ್ಲವನ್ನು ಆ ತ್ರಿವಿಧಕ್ಕೆ ಸಮರ್ಪಿಸಿ, ನಾನು ನನ್ನದು ಎಂಬುದನ್ನು ಇಲ್ಲವಾಗಿಸಿಕೊಂಡು ಆ ತ್ರಿವಿಧವೇ ತಾನೆಂದು ಭಾವಿಸುವುದು "ದಾಸೋಽಹಂಭಾವ"

"ಭಾವ, ವಿಷಯ ತುಂಬಾ ಗಹನವಾಗಿದೆ. ಅದನ್ನು ನಮಗೆ ತಿಳಿಯುವಂತೆ ಇನ್ನೂಕೊಂಚ ಸರಳವಾಗಿ ವಿವರಿಸಬೇಕು."

"ಆಗಲಿ; ವೀರಶೈವದಲ್ಲಿ ಪರಶಿವನು ಭಕ್ತರನ್ನು ಉದ್ಧರಿಸುವುದಕ್ಕಾಗಿ ಗುರು-ಲಿಂಗ-ಜಂಗಮ ರೂಪದಿಂದ ಕಾಣಿಸಿಕೊಂಡಿದ್ದಾನೆ. ಭಕ್ತನ ಶರೀರ (ತನು) ಮತ್ತು ಮನಸ್ಸುಗಳನ್ನು ಪರಿಪಕ್ವಗೊಳಿಸಿ ಅವನಿಗೆ ಲಿಂಗದೀಕ್ಷೆ ಮಾಡುವವನು ಗುರು. ಅಂಥ ಗುರುವಿನ ಸೇವೆಗೆ ತನುವನ್ನು ಸವೆಸಬೇಕು. ಲಿಂಗವನ್ನು ಮನಮುಟ್ಟಿ ಪೂಜಿಸಿ, ಆ ಶಿವನೇ ತಾನೆಂದು

---

* ಶರೀರಾದಿ ಪದಾರ್ಥಾಂಶ್ಚ ದತ್ವಾದಾನಂ ಸಮರ್ಪಣಂ।
ಸಮರ್ಪ್ಯ ಸೋಽಹಮಸ್ಮೀತಿ ದಾಸೋಽಹಂಭಾವ ಉಚ್ಯತೇ
—ಶಿವಾನುಭವಸೂತ್ರ (ಶಿವಾಗಮ)

ಭಾವಿಸಬೇಕು. ಇನ್ನು ತನ್ನದೆನ್ನುವ ಧನಕನಕಾದಿಗಳನ್ನು ತನ್ನನ್ನೂ ಮತ್ತು ಶಿವಸ್ವರೂಪವಾದ ಲೋಕದ ಸೇವೆಗಾಗಿ ಒಪ್ಪಿಸಿಕೊಂಡ ನಿರಂಜನನೂ ನಿರ್ಮಮನೂ ಆದ ಜಂಗಮನಿಗೆ ಸಮರ್ಪಿಸಿ, ಆತನಿಂದ ಲೋಕಾರಾಧನೆ ನಡೆಯಲು ನೆರವಾಗಬೇಕು, ಹಾಗೆ ತನು ಮನಧನಗಳನ್ನು ಗುರು-ಲಿಂಗ ಜಂಗಮರಿಗೆ ಸಮರ್ಪಿಸಿ. ಆ ತ್ರಿವಿಧಸ್ವರೂಪವೇ ತಾನೆಂದು ಭಾವಿಸಿ ನಿರ್ಲಿಪ್ತನಾಗಿರುವುದೇ ದಾಸೋಽಹಂಭಾವ!"

"ಭಾವ, ಇಷ್ಟು ಉದಾತ್ತವಾದ ವೀರಶೈವದ ದರ್ಜೆಗೆ ನಮ್ಮ ದೀಕ್ಷೆ ಏರಲಾರರು! ನಾವು ಪಡೆಯುತ್ತಿರುವ ಉಪನಯನ ಮತ್ತು ಲಿಂಗದೀಕ್ಷೆಗಳು ತುಂಬಾ ಸ್ಥೂಲವಾದವು. ಅವುಗಳಲ್ಲಿ ಇಷ್ಟು ವೈಶಾಲ್ಯ ಔದಾರ್ಯ ಮತ್ತು ಭಾಕ್ತಿಕ ಪುಷ್ಟಿಕಾಣುವುದಿಲ್ಲ. ಆದ್ದರಿಂದಲೇ ವೀರಶೈವರು ಪರಸ್ಪರ ಸಂಧಿಸಿದಾಗ "ಶರಣು! ಎಂದರೆ "ಶರಣು ಶರಣು!" ಎಂದು ತಮ್ಮ ವಿನಮ್ರತೆಯನ್ನು ಸೂಚಿಸುವುದನ್ನು ಕಾಣುತ್ತೇವೆ ಈ ಧರ್ಮದ ಪೂಜ್ಯ ಸ್ಥಾನದಲ್ಲಿರುವ ಗುರು–ಜಂಗಮರು ಸಹ ಭಕ್ತರು ವಂದಿಸಿದಾಗ ಅವರೂ ತಲೆಬಾಗಿ ತಮ್ಮ ಇಷ್ಟಲಿಂಗದ ಮೇಲೆ ಹಸ್ತ ವನ್ನಿಟ್ಟು "ಶಿವ! ಶಿವ!" ಎಂದು ನಮಿಸುವುದನ್ನು ಕಾಣುತ್ತೇವೆ. ಒಟ್ಟಿನಲ್ಲಿ ಹೇಳಬೇಕಾದರೆ ಅಹಂಕಾರ ಮಮಕಾರಗಳಿಂದ ಬೀಗುವ ನಮ್ಮ ಬ್ರಾಹ್ಮಣ್ಯವು ಪೂಜ್ಯ ಪೂಜಕರೀರ್ವರೂ ಶಿವಸ್ವರೂಪರೆಂದು ತಿಳಿ ಯುವ ವೀರಶೈವಕ್ಕೆ ಸಾಟಿಯಾಗಲಾರದು.

"ಹಾಗಾದರೆ ಈ ಆರಾಧ್ಯ ಬ್ರಾಹ್ಮಣರು ತಮ್ಮ ಹಿರಿಯರು ತಳೆದ ಬ್ರಾಹ್ಮಣ್ಯದ ದುರಭಿಮಾನ ಹಾಗೂ ಪ್ರಾಕೃತ ಬ್ರಾಹ್ಮಣ್ಯದ ಅಭಿಮಾನ ದಿಂದ ಪಾರಾಗಿ ಪರಿಶುದ್ಧವಾದ ಶಿವದೀಕ್ಷೆ ಪಡೆದು ಜನ್ಮಸಾರ್ಥಕ್ಯವನ್ನು ಪಡೆಯುವ ಕಾಲವು ಬರುವುದು ಯಾವಾಗ?"

"ಅಂಥ ಪವಿತ್ರ ಕಾಲವು ಬರಬೇಕಾದರೆ ಯುಗ ಪರಿವರ್ತನೆಯಿಂದ ಮಾತ್ರ ಸಾಧ್ಯ. ಏಕೆಂದರೆ ಇವರಿಗೆ ನಾವು ಶ್ರೇಷ್ಠ "ಎಂಬ ದುರಭಿಮಾನ" ತೊಲಗುವುದಕ್ಕೆ ಶಿವಕೃಪೆ (ಶಕ್ತಿ ಪಾತ) ಯಾಗಬೇಕು. ಗುರು ಕಾರಣ್ಯ ವಾಗಬೇಕು. ಶ್ರೋತ್ರಿಯ ಬಹ್ಮನಿಷ್ಠನಾದ ಅಂಥ ಮಹಾನುಭಾವನೊಬ್ಬ

ಹುಟ್ಟಿಬರಬೇಕು. ಪರಮಹಂಸಸ್ಥಿತಿಗೇರಿದ ಆ ಮಹಾಚಾರ್ಯನ ಪ್ರಭಾವದಿಂದ ಇವರ ಮನಸ್ಸುಗಳು ಪ್ರಾಂಜಲವಾಗಬೇಕು. ಆಗ ತಮ್ಮ ಉದ್ಧಾರವಾಗುತ್ತದೆ. ಅಂಥ ಮಹಾಚಾರ್ಯನ ಆಗಮನಕ್ಕಾಗಿ ನಾನೇ ಎಷ್ಟೋ ಸಲ ಪರಶಿವನಲ್ಲಿ ಅನನ್ಯ ಭಾವದಿಂದ ಪ್ರಾರ್ಥಿಸಿದ್ದೇನೆ."

ದೇಶಿಕರು ವಿವರಿಸಿದ ವೀರಶೈವ ದೀಕ್ಷೆಯು ತಮಗೆ ಉಪನಯನ ಕಾಲದಲ್ಲಿ ದೊರೆತಿರಲಿಲ್ಲ. ಸಂಪ್ರದಾಯದಂತೆ ಆಗ್ಗೆ ತಂದೆಯವರೇ ಲಿಂಗಧಾರಣ ಮಾಡಿ ಪಂಚಾಕ್ಷರ ಮಂತ್ರೋಪದೇಶವನ್ನು ಮಾಡಿದ್ದುದರ ನೆನಪು ಆರಾಧ್ಯರಿಗಾಯಿತು. ಅದರ ಕೊರಗು ಅವರ ಮನಸ್ಸಿನಲ್ಲಿ ನೆಲೆ ನಿಂತುದರ ಫಲವಾಗಿ ಆರಾಧ್ಯರು ಮತ್ತೆ ಪ್ರಶ್ನಿಸಿದರು—

"ನನ್ನನ್ನು ತುಂಬಾ ಬಾಧಿಸುತ್ತಿರುವ ಮತ್ತೊಂದು ಸಂದೇಹವನ್ನು ಭಾವನವರಲ್ಲಿ ವಿಜ್ಞಾಪಿಸಬೇಕೆಂದು ಆಸೆಯಾಗಿದೆ" ಎಂದರು ಕೈ ಜೋಡಿಸಿ ಆರಾಧ್ಯರು.

"ಅಗತ್ಯವಾಗಿ ಹೇಳಬಹುದು. ಸಂಕೋಚವೇತಕ್ಕೆ ?"
—ಎನ್ನುವಷ್ಟರಲ್ಲಿ ವಿಶ್ವಾರಾಧ್ಯ ಅಲ್ಲಿಗೆ ಬಂದು,

"ಅಪ್ಪಾಜಿ, ಸಂಜೆಯಾಗಿದೆ. ತೋಟದ ಕಡೆ ಹೋಗಿ ಬರಲು ಕತ್ತಲಾಗಬಹುದು !" ಎಂದ.

"ಅದು ಸರಿ, ಗುರುಲಿಂಗು ನಿನ್ನ ಸಂದೇಹವನ್ನು ಅಗತ್ಯವಾಗಿ ದೂರ ಮಾಡೋಣ. ರಾತ್ರೆ ಪ್ರಸಾದವಾದ ಬಳಿಕ ಈ ವಿಷಯವನ್ನು ಮುಂದುವರಿಸಿದರಾಯಿತು" ಎಂದು ಅವರು ಮೇಲೆದ್ದರು.

ಭಾವನವರನ್ನು ಹಿಂಬಾಲಿಸಿದ ಆರಾಧ್ಯರು ಶ್ರೀಪತಿಯೊಡನೆ ತೋಟದ ಹಾದಿ ಹಿಡಿದರು.

ಶ್ರೀಪತಿ ಕೇಳಿದ "ಅಪ್ಪಾಜಿ, ತಾತನವರು ಹೇಳಿದ್ದು ನನಗೇನೂ ಅರ್ಥವಾಗಲಿಲ್ಲ. ಏನಪ್ಪಾಜಿ, ಅವರು ಹೇಳಿದ್ದು ?"

"ಅದು ತಿಳಿಯುವುದು ನನಗೂ ಕಷ್ಟವೆ, ಆದರೆ ಈ ಚಿಕ್ಕ ವಯಸ್ಸಿಗೆ ಅಂಥ ಗಹನವಾದ ವಿಷಯವು ಒಮ್ಮೆಯೇ ನಿನಗೆ ತಿಳಿಯಲು ಸಾಧ್ಯವೆ ? ಆಗಲಿ, ನಾವು ನಾಳೆ ಊರಿಗೆ ಹಿಂದಿರುಗುವಾಗ ದಾರಿಯಲ್ಲಿ

ಅದನ್ನೆಲ್ಲ ವಿವರವಾಗಿ ನಿನಗೆ ಬಿಡಿಸಿ ಹೇಳುತ್ತೇನೆ" ಎಂದು ಅವನನ್ನು ಸುಮ್ಮನಿರಿಸಿದರು ಆರಾಧ್ಯರು.

ಸಂಜೆ ತೋಟದಲ್ಲೆಲ್ಲ ಸುತ್ತಾಡಿ ಮೂವರೂ ಮನೆಗೆ ಹಿಂದಿರುಗುವ ವೇಳೆಗೆ ಸುಮಾರು ಸಂಜೆಯ ಮೊದಲ ಝಾವ ಮುಗಿದಿತ್ತು.

ಬಂದವರನ್ನು ಮಣಿಕರ್ಣಿಕೆ ಸ್ನಾನಕ್ಕೆ ಎಬ್ಬಿಸಿದಳು. ಸ್ನಾನ-ಸಂಧ್ಯೆ-ಶಿವಾರ್ಚನಾದಿಗಳು ಮುಗಿದು ಅವರು ಪ್ರಸಾದ ಸೇವಿಸಿ ಮತ್ತೆ ಮನೆಯ ಅಂಗಳದಲ್ಲಿ ಕುಳಿತಾಗ, ದೇಶಿಕರು ಅಳಿಯಂದಿರನ್ನು ಎಚ್ಚರಿಸಿ

"ಏನಪ್ಪಾ, ನಿನ್ನ ಆ ಸಂಶಯ ?" ಎಂದರು.

ಆರಾಧ್ಯರು ಭಾವನವರಿಗೆ ವಂದಿಸಿ, ತಮ್ಮ ಸಂದೇಹವನ್ನು ಮಂಡಿಸಿದರು.

"ಭಾವ, ನೀವು ದೀಕ್ಷೆ ಮತ್ತು ಶಿವದೀಕ್ಷೆಗಳಿಗೆ ಇರುವ ವ್ಯತ್ಯಾಸವನ್ನು ಬಹು ಚೆನ್ನಾಗಿ ವಿವರಿಸಿ ನನ್ನ ಕಣ್ಣು ತೆರೆಸಿದ್ದೀರಿ. ಇದರಿಂದ ವೀರಶೈವದ ಇನ್ನೂ ಕೆಲವು ವೈಶಿಷ್ಟ್ಯಗಳನ್ನು ತಿಳಿಯಬೇಕೆನಿಸಿದೆ. ನೀವು ಬ್ರಾಹ್ಮಣ್ಯವು ಪ್ರಾಕೃತ ; ವೀರಶೈವವು ಅಪ್ರಾಕೃತ ಎಂದಿರಿ. ಹಾಗೆಂದರೆ ಏನು ?"

"ಪ್ರಾಕೃತ ಎಂದರೆ ಪ್ರಕೃತಿ ಸಿದ್ಧವಾದ ಅಥವಾ ಮಾನವ ಸಹಜವಾದ ಧರ್ಮ. ವೇದೋಕ್ತವಾದ ಬ್ರಾಹ್ಮಣಾದಿ ವರ್ಣಗಳು ಮತ್ತು ಬ್ರಹ್ಮಚರ್ಯಾದಿ ಆಶ್ರಮಗಳು ಪ್ರಕೃತಿಸಿದ್ಧವಾದವುಗಳು. ಅವು ಮಾನವನ ವಯೋಮಾನವನ್ನು ಮತ್ತು ಮಾನಸಿಕ ಪರಿಪಕ್ವತೆಯನ್ನು ಅನುಸರಿಸಿ ಹೇಳಲ್ಪಟ್ಟಿವೆ.

ವೇದದಲ್ಲಿನ ವರ್ಣಗಳ ಬಗ್ಗೆ ಬಂದಿರುವ ಮಾತು ಇದು. 'ಬ್ರಹ್ಮವನ್ನು ಬಲ್ಲವನು ಬ್ರಾಹ್ಮಣ. ಬಾಹುಬಲದಿಂದ ನಾಡಿನ ರಕ್ಷಣೆ ಮಾಡುವವನು ಕ್ಷತ್ರಿಯ. ಊರು (ತೊಡೆ) ಬಲದಿಂದ ನಾಡಿನಲ್ಲಿ ಸಂಚರಿಸಿ ಬೆಳೆದ ದವಸ ಧಾನ್ಯಗಳನ್ನು ಜನತೆಗೆ ಒದಗಿಸುವಲ್ಲಿ ತೊಡಗುವವನು ವೈಶ್ಯ. ಮತ್ತು ಲೋಕಸೇವೆಗಾಗಿ ತನ್ನನ್ನು ಒಪ್ಪಿಸಿಕೊಂಡವನು ಶೂದ್ರ' ಎಂಬ ನಿರ್ವಚನವಿದೆ. ಅದರಂತೆ ಮಾನವನ ಜೀವಮಾನ

ವನ್ನು ನಾಲ್ಕು ಭಾಗವಾಗಿ ವಿಂಗಡಿಸಿ, ಅದಕ್ಕೆ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸ ಎಂದು ಆಶ್ರಮಗಳು ನಾಲ್ಕು ಎನ್ನಲಾಗಿದೆ.

"ಮಾನವನ ಜೀವಮಾನವನ್ನು ಆ ರೀತಿ ವಿಂಗಡಿಸಿದ್ದು ಹೇಗೆ ?"

"ನೋಡು, ಸಾಮಾನ್ಯವಾಗಿ ಮಾನವನ ಆಯುಸ್ಸು 'ಶತಮಾನಂ ಭವತಿ ಶತಾಯುಃ ಪುರುಷಃ" ಎಂಬಂತೆ ಒಂದು ನೂರು ವರ್ಷ. ಅದರ ನಾಲ್ಕನೆಯ ಒಂದು ಭಾಗ ಎಂದರೆ ೨೫ ವರ್ಷಗಳು. ಈ ಅವಧಿಯಲ್ಲಿ ಮಾನವನು ವಿದ್ಯೆ-ಬುದ್ಧಿ ಕಲಿತು ಮುಂದಿನ ಜೀವನದ ಹೊಣೆಗಾರಿಕೆ ಯನ್ನು ನಿರ್ವಹಿಸುವ ಶಕ್ತಿಯನ್ನು ಗಳಿಸುವ ಕಾಲ. ಅದನ್ನು ಬ್ರಹ್ಮ ಚರ್ಯಾಶ್ರಮ ಎಂದು ಕರೆಯಲಾಗಿದೆ.

ಮುಂದಿನ ೨೫ ವರ್ಷಗಳನ್ನು ಗೃಹಸ್ಥಾಶ್ರಮದ ಕಾಲ ಎನ್ನಲಾಗಿದೆ. ಈ ಅವಧಿಯಲ್ಲಿ ಮಾನವ ಅನುರೂಪಳಾದ ಕನ್ಯೆಯನ್ನು ವಿವಾಹವಾಗಿ, ಯಾವುದಾದರೊಂದು ಪವಿತ್ರ ಕಾಯಕವನ್ನು ಅವಲಂಬಿಸಿ, ತಾನು ದುಡಿ ದುದನ್ನು ತನ್ನ ಕುಟುಂಬಕ್ಕೆ ಮಾತ್ರ ಸೀಮಿತಗೊಳಿಸದೆ ಸಮಾಜಕ್ಕೆ ನಾಡಿಗೆ ಹಂಚಿ, ಸತ್‌ಸಂತಾನವನ್ನು ಪಡೆದು ಅವರಿಗೆ ಒಳ್ಳೆಯ ಶಿಕ್ಷಣ ಇತ್ತು ನಾಡಿನ ಒಳ್ಳೆ ಪ್ರಜೆಯನ್ನಾಗಿ ಮಾಡುವ ಹೊಣೆ ಗೃಹಸ್ಥನಿಗೆ ಸೇರಿದ್ದು.

ಮೂರನೆಯದು, ವಾನಪ್ರಸ್ಥಾಶ್ರಮ. ಇಲ್ಲಿ ಮಾನವ ತನ್ನ ದೈಹಿಕವಾದ ವ್ಯವಹಾರಗಳನ್ನು ಸೀಮಿತಗೊಳಿಸಿ, ತನ್ನ ಮಕ್ಕಳಿಗೆ ಮನೆಯ ವ್ಯವಹಾರಗಳನ್ನು ವಹಿಸಿ, ತಾನು ಸಮಾಜ ಸೇವೆಗೆ ಯಥಾಶಕ್ತಿ ದುಡಿಯಬೇಕು.

ನಾಲ್ಕನೆಯದು ಸಂನ್ಯಾಸಾಶ್ರಮ. ಇಲ್ಲಿ ಮಾನವ ಲೌಕಿಕ ವಿಷಯ ಗಳಲ್ಲಿ ವಿರಕ್ತಿಯನ್ನು ತಳೆದು, ಪಾರಲೌಕಿಕ ಜೀವನದಲ್ಲಿ ಶಾಂತಿಯನ್ನು ಪಡೆಯಲು ಸತ್ಸಂಗ, ಸದ್ವಿಚಾರ ಶ್ರವಣ, ಮನನ ಮತ್ತು ನಿಧಿಧ್ಯಾಸನ ಎಂದರೆ ಮನನ ಮಾಡಿದ ಸದ್ ವಿಚಾರಗಳನ್ನು ತನ್ನ ನಿತ್ಯಾನುಷ್ಠಾನದಲ್ಲಿ ತಂದು ಅಂತರ್ಮುಖಿಯಾಗಿ ಸಂತೃಪ್ತನಾಗಿರುವುದು.

ವೇದೋಕ್ತವಾದ ವರ್ಣ ಮತ್ತು ಆಶ್ರಮಗಳು ಏರ್ಪಟ್ಟದ್ದು ಘನವಾದ ಈ ಉದ್ದೇಶ ಸಾಧನೆಗಾಗಿ. ಆದರೆ ಇವುಗಳನ್ನು ಕಾರ್ಯರೂಪಕ್ಕೆ ತರುವಾಗ ಮಾನವ ತಳೆದ ದುರಭಿಮಾನದ ಫಲ ಉಚ್ಚ-ನೀಚ ಭಾವ. ಎಂದರೆ ತಾನು ಶ್ರೇಷ್ಠ ಮತ್ತೊಬ್ಬ ಕನಿಷ್ಠ ಎಂಬಭಾವ! ಇದರಿಂದ ದುರಭಿಮಾನ ಬೆಳೆದು ಸಜ್ಜನಿಕೆ ಹಾಳಾಯಿತು."

"ವರ್ಣಾಶ್ರಮಗಳಲ್ಲಿ ಅಭಿಮಾನವಿರುವುದು ಒಳ್ಳೆಯದೇ ಅಲ್ಲವೆ?"

"ನಿಜ. ವರ್ಣ ಮತ್ತು ಆಶ್ರಮಗಳಲ್ಲಿ ಸದುದ್ದೇಶದ ಅಭಿಮಾನವಿದ್ದರೆ ಒಳ್ಳೆಯದೆ! ಆದರೆ ಅದು ದುರಭಿಮಾನವಾದರೆ ಲೋಕಕ್ಕೇ ಕಂಟಕ."

"ಭಾವ, ಈ ವಿಷಯವನ್ನು ಸ್ವಲ್ಪ ಬಿಡಿಸಿ ಹೇಳಬೇಕು."

"ಆಗಲಿ. ನೋಡು, ವೇದದಲ್ಲಿ ಹೇಳಿರುವ ವರ್ಣಾಶ್ರಮ ಧರ್ಮಗಳು ಪ್ರಾಕೃತ ಎಂದೆನಲ್ಲ; ಅಂದರೆ ಅವು ಮಾನವ ಸ್ವಭಾವ (ಪ್ರಕೃತಿ)ಕ್ಕೆ ಅನುಗುಣವಾದವು ಎಂದೇ ಅರ್ಥ. ಇದರಿಂದ ಈ ವರ್ಣಾಶ್ರಮಗಳು ಮಾನವನ ಗುಣ ಮತ್ತು ಕರ್ಮಗಳ ಸ್ವಭಾವವನ್ನು ಅನುಸರಿಸಿ ಏರ್ಪಟ್ಟವುಗಳು."

"ಹೌದು, ಅದು ಎಲ್ಲರ ಅನುಭವದಲ್ಲಿಯೂ ಇದೆ."

"ಹೀಗಿರುವ ಅನುಭವಕ್ಕೆ ವಿರುದ್ಧವಾಗಿ ಮುನ್ಮುಂದೆ ಕೆಲವರು ಈ ವರ್ಣಗಳು ಜನ್ಮದಿಂದ ಉಂಟಾದುವು. ಬ್ರಾಹ್ಮಣನ ಹೊಟ್ಟೆಯಲ್ಲಿ ಹುಟ್ಟಿದವನು ಅವನು ಎಂಥದೇ ಗುಣ-ಕರ್ಮ-ಸ್ವಭಾವಗಳನ್ನು ಹೊಂದಿದ್ದರೂ ಅವನು ಬ್ರಾಹ್ಮಣನೇ ಎಂದು ಸಾಧಿಸತೊಡಗಿದರು. ಉದಾಹರಣೆಗೆ ಋಷಿಗಳಲ್ಲಿ ಒಬ್ಬನಾದ ವಿಶ್ವಾಮಿತ್ರನ ಹೆಸರನ್ನು ನೀನು ಬಲ್ಲೆ!"

"ಹೌದು, ಗಾಯತ್ರೀ ಮಂತ್ರ ದ್ರಷ್ಟಾರ ಈ ವಿಶ್ವಾಮಿತ್ರನೇ ಅಲ್ಲವೆ? ಉಪನಯನದಲ್ಲಿ ಉಪದೇಶ ಮಾಡುವ ಈ ಮಂತ್ರವನ್ನು ಜಪಿಸುವುದರಿಂದಲ್ಲವೇ ನಾವು ಬ್ರಾಹ್ಮಣರೆನಿಸಿರುವುದು?"

"ನಿಜ, ಚೆನ್ನಾಗಿ ಗ್ರಹಿಸಿದ್ದೀಯೆ. ಆದರೆ ಈ ವಿಶ್ವಾಮಿತ್ರ ಜನ್ಮತಃ ಬ್ರಾಹ್ಮಣನಲ್ಲ. ಅವನು ಹುಟ್ಟಿದ್ದು ಕ್ಷತ್ರಿಯ ವಂಶದಲ್ಲಿ. ಆಗ ಅವನ ಹೆಸರು 'ಗಾಧಿರಾಜ' ಎಂದು. ಅದೊಂದು ದೊಡ್ಡ ಕತೆ."

"ಭಾವ, ಆ ಕತೆಯನ್ನು ಸೂಕ್ಷ್ಮವಾಗಿ ಹೇಳಬೇಕು."

"ಇದರಂತೆ ವಶಿಷ್ಠ–ಅರುಂಧತಿಯರ ಪ್ರಸಗೂ ನಿನಗೆ ಗೊತ್ತು."

"ಚೆನ್ನಾಗಿ ಬಲ್ಲೆ. ಮದುವೆಯಲ್ಲಿ ಅರುಂಧತಿ 'ದರ್ಶನ'ವೂ ಒಂದು ವಿಧಿಯಲ್ಲವೆ ?"

"ಅವಳು ಪತಿವ್ರತಾ ಶಿರೋಮಣಿ. ವಶಿಷ್ಠ ಮತ್ತು ಅರುಂಧತಿಯರ ಆದರ್ಶವನ್ನು ಮುಂದೆ ಈ ದಂಪತಿಗಳು ಅನುಸರಿಸಬೇಕು ಎಂಬುದು ಅದರ ಅರ್ಥ. ವಶಿಷ್ಠನಿಗೆ ಬ್ರಹ್ಮರ್ಷಿ ಎಂಬ ಹೆಸರಿದೆ.

ಗಾಧಿರಾಜನು ಒಮ್ಮೆ ತನ್ನ ಸೈನ್ಯ ಸಮೇತ ಬೇಟೆಗೆ ಹೊರಟು ವಶಿಷ್ಠಾಶ್ರಮಕ್ಕೆ ಬಂದ. ಬ್ರಹ್ಮರ್ಷಿ ವಶಿಷ್ಠನ ಆಶ್ರಮಧೇನು (ಹಸು) ಬಂದವರಿಗೆಲ್ಲ ಸೊಗಸಾದ ಆತಿಥ್ಯ ನೀಡಿತು."

"ಸಾಮಾನ್ಯವಾದ ಆ ಹಸುವಿಗೆ ಅಂಥ ಶಕ್ತಿ ಹೇಗೆ ಬಂತು ?"

"ಅದು ಸಾಮಾನ್ಯ ಧೇನುವಲ್ಲ. ಅದು 'ಕಾಮಧೇನು'. ಅದು ದೇವೇಂದ್ರನಿಂದ ವಶಿಷ್ಠನಿಗೆ ಆಶ್ರಮ ನಿರ್ವಹಣೆಗಾಗಿ ಬಳುವಳಿಯಾಗಿ ಬಂದಿತ್ತು."

"ಆಮೇಲೆ ಏನಾಯಿತು ?"

"ಆ ಧೇನುವಿನ ಹಿರಿಮೆಯನ್ನು ಮನಗಂಡ ರಾಜ, ಆ ಧೇನುವನ್ನು 'ನನಗೆ ಕೊಡು' ಎಂದ. ಆದರೆ ಅದಕ್ಕೆ ವಶಿಷ್ಠ ಒಪ್ಪಲಿಲ್ಲ. ಈ ಕಾರಣಕ್ಕಾಗಿ ಅವರಿಬ್ಬರಲ್ಲಿ ಘೋರ ಕದನವಾಯಿತು,

ಗಾಧಿರಾಜನದು ಅಪಾರ ಸೇನೆ, ವಿವಿಧ ಶಸ್ತ್ರಾಸ್ತ್ರಗಳು. ವಶಿಷ್ಠ ಮೊದಲೇ ಬ್ರಹ್ಮರ್ಷಿ ! ಅವನಲ್ಲಿದ್ದುದು ಬ್ರಹ್ಮದಂಡವೊಂದೇ ! ಅವನು ಅದನ್ನು ರಾಜನಿಗೆ ಎದುರಾಗಿ ನೆಟ್ಟ.

ರಾಜನು ಪ್ರಯೋಗಿಸಿದ ಎಲ್ಲ ಆಯುಧಗಳೂ ಆ ಬ್ರಹ್ಮದಂಡದ ಮುಂದೆ ನಿರರ್ಥಕವಾದವು. ಅದನ್ನು ಕಂಡ ರಾಜನಿಗೆ ಸೋಜಿಗ ವಾಯಿತು ಮತ್ತು ಅವನಲ್ಲಿ ವಿರಕ್ತಿ ಮೂಡಿತು. ಬ್ರಹ್ಮತೇಜಸ್ಸಿನ ಮುಂದೆ ತನ್ನ ಕ್ಷಾತ್ರ ತೇಜಸ್ಸು ವ್ಯರ್ಥವೆನಿಸಿತು. "ಧಿಕ್ ಕ್ಷತ್ರಿಯಬಲಂ ಬ್ರಹ್ಮತೇಜೋ ಬಲಂಬಲಂ" ಎಂದು ನಿರ್ಧರಿಸಿದ ರಾಜ ತನ್ನ ರಾಜ್ಯ–ಕೋಶಗಳನ್ನು ಮಗನಿಗೆ ಒಪ್ಪಿಸಿ, ತಪಸ್ಸಿಗೆ ಕುಳಿತ !

ಅವನ ತಪಸ್ಸನ್ನು ಕೆಡಿಸುವ ಪ್ರಯತ್ನಗಳು ಅನೇಕ. ಅನೇಕ ವಿಘ್ನಗಳೂ ಬಂದವು. ಆದರೂ ವಿಶ್ವಾಮಿತ್ರ ಉಗ್ರ ತಪಸ್ಸನ್ನು ಮಾಡಿದ. ಇದರಿಂದ ಅವನಲ್ಲಿದ್ದ ಕಾಮ-ಕ್ರೋಧಾದಿ ತಾಮಸ ಗುಣ ಗಳು ಮತ್ತು ಆಸೆ-ಆಕಾಂಕ್ಷೆ ಮೊದಲಾದ ರಾಜಸ ಗುಣಗಳು ಸಂಪೂರ್ಣ ವಾಗಿ ಅಳಿದು, ಕೇವಲ ಸಾತ್ವಿಕ ಗುಣದಿಂದ ಅವನು ಪುಟಕ್ಕಿಟ್ಟ ಅಪರಂ ಜಿಯಂತೆ ಪರಿಶುದ್ಧನಾದ. ವಿಶ್ವಾಮಿತ್ರನ ದೃಢಸಂಕಲ್ಪಕ್ಕೆ ಮಣಿದ ವಶಿಷ್ಠ ಅವನಿಗೆ ಮಹರ್ಷಿ ದೀಕ್ಷೆ ಇತ್ತ, 'ವಿಶ್ವಕ್ಕೆಲ್ಲ ಮಿತ್ರನಾದ ನೀನು ವಿಶ್ವಾಮಿತ್ರ. ನೀನೂ ನನ್ನಂತೆ ಬ್ರಹ್ಮರ್ಷಿ' ಎಂದು ಮನ್ನಿಸಿದ.

ವಿಶ್ವಾಮಿತ್ರೋಪಜ್ಞವಾದ ಗಾಯತ್ರೀ ಮಂತ್ರವು 'ವೇದಮಾತೆ' ಎಂದು ಕರೆಯಲ್ಪಟ್ಟಿದೆ-ಅಲ್ಲದೆ ಅದು ಉಪನಯನದಲ್ಲಿ ಉಪದೇಶ ಮಂತ್ರವೂ ಆಯಿತು.

ಆದ್ದರಿಂದ ಮಾನವ ತಾನು ಯಾವುದೇ ವರ್ಣದಲ್ಲಿ ಹುಟ್ಟಿರಲಿ ಅವನು ತನ್ನ ಉತ್ತಮ ಗುಣ-ಕರ್ಮ–ಸ್ವಭಾವಗಳ ಸಾಧನೆಯಿಂದ ಬ್ರಾಹ್ಮಣ-ಕ್ಷತ್ರಿಯ ಮುಂತಾದ ವರ್ಣಗಳನ್ನು ಹೊಂದಬಹುದು. ಹಾಗ ಲ್ಲದೆ ದುರ್ನಡತೆಯಿಂದ ಮೇಲಿನ ವರ್ಣದವರೂ ಸಹ ಕೆಳಗಿನ ವರ್ಣದವ ರೆನಿಸಬಹುದು' ಎಂದು ಮನು ತನ್ನ ಸ್ಮೃತಿಯಲ್ಲಿ ಸೂಚಿಸಿದ್ದಾನೆ."

"ಹಾಗಾದರೆ ನಾವು ಬ್ರಾಹ್ಮಣರಾಗಿರುವುದು, ನಾವು ಬ್ರಾಹ್ಮಣರಲ್ಲಿ ಹುಟ್ಟಿದ್ದರಿಂದ ಅಲ್ಲವೆ ?"

"ಬ್ರಾಹ್ಮಣರಲ್ಲಿ ಹುಟ್ಟಿರುವುದು ನಿಜ. ಆದರೆ ಬ್ರಾಹ್ಮಣ (ಬ್ರಹ್ಮ ಜಾನಾತಿ ಬ್ರಾಹ್ಮಣಃ) ಎಂಬ ಸಿದ್ಧಿಯನ್ನು ಪಡೆಯಲು ಶ್ರಮಿಸುತ್ತಿರುವು ದನ್ನು ಮರೆಯಬಾರದು."

ಸನಾತನ ವೈದಿಕ ಧರ್ಮದ ವರ್ಣಾಶ್ರಮ ಧರ್ಮಗಳು ಮುನ್ಮುಂದೆ ಸಂಕುಚಿತ ಸ್ವಭಾವದ, ಮೇಲಿನ ವರ್ಣದವರ ದೌರ್ಜನ್ಯದಿಂದ ಕಲುಷಿತ ವಾದವು ಎಂಬುದನ್ನು ಮುನ್ಮುಂದಿನ ಸ್ಮೃತಿಗಳು ಉಲ್ಲೇಖಿಸಿವೆ. ಅಲ್ಲಿ ಮೇಲಿನ ವರ್ಣದವರು ಶ್ರೇಷ್ಠ. ಉಳಿದವರು ಕನಿಷ್ಠ ಎಂಬ ಭಾವವು ಅಳವಟ್ಟು ಕೆಳವರ್ಣದವರ ಶೋಷಣೆ ಆರಂಭವಾಯಿತು. ಇದರಲ್ಲಿ ಸಿಂಹ ಪಾಲು ಅಗ್ರವರ್ಣದ್ದು. ಮನುಸ್ಮೃತಿಯ ಒಂಬತ್ತನೆಯ ಅಧ್ಯಾಯ ಇದನ್ನು ಕೂಲಂಕಷವಾಗಿ ಚಿತ್ರಿಸಿದೆ."

"ಇನ್ನು ಅಪ್ರಾಕೃತವು ಯಾವುದು ?"

"ಅದೇ ವೀರಶೈವ ಧರ್ಮ."

"ಅದು ಅಪ್ರಾಕೃತವು ಹೇಗೆ ?"

"ಅಪ್ರಾಕೃತ ಎಂದರೆ ಹಿಂದೆ ಹೇಳಿದ 'ಹುಟ್ಟನಿಂದ ವರ್ಣಾಶ್ರಮ ಗಳನ್ನು ಅನುಸರಿಸುವ ಧರ್ಮಕ್ಕೆ ಹೊರತಾದದ್ದು."

"ಹಾಗಾದರೆ ವೀರಶೈವದಲ್ಲಿ ವರ್ಣಾಶ್ರಮಗಳಿಲ್ಲವೆ ?"

"ಇವೆ. ಆದರೆ ಅವೂ ಪ್ರಾಕೃತವಲ್ಲ ! ಅಪ್ರಾಕೃತ. ಆದ್ದರಿಂದಲೆ ಅದನ್ನು 'ಅತಿವರ್ಣಾಶ್ರಮ' ಎಂದು ಕರೆಯಲಾಗಿದೆ."

"ಇಲ್ಲಿ 'ಅತಿ' ಉಪಸರ್ಗಕ್ಕೆ 'ಅತಿಕ್ರಮಿಸಿದ್ದು' ಎಂಬ ಅರ್ಥವಿರು ವುದರಿಂದ 'ವರ್ಣಾಶ್ರಮವಿಲ್ಲದ್ದು' ಎಂಬ ಅರ್ಥ ಬರುವುದಿಲ್ಲವೆ ?"

"ಇಲ್ಲ, 'ಅತಿ ಎಂಬ ಉಪಸರ್ಗಕ್ಕೆ ಅತಿಕ್ರಮಿಸಿದ್ದು' ಎಂಬ ಅರ್ಥ ವಿರುವಂತೆ 'ಅತಿಶಯ' ಎಂಬ ಅರ್ಥವೂ ಇದೆ. ಇಲ್ಲಿನ ವರ್ಣಾಶ್ರಮ ಗಳು ಅತಿಶಯವಾದ ವರ್ಣಾಶ್ರಮಗಳು ಎಂದು ಹೇಳಲ್ಪಟ್ಟಿವೆ."

"ಹಾಗಾದರೆ, ಅಂಥ ಅತಿಶಯವು ಯಾವುದು ?"

"ಪ್ರಾಕೃತ ವರ್ಣಾಶ್ರಮಗಳ ಸ್ವರೂಪವನ್ನು ಹೇಳಿದ್ದೇನೆ. ಅಪ್ರಾ ಕೃತ ಅಥವಾ ಅತಿವರ್ಣಾಶ್ರಮಗಳ ಸ್ವರೂಪವನ್ನು ಈಗ ಹೇಳಲಾಗುತ್ತದೆ. ಮಾನವನು ತಾನು ಹುಟ್ಟುವಾಗ ಪ್ರಾಕೃತವಾದ ಯಾವುದೇ ವರ್ಣ ಅಥವಾ ಆಶ್ರಮದವನಾಗಿರಲಿ; ಅವನು ಗುರುಕೃಪೆಗೆ ಪಾತ್ರನಾಗಿ ಶಿವ

ದೀಕ್ಷೆ ಪಡೆದು ಲಿಂಗಧಾರಿಯಾದ ಮಾತ್ರದಿಂದ ಅವನು ಗುಣಕರ್ಮಸಿದ್ಧವಾದ 'ಅತಿವರ್ಣಾಶ್ರಮಿ' ಎನಿಸುತ್ತಾನೆ."

"ಹಾಗೆಂದು ಎಲ್ಲಿ, ಯಾರು ಹೇಳಿದ್ದಾರೆ ?''

"ಶಿವಾಗಮಗಳಲ್ಲಿ ಪರಶಿವನು ಹೇಳಿದ್ದಾನೆ."*

"ನಮ್ಮ ಮಹರ್ಷಿಗಳಲ್ಲಿ ಅತಿವರ್ಣಾಶ್ರಮಿಗಳಿದ್ದಾರೆಯೆ ? ಇದ್ದರೆ ಅವರು ಯಾರು ?"

"ಅಗಸ್ತ್ಯ, ಜೈಮಿನಿ, ವಿಶ್ವಾಮಿತ್ರ, ಕಾಶ್ಯಪ, ಭಾರದ್ವಾಜ, ಆಂಗೀರಸ, ಅತ್ರಿ, ವಶಿಷ್ಠ ಮತ್ತು ರೋಮಹರ್ಷಣ ಮುಂತಾದವರು ಅತಿವರ್ಣಾಶ್ರಮಿಗಳೆಂದೂ, ಅವರು ವೀರಶೈವರೆಂದೂ, ನೀಲಕಂಠಾಚಾರ್ಯರು ತಮ್ಮ ಸೂತ್ರಭಾಷ್ಯದಲ್ಲಿ ಉಲ್ಲೇಖಿಸಿದ್ದಾರೆ."**

"ಹಾಗಾದರೆ ನಮ್ಮ ಗೋತ್ರ ಪುರುಷರೆನಿಸಿರುವ ಕಾಶ್ಯಪ, ಭಾರದ್ವಾಜ, ಅತ್ರಿಗಳೂ ಅತಿವರ್ಣಾಶ್ರಮಿಗಳೇ ಎಂದಂತಾಯಿತು "

"ನಿಜ, ಜೀವನ್ಮುಕ್ತರಾದ ಇವರನ್ನು ಅತಿವರ್ಣಾಶ್ರಮಿಗಳೆಂದೂ, ಲಿಂಗಧಾರಣರೂಪ ಶಿವದೀಕ್ಷೆ ಪಡೆದವರೆಂದೂ ಅಲ್ಲಿಯೇ ಹೇಳಿದೆ."

"ಹಾಗಾದರೆ ಅವರ ವಂಶದಲ್ಲಿ ಬಂದಿರುವ ನಾವೂ ಸಹ ಲಿಂಗಧಾರಣಾತ್ಮಕ ಶಿವದೀಕ್ಷೆ ಪಡೆದಿರುವುದರಿಂದ ವೀರಶೈವರೇ ಆಗಿರುವೆವಲ್ಲವೆ ?"

"ಇಲ್ಲ. ನಮ್ಮದು ಪ್ರಾಕೃತ ಬ್ರಾಹ್ಮಣ್ಯಸಮ್ಮತವಾದ ಶಿವದೀಕ್ಷೆ. ಏಕೆಂದರೆ ಇಲ್ಲಿ ಹಿಂದೆಯೇ ಹೇಳಿದಂತೆ ಈ ದೀಕ್ಷೆ ಕೊಟ್ಟವನು ನಮ್ಮ ದೇಹಕ್ಕೆ

---

* ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತಿಸ್ತು ವಾ ।
ಯಸ್ತು ಲಿಂಗಾಂಗಸಂಯುಕ್ತಸ್ಸಏವಾತ್ಯಾಶ್ರಮೀ ಭವೇತ್ ॥
ಬ್ರಾಹ್ಮಣಃ ಕ್ಷತ್ರಿಯೋ ವಾಪಿ ವೈಶ್ಯಃ ಶೂದ್ರಸ್ತು ವಾ ಭವೇತ್ ।
ಯಸ್ತು ಲಿಂಗಾಂಗಸಂಯುಕ್ತಸ್ಸಏವಾತ್ಯಾಶ್ರಮೀ ಭವೇತ್ ॥

** ಕ್ರಿಯಾಸಾರ ಉ. ೧, ೧೪-೧೫*

ಕಾರಣನಾದ ಪ್ರಾಕೃತ ತಂದೆ. ಅಂದ ಮೇಲೆ ಈ ಶಿವದೀಕ್ಷೆ ಅಪ್ರಾಕೃತ ಶಿವದೀಕ್ಷೆಯಾಗಬಲ್ಲುದೆ ?"

"ಹಾಗಾದರೆ ವೀರಶೈವವು ನಾವು ಹೇಳುವ ಕಾಶ್ಯಪಾದಿಗಳನ್ನು ಗೋತ್ರಪುರುಷರೆಂದು ಒಪ್ಪಿಲ್ಲವೆ ?"

"ಇಲ್ಲ."

"ಹಾಗಾದರೆ ವೀರಶೈವ ಗೋತ್ರಪುರುಷರು ಯಾರು ?"

"ಶಿವಾಗಮಗಳ ಪ್ರಕಾರ ಅತಿವರ್ಣಾಶ್ರಮವೆನಿಸಿರುವ ವೀರಶೈವ ಧರ್ಮಕ್ಕೆ ಪರಶಿವನೇ ಮೊದಲ ಸ್ಥಾಪಕ. ಶಿವೋಕ್ತವಾದ ಆಗಮಧರ್ಮವನ್ನು ಕೈಲಾಸದಲ್ಲಿ ಮೊದಲು ಪ್ರಕಾಶಪಡಿಸಿದವರು ವೀರ-ನಂದಿ-ಭೃಂಗಿ-ವೃಷಭ ಮತ್ತು ಸ್ಕಂದ ಎಂಬ ಪ್ರಮಥರು. ಇವರ ಬಳಿವಿಡಿದು ಬಂದ ರೇಣುಕ-ದಾರುಕ-ಘಂಟಾಕರ್ಣ-ಗೋಕರ್ಣ ಮತ್ತು ವಿಶ್ವಕರ್ಣರೆಂಬ ಆಚಾರ್ಯರು ಭೂಲೋಕದಲ್ಲಿ ಐದು ಧರ್ಮಪೀಠಗಳನ್ನು ಸ್ಥಾಪಿಸಿ, ಜಗದ್ಗುರುಗಳೆನಿಸಿದ್ದಾರೆ."

"ಆ ಧರ್ಮಪೀಠಗಳು ಯಾವುವು ? ಅವು ಎಲ್ಲಿವೆ ?"

"ಹಿಮವತ್ಕೇದಾರ, ಕಾಶೀ, ಶ್ರೀಶೈಲ, ರಂಭಾಪುರಿ ಮತ್ತು ಉಜ್ಜನಿ ಎಂಬಲ್ಲಿ ಅವು ನಡೆದು ಬರುತ್ತಿವೆ."

"ಓಹೋ, ಶ್ರೀಶೈಲದಲ್ಲಿರುವ ಜಗದ್ಗುರುಗಳನ್ನು ನಮ್ಮ ಹಿಂದಿನ ಹಿರಿಯರು ಸಂದರ್ಶಿಸಿದ್ದವರು ಇವರೇ ಅಲ್ಲವೆ ?"

"ಹೌದು. ಈಗ ಕಾಶಿಯಲ್ಲಿ ವಿಶ್ವಾರಾಧ್ಯ ಮಹಾವಿದ್ಯಾಪೀಠವನ್ನು ಸ್ಥಾಪಿಸಿರುವವರೂ ಈ ಐವರಲ್ಲಿ ಸೇರಿದವರೇ ಆಗಿದ್ದಾರೆ."

"ಇನ್ನು ಕಡೆಯದಾಗಿ ಒಂದು ಸಂದೇಹ ಮಾತ್ರ ಇದೆ."

"ಅದು ಯಾವುದು ಹೇಳು !"

"ಈಗ ಕಾಶ್ಯಪಾದಿಗಳನ್ನು ನಮ್ಮ ಗೋತ್ರಪುರುಷರೆಂದು ಹೇಳುತ್ತಿದ್ದೇವೆ. ನಮ್ಮ ಗೋತ್ರಗಳಿಗೂ, ವೀರಶೈವದ ಗೋತ್ರಗಳಿಗೂ ಇರುವ ವ್ಯತ್ಯಾಸವೇನು ?"

"ಈ ವಿಷಯವೂ ಮುಖ್ಯವಾದದ್ದೆ ! ಏಕೆಂದರೆ ನಮ್ಮ ಗೋತ್ರ ಪುರುಷರಾದ ಕಾಶ್ಯಪಾದಿಗಳ ವಂಶದವರು ನಾವು. ಅದರಂತೆ ವೀರ ಶೈವವು ಹೇಳುವ ನಂದ್ಯಾದಿ ಪ್ರಮಥರು ಮತ್ತು ಅವರ ಬಳಿವಿಡಿದು ಬಂದಿರುವ ರೇಣುಕಾದಿಗಳು ವೀರಶೈವದ ಗೋತ್ರಪುರುಷರು ಎಂಬುದು ಸ್ಪಷ್ಟವಾಗಿದೆ. ಆದರೆ ಇವೆರಡಕ್ಕೂ ಇರುವ ವ್ಯತ್ಯಾಸವು ಇಲ್ಲಿ ಗಮನಿಸ ತಕ್ಕದ್ದು.

ಸಾಮಾನ್ಯವಾಗಿ ಗೋತ್ರ ಶಬ್ದವು 'ವಂಶ'ವೆಂಬ ಅರ್ಥದಲ್ಲಿದೆ. ವಶಿಷ್ಠಾದಿಗಳು ಗೋತ್ರ ಪುರುಷರಾದದ್ದು ಅವರು ಗೋವುಗಳನ್ನು (ಗೋ+ತ್ರ) ರಕ್ಷಿಸುತ್ತಿದ್ದದರಿಂದ. ಆ ಮಹರ್ಷಿಗಳ ಕಾಲದಲ್ಲಿ ರಾಜರು ಯಜ್ಞ ಯಾಗಾದಿಗಳನ್ನು ಮಾಡಿಸುತ್ತಿದ್ದ ಅವರಿಗೆ ಗೋವುಗಳನ್ನು ಯಥೇಚ್ಛವಾಗಿ ದಾನ ಮಾಡುತ್ತಿದ್ದರು. ಅವರಿಗೆ ಗೋವುಗಳೇ ಧನವಾಗಿದ್ದುದರಿಂದ ಅವರು 'ಗೋಧನರು'.

ಈ ಋಷಿಗಳಲ್ಲಿ ಒಬ್ಬೊಬ್ಬನದೂ ಒಂದೊಂದು ಗೋತ್ರ. ಪ್ರತಿಯೊಬ್ಬ ಋಷಿಗೂ ಒಂದೊಂದು ಗೋವಿನ ದೊಡ್ಡಿ ಇತ್ತು. ಆಯಾ ವಂಶದವರು ಅದನ್ನು ರಕ್ಷಿಸುತ್ತಿದ್ದರು. ಒಂದೇ ಗೋತ್ರ(ವಂಶ)ದಲ್ಲಿ ಶರೀರ ಸಂಬಂಧ ಮಾಡುವುದು 'ಸಗೋತ್ರವಿವಾಹ.' ಒಂದೇ ರಕ್ತ ಸಂಬಂಧಿಗಳಲ್ಲಿ ಕೊಟ್ಟು-ತರುವುದು ಕ್ಷೀಣ ಸಂತಾನಕ್ಕೆ ಕಾರಣವಾದ್ದರಿಂದ ಅದು ನಿಷಿದ್ಧವೆನಿಸಿತು. ಆದಕ್ಕಾಗಿ ಭಿನ್ನಗೋತ್ರಗಳಲ್ಲಿ ಶರೀರ ಸಂಬಂಧ ಮಾಡುವ ಪದ್ಧತಿ ಬಳಕೆಯಲ್ಲಿ ಬಂತು."

"ವೀರಶೈವದಲ್ಲಿ ಸಗೋತ್ರವಿವಾಹ ನಿಷೇಧವಿಲ್ಲವೆ ?"

"ಇಲ್ಲ; ಏಕೆಂದರೆ ವೀರಶೈವದಲ್ಲಿರುವುದು 'ಋಷಿಗೋತ್ರ'ಗಳಲ್ಲ, ಅವು ಪ್ರಮಥಗೋತ್ರಗಳು.

ಗೋತ್ರವು ಎರಡು ವಿಧ. 'ಸಂಖ್ಯಾವಂಶ್ಯೇನ' ಎಂಬ ಪಾಣಿನಿ ಸೂತ್ರ ವ್ಯಾಖ್ಯಾನದಲ್ಲಿ ವಂಶ (ಗೋತ್ರ)ವು ಎರಡು ವಿಧ. ವಿದ್ಯೆ ಮತ್ತು

ಜನ್ಮ ಎಂದು ಹೇಳಿದೆ. ವಿದ್ಯೆ ಎಂದರೆ ಶಿವಪಂಚಾಕ್ಷರೀ ವಿದ್ಯೆ. 'ಮೂಲಂ ವಿದ್ಯಾಶಿವಃ ಶೈವಸೂತ್ರಂ ಪಂಚಾಕ್ಷರಸ್ತಥಾ' (ಸಿ. ಶಿ. ೮-೨೩) ಎಂದು ಆಚಾರ್ಯರು ಸೂಚಿಸಿದ್ದಾರೆ. ಆದ್ದರಿಂದ ಪುತ್ರ-ಪೌತ್ರ ಮೊದಲಾದ ಸಂತತಿಗೆ ಗೋತ್ರತ್ವ ವ್ಯವಹಾರವಿರುವಂತೆ ಒಂದೇ ಗೋತ್ರದ ಗುರುವಿನಿಂದ ಶಿವದೀಕ್ಷೆ ಹೊಂದಿ ಪಂಚಾಕ್ಷರ ಮಹಾಮಂತ್ರೋಪದೇಶ ಪಡೆದ ಶಿಷ್ಯ-ಪ್ರಶಿಷ್ಯರು ಅದೇ ಗುರುವಿನ ಗೋತ್ರಕ್ಕೆ ಸೇರಿದವರಾಗುತ್ತಾರೆ. ಆದರೆ ಆ ಗೋತ್ರವು ರಕ್ತಸಂಬಂಧದ ಗೋತ್ರವಲ್ಲದ್ದರಿಂದ ಅಲ್ಲಿ ಕ್ಷೀಣ ಸಂತಾನತ್ವದ ಪ್ರಸಕ್ತಿ ಇರುವುದಿಲ್ಲ. ಉದಾಹರಣೆಗೆ ಒಬ್ಬನೇ ಗುರುವಿನಿಂದ ಶಿವದೀಕ್ಷೆ ಪಡೆದ ಬೇರೆ ಬೇರೆ ಕಾಯಕದ ವೀರಶೈವ ಸಮಾಜದಲ್ಲಿ ಪರಸ್ಪರ ಬಂಧುತ್ವವಿರುವುದನ್ನು ಇಂದಿಗೂ ಕಾಣಬಹುದು. ಆದ್ದರಿಂದ ಅಲ್ಲಿ 'ಸಗೋತ್ರವಿವಾಹ'ದ ನಿಷೇಧವಿರುವುದಿಲ್ಲ."

"ಭಾವ, ಅನ್ಯಥಾ ಭಾವಿಸಬಾರದು. ಈ ವಿಷಯಕ್ಕೆ ಸಂಬಂಧಿಸಿದಂತೆ ಇನ್ನೊಂದೇ ಒಂದು ಸಂದೇಹವನ್ನು ತಮ್ಮ ಸನ್ನಿಧಿಯಲ್ಲಿ ನಿವೇದಿಸುತ್ತೇನೆ. ಕ್ಷಮಾ ಮಾಡಬೇಕು."

"ಇಲ್ಲಿ ಕ್ಷಮೆಯ ಪ್ರಶ್ನೆ ಬರುವುದಿಲ್ಲ. ನಿನ್ನ ಸಂದೇಹವನ್ನು ಯಾವ ಕಾರಣಕ್ಕೂ ಸಂಕೋಚಪಟ್ಟು ಮರೆಮಾಚಬಾರದು. ಹೇಳು" ಎಂದು ದೇಶಿಕರು ಉತ್ತೇಜಿಸಿದರು ಆರಾಧ್ಯರನ್ನು. ಅವರೆಂದರು—

"ಆ ಸಂದೇಹವಿಷ್ಟೆ ! ತಾವು ಹೇಳಿದಂತೆ ವೀರಶೈವದಲ್ಲಿ ಬ್ರಾಹ್ಮಣ್ಯವುಂಟೆ ಅಥವಾ ಇಲ್ಲವೇ ?"

"ಯಾಕಿಲ್ಲ ? ಖಂಡಿತವಾಗಿಯೂ ಇದೆ."

"ಹಾಗಾದರೆ ಅದೂ ಪ್ರಾಕೃತವೆನಿಸಿದಂತಾಗಲಿಲ್ಲವೆ ?"

"ಅಯ್ಯಾ ಪುಣ್ಯಾತ್ಮಾ, ಇದ್ದರೆ ಅದು ಪ್ರಾಕೃತವೇಕೆ ಆದೀತು ! ಅದೂ ಅಪ್ರಾಕೃತ ಬ್ರಾಹ್ಮಣ್ಯವೆ."

"ಭಾವ, ನಮ್ಮದು ಶಿಖಾ-ಸೂತ್ರಗಳನ್ನು ಹೊಂದಿರುವ ಲಿಂಗಧಾರಿ ಬ್ರಾಹ್ಮಣ್ಯ. ವೀರಶೈವರದು ಶಿಖಾ-ಸೂತ್ರಗಳಿಲ್ಲದ ಲಿಂಗಧಾರಿ ಬ್ರಾಹ್ಮಣ್ಯವೆಂದ ಹಾಗಾಯಿತು. ಇಬ್ಬಗೆಯ ಬ್ರಾಹ್ಮಣ್ಯವನ್ನು ವಿಧಿಸುವ ಧರ್ಮಶಾಸ್ತ್ರವುಂಟೆ ? ಇದ್ದರೆ ದಯಮಾಡಿ ಅದನ್ನು ತಿಳಿಸಬೇಕು."

"ಅಗತ್ಯವಾಗಿ ಆಗಬಹುದು. ಗೌತಮ ಸ್ಮೃತಿಯಲ್ಲಿ—

ಮುಖೇ ಮಂತ್ರೋ ಹೃದಿ ಧ್ಯಾನಂ ಮಸ್ತಕೇ ಲಿಂಗಧಾರಣಂ ।
ಶಿಖಾಸೂತ್ರಂ ತಥಾ ಭಸ್ಮ ಇತಿ ಬ್ರಾಹ್ಮಣ ಲಕ್ಷಣಮ್ ॥

ಎಂದರೆ ಮುಖದಲ್ಲಿ ಮಂತ್ರ, ಹೃದಯದಲ್ಲಿ ಧ್ಯಾನ, ಮಸ್ತಕದಲ್ಲಿ ಲಿಂಗಧಾರಣ, ಶಿಖೆ-ಸೂತ್ರ ಮತ್ತು ಭಸ್ಮಗಳು ಬ್ರಾಹ್ಮಣನ ಲಕ್ಷಣ ಎಂಬುದು ನಮ್ಮ ಆರಾಧ್ಯ ಬ್ರಾಹ್ಮಣರಿಗೆ ಅನ್ವಯಿಸಿದರೆ ಅದೇ ಸ್ಮೃತಿಯಲ್ಲಿ ಹೀಗಿದೆ—

ಮುಖೇ ಮಂತ್ರೋ ಹೃದಿ ಧ್ಯಾನಂ ಮಸ್ತಕೇ ಲಿಂಗಧಾರಣಂ ।
ಶಿಖಾರುದ್ರಾಕ್ಷ ಭಸ್ಮಾನಿ ಇತಿ ಬ್ರಾಹ್ಮಣ ಲಕ್ಷಣಮ್ ॥

ಈ ಪಾಠಾಂತರದಲ್ಲಿ ಸೂತ್ರವನ್ನು ಕೈಬಿಡಲಾಗಿದೆ. ಇದು ವೀರಶೈವದ ಬ್ರಾಹ್ಮಣ್ಯವನ್ನು ಸಮರ್ಥಿಸುತ್ತದೆ."

ಎಂಬ ದೇಶಿಕರ ಸುದೀರ್ಘವಾದ ವಿಚಾರ ಪರಿಷ್ಕೃತ ಉಪದೇಶವು ಎಲ್ಲರಿಗೂ ಅಪ್ಯಾಯಮಾನವಾಯಿತು. ಶಂಭುಭಟ್ಟನಂತೂ ಇದನ್ನು ಕೇಳಿ ದಿಗ್ಮೂಢನಾದ. ತಾನು ಹತ್ತಾರು ವರ್ಷಗಳಿಂದ ಮಹಾವಿದ್ಯಾಪೀಠದಲ್ಲಿ ಅಭ್ಯಾಸ ಮಾಡಿ, ಅಲ್ಲಿ ಪ್ರಶಸ್ತಿಯನ್ನೂ ಗಿಟ್ಟಿಸಿ, ಅಧ್ಯಾಪಕನಾಗಿದ್ದರೂ ಸಹ ತಂದೆಯವರ ಜ್ಞಾನಸಾಗರದ ಮುಂದೆ ತನ್ನ ಪಾಂಡಿತ್ಯ ಒಂದು ಹೊಂಡದಂತೆ ಆಗಿತ್ತು.

ಆರಾಧ್ಯರ ಸಂತೋಷಕ್ಕೆ ಪಾರವಿಲ್ಲ. ಅವರು ಹೇಳಿದರು—

"ಭಾವ, ನಾನು ತಮ್ಮ ಸಂದರ್ಶನಕ್ಕೆ ಬಂದದ್ದು ಸಾರ್ಥಕವಾಯಿತು. ತಮ್ಮ ಅಮೂಲ್ಯವಾದ ಪ್ರವಚನದಿಂದ ನಮಗಿದ್ದ ಅನೇಕ ಸಂಶಯಗಳನ್ನು ಪರಿಹರಿಸಿಕೊಂಡಂತಾಯಿತು. ಇದಕ್ಕಾಗಿ ನಾನು ತಮಗೆ ನನ್ನ ಕೃತಜ್ಞತಾಪೂರ್ವಕವಾದ ದೀರ್ಘದಂಡ ಪ್ರಣಾಮಗಳನ್ನು

ಸಮರ್ಪಿಸುತ್ತೇನೆ. ಮತ್ತು ನನ್ನ ಇಂದಿನ ಬಿನ್ನಹವನ್ನು ತಾವು ನೆರ ವೇರಿಸಿಕೊಡಬೇಕೆಂದು ಪ್ರಾರ್ಥಿಸುತ್ತೇನೆ" ಎಂದ ಆರಾಧ್ಯರು ದೇಶಿಕರಿಗೆ ದೀರ್ಘದಂಡ ಪ್ರಣಾಮ ಮಾಡಿ, ಶ್ರೀಪತಿಯನ್ನೂ ತಾತನವರಿಗೆ ಪ್ರಣಾಮ ಮಾಡಿಸಿ ಹೇಳಿದರು—

"ಭಾವ, ಚಿರಂಜೀವಿಯ ಉಪನಯನ ಮತ್ತು ಶಿವದೀಕ್ಷೆಗಳಿಗೆ ಶುಭವಾದ ಒಂದು ಲಗ್ನವನ್ನು ಇಟ್ಟುಕೊಡಬೇಕು ಮತ್ತು ಈ ಎರಡೂ ಕಾರ್ಯಗಳೂ ತಮ್ಮ ದಿವ್ಯ ಸನ್ನಿಧಾನದಲ್ಲಿಯೇ ನಡೆಯಬೇಕೆಂದು" ಮತ್ತೊಮ್ಮೆ ಅಡ್ಡಬಿದ್ದರು ಆರಾಧ್ಯರು.

"ಈ ಶುಭಕಾರ್ಯಕ್ಕೆ ಪತ್ನೀ ಪುತ್ರರೊಡನೆ ಎರಡು ದಿನ ಮುಂಚಿತ ವಾಗಿ ತಾವು ಆಗಮಿಸಿ ಅನುಗ್ರಹಿಸಬೇಕು" ಎಂದೂ ಬಿನ್ನಹ ಒಪ್ಪಿಸಿದರು.

ಮರುದಿನ ದೇಶಿಕರು ಪರಿವಾರದೊಂದಿಗೆ ಬೆಟ್ಟಕ್ಕೆ ತೆರಳಿ, ಅಲ್ಲಿ ಸ್ವಾಮಿಗೆ ರುದ್ರಾಭಿಷೇಕ, ಶ್ರೀರುದ್ರ ಹೋಮಸಹಿತ ಪೂಜೆಯನ್ನು ನೆರ ವೇರಿಸಿ ಮನೆಗೆ ಹಿಂದಿರುಗಿದರು.

ಮರುದಿನ ಮುಂಜಾನೆ ಆರಾಧ್ಯರು ದೇಶಿಕರಿಗೆ ಪ್ರಣಾಮ ಮಾಡಿ, ಶಂಭು ವಿಶ್ವರಿಗೆ ಶ್ರೇಯಸ್ಸನ್ನು ಕೋರಿ, ಅಕ್ಕನಿಗೆ ವಂದಿಸಿ ಶ್ರೀಪತಿಯೊಡನೆ ಊರಿಗೆ ಹಿಂದಿರುಗಿದರು.



೫

# ದೊಣೆಯಲ್ಲಿ ದೂರದರ್ಶನ

ಪತಿದೇವರ ಮುಖದಿಂದ ಮಗನ ಪ್ರಶಂಸೆಯನ್ನು ಕೇಳಿದ ಭಾಗೀರಥಿಗೆ ಎಲ್ಲಿಲ್ಲದ ಸಡಗರ! ಅದಷ್ಟರಿಂದಲೇ ತೃಪ್ತಿ ಹೊಂದದ ಆ ತಾಯಿ ಮಗನನ್ನು ಮುದ್ದಿಸಿ, ಅವನನ್ನು ಬಗೆಬಗೆಯಾಗಿ ಪ್ರಶ್ನಿಸಿ, ಪತಿ-ಪುತ್ರರು ತವರಿಗೆ ಹೋಗಿಬಂದ ವಿಚಾರಗಳನ್ನು ಕೇಳಿ ಆನಂದಿಸುತ್ತಿದ್ದಳು.

ಪತಿದೇವರು ಪಾಠಶಾಲೆಗೆ ಹೋದ ಮೇಲೆ ಮಗನನ್ನು ಕರೆದು ಹತ್ತಿರ ಕೂಡಿಸಿಕೊಂಡ ಭಾಗೀರಥಿ ಅವನಿಗೆ ಸಿಹಿ ತಿನಿಸುಗಳನ್ನಿತ್ತು,

"ಮರಿ, ಮುದಿಗೊಂಡದಲ್ಲಿ ನೀನು ಏನೇನು ನೋಡಿದೆಯಪ್ಪ ?" ಎಂದು ಕೇಳಿದಳು.

"ನದಿ, ಬೆಟ್ಟ, ದೊಣೆ ಇವೆಲ್ಲ ನೋಡಿದೆ."

"ಅಲ್ಲಿ ಯಾರು ಯಾರು ಇದ್ದರಪ್ಪ ?"

"ಅಜ್ಜಿ, ತಾತ, ದೊಡ್ಡಮಾವ, ಚಿಕ್ಕಮಾವ ಎಲ್ಲ ಇದ್ದರು."

"ಅಲ್ಲಿ ನಿನ್ನನ್ನು ಏನೇನು ಕೇಳಿದರಪ್ಪ ?" ಅಂದಾಗ ಪತಿ ಕೈಯಲ್ಲೊಂದು ಆಟಿಕೆ ಹಿಡಿದು ಅದನ್ನು ನೋಡುತ್ತಾ ಅನನ್ಯಮನಸ್ಕನಾಗಿ,

"ಅಮ್ಮ, ಬೆಟ್ಟದ ಮೇಲೆ ದೇವರ ಪೂಜೆ ಮಾಡುವಾಗ ನಾನು ನಿನ್ನೊಂದಿಗೆ ಹೇಳುತ್ತಿದ್ದ ಮಂತ್ರಗಳನ್ನೆಲ್ಲ ಹೇಳಿದೆ."

"ಅದನ್ನು ಕೇಳಿ ತಾತ ಏನು ಹೇಳಿದರು ಮರಿ ?"

"ಅಮ್ಮ, ಅಪ್ಪಾಜಿ ತಾತನವರನ್ನು ಏನೇನೋ ಕೇಳುತ್ತಿದ್ದರು. ಅದಕ್ಕೆ ತಾತ ತುಂಬಾ ಹೇಳುತ್ತಿದ್ದರು. ನನಗೊಂದೂ ತಿಳಿಯಲಿಲ್ಲ."

"ನೀನು ಪಾಠ ಒಪ್ಪಿಸಿದಾಗ ತಾತ ಏನೆಂದರು ಮರಿ ?"

"ಅದೇನೋ 'ಜಾತಕ ಬರೆದಿದ್ದೀನಿ ತುಂಬಾ ಚೆನ್ನಾಗಿದೆ' ಅಂದರಮ್ಮ."

"ಮಾವ ಏನು ಹೇಳಿದರು ?"

"ಮಾವ ನನ್ನನ್ನೆತ್ತಿಕೊಂಡು—

"ನೀನು ಚೆನ್ನಾಗಿ ಓದು ಮರಿ ! ನಿನ್ನನ್ನು ನಾನೇ ಶಾಲೆಗೆ ಕರೆದು ಕೊಂಡು ಹೋಗುತ್ತೇನೆ" ಅಂದರು.

"ಬೆಟ್ಟದ ಮೇಲೆ ಏನೇನು ನೋಡಿದೆ ಮರಿ ?"

"ಬೆಟ್ಟ ತುಂಬ ಚೆನ್ನಾಗಿದೆಯಮ್ಮ. ದೇವಸ್ಥಾನ, ದೊಣೆ, ಛತ್ರ ಗಳು, ದೇವಸ್ಥಾನದವರೆಗೆ ಬೆಟ್ಟ ಹತ್ತಲು ಮೆಟ್ಟಲು, ದೊಣೆಯ ಸುತ್ತ ಕಾಲು ಜಾರಿ ಬೀಳದಂತೆ ಕಬ್ಬಿಣದ ಸರಳಿನ ಕಟಕಟೆ, ದೇವಸ್ಥಾನದ ಮಗ್ಗುಲಿಗೆ ಹೂವಿನ ಗಿಡಗಳು, ತರಕಾರಿ ಹೂವುಗಳು ಎಷ್ಟೋ ಚೆನ್ನಾಗಿ ದ್ದುವು. ಬೆಟ್ಟದ ಮೇಲಿನ ಪೊದೆಗಳಲ್ಲಿ ಜೇನು ಎಷ್ಟೋ ಕಡೆ ಕಟ್ಟಿತ್ತು."

"ಜೇನು ರುಚಿ ನೋಡಿದೆಯಾ ?"

"ಹೌದಮ್ಮ, ವಿಶ್ವ ಮಾವ ಹೂವು ಬಿಡಿಸುತ್ತಿದ್ದಾಗ ಎರಡು ಬಂಡೆ ಗಳ ಸಂದಿಯಲ್ಲಿದ್ದ ಪೊದರಿನಲ್ಲಿ ನುಗ್ಗಿ ಜೇನು ಕಿತ್ತು ತಂದ. ಜೇನಿನ ತಲೆ, ರೊಟ್ಟೆಗಳನ್ನು ಕಿತ್ತು ತಂದು, ಮುತ್ತುಗದ ಎಲೆ ದೊನ್ನೆ ಮಾಡಿ ಅದರಲ್ಲಿ ಹಿಂಡಿದಾಗ ಒಂದು ಬೊಗಸೆಯಷ್ಟು ಜೇನುತುಪ್ಪ ಸುರಿಯಿತು. ಅದರಲ್ಲಿ ಒಂದು ಭಾಗ ನನಗೆ ಕೊಟ್ಟು ರುಚಿಸಲು ಹೇಳಿದ. ಉಳಿದ ತುಪ್ಪವನ್ನು ಅಭಿಷೇಕಕ್ಕೆಂದು ತಾತನ ಹತ್ತಿರ ಕೊಂಡೊಯ್ದ."

"ನೀನು ಜೇನು ಏನು ಮಾಡಿದೆ ?"

"ಏನು ಮಾಡುವುದು ಚೆನ್ನಾಗಿ ನೆಕ್ಕಿ ರುಚಿ ನೋಡಿದೆ. ತುಂಬಾ ಸಿಹಿಯಾಗಿತ್ತು."

"ಆಮೇಲೆ ?"

''ಅಮ್ಮ, ನಾನು ಅಲ್ಲಿನ ಜಾರುಬಂಡೆಯ ಮೇಲೆ ಜಾರಾಟ ಆಡುತ್ತಿದ್ದಾಗ ಮಾವ ಬಂದು ನನ್ನನ್ನು ಹೆಗಲ ಮೇಲೆ ಕೂಡಿಸಿಕೊಂಡು ದೋಣಿಯಲ್ಲಿಳಿದು ಈಜಾಡಿದರಮ್ಮ.''

''ಈಜುವಾಗ ನಿನಗೆ ಭಯವಾಗಲಿಲ್ಲವೆ ಮರಿ ?''

''ಇಲ್ಲ ಅಮ್ಮ, ಮಾವ ಈಜುವಾಗ ತರಾವರಿ ಪಲ್ಟಿ ಹೊಡಿತಿದ್ರು. ನೀರ ಮೇಲೆ ಅಂಗಾತ ಮಲಗಿ, ಕೈಕಾಲು ಅಲುಗಿಸದೆ ತುಂಬಾ ಹೊತ್ತು ತೇಲುತ್ತಿದ್ದರಮ್ಮ. ಅವರು ಕಾಶಿಯಲ್ಲಿ ಗಂಗಾ ನದಿಯಲ್ಲಿ ತುಂಬಾ ದೂರದವರೆಗೆ ಈಜುತ್ತಾ ಆಚೆ ದಡ ಸೇರುತ್ತಿದ್ದರಂತೆ. ನದಿಯಲ್ಲಿ ಅಲ್ಲಲ್ಲಿ ಸ್ನಾನಘಟ್ಟಗಳಲ್ಲಿ ಈಜಲು ಅನುಕೂಲವಾಗಿ ಆಳವಾದ ಈಜುದಾಣಗಳನ್ನು ಕಟ್ಟಸಿದ್ದಾರಂತೆ. ಅಲ್ಲಿ ಮಾವ ತುಂಬಾ ಎತ್ತರದಿಂದ ನಾಲ್ಕೈದು ತರಹ ಪಲ್ಟಿ ಹೊಡೆಯುತ್ತಾ ಧುಮುಕಿ ತಳಮುಟ್ಟಿ ಬರುತ್ತಿದ್ದರಂತೆ.

ಈಜುವಾಗ ನದಿಯಲ್ಲಿ ಕೊಚ್ಚಿಕೊಂಡು ಬಂದ ಹೆಣಗಳನ್ನು ಮಾವ ಕಾಲಲ್ಲಿ ಒದೆದು ದೂರ ತಳ್ಳುತ್ತಿದ್ದರಂತೆ. ಅವರಿಗೆ ಹೆಣಗಳೆಂದರೆ ಭಯವೇ ಇಲ್ಲವಂತೆ.''

''ಮರಿ, ನೀನೂ ಈಜು ಕಲಿಯಬೇಕಾಗಿತ್ತು. ಮಾವನಿಗೆ ಹೇಳಿದ್ರೆ ಕಲಿಸ್ತಿದ್ರು ಕಣೋ!''

''ಅಯ್ಯೋ, ಕಲಿಸಿದ್ರಮ್ಮ. ಅವರು ನನ್ನನ್ನು ಎರಡೂ ಕೈಗಳ ಅಂಗೈಗಳ ಮೇಲೆ ಮಲಗಿಸಿಕೊಂಡು ದೋಣಿಯ ಸುತ್ತ ಓಡಾಡದ್ದಲ್ಲದೆ, ನನ್ನ ಎರಡೂ ಕೈಗಳಿಂದ ನೀರನ್ನು ಹೊಟ್ಟೆ ಕೆಳಗೆ ಎಳೆಯುತ್ತಾ ಕಾಲು ಹೊಡೆಯಲು ಹೇಳಿದರು.''

''ನೀನು ನೀರಿನ ಮೇಲೆ ಈಜುವಾಗಲೂ ಹೆದರಿಕೆಯಾಗಲಿಲ್ಲವೆ ಮರಿ ?''

''ಇಲ್ಲಮ್ಮ, ಮಾವ ಹೇಳಿದರು–ಈಜುವಾಗ ಬಾಯಿಗೆ ಬಂದ ನೀರನ್ನು ಉಗಿಯುತ್ತಾ ಈಜಿದರೆ ಆಯಾಸವಾಗುವುದಿಲ್ಲವೆಂದು ಹೇಳಿದ್ದರಿಂದ ನನಗೆ ಆಯಾಸವೇ ಆಗಲಿಲ್ಲ ಅಮ್ಮ. ಮತ್ತು ನಾನು

ತೋಳುಗಳಿಂದ ಎದೆಯ ಕೆಳಗೆ ನೀರೆಳೆದು ಮುಂದೆ ಮುಂದೆ ಹೋಗುತ್ತಿದ್ದುದನ್ನು ಕಂಡು ಮಾವ ತನ್ನ ಕೈಗಳನ್ನು ಹಿಂದಕ್ಕೆಳೆದುಕೊಂಡರೂ ನೀರಿನಲ್ಲಿ ಮುಳುಗಲಿಲ್ಲ ಅಮ್ಮ!''

''ಭೇಷ್, ಭೇಷ್ ಜಾಣಮರಿ ನೀನು. ಒಂದೇ ದಿನಕ್ಕೆ ಈಜುವುದನ್ನು ಕಲಿತುಬಿಟ್ಟೆಯಾ ? ಹಾಗಾದರೆ ನೀನು ನೀರಿನ ಕಂಟಕವನ್ನು ಗೆದ್ದೆ ಬಿಡು!''

''ಚಿಕ್ಕ ಮಾವ ಹೇಳಿದರು, 'ನೀನಿಲ್ಲಿ ಒಂದು ವಾರ ಇದ್ದರೆ, ಇನ್ನೂ ಚೆನ್ನಾಗಿ ಈಜು ಕಲಿಸುತ್ತೇನೆ ಅಂತ.''

''ಹೌದು, ನೀನು ಆ ಚಿಕ್ಕ ದೊಣೆಯಲ್ಲಿ ಕಲಿತ ಈಜು ಮುಂದೆ ನೀನು ಕಾಶಿಗೆ ಹೋದಾಗ ಗಂಗಾನದಿಯಲ್ಲಿ ಸುಲಭವಾಗಿ ಈಜಬಲ್ಲೆ. ಅದಕ್ಕಾಗಿಯೇ ಅಪ್ಪಾಜಿ ಆಗಾಗ ಹೇಳುತ್ತಿರುತ್ತಾರೆ 'ಕೂಪಮಂಡೂಕ ನ್ಯಾಯ' ಅಂತ.''

''ಹಾಗೆಂದರೇನಮ್ಮ ?''

''ಕೂಪ ಎಂದರೆ ಭಾವಿ, ಮಂಡೂಕ ಎಂದರೆ ಕಪ್ಪೆ. ಒಂದು ಭಾವಿಯಲ್ಲಿ ಒಂದು ಕಪ್ಪೆ ಇತ್ತಂತೆ. ಅದು ಪ್ರಪಂಚ ಇರೋದು ಈ ಭಾವಿಯಷ್ಟೇ ಅಂತ ತಿಳಕೊಂಡಿತ್ತಂತೆ. ಒಂದು ದಿನ ಸಮುದ್ರದ ಕಪ್ಪೆ ಅದರ ಮಾತು ಕೇಳಿ ಸೋಜಿಗಗೊಂಡು ಅದನ್ನು ಸಮುದ್ರಕ್ಕೆ ಕರೆದೊಯ್ದಿತಂತೆ.''

''ಸಮುದ್ರ ಅಂದರೆ ಯಾವುದಮ್ಮ ?''

''ಸಮುದ್ರ ಎಂದರೆ ಬರೀ ನೀರು. ಅಲ್ಲಿ ನೆಲವೇ ಕಾಣುವುದಿಲ್ಲ. ಅದರ ಆಳ ನೂರಾರು ಆಳುದ್ದ. ಇಲ್ಲಿ ನೆಲದ ಮೇಲೆ ಭಾವಿ, ಕೊಳ, ದೊಣೆ ಕೆರೆಗಳಿದ್ದಂತೆ ಸಮುದ್ರವು ನೆಲದ ಮೇಲೆ ಇರುತ್ತದೆ. ಅದನ್ನು ನೋಡಿ, ಕೂಪದಲ್ಲಿದ್ದ ಕಪ್ಪೆ ಬೆಕ್ಕಸ ಬೆರಗಾಯಿತಂತೆ !''

''ಯಾಕಮ್ಮ, ನೀನು ಈ ಕತೆ ಹೇಳಿದ್ದು ?''

''ನೋಡಪ್ಪ, ಕೆಲವರು 'ತಾವು ತಿಳಿದುಕೊಂಡಿರುವುದೇ ಸರಿ ನಮಗೆಲ್ಲ ತಿಳಿದಿದೆ' ಎಂದು ಅಹಂಕಾರ ಪಡುತ್ತಾರೆ. ಅಂಥವರು ದೊಡ್ಡ

ದೊಡ್ಡ ವಿದ್ವಾಂಸರ ಜೊತೆ ಸೇರಿದರೆ ಅವರು ತಿಳಿದಿರುವುದು ಕೂಪದ ಮಂಡೂಕ ತಿಳಿದಿರುವಂತೆ ಅತ್ಯಲ್ಪ! ಇದರಂತೆ ಜ್ಞಾನವಿರುವುದು ಸಮುದ್ರದಂತೆ ಅಪಾರ ಮತ್ತು ಅಗಾಧ ಎಂದು ಅರಿತು ತಮ್ಮ ಅಹಂಕಾರ ವನ್ನು ಬಿಡುತ್ತಾರೆ."

"ಅಮ್ಮ, ನೀನು ತುಂಬಾ ಜಾಣೆ ಕಣಮ್ಮ. ಏಕೆಂದರೆ ನಾನೂ ಮುಂದೆ ಕೂಪಮಂಡೂಕವಾಗಬಾರದು ಅಂತ ಅಲ್ಲವೆ ? ಅಲ್ಲವೇನಮ್ಮಾ!"

ಮಗನ ಗಿಳಿಮಾತು ಕೇಳಿ ಭಾಗೀರಥಿ ನಸುನಕ್ಕು ಮಗನನ್ನು ಬಾಚಿ ತಬ್ಬಿ, ಕೆನ್ನೆಗೊಂದು ಮುತ್ತಿಟ್ಟಳು.

"ಇನ್ನೊಂದು ವಿಷಯ ಮರಿ, ದೋಣಿ ಮತ್ತು ನದಿಗಳಲ್ಲಿ ಈಜಿದ ವರು ಸಂಸಾರದಲ್ಲೂ ಸುಲಭವಾಗಿ ಈಜಬಲ್ಲರಪ್ಪ!"

"ಅದು ಹೇಗಮ್ಮ ? ಸಂಸಾರ ಎಂದರೆ ಏನು ? ಅದು ದೋಣಿಯ ನೀರಿನಂತೆ ನೀರೇನಮ್ಮ ?"

"ಅಲ್ಲ ಮರಿ, ನಾವು ದಿನನಿತ್ಯ ವ್ಯವಹಾರ ಮಾಡುತ್ತಿರುವುದೇ ಸಂಸಾರದಲ್ಲಿ. ಹುಟ್ಟು-ಸಾವುಗಳ ಈ ಭವಚಕ್ರವನ್ನೇ ಸಂಸಾರ ಎನ್ನು ತ್ತಾರೆ. ಸಂಸಾರ ಎಂದರೆ ಸುಖ-ದುಃಖ, ನೋವು-ನಲಿವು, ಲಾಭ-ನಷ್ಟ, ಜಯ-ಅಪಜಯ ಮುಂತಾದದ್ದೆಲ್ಲ ಇದೆ. ಆದ್ದರಿಂದಲೇ ಇದನ್ನು ಸಾಗರ ಎನ್ನುವುದು. ನೀರಿನಲ್ಲಿ ಮುಳುಗದಿರಬೇಕಾದರೆ ಈಜು ಬರುಡೆ ಬೇಕು. ಅದರಂತೆ ಸಂಸಾರ ಸಾಗರದಲ್ಲಿ ಮುಳುಗದಿರುವ ಈಜು ಕಲಿಯ ಬೇಕು."

"ಅಂಥ ಈಜು ಯಾವುದಮ್ಮ ?"

"ಸಮತ್ವ ಎಂಬುದೇ ಆ ಈಜು."

"ಇದೇನಮ್ಮ ಒಗಟು ಮಾತು ? ಅರ್ಥವಾಗಲಿಲ್ಲ. ಬಿಡಿಸಿ ಹೇಳು."

"ಸುಖ-ದುಃಖಗಳು ಬಂದಾಗ ಸಮಾಧಾನವಾಗಿರುವುದೇ ಸಮತ್ವ, ಜೀವನದಲ್ಲಿ ಸುಖ-ದುಃಖಗಳು ಒಂದಾದ ಮೇಲೆ ಒಂದರಂತೆ ಬರುತ್ತಿರು

ತ್ತವೆ. ಸುಖ ಬಂದಾಗ ಹಿಗ್ಗದೆ, ದುಃಖ ಬಂದಾಗ ಕುಗ್ಗದೆ (ಖಿನ್ನನಾಗದೆ) ಇರುವುದೇ ಸಮತ್ವ. ಅಂಥವರನ್ನೇ ನಾವು 'ಮಹಾತ್ಮರು' ಎನ್ನುತ್ತೇವೆ. ಸಂಸಾರ ಎಂಬುದು ಒಂದು ಸಂತೆ. ಸಂತೆಯಲ್ಲಿ ನಾವಿರುವಾಗ ಗದ್ದಲಕ್ಕೆ ಹೆದರಬಾರದು. ಈ ಜಗತ್ತು ನಾವು ಜೀವನದಲ್ಲಿ ಆಟವಾಡಲು ಶಿವನು ಕೊಟ್ಟಿರುವ ಒಂದು ವಿಶಾಲವಾದ ಆಟದ ಮೈದಾನ. ಅದರಲ್ಲಿ ನಾವು ಜಾಣರೆನಿಸಿ ಬಾಳಬೇಕು. ಇದೇ ಜೀವನದ ಗುರಿ. ಸಮುದ್ರದ ಮೇಲೆ ಪ್ರಯಾಣ ಮಾಡುವವರು ಹರಿಗೋಲು, ತೆಪ್ಪ ಮತ್ತು ದೋಣಿ, ಹಡಗುಗಳನ್ನು ಹತ್ತಿ ಸುಖವಾಗಿ ಆಚೆ ದಡ ಸೇರುತ್ತಾರೆ. ಅದರಂತೆ ಸಂಸಾರ ಸಮುದ್ರವನ್ನು ದಾಟಬೇಕಾದರೆ 'ಸಮತ್ವ' ಎಂಬ ದೋಣಿ ಬೇಕು ಅದರಲ್ಲಿ ದೊಡ್ಡ ದೋಣಿಗೆ ನಾವೆ ಎಂದು ಹೆಸರು.

ಈಗ ನೀನು ಅಪ್ಪಾಜಿ ಜೊತೆ ಮುದಿಗುಂಡಕ್ಕೆ ಹೋದದ್ದರಿಂದ ಅಲ್ಲಿ ಕಲಿತ ಈಜು, ಮುಂದಿನ ನಿನ್ನ ಜೀವನ ನೌಕೆಯನ್ನು ಸಂಸಾರ ಸಾಗರದಲ್ಲಿ ಸುಲಭವಾಗಿ ತೇಲಿಸಬಲ್ಲೆ ಎಂದು ಸಿದ್ಧವಾಯಿತು "

ಭಾಗೀರಥಿ ಈ ಮಾತುಗಳನ್ನು ಹೇಳುತ್ತಿರುವಾಗ ಶ್ರೀಪತಿ ಗಂಭೀರವಾಗಿ ಕುಳಿತು ವಿಚಾರಮಗ್ನನಾಗಿದ್ದ ಮತ್ತು ಅಮ್ಮನ ಕಡೆ ತಿರುಗಿ ಹೇಳಿದ.

"ಅಮ್ಮ, ನೀನು ತಾತನಂತೆ ಬಹಳ ಚೆನ್ನಾಗಿ ಹೇಳುತ್ತೀಯಮ್ಮ. ತಾತ ಅಪ್ಪಾಜಿ ಕೇಳಿದ ಪ್ರಶ್ನೆಗಳಿಗೆ ಬಹು ಸುಲಭವಾಗಿ ತಿಳಿಯುವಂತೆ ಹೇಳುತ್ತಿದ್ದರಮ್ಮ."

"ಮುಂದೆ ಏನಾಯಿತು ಮರಿ ?''

''ಅಷ್ಟರಲ್ಲಿ ತಾತ, ಬೇಗ ಪೂಜೆಗೆ ಬನ್ನಿ ಹೊತ್ತಾಯಿತು ಎಂದು ಗಲಾಟೆ ಮಾಡದಿದ್ದರೆ ನಾನು ತುಂಬಾ ಹೊತ್ತು ದೋಣಿಯಲ್ಲಿ ಈಜು ಕಲಿಯುತ್ತಿದ್ದೆ.''

ಎಂದು ಹೇಳುತ್ತಿದ್ದಾಗ ಭಾಗೀರಥಿ ಒಂದು ಕ್ಷಣ ಅಡಿಗೆಮನೆ ಒಳಹೊಕ್ಕು ಈಚೆ ಬಂದು--

"ಮುಂದೆ ಏನಾಯಿತು ಮರಿ ?"

"ನಾನು-ಮಾವ ದಡಕ್ಕೆ ಬಂದೆವು. ಚಿಕ್ಕ ಮಾವ ಒಗೆದು ಒಣ ಹಾಕಿದ್ದ ಮಡಿವಸ್ತ್ರ ಧರಿಸಿ, ದೇವರ ಗುಡಿಗೆ ಹೋದೆವು. ಮಾವ ಸಂಧ್ಯಾ ವಂದನೆ ಮಾಡಿ ಬರುವ ವೇಳೆಗೆ ತಾತ-ಅಪ್ಪಾಜಿ ಅಭಿಷೇಕ ಆರಂಭಿಸಿದ್ದರು.

"ನೀನೂ ರುದ್ರಾಭಿಷೇಕ ಮಂತ್ರಗಳನ್ನು ಹೇಳಿದೆಯ ಅಪ್ಪ ?"

"ಹೌದಮ್ಮಾ, ತಾತ-ಮಾವ ನನ್ನ ಬೆನ್ನು ಚಪ್ಪರಿಸಿ ಹೇಳು ಮರಿ ಧೈರ್ಯವಾಗಿ ಹೇಳು, ಹೆದರಬೇಡ ಎಂದರು. ನಾನು ಬರುವ ಮಂತ್ರಗಳನ್ನೆಲ್ಲ ಪಾಠ ಒಪ್ಪಿಸಿದೆ."

ಆಗ ತಾತ ಮಾವ ಅಪ್ಪಾಜಿ ಕಡೆ ನೋಡುತ್ತಾ ಖುಷಿ ಪಡುತ್ತಿದ್ದರು "

"ಆಮೇಲೆ ?"

"ಆಮೇಲೆ ಸಹಸ್ರನಾಮ ಪೂಜೆ-ರಾಜೋಪಚಾರಗಳನ್ನು ಚಿಕ್ಕ ಮಾವನೇ ಮಾಡಿ ಮುಗಿಸಿದ. ತಾತ ಅಪ್ಪಾಜಿಯವರು ರುದ್ರಹೋಮ ಮಾಡಿ ಮುಗಿಸಿ, ಪೂರ್ಣಾಹುತಿ ಕೊಡುವ ವೇಳೆಗೆ ಅಜ್ಜಿ ನೈವೇದ್ಯ ತಂದರು.

ಸ್ವಾಮಿಗೆ ನೈವೇದ್ಯ ಆದ ಮೇಲೆ ಎಲ್ಲರೂ ತೀರ್ಥ-ಪ್ರಸಾದ ಸ್ವೀಕರಿಸಿ ಭೋಜನ ಮಾಡಿದೆವು. ತಾತ-ಅಪ್ಪಾಜಿಯವರು ಊಟ ಮಾಡಿದ ಮೇಲೆ ದೇವಾಲಯದ ಮುಂಭಾಗದಲ್ಲಿ ಮಡಿಪಂಚೆ ಹಾಸಿ, ಚೆನ್ನಾಗಿ ಗೊರಕೆ ಹೊಡೆದರು.

ಅಷ್ಟರಲ್ಲಿ ಚಿಕ್ಕಮಾವ ನನ್ನನ್ನು ಬೆಟ್ಟದ ತುದಿವರೆಗೂ ಕರೆದು ಕೊಂಡು ಹೋದರು."

"ಬೆಟ್ಟ ಏರುವಾಗ ನಿನಗೆ ಆಯಾಸವಾಗಲಿಲ್ಲವೆ ?"

"ಆಯಿತಮ್ಮಾ, ಮಾವ ಏದುಸಿರು ಬಿಡುತ್ತಿದ್ದ. ನಾನೂ ಏದುತ್ತಾ ಅವರನ್ನೇ ಹಿಂಬಾಲಿಸಿದೆ. ಅಲ್ಲಲ್ಲಿ ಸ್ವಲ್ಪ ಹೊತ್ತು ಕೂತು

ವಿಶ್ರಮಿಸಿಕೊಂಡು ಮತ್ತೆ ಏರುತ್ತಿದ್ದೆವು. ಅಲ್ಲಿ ಕುಳಿತು ನೋಡಿದರೆ ಎಷ್ಟು ಖುಷಿ ಆಗ್ತಿತ್ತಮ್ಮ! ಆ ಖುಷಿಯಲ್ಲಿ ನಮ್ಮ ಆಯಾಸವೆಲ್ಲ ಮಂಗ ಮಾಯವಾಗ್ತಿತ್ತು.''

"ಅಲ್ಲಿ ಏನೇನು ನೋಡಿದೆಯಪ್ಪ ?''

''ಬೆಟ್ಟದ ಮೇಲಿನಿಂದ ಕೆಳಕ್ಕೆ ನೋಡಿದರೆ ಜನ-ಜಾನುವಾರು ಎಲ್ಲ ಪುಟ್ಟ-ಪುಟ್ಟದಾಗಿ ಕಾಣ್ತಿತ್ತು. ಊರುಗಳು, ಮನೆಗಳು ನೆಲಕ್ಕೆ ಅಂಟಿಕೊಂಡಂತೆ ಇದ್ದವು. ನದಿ, ಕೆರೆ, ಬೆಳೆಗಳೆಲ್ಲ ಚಿತ್ರಪಟದ ಮೇಲೆ ಬರೆದಂತೆ ವಿವಿಧ ಬಣ್ಣ ಹೊತ್ತು ಮನೋಹರವಾಗಿದ್ದವು.

ಬೆಟ್ಟದ ತುದಿಯಲ್ಲಿ ದೊಡ್ಡ ದೊಡ್ಡ ಬಂಡೆಗಳ ರಾಶಿ, ಅವುಗಳ ಸಂದಿಯಲ್ಲಿ ಮೇಲೆ ಏರಿ ಹೋದರೆ ಎಲ್ಲಕ್ಕೂ ಎತ್ತರವಾದ ಒಂದು ತುದಿ ಬಂಡೆಯ ಮೇಲೆ ಎತ್ತರವಾದ ಮತ್ತು ದಪ್ಪವಾದ ಒಂದು ಕಬ್ಬಿಣದ ದೀಪಸ್ತಂಭ ನೆಟ್ಟಿತ್ತು. ಅದರ ಮೇಲೆ ಕಾರ್ತಿಕ-ಶ್ರಾವಣಗಳಲ್ಲಿ ದೊಡ್ಡ ಕಬ್ಬಿಣದ ಬಾಣಲೆ ಇಟ್ಟು, ಅದರ ತುಂಬ ಎಣ್ಣೆ ಸುರಿದು, ಹೊಸ ಬಟ್ಟೆಯ ರಟ್ಟೆ ಗಾತ್ರದ ಬತ್ತಿ ಹಾಕಿ ದೀಪ ಹಚ್ಚುವರಂತೆ.!

ಅದು ಸುತ್ತು-ಮುತ್ತಿನ ಬಹುದೂರದ ಊರುಗಳಿಗೆಲ್ಲ ಕಾಣುವು ದಂತೆ! ಆ ಜ್ಯೋತಿಯನ್ನು ನೋಡಿದ ಭಕ್ತರು ಸ್ವಾಮಿಯನ್ನು ನೆನೆದು ಆ ಬೆಳಕಿಗೆ ಕೈ ಮುಗಿದು, ಸ್ವಾಮಿ ಸ್ತೋತ್ರ ಮಾಡುವರೆಂದು ಮಾವ ಹೇಳಿದರು.''

''ಅದೆಲ್ಲ ಸರಿ ಮರಿ, ನೀನು ಇಷ್ಟು ಕಷ್ಟ ಪಟ್ಟು ಬೆಟ್ಟ ಏರಿ, ಅಲ್ಲಿ ದೀಪ ಹಚ್ಚುವುದನ್ನು ಹೇಳಿದೆಯಲ್ಲವೆ, ಅದರಿಂದ ನೀನು ಏನು ಕಲಿತಂತಾ ಯಿತು ?''

ಭಾಗೀರಥಿಯ ಮಾತು ಶ್ರೀಪತಿಗೆ ಒಂದು ಪರೀಕ್ಷೆಯಂತೆ ಇತ್ತು. ಅವನು ಕೊಂಚ ಹೊತ್ತು ಸುಮ್ಮನಿದ್ದು ಹೇಳಿದ—

''ಅಮ್ಮ, ನೀವು ತುಂಬಾ ಜಾಣರಮ್ಮ !''

''ಯಾಕಪ್ಪ, ನಾನು ಕೇಳಿದ್ದು ತಪ್ಪೆ ?''

"ತಪ್ಪಿಲ್ಲಮ್ಮ, ನೀವು ನಮ್ಮ ದಿನ ನಿತ್ಯದ ವ್ಯವಹಾರದಲ್ಲಿ ಎಷ್ಟು ಆಳವಾಗಿಯೋಚಿಸುತ್ತೀರಿ ಅಂತ ಆಶ್ಚರ್ಯ ನನಗೆ!"

"ನನ್ನ ಹೊಗಳಿಕೆ ಇರಲಿ, ನೀನು ಹೊಸದಾಗಿ ಏನು ಕಲಿತೆ ಹೇಳು!"

—ಎಂದ ತಾಯಿಗೆ ಶ್ರೀಪತಿ

"ನಾನು ದೋಣಿ ನೀರಿನಲ್ಲಿ ಈಜಿದುದರ ಅರ್ಥವನ್ನು ನೀವು ಬಿಡಿಸಿ ಹೇಳಿದಂತೆ, ಬೆಟ್ಟ ಹತ್ತುವುದರಲ್ಲಿಯೂ ಒಂದು ಗೂಢ ಅರ್ಥವನ್ನು ಕಂಡಿದ್ದೀರಿ!"

"ನಿಜ ನಾನು ಕಂಡ ಅರ್ಥ ನಿನಗೆ ಹೇಗೆ ಕಾಣಿಸಿತು ಹೇಳು!"

"ನೋಡಮ್ಮ, ನಮ್ಮ ಜೀವನದಲ್ಲಿ ಸಾಧಿಸುವ ಸಾಧನೆಯೇ ಒಂದು ಬೆಟ್ಟ. ನಾವು ಪ್ರಾರಂಭದಲ್ಲಿ ಕೊಳದಲ್ಲಿ ಮಿಂದು, ಮೈ ಮತ್ತು ಬಟ್ಟೆಗಳನ್ನು ಮಡಿ ಮಾಡಿಕೊಂಡು ದೇವರ ಸೇವೆ ಮಾಡಿದಂತೆ ನಮ್ಮ ಮನಸ್ಸಿನ ಕೊಳೆಯನ್ನು ದೇವರ ಧ್ಯಾನದಿಂದ ತೊಳೆದು, ನಿರ್ಮಲ ಮನವೆಂಬ ಮಡಿ ವಸ್ತ್ರ ಧರಿಸಿ, ದೇವರನ್ನು ನೆನೆಯುತ್ತಾ ಜೀವನದ ಶಿಖರ ಏರಬೇಕು!"

"ಭೇಷ್, ಚೆನ್ನಾಗಿ ಗ್ರಹಿಸಿದ್ದೀಯ! ಆಮೇಲೆ!"

"ಶಿಖರ ಮುಟ್ಟುವುದು ಸುಲಭವಲ್ಲ. ಏದುಸಿರು ಬರುತ್ತಿದ್ದರೂ ನಮ್ಮ ಗುರಿ ಮುಟ್ಟಲು ಕಷ್ಟ–ನಷ್ಟಗಳನ್ನು ಲೆಕ್ಕಿಸದೆ ಶಿಖರದ" ತುದಿ ತಲುಪಬೇಕು. ಅದು ಬೆಟ್ಟದ ತುದಿ ಮಾತ್ರವಲ್ಲ; ಜ್ಞಾನ ಶಿಖರದ ತುದಿ. ಬೆಟ್ಟದ ಮೇಲೆ ಇರುವ ದೀಪ ಸ್ತಂಭದ ಮೇಲೆ ಹಚ್ಚಿದ ದೀಪವೇ ಜ್ಞಾನಜ್ಯೋತಿ. ಆ ಜ್ಯೋತಿ ತಾನು ಬೆಳಗುವುರ ಜೊತೆಗೆ ಲೋಕವನ್ನು ಬೆಳಗುತ್ತದೆ ನಾವು ಗಳಿಸಿದ ಆ ಜ್ಞಾನವನ್ನು ಎಲ್ಲರಿಗೂ ಹಂಚಬೇಕು. ಎಲ್ಲರ ಮನಸ್ಸಿನ ಕತ್ತಲೆಯನ್ನು ಕಳೆಯಬೇಕು.

ಅದು ನಮ್ಮನ್ನು ನಾವು ತಿಳಿಯುವುದರ ಸಂಕೇತ! ಜನ ಅದನ್ನು ನೋಡಿ ಆನಂದಿಸುವುದೇ ಪರಮಾನಂದ. ಲೋಕ ಆನಂದಿಸುವುದನ್ನು ಕಂಡು ನಾವೂ ಆನಂದಿಸುತ್ತಾ ಜನ್ಮಸಾರ್ಥಕ ಹೊಂದ ಬೇಕು!"

"ಇಷ್ಟೆಲ್ಲ ಗೂಢಾರ್ಥ ನಿನಗೆ ಹೇಗೆ ಗೊತ್ತಾಯಿತು ಮರಿ!"

"ಇದೆಲ್ಲ ನಿನ್ನ ಕೃಪೆಯಮ್ಮ! ನಿನ್ನ ಪವಿತ್ರ ಮನಸ್ಸಿನಿಂದ ನನಗೆ ಮಾಡಿಸಿದ ಸ್ತನ್ಯಪಾನ, ಅಮೃತ ಉಣಿಸಿರುವುದರ ಫಲ. ಇದು ಅನ್ನಪೂರ್ಣೆಯಾಗಿರುವ ನಿನ್ನ ಗರ್ಭದಲ್ಲಿ ಹುಟ್ಟಿರುವ ನನಗೆ ನೀನೆದಾರಿ ತೋರುವವಳು. ನೀನು ಕೇವಲ ಅನ್ನಪೂರ್ಣೆ ಮಾತ್ರವಲ್ಲ; ನೀನು ದೇವಾಲಯದಲ್ಲಿರುವ ಕನಕ ದುರ್ಗಿಯ ಅಪರಾವತಾರ! ಜ್ಞಾನ ಪೂರ್ಣೆ! ಸದಾ ಪೂರ್ಣೆ!"

ಎಂದು ಶ್ರೀಪತಿ ಅಮ್ಮನ ತೊಡೆಯನ್ನೇರಿ, ಮುದ್ದಿಸಿ, ಅವಳಿಗೆ ದೀರ್ಘದಂಡ ಪ್ರಣಾಮ ಮಾಡಿದ. ತಾಯಿ ಹೇಳಿದಳು.

"ನೀನು ಹೇಳಿದ್ದು ನಿಜ ಮರಿ, ಇದು ಕೇವಲ ನನ್ನ ಕೃಪೆಯಲ್ಲ ನೀನು ಹೇಳಿದಂತೆ ನನ್ನ ಭಕ್ತಿಗೆ ಒಲಿದ ಕನಕ ದುರ್ಗಿಯ ಕೃಪೆ! ನೀನು ಅವಳನ್ನು ಯಾವಾಗಲೂ ಮರೆಯಬೇಡ. ನಿನಗೆ ಅವಳು ಶ್ರೀರಕ್ಷೆ! ತಾಯಿ ಮಗನನ್ನು ಎದೆಗವಚಿಕೊಂಡು "ನೂರು ಕಾಲ ಸುಖವಾಗಿ ಬಾಳ, ಜ್ಞಾನ ಶಿಖರವನ್ನು ಏರಿ, ಜಗತ್ತಿಗೆ ಬೆಳಕು ಕೊಡುವವನಾಗು" ಎಂದು ಮಗನ ತಲೆ ನೇವರಿಸಿದಳು. ಇಂದು ನಿನಗೆ ದೋಣೆಯಲ್ಲಿ ದೂರ ದರ್ಶನ ವಾದಂತಾಯಿತು!

ಶ್ರೀಪತಿ ತನ್ನ ಕತೆ ಮುಂದುವರಿಸಿದ. ಬೆಟ್ಟದಿಂದ ಇಳಿದು ಸಂಜೆಗೆ ಮನೆ ಸೇರಿದೆವು. ರಾತ್ರಿ ಉಂಡು ಮಲಗಿದ ನನಗೆ ಬೆಳಗ್ಗೆ ಅಪ್ಪಾಜಿ ಬಂದು ಏಳಿಸುವವರೆಗೆ ಎಚ್ಚರವೇ ಆಗಲಿಲ್ಲವಮ್ಮ!"

* * *

ಇನ್ನೂ ಕತ್ತಲು ಕತ್ತಲಿದ್ದಂತೆಯೇ ರಾಮುಡು ಗಾಡಿ ಕಟ್ಟಿದ. ನಾನು ಅಪ್ಪಾಜಿ ಬೆಳಗಿನ ಝಾವಕ್ಕೇ ಸ್ನಾನ–ಪೂಜೆ ಮುಗಿಸಿ ಗಾಡಿ ಹತ್ತಿದ್ದೆವು."

"ಅಜ್ಜಿ ಏನು ಕೊಟ್ಟರಪ್ಪ?"

"ಅಮ್ಮ, ಅಜ್ಜಿ ಮಾವನ್ನ ಕರೆದು ಪೇಟೆಗೆ ಕಳಿಸಿ, ನಾನು ಪಾಠಶಾಲೆ ಸೇರಿದ ಮೇಲೆ ಹಾಕಿಕೊಳ್ಳಲು ಹೊಸ ಪಂಚೆ, ಶಲ್ಯ ಎಲ್ಲ ತರಿಸಿದರು. ಅಪ್ಪಾಜಿ ಕೈಚೀಲದಲ್ಲಿದೆ ನೋಡು. ದಾರಿಯಲ್ಲಿ ನಮ್ಮ ಹಸಿವು ಹಿಂಗಿಸಲು ಏನೇನೋ ಸಿಹಿ ತಿನಿಸುಗಳನ್ನು ಕಟ್ಟಿ ಕಳಿಸಿದ್ದಾರೆ ನೋಡು!"

ಭಾಗೀರಥಿಗೆ ಅಜ್ಜಿ ಕಳಿಸಿರುವ ಸಿಹಿ ತಿನಿಸುಗಳಿಗಿಂತ ಪುಟ್ಟನ ಮುದ್ದು ಮಾತುಗಳೇ ಹೆಚ್ಚು ರುಚಿಯಾಗಿ ಕಂಡವು.

* * *

ರಾತ್ರಿ ಭೋಜನವಾದ ಮೇಲೆ ಬುದ್ಧಿಯವರು ಮಾವನವರು ಬರೆದುಕೊಟ್ಟಿರುವ ಶ್ರೀಪತಿಯ ಜಾತಕವನ್ನು ಮಡದಿಗೆ ತೋರಿಸುತ್ತಾ, ಅಲ್ಲಲ್ಲಿ ಓದಿ ಅವನ ಭವಿಷ್ಯದ ಬಗೆಗೆ ಸ್ಥೂಲ ಪರಿಚಯ ಮಾಡಿಕೊಟ್ಟರು. ಮತ್ತು ಶ್ರೀಪತಿಗೆ ಐದನೆಯ ವರ್ಷಕ್ಕೇ ಉಪನಯನ ಮಾಡುವ ಬಗೆಗೆ ಶಾಸ್ತ್ರ ಪ್ರಮಾಣಗಳನ್ನು ಹೇಳಿದರಲ್ಲದೆ ಮಾವನವರು ನಮ್ಮ ಆರಾಧ್ಯ ಬ್ರಾಹ್ಮಣ್ಯವು ಉಗಮವಾದ ಪೂರ್ವ ಕತೆಯನ್ನೂ ಬುದ್ಧಿಯವರು ಮಡದಿಗೆ ಪಾಠ ಒಪ್ಪಿಸಿದರು.

"ಶ್ರೀಪತಿಗೆ ಉಪನಯನ ಮಾಡಿಸುವಲ್ಲಿ ಯಾವ ದೋಷವೂ ಇಲ್ಲ. ವೆಂದು ನನ್ನ ಆತ್ಮಸಾಕ್ಷಿ ನುಡಿಯುತ್ತಿತ್ತು. ಆದರೆ ನನ್ನ ಮಾತು ಹಿತ್ತಲ ಮದ್ದು, ಅದೂ ಹೆಂಗಸರ ಮಾತು, ಅದಕ್ಕೆ ಬೆಲೆ ಬರಬೇಕಾದರೆ ಅದು ಶಂಖದಲ್ಲಿ ಬಿದ್ದಲ್ಲದೆ ತೀರ್ಥವೆನಿಸೀತೆ ?"

ಎಂದು ಭಾಗೀರಥಿ ಮಾತಿನಲ್ಲಿ ಚುಚ್ಚಿದಳು ಪತಿದೇವರನ್ನು ಅದನ್ನು ಕೇಳಿ ಸಾವರಿಸಿಕೊಂಡ ಬುದ್ಧಿಯವರು—

"ಅಪ್ಪ, ನಿನ್ನ ಮಾತನ್ನು ಕಳಪೆ ಎಂದು ನಾನು ಹಳಿಯಲಿಲ್ಲ ; ಆದರೆ ನೀನೇನೋ ಆತ್ಮಸಾಕ್ಷ್ಯ ಬಲ್ಲವಳು. ಆದರೆ ಅದು ಸತ್ಪುರುಷರಿಗೆ ಸಲ್ಲತಕ್ಕ ಮಾರ್ಗ !

ಸತಾಂ ಹಿ ಸಂದೇಹ ಪದೇಷು ವಸ್ತುಷು ।
ಪ್ರಮಾಣಮಂತಃಕರಣ ಪ್ರವೃತ್ತಯಃ ॥

ಎಂದು ಮಹಾಕವಿ ಉಕ್ತಿ ಇದೆ. ಆದರೆ ನಮ್ಮಂತಹವರು ಶಾಸ್ತ್ರ ಪ್ರಮಾಣ ತೋರಿಸದಿದ್ದರೆ ಜನ ನಂಬುವುದಿಲ್ಲ. ಅದಕ್ಕಾಗಿ ಮುದಿಗೊಂಡದವರೆಗೆ ಹೋಗಬೇಕಾಯಿತು. ಮಾವನವರು ಅಂತಹ ಶಾಸ್ತ್ರ ಪ್ರಮಾಣಗಳನ್ನು ಕೊಟ್ಟು ಸಮರ್ಥಿಸಿದ್ದರಿಂದ ಈಗ ಧೈರ್ಯ ಬಂತು. ಮೇಲಾಗಿ ಅವರಿಂದ ನಮಗೆ ತಿಳಿಯದ ಎಷ್ಟೋ ವಿಷಯಗಳು ತಿಳಿದಂತಾಯಿತು."

—ಎಂದು ಸೂಕ್ಷ್ಮವಾಗಿ ಮುದಿಗೊಂಡದಲ್ಲಿ ನಡೆದ ವಿಚಾರವನ್ನೆಲ್ಲ ವಿವರಿಸಿದರು ಪತಿದೇವರು.

"ಮಾವನವರ ಅನುಭವದ ಆಳವನ್ನು ಕಂಡು ಶಂಭುವೂ ಬೆರಗಾದ !"

"ಸರಿ, ಈಗ ಉಪನಯನ ಯಾವಾಗ ? ಲಗ್ನ-ಗಿಗ್ನ ಕಟ್ಟಿಸಿಕೊಂಡು ಬಂದಿದ್ದೀರಾ ?"

"ಹೌದು ಕಣೆ, ಇದೇ ವೈಶಾಖ ಶುದ್ಧ ಬಿದಿಗೆ ರೋಹಿಣಿ ನಕ್ಷತ್ರ ಸೋಮವಾರ ಸ್ಥಿರಲಗ್ನದಲ್ಲಿ ಅಕ್ಷರಾಭ್ಯಾಸ, ಪಂಚಮಿ ಪುನರ್ವಸು ನಕ್ಷತ್ರ ಗುರುವಾರ ಉಪನಯನ, ಶುಕ್ರವಾರ ಶಿವದೀಕ್ಷೆ ಐದು ದಿನಗಳವರೆಗೆ ಕಾರ್ಯಕ್ರಮ ನಡೆಯಬೇಕೆಂದು ಲಗ್ನಪತ್ರಿಕೆ ಬರೆದುಕೊಟ್ಟಿದ್ದಾರೆ."

ಎಂದು ಹೇಳಿದ ಬುದ್ಧಿಯವರು ಲಗ್ನಪತ್ರಿಕೆಯನ್ನು ಬಾಗು ಕೈಗೆ ಕೊಟ್ಟರು.

ಭಾಗೀರಥಿ ಪತ್ರಿಕೆ ಕೈಗೆ ತೆಗೆದುಕೊಂಡು—

"ಈ ಕಾರ್ಯಗಳನ್ನು ನೀವೆಲ್ಲರೂ ಬಂದು ನೆರವೇರಿಸಿಕೊಡಬೇಕೆಂದು ಹೇಳಿದ್ದೀರಿ ತಾನೆ ?"

"ಹೌದು ಕಣೆ, ಮೊಮ್ಮಗನ ಕಾರ್ಯಕ್ಕೆ ಅವರನ್ನು ಬಿಡಲಾದೀತೆ? ಅವರೆಲ್ಲರೂ ಎರಡು ದಿನ ಮುಂಚಿತವಾಗಿ ಬಂದು ಕಾರ್ಯ ನೆರವೇರಿಸಿಕೊಟ್ಟು ಚಿರಂಜೀವಿಯನ್ನು ಆಶೀರ್ವದಿಸಬೇಕೆಂದು ಬಿನ್ನಹ ಒಪ್ಪಿಸಿ ಬಂದಿದ್ದೇನೆ. ಇನ್ನು ಮುಂದಿನದು ನಿನ್ನ ಹೊಣೆಗಾರಿಕೆಗೆ ಸೇರಿದ್ದು."

—ಎಂದು ಬುದ್ಧಿಯವರು ಸುಮ್ಮನಾದರು.

ಭಾಗೀರಥಿ ಕಣ್ಣಂಚಿದಲ್ಲಿ ಮೂಡಿಬಂದ ಆನಂದ ಕಣಗಳನ್ನು ಸೆರಗಿನ ತುದಿಯಿಂದ ಒರೆಸಿಕೊಳ್ಳುತ್ತಾ

"ಅಯ್ಯೋ, ನನ್ನದೇನು ಬಂತು! ನೀವು ಏನು ಹೇಳಿದರೆ ಅದನ್ನು ಮಾಡುವ ಮೂಕ ಆಕಳು ನಾನು! ಎಂದು ಅಡಿಗೆ ಮನೆ ಸೇರಿದಾಗ ಬುದ್ಧಿಯವರು ಅವಳನ್ನು ತಡೆದು"

"ನೀನು ಕೇವಲ ಮೂಕ ಆಕಳು ಅಲ್ಲ ಕಣೆ"

ಕೇಳಿದ್ದನ್ನೆಲ್ಲ ಕರುಣಿಸುವ ಕಾಮಧೇನು! "ನಿಮ್ಮ ಗರ್ಭದಲ್ಲಿ ಹುಟ್ಟಿರುವ ಶ್ರೀಪತಿ ಮಹಾಪುರುಷ ಲಕ್ಷಣಗಳಿಂದ ಕೂಡಿದ್ದಾನೆ. ಅವನನ್ನು ಜೋಪಾನಮಾಡಿ!" ಎಂದು ಮಾವನವರು ನಿನಗೆ ಗುಟ್ಟಾಗಿ ಹೇಳಿಕಳಿಸಿದ್ದಾರೆ"

"ಇದರಲ್ಲಿ ನಿಮ್ಮಿಬ್ಬರ ಮಧ್ಯೆ ನಾನೇ ಭಾಗ್ಯವಂತ!" ಎಂದು ಅವಳನ್ನೊಮ್ಮೆ ಆಲಿಂಗಿಸಿ, ಮುಂಗುರುಳ ನೇವರಿಸಿ ಚುಂಬಿಸಿ ಒಳಕ್ಕೆ ಕಳಿಸಿದರು.

* * *

ವೈಶಾಖ ಶುದ್ಧ ಬಿದಿಗೆ ಎಂದರೆ ಇನ್ನೇನು ಒಂದೇ ತಿಂಗಳು. ಅಷ್ಟರಲ್ಲಿ ಆಗಬೇಕಾದ ಕೆಲಸ ಬೆಟ್ಟದಷ್ಟು! ಭಾಗೀರಥಿಗೆ ಕೊಂಚವೂ ಬಿಡುವಿಲ್ಲ.

ಕಾರ್ಯಕ್ರಮಗಳ ಪಟ್ಟಿ ಮೊದಲು ಸಿದ್ಧವಾಯಿತು. ಪೇಟೆಯಿಂದ ಬರಬೇಕಾದ ಅಡಿಗೆ ಸಾಮಗ್ರಿ, ಬಟ್ಟೆಬರೆಗಳು,ಉಡುಗೊರೆಗಳು, ಮುಂತಾದುವುಗಳ ಬಗೆಗೆ ಸತಿ-ಪತಿಗಳು ಸಮಾಲೋಚಿಸಿದರು. ಎಲ್ಲ ಸಾಮಗ್ರಿಯೂ ಸಿದ್ಧವಾಯಿತು. ಪಾಠಶಾಲೆಯ ಸಹೋಪಾಧ್ಯಾಯರು ಮತ್ತು ವಿದ್ಯಾರ್ಥಿಗಳು ಆಹ್ವಾನ ಪತ್ರಿಕೆ ಪ್ರತಿಮಾಡಿ ಅವುಗಳನ್ನು ಹಂಚುವ ಹೊಣೆ ಹೊತ್ತರು.

ಶಿವಶಂಕರನಿಗಂತೂ ಒಳ-ಹೊರಗಿನ ಕೆಲಸಗಳು ಹಾಸಿಕೊಂಡು ಹೊದೆಯುವಷ್ಟು! ರಾಮುಡು ಪಾಕಶಾಲೆ ನಿರ್ಮಾಣ, ಚಪ್ಪರ, ಸೌದೆ, ಪಾತ್ರೆ-ಪದಾರ್ಥಗಳ ಸಿದ್ಧತೆಗೆ ನಡುಕಟ್ಟಿನಿಂತ. ವೆಂಕಟವ್ಮ ಭಾಗೀರಥಿಗೆ ಬಲಗೈಯಾಗಿ ನಿಂತು ಆಹಾರಸಾಮಾಗ್ರಿ ಶುದ್ಧಪಡಿಸುವುದರಲ್ಲಿ, ಪಾತ್ರೆ, ಬೆಳಗಿ, ತೊಳೆಯುವುದರಲ್ಲಿ ಮತ್ತು ಸಾರಣೆ ಕಾರಣೆಗಳಲ್ಲಿ ತೊಡಗಿದ್ದಳು.

ಶ್ರೀಪತಿ ಎಲ್ಲರ ಕಣ್ಮಣಿಯಾಗಿ ಮೆರೆಯುತ್ತಿದ್ದ. ಮುದಿಗೊಂಡ ದಿಂದ ಮಾವನವರು ವಿಶ್ವೇಶ್ವರನ ಹೊರತು ಉಳಿದವರೊಡನೆ ಎರಡುದಿನ ಮುಂಚಿತವಾಗಿ ಗಾಡಿ ಕಟ್ಟಿಸಿಕೊಂಡು ಬಂದಿಳಿದರು. ಅಜ್ಜಿ–ತಾತ, ಮಾವನವರನ್ನು ಕಂಡ ಶ್ರೀಪತಿ ಹರ್ಷದಿಂದ ಚಪ್ಪಾಳೆ ತಟ್ಟಿ ಕುಣಿದಾಡಿದ. ಅಜ್ಜಿ ಮೊಮ್ಮಗನನ್ನೆತ್ತಿಕೊಂಡು ಮನೆ ಪ್ರವೇಶಿಸಿದಳು. ಭಾಗೀರಥಿ ತಂದೆ ತಾಯಿಗಳಿಗೆ ಅಣ್ಣನಿಗೆ ವಂದಿಸಿ ಸ್ವಾಗತಿಸಿದಳು. ದೇಶಿಕರು ಅಳಿಯನಿಗೆ ಬೆನ್ನು ತಟ್ಟಿ ಅಭಿನಂದಿಸಿದರು. ಶಂಭು ಆರಾಧ್ಯರಿಗೆ ನಮಸ್ಕರಿಸಿ ಕುಶಲ ಪ್ರಶ್ನೆಗಳಲ್ಲಿ ಮಗ್ನನಾದ.

ಇಷ್ಟಮಿತ್ರರು, ಬಂಧು ಬಳಗದವರು ಇದು ತಮ್ಮ ಮನೆಯ ಕೆಲಸವೆಂದೇ ಭಾವಿಸಿ ಸಡಗರದಿಂದ ಭಾಗವಹಿಸಿದ್ದರು.



೩

## ಅರ್ಹತೆಗೆ ತಕ್ಕ ಪುರಸ್ಕಾರ

ಮುದಿಗೊಂಡದ ಸೋಮಶಂಭು ದೇಶಿಕರ ಕೀರ್ತಿ ನಾಡಿನ ಜನರಿಗೆ ಸುಪರಿಚಿತ. ಸಂಸ್ಕೃತದಲ್ಲಿ ನಿರರ್ಗಳ ಪಾಂಡಿತ್ಯ ಅವರದು. ವೇದ ಆಗಮ ಉಪನಿಷತ್ತು ಮತ್ತು ದರ್ಶನಗಳಲ್ಲಿ ಅವರನ್ನು ಸಮಕಟ್ಟುವ ಪಂಡಿತರು ಭರತ ಖಂಡದಲ್ಲಿ ಬೆರಳೆಣಿಕೆಗೂ ದೊರೆಯುವುದು ದುರ್ಲಭ. ಶೈವ-ವೀರಶೈವಗಳ ಬಗ್ಗೆ ಅವರದು ಅಪಾರ ಅನುಭವ. ಶಾಸ್ತ್ರ ವಿಚಾರ ಗಳನ್ನು ಎಲ್ಲರಿಗೂ ತಿಳಿಯುವಂತೆ ಪ್ರವಚನ ಮಾಡುವ ಅಪೂರ್ವ ವೈಖರಿ ಅವರದು.

"ದೇಶಿಕರ ಹುಟ್ಟು ಹೆಸರು "ಸೋಮಶಂಭು ದೀಕ್ಷಿತ" ಎಂದು. "ದೇಶಿಕ" ಎಂಬುದು ಅವರ ಒಂದು ಪವಾಡ ಲಭ್ಯವಾದ ಬಿರುದು. ಆ ಬಿರುದು ಅವರಿಗೆ ದೊರೆತ ಸಂದರ್ಭವೊಂದು ಕುತೂಹಲ ಕರವಾಗಿದೆ,

ಕಾಶಿಯ ವಿಶ್ವಾರಾಧ್ಯ ಮಹಾವಿದ್ಯಾಪೀಠದಲ್ಲಿ ಆಗಮ ವಿಭಾಗದಲ್ಲಿ ಪ್ರಾಚಾರ್ಯರಾಗಿದ್ದು ನಿವೃತ್ತರಾದ ಮೇಲೆ ಅವರು ಸ್ವದೇಶಕ್ಕೆ ಮರಳಿದ್ದರು. ಆದರೂ ವಿದ್ಯಾಪೀಠದ ಆಡಳಿತ ಸಮಿತಿಯಲ್ಲಿ ಅವರಿಗೆ ಗೌರವ ಸದಸ್ಯತ್ವವನ್ನು ಮಹಾವಿದ್ಯಾಪೀಠ ನೀಡಿತ್ತು. ಅದರ ಫಲವಾಗಿ ಅವರು ಆಗಾಗ್ಗೆ ವಿದ್ಯಾಪೀಠದ ಕರೆಗೆ ಓಗೊಟ್ಟು ಕಾಶಿಗೆ ಹೋಗಿ ಬರುವ ಅಗತ್ಯವಿರುತ್ತಿತ್ತು.

ಒಮ್ಮೆ ವಿದ್ಯಾಪೀಠದಲ್ಲಿ ಏರ್ಪಟ್ಟಿದ್ದ ಘಟಿಕೋತ್ಸವದಲ್ಲಿ ದೀಕ್ಷಾಂತ ಭಾಷಣ ಮಾಡಲು ವಿದ್ಯಾಪೀಠವು ದೇಶಿಕರಿಗೆ ಕರೆ ನೀಡಿತ್ತು. ಈ ನಿಮಿತ್ತ ದಿಂದ ದೇಶಿಕರು ಕಾಶಿಗೆ ಆಗಮಿಸಿದ್ದರು.

ಅಂದಿನ ಸಮಾರಂಭಕ್ಕೆ ಕಾಶಿಯ ಮಹಾರಾಜರೂ ವಿದ್ಯಾಪೀಠದ ಕುಲಾಧಿಪತಿಗಳೂ ಆಗಿದ್ದ ಶ್ರೀ ಮನ್ಮಹಾರಾಜ ವಿಕ್ರಮವರ್ಮ ಅವರು ಅಧ್ಯಕ್ಷರು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ದೀಕ್ಷಿತರು ಸ್ನಾತಕರನ್ನು ಕುರಿತು ವಿಚಾರ ಪರಿಪ್ಲುತವಾದ ಭಾಷಣ ಮಾಡಿ ಪ್ರಶಸ್ತಿಗಳನ್ನು ವಿತರಣ ಮಾಡಿದರು.

ಸಭಾಧ್ಯಕ್ಷರು ದೀಕ್ಷಿತರನ್ನು ಮತ್ತು ಅವರ ಅನುಭವವನ್ನು ಕೊಂಡಾಡಿ, ತಮ್ಮ ಅರಮನೆಯ "ವಿಜ್ಞಾನ ಮಂದಿರ" ದಲ್ಲಿ ಒಂದು ಉಪನ್ಯಾಸವನ್ನು ಮಾಡಲು ತಮ್ಮ ಆತಿಥ್ಯವನ್ನು ಸ್ವೀಕರಿಸಬೇಕೆಂದು ದೀಕ್ಷಿತರಿಗೆ ಕರೆನೀಡಿದರು.

* * *

ಅರಮನೆಯ ವಿಶಾಲವಾದ ಆವರಣದಲ್ಲಿ ಏರ್ಪಟ್ಟಿರುವ ವಿಜ್ಞಾನ ಮಂದಿರ ಬಹು ದೊಡ್ಡದು, ಅದು ಎತ್ತರವಾದ ಸ್ಥಳದಲ್ಲಿ ಸಹಸ್ರ ಸ್ತಂಭ ಗಳುಳ್ಳ ಒಂದು ಮಹಾಭವನ. ಭವನದ ಅಂಗಳದಲ್ಲಿ ನಾಲ್ಕೈದು ಸಹಸ್ರ ಮಂದಿ ಕೂರುವಷ್ಟು ಆಸನ ವ್ಯವಸ್ಥೆ ಅಲ್ಲಿತ್ತು. ಹಂಸತೂಲಿಕಾತಲ್ಪವನ್ನು ಹೊದ್ದಿರುವ ಆಸನಗಳು ರಾಜ ವೈಭವದ ಸಂಕೇತವಾಗಿದ್ದವು.

ಸಭಾ ಮಂದಿರದ ಹಿಂಭಾಗದ ಸುಸಜ್ಜಿತ ರಂಗ ಸಜ್ಜಿಕೆ ಪ್ರೇಕ್ಷಕರ ನೋಟಕ್ಕೆ ಅಡಚಣೆಯಾಗದಂತೆ ಹಂತ ಹಂತವಾಗಿ ಹಿಂದು ಹಿಂದಕ್ಕೆ ಎತ್ತರಿಸಿರುವ ಸ್ತರಗಳಿಂದ ಕೂಡಿದ ಸಭಾಭವನ ಸಹಸ್ರಸೋಪಾನ ರಂಜಿತ ಸರೋವರದಂತೆ ರಾರಾಜಿಸುತ್ತಿತ್ತು. ಅಲ್ಲಲ್ಲಿಗೆ ಅಳವಡಿ ಸಿರುವ ಸ್ವಯಂಚಾಲಿತ ಚೈನಾಂಬರದ ನೂರಾರು ಪಂಖ ಪಂಕ್ತಿಗಳು ಲಾಮಂಚ ಜಲ ಸೇಚನೆಯಿಂದ ಸೌರಭ್ಯ ಶೈತ್ಯ ಮತ್ತು ಮಾಂದ್ಯವೆಂಬ ಗುಣತ್ರಯಾಲಂಕೃತವಾಗಿ ತಂಗಾಳಿಯನ್ನು ಹೊತ್ತು ಪ್ರೇಕ್ಷಕರನ್ನು ಉಲ್ಲಾಸ ಗೊಳಿಸುತ್ತಿದ್ದವು. ರಂಗ ಸಜ್ಜಿಕೆಯ ಮೇಲೆ ಅಳವಡಿಸಿರುವ ಮಣಿದೀಪ ಮಾಲೆಯ ಪ್ರಕಾಶ ಸಭಾಭವನವನ್ನು ಜ್ಯೋತಿರ್ಮಯ ವಾಗಿಸಿತ್ತು.

ಸನ್ಮಾನ್ಯ ಶ್ರೀಮನ್ಮಹಾರಾಜರವರ ಘನ ನೇತೃತ್ವದಲ್ಲಿ ಏರ್ಪಟ್ಟಿದ್ದ ಮಹಾಗೋಷ್ಠಿಗೆ ನಗರದ ಎಲ್ಲ ವಿದ್ವಾಂಸರೂ, ಮಹಾವಿದ್ಯಾಪೀಠದ

ಎಲ್ಲ ಪ್ರಾಚಾರ್ಯರೂ ಅಧ್ಯಾಪಕರೂ ವಿದ್ಯಾರ್ಥಿಗಳು ಮತ್ತು ಗಣ್ಯ ನಾಗರಿಕ ಸ್ತ್ರೀಪುರುಷರು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಸಭೆಯನ್ನು ಅಲಂಕರಿಸಿದ್ದರು.

ಶ್ರೀಮನ್ಮಹಾರಾಜರ ಭಕ್ತಿಪೂರ್ವಕವಾದ ವಿಶೇಷ ಬಿನ್ನಹವನ್ನು ಮನ್ನಿಸಿ ಮಹಾವಿದ್ಯಾಪೀಠದ ಸಂಸ್ಥಾಪಕ ಅಧ್ಯಕ್ಷರು ಮಹಾಪೋಷಕರೂ ಆದ ವಾರಾಣಸೀ ಜ್ಞಾನಸಿಂಹಾಸನಾಧೀಶ್ವರ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯರು ಪೂರ್ಣಕುಂಭ ಗೌರವದೊಡನೆ ಸಭೆಗೆ ಚಿತ್ತೈಸಿದರು.

ಅಂದಿನ ಮಹಾಸಭೆಗೆ ವಿದ್ಯಾಪೀಠದ ಪ್ರಾಂಶುಪಾಲರೂ ಪ್ರಾಚಾರ್ಯರೂ ಆಗಿದ್ದ ತರ್ಕವಾಚಸ್ಪತಿ, ವಾಮನಚರಣ ಭಟ್ಟಾಚಾರ್ಯರು ಅಗ್ರಾಸನವನ್ನು ಅಲಂಕರಿಸಿದ್ದರು.

ಸೋಮಶಂಭು ದೀಕ್ಷಿತರು ಸಭಾಧ್ಯಕ್ಷರ ವಿನಂತಿಯ ಪ್ರಕಾರ ಭಾಷಣ ಮಾಡಲು ಎದ್ದಾಗ ಮಹಾಸಭೆಯಲ್ಲಿ ಹರ್ಷೋದ್ಗಾರದ ಕರ ತಾಡನ ಮೊಳಗಿತು.

ಸಭೆಯ ಸಂಚಾಲಕರು ಇಂದಿನ ಉಪನ್ಯಾಸದ ವಿಷಯ "ಭಾರತೀಯ ಸಂಸ್ಕೃತಿ ಮತ್ತು ಸಮಾಜ" ಎಂದು ಪ್ರಕಟಿಸಿದರು. ಕರತಾಡನದ ಮೊಳಗು ಸಭಾಭವನವನ್ನು ಭೇದಿಸುವಂತೆ ನಿನದಿಸಿತು.

ದೀಕ್ಷಿತರು ಮಹಾಸಭೆಗೆ ವಂದಿಸಿ ತಮ್ಮ ಭಾಷಣವನ್ನು ಪ್ರಾರಂಭಿಸಿದರು.

"ಪರಮ ಪೂಜ್ಯ ಜಗದ್ಗುರುಗಳೆ, ಆದರಣೀಯರಾದ ಶ್ರೀಮನ್ಮಹಾರಾಜರವರೆ, ಸಭಾಧ್ಯಕ್ಷರೆ, ಮಾತೆಯರೆ, ಮತ್ತು ಮಹನೀಯರೆ,

ಈ ಮಹಾಸಭೆಗೆ ನನ್ನನ್ನು ಆದರದಿಂದ ಬರಮಾಡಿಕೊಂಡಿರುವ ಶ್ರೀಮನ್ಮಹಾರಾಜರವರು ನನ್ನಲ್ಲಿ ಇಟ್ಟಿರುವ ವಾತ್ಸಲ್ಯಕ್ಕೆ ಆಭಾರಿಯಾಗಿದ್ದೇನೆ. ಹಾಗೆಯೇ ಗುಣಪಕ್ಷಪಾತಿಗಳಾದ ಪರಮ ಪೂಜ್ಯ ಜಗದ್ಗುರುಗಳವರು ಅಲ್ಪಜ್ಞನಾದ ನನ್ನನ್ನು ಅನುಗ್ರಹಿಸುವುದಕ್ಕಾಗಿ ಇಲ್ಲಿಗೆ ಚಿತ್ತೈಸಿರುವುದಕ್ಕಾಗಿ ಅವರಿಗೆ ಶ್ರದ್ಧಾ ಭಕ್ತಿ ಪೂರ್ವಕವಾದ ಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸುತ್ತಿದ್ದೇನೆ.

ಇನ್ನು ಸುಗೃಹೀತನಾಮಧೇಯರಾದ ಸಭಾಧ್ಯಕ್ಷರು ಮಹಾವಿದ್ಯಾಪೀಠದ ಪ್ರಾಚಾರ್ಯರು, ವಿದ್ವಾಂಸರು, ನಾಗರಿಕರು ಸಭೆಯನ್ನು ಅಲಂಕರಿಸಿ ನನ್ನನ್ನು ಗೌರವಿಸಿರುವುದಕ್ಕಾಗಿ ಅವರಿಗೆ ಕೃತಜ್ಞನಾಗಿದ್ದೇನೆ.

ಮುಖ್ಯವಾಗಿ ಇಂದು "ಭಾರತೀಯ ಸಂಸ್ಕೃತಿ ಮತ್ತು ಸಮಾಜ" ಎಂಬ ವಿಷಯದಲ್ಲಿ ನಾಲ್ಕು ಮಾತುಗಳನ್ನು ತಮ್ಮ ಸನ್ನಿಧಿಯಲ್ಲಿ ನಿವೇದಿಸಲು ಸಂಕಲ್ಪಿಸಿದ್ದೇನೆ,

ಭಾರತೀಯರಾದ ನಾವು ಪ್ರಾಯಃ ವೇದ-ಆಗಮ-ಉಪನಿಷತ್ತುಗಳಲ್ಲಿ ಹೇಳಿರುವ ಧರ್ಮವನ್ನು ನಿಷ್ಠೆಯಿಂದ ಅನುಷ್ಠಾನಮಾಡುತ್ತಿದ್ದೇವೆ.

ನಮ್ಮಲ್ಲಿ ಜೈನ ಬೌದ್ಧ ಶಾಕ್ತ ಗಾಣಾಪತ್ಯ ಶೈವ ಮತ್ತು ವೈಷ್ಣವ ಮುಂತಾದ ವಿವಿಧ ಧರ್ಮಗಳನ್ನು ಆಚರಿಸುವವರಿದ್ದೇವೆ. ಎಷ್ಟೇ ಧರ್ಮಭೇದಗಳಿದ್ದರೂ ನಮ್ಮಲ್ಲಿ "ಸ್ವಧರ್ಮನಿಷ್ಠೆ ಮತ್ತು ಪರಧರ್ಮ ಸಹಿಷ್ಣುತೆ" ಎಂಬ ಸಾಧಾರಣ ಧರ್ಮವು ಎಲ್ಲರಲ್ಲಿಯೂ ಅನುಸ್ಯೂತವಾಗಿದೆ. ಇದು ಭಾರತೀಯರ ಒಂದು ಅಗ್ಗಳಿಕೆ! ಮಹಾಶಿವ ಭಕ್ತಶಿರೋಮಣಿ ಪುಷ್ಪದಂತನು ಹೇಳಿರುವ ಒಂದು ಮಾತು ಮರೆಯತಕ್ಕುದಲ್ಲ —

"ಋಕ್-ಯಜುಸ್-ಸಾಮ ಎಂಬ ವೇದಗಳು ಮತ್ತು ಸಾಂಖ್ಯ-ಯೋಗ-ಪಾಶುಪತ-ವೈಷ್ಣವ ಮುಂತಾದ ಮತಗಳಲ್ಲಿ ಇದು ಶ್ರೇಷ್ಠ, ಇದು ಶ್ರೇಷ್ಠ; ಇದು ನಮಗೆ ಇಷ್ಟ" ಎಂದು ತಮ್ಮ ತಮ್ಮ ಅಭಿರುಚಿಗೆ ಅನುಗುಣವಾಗಿ "ಇದು ನೇರ ದಾರಿ ಅದು ಬಳಸುದಾರಿ" ಎಂದು ಹೇಳುವವರಿದ್ದೇವೆ,ಆದರೆ ಬೇರೆ ಬೇರೆ ಕಡೆಯಿಂದ ಹರಿದು ಬರುವ ನದಿಗಳು ಹೇಗೆ ಒಂದೇ ಸಮುದ್ರವನ್ನು ಸೇರುತ್ತವೆಯೋ* ಆದರಂತೆ ನಮ್ಮೆಲ್ಲರ ಪ್ರಾರ್ಥನೆಗೆ ಗಮ್ಯನು ನೀನೊಬ್ಬನೆ ! ಆಗಿದ್ದೀಯೆ"

---

*ತ್ರಯೀ ಸಾಂಖ್ಯಂ ಯೋಗಃ ಪಶುಪತಿಮತಂ ವೈಷ್ಣವಮಿತಿ।
ಪ್ರಭಿನ್ನೇ ಪ್ರಸ್ಥಾನೇ ಪರಮಿದಮದಃ ಪಥ್ಯಮಿತಿ ಚ।
ರುಚೀನಾಂ ವೈಚಿತ್ರ್ಯಾತ್ ಋಜುಕುಟಿಲನಾನಾಪಥಜುಷಾಂ।
ನೃಣಾಮೇಕೋ ಗಮ್ಯಃ ತ್ವಮಸಿ ಪಯಸಾಮರ್ಣವ ಇವ॥

—ಶಿವಮಹಿಮ್ನಸ್ತುತಿ

ಮುಂದುವರೆದು ಆ ಮಹನೀಯರು ಹೇಳಿದರು. "ಎಲೈ ಮಹೇಶ್ವರನೇ, ನೀನು ಸೃಜಿಸಿರುವ ಈ ಜಗತ್ತನ್ನು ಕೆಲವರು ನಿತ್ಯವೆಂದೂ ಕೆಲವರು ಅನಿತ್ಯವೆಂದೂ ಮತ್ತೆ ಕೆಲಕೆಲವರು ಧ್ರುವ ಮತ್ತು ಅಧ್ರುವ ವೆಂದೂ ಬಗೆಬಗೆಯಾಗಿ ಹೇಳುತ್ತಿದ್ದಾರೆ. ಆದರೆ ನಾನು ಮಾತ್ರ ಜಗತ್ತಿನ ಹುಟ್ಟು-ಬದುಕು (ಸ್ಥಿತಿ) ಅಳಿವು (ಲಯ) ಮುಂತಾದವುಗಳಿಗೆ ನೀನೊಬ್ಬನೇ ಕರ್ತನೆಂದು ಹೇಳದೆ ಇರುವುದಿಲ್ಲ.

ಒಟ್ಟಿನಲ್ಲಿ ಭಾರತೀಯರಲ್ಲಿ ವೈಯಕ್ತಿಕವಾಗಿ ಎಷ್ಟೇ ಅಭಿಪ್ರಾಯ ಭೇದಗಳಿದ್ದರೂ ರಾಷ್ಟ್ರದ ಏಳಿಗೆಯ ವಿಷಯದಲ್ಲಿ ಎಲ್ಲರೂ ಐಕಮತ್ಯದಿಂದ ವರ್ತಿಸಿ ಆ ಭಗವಂತನನ್ನು ಭಕ್ತಿಯಿಂದ ಆರಾಧಿಸಿ ಸುಖ-ಶಾಂತಿಗಳನ್ನು ಪಡೆಯಬೇಕೆಂದು ವಿನಂತಿಸುತ್ತೇನೆ."

ಎಂಬ ವಿಷಯವನ್ನು ಕುರಿತು ವಿಚಾರಪರಿಪ್ಲುತ ಪ್ರಮಾಣಗಳಿಂದ ಸಮರ್ಥಿಸಿ ಸುಮಾರು ಒಂದು ತಾಸಿನವರೆಗೆ ಅಸ್ಖಲಿತವಾಣಿಯ ತಮ್ಮ ಭಾಷಣವನ್ನು ಮುಗಿಸಿದರು. ಸಭೆಯಲ್ಲಿ ಹರ್ಷೋದ್ಗಾರದ ಕರತಾಡನವೊಳಗಿತು.

ಕಡೆಯಲ್ಲಿ ಸಭೆಯ ಅಧ್ಯಕ್ಷತೆ ವಹಿಸಿದ್ದ ಭಟ್ಟಾಚಾರ್ಯರು ಎದ್ದು ನಿಂತು ಶ್ರೀಮನ್ಮಹಾರಾಜರ ಇಂಗಿತವನ್ನರಿತು "ಪೂಜ್ಯ ದೀಕ್ಷಿತರು 'ಭಾರತೀಯ ಸಂಸ್ಕೃತಿ ಮತ್ತು ಸಮಾಜ' ಎಂಬ ವಿಷಯವನ್ನು ಕುರಿತು ಮಾಡಿದ ಅಮೋಘವಾದ ಭಾಷಣ ಸರ್ವಸಮ್ಮತವಷ್ಟೇ ಅಲ್ಲದೆ ಅದು ನಮ್ಮ ಸಮಾಜದಲ್ಲಿರುವ ಬಗೆಬಗೆಯ ಅಂತಃ ಕಲಹಗಳನ್ನು ದೂರಮಾಡಿ ರಾಷ್ಟ್ರದಲ್ಲಿ ಒಗ್ಗಟ್ಟನ್ನು ಸಾಧಿಸಬೇಕೆಂಬವಿಸೆಯಲ್ಲಿ ನಮ್ಮನ್ನು ಎಚ್ಚರಿಸಿದೆ. ಇದಕ್ಕಾಗಿ ನಾವು ಅವರಿಗೆ ಚಿರಋಣಿಗಳು.

ಪ್ರಕೃತ ನಾನು ಶ್ರೀಮನ್ಮಹಾರಾಜರವರ ಇಂಗಿತವನ್ನರಿತು ಈ ಮಹಾ ನಗರದ ಮಹಾಜನತೆಯ ಪರವಾಗಿ ಮಾನ್ಯ ದೀಕ್ಷಿತರಿಗೆ ಒಂದು ವಿನಂತಿಯನ್ನು ಮಾಡುತ್ತೇನೆ. ಅದನ್ನು ಅವರು ಅನ್ಯಥಾ ಭಾವಿಸದೆ ಆ ಬಗ್ಗೆ ನಾಲ್ಕು ಮಾತುಗಳನ್ನು ಅಪ್ಪಣೆ ಕೊಡಿಸಬೇಕು.

"ಈ ಕಾಶೀ ಮಹಾನಗರದ ಹಿರಿಮೆ ಪುರಾಣ ಪ್ರಸಿದ್ಧವಾದದ್ದು. ನಗರದ ಅಧಿದೇವತೆಗಳು ಭಗವಾನ್ ಶ್ರೀವಿಶ್ವನಾಥ ಮತ್ತು ಅನ್ನಪೂರ್ಣೆಯರು. ಅವರು ನಮ್ಮ ರಾಜವಂಶದ ಕುಲದೇವತೆಗಳೂ ಆಗಿದ್ದಾರೆ.

ಆ ದೇವತೆಯ ಹಿರಿಮೆ ಮತ್ತು ಗರಿಮೆಗಳ ಬಗ್ಗೆ ದೀಕ್ಷಿತರ ಪ್ರಸಾದ ವಾಣಿಯಿಂದ ನಾಲ್ಕು ಮಾತುಗಳನ್ನು ಕೇಳಲು ಮಹಾಜನತೆ ಬಯಸಿದೆ" ಎಂದು ವಿನಂತಿಸಿದರು.

ದೀಕ್ಷಿತರು ಸಭಾಧ್ಯಕ್ಷರ ವಿನಂತಿಯನ್ನು ಗೌರವಿಸಿ, ತಮ್ಮ ಭಾಷಣ ವನ್ನು ಮುಂದುವರಿಸಿದರು.

ಅನ್ನಪೂರ್ಣಾ ಸಮೇತನಾದ ಭಗವಾನ್ ಶ್ರೀವಿಶ್ವನಾಥಸ್ವಾಮಿಯ ಮಹತ್ವವನ್ನು ಕುರಿತು ನಾನು ಹೊಸದಾಗಿ ನಿವೇದಿಸಬೇಕಾದದ್ದು ಏನಿದೆ!

ಆ ಪರಮ ಶಿವನ ಸರ್ವೋತ್ತಮತ್ವದ ಬಗೆಗೆ ಸ್ಕಾಂದ ಪುರಾಣದ (ಕಾಶೀ ಖಂಡ) ದಲ್ಲಿ ಸಾಕಷ್ಟು ವಿಸ್ತಾರವಾಗಿ ಹೇಳಿರುವುದನ್ನು ತಾವು ಅರಿತೇ ಇದ್ದೀರಿ!

ಮಹಾಮಹಿಮನಾದ ಈ ಭಗವಂತನ ಸನ್ನಿಧಿಯಲ್ಲಿ ನಡೆದ ಒಂದು ಘಟನೆಯನ್ನು ಆ ಪುರಾಣವು ಉಲ್ಲೇಖಿಸಿದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ.

ವೇದ ರಾಶಿಯನ್ನು ವಿಷಯಾನುಗುಣವಾಗಿ ವಿಂಗಡಿಸಿ "ವೇದವ್ಯಾಸ" ಎಂಬ ಅಗ್ಗಳಿಕೆಯ ಬಿರುದನ್ನು ಗಳಿಸಿದ ಬಾದರಾಯಣರಿಗೆ ಅದು ಸಂಬಂಧಿಸಿದ್ದು.

"ಒಮ್ಮೆ ಬಾದರಾಯಣರು ಈ ವಿಶ್ವನಾಥಾಲಯಕ್ಕೆ ಬಂದರು. ಅವರ ಆಗಮನ ಅಲ್ಲಿದ್ದ ದೇವತೆಗಳು ಋಷಿ-ಮುನಿಗಳಿಗೆ ಆನಂದವನ್ನು ಉಂಟು ಮಾಡಿತ್ತು. ನಂದ್ಯಾದಿ ಪ್ರಮಥರು ವೇದವ್ಯಾಸರಿಗೆ ಸ್ವಾಗತ ಬಯಸಿದರು. ದೇವತಾಸೇವೆಯ ತರುವಾಯ ವೇದವ್ಯಾಸರು ವಿಶ್ವನಾಥಾಷ್ಟಕವನ್ನು ಪಠಿಸಿದರು. ಪ್ರಮಥರು ಶಿವನ ಮಹಿಮೆಯನ್ನು ಹೊಗಳುತ್ತಿದ್ದರು. ಋಷಿ–ಮುನಿಗಳು ಧ್ಯಾನಮಗ್ನರಾಗಿದ್ದರು. ಆಗ ವ್ಯಾಸರು ಎದ್ದು ನಿಂತು ತಮ್ಮ ಬಲಗೈ ಮೇಲೆತ್ತಿ "ದೇವತೆಗಳಲ್ಲಿ ಮಹಾವಿಷ್ಣುವೇ ಸರ್ವೋತ್ತಮ" ನೆಂದು ಘೋಷಿಸಿದರು. ಅದನ್ನು ಕೇಳಿದ ಕೂಡಲೇ ಎಲ್ಲರೂ ದಿಗ್ಮೂಢ ರಾದರು. ಪ್ರಮಥಗಣಂಗಳು ಕುಪಿತರಾದರು. ಪ್ರಮಥರಲ್ಲಿ ಮೊದಲಿಗನೂ

ದ್ವಿತೀಯ ಶಂಭುವೂ ಆದ ನಂದಿಕೇಶ್ವರನ ಕಣ್ಣುಗಳಲ್ಲಿ ಕಿಡಿಗಳುದುರಿದವು. ಕೂಡಲೇ ವೇದವ್ಯಾಸರು ಮೇಲೆತ್ತಿದ್ದ ಭುಜವು ಸ್ತಂಭಿತವಾಯಿತು. ಎಷ್ಟು ಪ್ರಯತ್ನಿಸಿದರೂ ಆ ಭುಜ ಕೆಳಗೆ ಇಳಿಸಲು ಸಾಧ್ಯವಾಗಲಿಲ್ಲ!"

ವ್ಯಾಸನಿಗೆ ಜ್ಞಾನೋದಯವಾಯಿತು. ತಾನು ಮಾಡಿದ ತಪ್ಪಿಗಾಗಿ ಪಶ್ಚಾತ್ತಾಪವಾಯಿತು. ಅವನು ತನ್ನ ಅಪರಾಧವನ್ನು ಮನ್ನಿಸಿ ಅನುಗ್ರಹಿಸಬೇಕೆಂದು ನಂದೀಶ್ವರನಿಗೆ ಶರಣಾದನು ಮತ್ತು ಅವನನ್ನು ಬೇಡಿಕೊಂಡನು. ಅವನ ದುಃಸ್ಥಿತಿಗೆ ದೇವ-ಋಷಿ–ಮುನಿ-ಗಂಧರ್ವರೆಲ್ಲ ಮರುಗಿದರು. "ಮಹತಾಮಪಿ ಮತಿಭ್ರಮಃ" ಎಂಬ ಗಾದೆ ಈಗ ದಿಟವಾಯಿತು. ಈ ದೃಶ್ಯವನ್ನು ಕಣ್ಣಾರೆ ಕಂಡ ಮಹಾ ಕರುಣಾಳುವಾದ ನಂದೀಶ್ವರನು ವ್ಯಾಸನ ಭಕ್ತಿಗೆ ಮೆಚ್ಚಿ, ಹರಸಿದನು. ಇದರ ಕುರುಹಾಗಿ ವಿಶ್ವನಾಥಾಲಯದಲ್ಲಿ ವೇದವ್ಯಾಸನ ಸ್ತಂಭಿತವಾದ ಭುಜ ಮತ್ತು ವ್ಯಾಸಗುರು ಘಂಟಾಕರ್ಣ ಶಿವಾಚಾರ್ಯರ ಮೂರ್ತಿಗಳು ಈ ಕತೆಯನ್ನು ಇಂದಿಗೂ ಹೇಳುತ್ತಿವೆ.

ಇದಕ್ಕೆ ಸಾಕ್ಷಿ ಎಂಬಂತೆ ಆಚಾರ್ಯ ಶಂಕರರು ವಿಶ್ವನಾಥನ ಸಂದರ್ಶನಕ್ಕಾಗಿ ಇಲ್ಲಿಗೆ ಬಂದಿದ್ದಾಗ ತಾವು ಕಣ್ಣಾರೆ ಕಂಡ ಈ ಸನ್ನಿವೇಶವನ್ನು ಕುರಿತು ತಮ್ಮ "ದಶಶ್ಲೋಕೀಸ್ತುತಿ"ಯಲ್ಲಿ ಈ ಸಂದರ್ಭವನ್ನು ಹೀಗೆ ಉಲ್ಲೇಖಿಸಿದ್ದಾರೆ.

ಗೋವಿಂದಾದಧಿಕಂ ನ ದೈವತಮಿತಿ ಪ್ರೋಚ್ಚಾರ್ಯ ಹಸ್ತಾವುಭೌ
ಉಧೃತ್ಯಾಥ ಶಿವಸ್ಯ ಸನ್ನಿಧಿ ಗತೋ ವ್ಯಾಸೋ ಮುನೀನಾಂ ಪುರಃ ।
ಯಸ್ಯ ಸ್ತಂಭಿತ ಪಾಣಿರಾನತಿಕೃತಾ ನಂದೀಶ್ವರೇಣಾಭವತ್
ತಸ್ಮಿನ್ ಮೇ ಹೃದಯಂ ಸುಖೇನ ರಮತಾಂ ಸಾಂಬೇ ಪರಬ್ರಹ್ಮಣಿ ॥

ಎಂದಾಗ ಸಭೆಯಲ್ಲಿ ಹರ್ಷೋದ್ಗಾರದ ಚಪ್ಪಾಳೆ ನಿನದ ಬಿರುಮಳೆಯಂತೆ ಮೊಳಗಿತು!

ಮುಂದುವರಿದ ದೇಶಿಕರು.

"ಈ ದಿಸೆಯಲ್ಲಿ ಮತ್ತೊಂದು ಉದಾಹರಣೆಯನ್ನು ತಮ್ಮ ಮುಂದೆ ನಿವೇದಿಸುತ್ತೇನೆ.

"ಅದೇ ಶಂಕರ ಭಗವತ್ಪಾದರ ಸಮಕಾಲೀನರಾದ ಮತ್ತೊಬ್ಬ ಶಿವಭಕ್ತರು. ಅವರ ಹೆಸರು ಹರದತ್ತಾಚಾರ್ಯರು. ಇವರು ಹುಟ್ಟಿನಿಂದ ವೀರ ವೈಷ್ಣವರು. ಶಿವಕೃಪೆ ಪಡೆದು ಶಿವ ಭಕ್ತರಾದರು.

ಆಚಾರ್ಯ ಶಂಕರರು ತಮ್ಮ ಪ್ರವಾಸದಲ್ಲಿ ಗೋಕರ್ಣದಲ್ಲಿ ತಂಗಿದ್ದಾಗ ನೀಲಕಂಠಶಿವಾಚಾರ್ಯರೆಂಬ ಶಿರೋಲಿಂಗಧಾರಿ ಜಂಗಮ ಪುಂಗವರು ಶ್ರೀ ಶಂಕರರೊಡನೆ ವಾಕ್ಯಾರ್ಥ ಮಾಡಲು ಬಂದರು. ಆಗ ಹರದತ್ತಾಚಾರ್ಯರು ಶ್ರೀನೀಲಕಂಠರ ಶಿಷ್ಯರ ಬಳಗದಲ್ಲಿದ್ದರೆಂದು ಶಂಕರ ದಿಗ್ವಿಜಯಾದಿಗಳಲ್ಲಿ ಹೇಳಿದೆ.

ಹರದತ್ತಾಚಾರ್ಯರ ಜನ್ಮಭೂಮಿ ತಮಿಳುನಾಡಿನ ಚೋಳ ಸಾಮ್ರಾಜ್ಯಕ್ಕೆ ಸೇರಿದ ಕಂಜನೂರು. ತಂದೆ "ವಾಸುದೇವ." ಹುಟ್ಟು ಹೆಸರು "ಸುದರ್ಶನ" ಎಂದು.

ಇವರು ಚಿಕ್ಕಂದಿನಿಂದಲೇ "ಪಶುಪತಿ" ಎಂಬ ಆಚಾರ್ಯರಿಂದ ಭಸ್ಮ ರುದ್ರಾಕ್ಷ ಮತ್ತು ಶಿವಲಿಂಗಗಳನ್ನು ಪಡೆದು ಅವರಿಂದ ಶಿವ ಪಂಚಾಕ್ಷರ ಮಹಾ ಮಂತ್ರೋಪದೇಶವನ್ನೂ ಪಡೆದಿದ್ದರು.

ಶ್ರೀವೈಷ್ಣವರು ಇವರೊಡನೆ ವಾಕ್ಯಾರ್ಥವನ್ನು ಆರಂಭಿಸಿದಾಗ ಹರದತ್ತರು ಸಭೆಯ ಅಪೇಕ್ಷೆಯಂತೆ ಕಾಯ್ದ ಕಬ್ಬಿಣದ ಮುಕ್ಕಾಲೆಯ ಮೇಲೆ ಕುಳಿತು "ಚತುರ್ವೇದ ತಾತ್ಪರ್ಯ ಸಂಗ್ರಹ"ರೂಪವಾದ "ಶ್ರುತಿ ಸೂಕ್ತಿ ಮಾಲೆ" ಎಂಬ ಪ್ರಬಂಧವನ್ನು ಬರೆದು ವ್ಯಾಖ್ಯಾನಿಸಿದರು.

ಅದನ್ನು ಕೇಳಿದ ಕೆಲವರು ವೈಷ್ಣವರು ಹರದತ್ತಾಚಾರ್ಯರೊಡನೆ ವಾಕ್ಯಾರ್ಥ ನಡೆಸಿ ಸೋತರು. ಆದರೂ ಅವರಲ್ಲಿ ಕೆಲವರು ಹರ ದತ್ತಾಚಾರ್ಯರಲ್ಲಿಗೆ ಬಂದು ವಿನಂತಿಸಿಕೊಂಡರು—

"ಸ್ವಾಮಿ, ಶಿವನೇ ದೇವತೆಗಳಲ್ಲಿ ಸರ್ವಶ್ರೇಷ್ಠನೆಂಬ ಬಗೆಗೆ ನಿಮ್ಮಲ್ಲಿ ವಾದ ಮಾಡಿ ಗೆಲ್ಲುವ ಸಾಮರ್ಥ್ಯ ನಮಗೆ ಇಲ್ಲ. ಶಾಸ್ತ್ರವು ನಾಲ್ಕು ಪ್ರಮಾಣಗಳನ್ನು ಹೇಳುತ್ತದೆ. ಪ್ರತ್ಯಕ್ಷ-ಅನುಮಾನ-ಉಪಮಾನ ಮತ್ತು ಶಾಬ್ದ ಎಂದು. ಈ ನಾಲ್ಕು ಪ್ರಮಾಣಗಳಲ್ಲಿ ಮುಂದುಮುಂದಿನ ಪ್ರಮಾಣ

ಗಳು ದುರ್ಬಲ. ಶಾಸ್ತ್ರವು ಶಾಬ್ದ ಪ್ರಮಾಣದಲ್ಲಿ ಸೇರಿದೆ. ಅದರಿಂದ ನೀವು ಶಿವ ಸರ್ವೋತ್ತಮತ್ವವನ್ನು ಶಾಸ್ತ್ರಾದಿಗಳಿಂದ ಸಾಧಿಸಿದಿರಿ ನಿಜ! ಆದರೆ ಅದು ದುರ್ಬಲ. ಇದಕ್ಕಾಗಿ ನೀವು ಪ್ರಮಾಣಗಳಲ್ಲಿ ಮೊದಲ ಪ್ರತ್ಯಕ್ಷ ಪ್ರಮಾಣದಿಂದ ಇದನ್ನು ಸಾಧಿಸಿ ತೋರಿದರೆ ನಾವು ಶರಣಾಗುತ್ತೇವೆ ಎಂದು ಮುಂಡಿಗೆಯನ್ನಿಟ್ಟರು. ಹರದತ್ತಾಚಾರ್ಯರು ಇದಕ್ಕೆ ಹಿಂದೆಗೆಯಲಿಲ್ಲ. ಸಭೆಯ ಒಪ್ಪಿಗೆ ಪಡೆದ ಎದುರಾಳಿಗಳು ಐದು ಮೆಟ್ಟಲಿನ ಒಂದು ಉಕ್ಕಿನ ಏಣಿಯನ್ನು ಸಿದ್ಧಪಡಿಸಿದರು. ಅದನ್ನು ಕುಲುಮೆಯಲ್ಲಿ ನಿಗಿನಿಗಿ ಕಾಯಿಸಿದರು. ಶಿವನ ಮಹಿಮೆಯನ್ನು ಘೋಷಿಸುತ್ತಾ ಆ ಏಣಿಯ ಒಂದೊಂದು ಮೆಟ್ಟಲನ್ನು ಏರಬೇಕೆಂದು ಹರದತ್ತಾಚಾರ್ಯರನ್ನು ಪ್ರಾರ್ಥಿಸಿದರು.

ಆಚಾರ್ಯರು ಧೃತಿಗೆಡಲಿಲ್ಲ. ಅವರು ಶಿವನ ಮಹಿಮೆಯನ್ನು ಪ್ರತಿಪಾದಿಸುವ ಒಂದೊಂದು ಪದ್ಯವನ್ನು ಪಠಿಸುತ್ತಾ ಕಾಯ್ದ ಉಕ್ಕಿನ ಏಣಿಯ ಐದೂ ಮೆಟ್ಟಲನ್ನು ಏರಿದರು.

ಹರದತ್ತಾಚಾರ್ಯರ ಈ ಪಂಚರತ್ನ ಸ್ತುತಿಯು "ಪಂಚಶ್ಲೋಕೀ" ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಅಸಾಧಾರಣವಾದ ಈ ಪವಾಡವನ್ನು ಮೆರೆದ ಹರದತ್ತಾಚಾರ್ಯರಿಗೆ ಎದುರಾಳಿಗಳು ಶರಣಾಗಿ ಕ್ಷಮೆ ಬೇಡಿದರು."

ದೇಶಿಕರು ಈ ಕತೆಯನ್ನು ಉಲ್ಲೇಖಿಸಿದಾಗ ಸಭೆಯಲ್ಲಿ ಗುಜುಗುಜು ಶಬ್ದ ಮಿಗಿಲಾಯಿತು. ಸಭಾಧ್ಯಕ್ಷರು ಎದ್ದು ನಿಂತು ವಿನಂತಿಸಿದರು.

"ಸಭಾಸದರಲ್ಲಿ ವಿನಂತಿ, ಈ ಗದ್ದಲದಿಂದ ಒಬ್ಬರ ಮಾತು ಮತ್ತೊಬ್ಬರಿಗೆ ಕೇಳುತ್ತಿಲ್ಲ. ದೀಕ್ಷಿತರ ಮಾತೂ ಸರಿಯಾಗಿ ಕೇಳುತ್ತಿಲ್ಲ. ಇಲ್ಲಿ ತಾವು ಯಾರಾದರೂ ಒಬ್ಬರು ಎದ್ದು ನಿಂತು ನಿಮ್ಮ ಸಂದೇಹವನ್ನು ವ್ಯಕ್ತಪಡಿಸಬಹುದು" ಎಂದು.

ಮತ್ತೆ ಸಭೆಯಲ್ಲಿ ಮೌನ ನೆಲೆಸಿತು. ಸಭಾಸದರಲ್ಲಿ ಒಬ್ಬರು ವೇದಿಕೆಯ ಮೇಲೇರಿ—

"ಸ್ವಾಮಿ, ದೀಕ್ಷಿತರು ಹರದತ್ತಾಚಾರ್ಯರ ನಿದರ್ಶನವನ್ನು ಕೊಟ್ಟು ಶಿವ ಸರ್ವೋತ್ತಮತ್ವವನ್ನು ಸ್ಥಾಪಿಸಿದ ವಿಚಾರ ತಿಳಿದು ನಮಗೆಲ್ಲಾ ಅತ್ಯಾನಂದವಾಗಿದೆ. ಪ್ರಕೃತ ಮಹಾಶಿವಭಕ್ತರಾದ ದೀಕ್ಷಿತರು ಹರದತ್ತಾಚಾರ್ಯರಿಗಿಂತ ಕಡಮೆಯವರಲ್ಲ. ಆದ್ದರಿಂದ ಹರದತ್ತಾಚಾರ್ಯರಂತೆ ದೀಕ್ಷಿತರು ಸಹ ಇದೇ ಕಾಶೀ ನಗರದ ಪಂಚನದ ಸಮೀಪದಲ್ಲಿರುವ 'ಬಿಂದು ಮಾಧವಸ್ವಾಮಿ'ಯನ್ನು ಕರೆತಂದು ವಿಶ್ವನಾಥನಿಗೆ ಮಣಿಯುವಂತೆ ಮಾಡಿದರೆ ನಾವು ದೀಕ್ಷಿತರಿಗೆ ಶರಣಾಗುತ್ತೇವೆ" ಎಂದು ದೀಕ್ಷಿತರ ಮುಂದೆ ಮತ್ತೊಂದು ಮಂಡಿಗೆಯನ್ನಿಟ್ಟರು.

ಅದರಿಂದ ದೀಕ್ಷಿತರು ವಿಚಲಿತರಾದಂತೆ ಕಾಣಲಿಲ್ಲ. ಅವರೆಂದರು "ಅಧ್ಯಕ್ಷರ ಸನ್ನಿಧಿಯಲ್ಲಿ" ಎಂದ ಕೂಡಲೇ ಸಭೆ ಮಂತ್ರಮುಗ್ಧವಾದಂತೆ ನಿಶ್ಶಬ್ದವಾಯಿತು. ಎಲ್ಲರೂ ದೀಕ್ಷಿತರ ಮುಖವನ್ನು ಎವೆ ಇಕ್ಕದೆ ನೋಡುತ್ತಿದ್ದರು.

"ಸ್ವಾಮಿ, ಅಧ್ಯಕ್ಷರ ನೇತೃತ್ವದಲ್ಲಿ ಒಂದು ಪಂಚರ ಸಮಿತಿ ಏರ್ಪಡಲಿ. ಅವರೊಂದಿಗೆ ನಾನು ಎರಡೂ ದೇವಾಲಯಗಳಿಗೆ ಭೇಟಿ ಕೊಟ್ಟು ನಿಮಗೆ ಇದರ ನಿದರ್ಶನ ಅನುಭವ ಮಾಡಿಕೊಡುತ್ತೇನೆ"ಎಂದು ಪ್ರತಿಸವಾಲು ಹಾಕಿದರು ದೀಕ್ಷಿತರು. ದೀಕ್ಷಿತರ ಸವಾಲನ್ನು ಸಭೆ ಕರತಾಡನದಿಂದ ಸ್ವಾಗತಿಸಿತು. ಅದರಂತೆ ಸಭಾಧ್ಯಕ್ಷರ ನೇತೃತ್ವದಲ್ಲಿ ಬೇರೆ ಬೇರೆ ಪಂಥಗಳ ವಿದ್ವಾಂಸರ ಉಪಸಮಿತಿಯೊಂದು ಏರ್ಪಟ್ಟಿತು. ಅಂದಿನ ಸಭೆ ಮುಕ್ತಾಯವಾಯಿತು.

ಮರುದಿನ ಉಪಸಮಿತಿ ದೀಕ್ಷಿತರನ್ನು ಹಿಂಬಾಲಿಸಿತು. ಜನ ಕುತೂಹಲದಿಂದ ಪಂಚರನ್ನು ಅನುಸರಿಸಿದರು.

ದೀಕ್ಷಿತರು ಬಿಂದುಮಾಧವಸ್ವಾಮಿಯ ದೇವಾಲಯಕ್ಕೆ ತೆರಳಿ, ಬಿಂದು ಮಾಧವಸ್ವಾಮಿಯನ್ನು ಭಕ್ತಿಯಿಂದ ಸ್ತುತಿಸಿದರು.

ದೀಕ್ಷಿತರ ಪ್ರಾರ್ಥನೆಗೆ ಪ್ರಸನ್ನನಾದ ಬಿಂದು ಮಾಧವಸ್ವಾಮಿಯ ಮೂರ್ತಿಯಿಂದ ಅವ್ಯಕ್ತ ಧ್ವನಿ ಮೊಳಗಿತು. ದಿವ್ಯ ತೇಜಸ್ಸೊಂದು ದೇಶಿಕರನ್ನು ಹಿಂಬಾಲಿಸಿದುದನ್ನು ಜನ ಮನಗಂಡರು.

ಎಲ್ಲರೂ ನೋಡುತ್ತಿದ್ದಂತೆ ಆ ದಿವ್ಯ ತೇಜಸ್ಸು ವಿಶ್ವನಾಥಾಲಯಕ್ಕೆ ಬಂದು ವಿಶ್ವನಾಥನಿಗೆ ಬಲವಂದು ವಂದಿಸುತ್ತಿದ್ದಂತೆ ವಿಶ್ವನಾಥನು ಕಣ್ಣು ಕೋರೈಸುವ ತೇಜಃಪುಂಜವಾಗಿ ಪ್ರಕಾಶಿಸಿದನು. ಎರಡೂ ಬೆಳಕುಗಳು ಒಂದಾಗಿ ಹರಿ-ಹರಸ್ವರೂಪವಾಗಿ, ಉಮಾಮಹೇಶ್ವರನಾಗಿ,ಅನ್ನಪೂರ್ಣಾ ಸಮೇತ ವಿಶ್ವನಾಥನಾಗಿ ಮರೆಯಾಯಿತು. ದೇಶಿಕರು—

ವಂದೇ ಶಂಭುಮುಮಾಪತಿಂ ಸುರಗುರುಂ ವಂದೇ ಜಗತ್ಕಾರಣಂ....
ವಂದೇ ಮುಕುಂದಪ್ರಿಯಂ ಎಂದು ಹೇಳಿದೆ...

ಎನ್ನುತ್ತಿದ್ದಂತೆ "ವಿಷ್ಣುವಲ್ಲಭಾಯ ನಮಃ" ಎಂದು ಶಿವಸಹಸ್ರನಾಮವೊಂದು ಘೋಷಿಸಿತು.

ಈ ಶ್ರವ್ಯ ಮತ್ತು ದೃಶ್ಯಗಳನ್ನು ಏಕಕಾಲದಲ್ಲಿ ಕಂಡ ಜನ ಕರತಾಡನದಿಂದ ತಮ್ಮ ಆನಂದವನ್ನು ಪ್ರದರ್ಶಿಸಿತು. ದೀಕ್ಷಿತರು ಹೇಳಿದರು—

"ಈ ದಿವ್ಯಸ್ವರೂಪವೇ ಜಗತ್ತಿನ ಸೃಷ್ಟಿ-ಸ್ಥಿತಿ ಮುಂತಾದವುಗಳಿಗೆ ಮೂಲಭೂತವಾದ ಶಿವ-ಶಕ್ತ್ಯಾತ್ಮಕ ಪರಮಚೇತನ"

ಶಿವಸ್ಯ ಹೃದಯಂ ವಿಷ್ಣುಃ ವಿಷ್ಣೋಃಶ್ಚ ಹೃದಯಂ ಶಿವಃ ।
ನ ತಯೋರಂತರಂ ಕಿಂಚಿತ್ ಏಷ ಧರ್ಮಸ್ಸನಾತನಃ ॥

ಎಂದು ಅಶರೀರವಾಣಿ ನುಡಿಯಿತು. ಆಲಿಸಿದ ದೀಕ್ಷಿತರು —

"ಆದ್ದರಿಂದ ಹರಿ-ಹರರಲ್ಲಿ ಭೇದವನ್ನೆಣಿಸದೆ ಆ ದಿವ್ಯ ತತ್ತ್ವಕ್ಕೆ ಮಣಿದು ಜನ ಭಗವತ್ ಕೃಪೆಗೆ ಪಾತ್ರರಾಗಬೇಕು" ಎಂದರು.

ಪಂಚರ ಮುಖದಿಂದ ವಾಸ್ತವ್ಯವನ್ನು ಅರಿತ ಸಭೆ ಬೆರಗಾಯಿತು! ರಾಜ ಭಕ್ತಿನಮ್ರನಾಗಿ ದೀಕ್ಷಿತರಿಗೆ ವಂದಿಸಿದ. ಸಭಾಧ್ಯಕ್ಷರು ಪಂಚರ ಅಭಿಪ್ರಾಯವನ್ನು ಅರಿತು ದೀಕ್ಷಿತರು ಶ್ರೋತ್ರೀಯ ಬ್ರಹ್ಮನಿಷ್ಠರೆಂದು ನಿರ್ಣಯಿಸಿ ಅವರಿಗೆ "ದೇಶಿಕ" ಎಂಬ ಬಿರುದನ್ನು ನೀಡಬಹುದೆಂದು ಶ್ರೀಮನ್ಮಹಾರಾಜರಿಗೆ ವಿನಂತಿಸಿದರು.

ಶ್ರೀಮನ್ಮಹಾರಾಜರವರ ಆದೇಶದಂತೆ ವಿಶಾಲವಾದ ತಟ್ಟೆಗಳಲ್ಲಿ ಕಾಶ್ಮೀರ ಶಾಲು ಜೋಡಿ. ರತ್ನಖಚಿತವಾದ ದೇಶಿಕಾಂಕಿತ ಸುವರ್ಣ ಪದಕಗಳು ಸಿದ್ಧವಾದವು. ರಾಜನ ಪ್ರಾರ್ಥನೆಯಂತೆ ಜಗದ್ಗುರುಗಳು ಪದಕವನ್ನು ದೀಕ್ಷಿತರಿಗೆ ಅಲಂಕರಿಸಿ, ಶಾಲು ಹೊದಿಸಿ ಹರಸಿದರು. ಸಭೆ ಆನಂದಬಾಷ್ಪಗಳ ಜೊತೆ ಕುಸುಮ ವೃಷ್ಟಿ ಸುರಿಸಿತು ! ಜನ 'ಸೋಮಶಂಭು ದೇಶಿಕರಿಗೆ ಜಯವಾಗಲಿ' ಎಂದು ಒಕ್ಕೊರಲಿನಿಂದ ಘೋಷಿಸಿ ಕರತಾಡನ ಮಾಡಿತು.



೭

# ಪುಟಕ್ಕಿಟ್ಟ ಚಿನ್ನ

ಉಪನಯನ ಸಂಸ್ಕಾರದ ಹಿಂದಿನ ದಿನ. ಅಂದು ಭಾನುವಾರ, ಪಾಡ್ಯಮಿ ಮುಂಜಾನೆಯ ಅಧಿವೇಶನ ತಾಸು ಒಂಬತ್ತಕ್ಕೆ ಆರಂಭ ವಾಯಿತು.

ವಿಜಯವಾಡದ ಮಲ್ಲೇಶ್ವರಾಲಯದಲ್ಲಿ ಶ್ರೀಪತಿಯ ಉಪನಯನ ಸಂಸ್ಕಾರದ ಅಂಗವಾಗಿ ಒಂದು ಸಭಾಭವನದ ನಿರ್ಮಾಣವಾಗಿದೆ. ನಗರದ ಸುತ್ತುಮುತ್ತಿನ ಗ್ರಾಮಗಳಿಂದ ಆರಾಧ್ಯರ ಬಂಧು ಬಾಂಧವರು ಮತ್ತು ನಗರದ ಇಷ್ಟಮಿತ್ರರು ಬಂದು ನೆರೆದಿದ್ದಾರೆ.

ಈ ಮಹಾ ಸಮಾರಂಭದಲ್ಲಿ ಕಾಶಿಯ ವಿದ್ಯಾಪೀಠದ ನಿವೃತ್ತ ಪ್ರಾಚಾರ್ಯರೂ, 'ದೇಶಿಕ' ಬಿರುದಾಂಕಿತರೂ ಜ್ಞಾನ ವಯೋವೃದ್ಧರೂ ಆದ ಸೋಮಶಂಭು ದೇಶಿಕರ ಉಪನ್ಯಾಸವು ಏರ್ಪಟ್ಟಿರುವ ವಿಚಾರವು ಆಹ್ವಾನ ಪತ್ರಿಕೆಯಲ್ಲಿಯೇ ಪ್ರಕಟವಾಗಿದ್ದುದರಿಂದ ನಾಡಿನ ವಿವಿಧ ಭಾಗ ಗಳಿಂದ ಬಂದಿದ್ದ ವಿದ್ವಾಂಸರು, ಆಗಮಿಕರು, ತಮಗಿರುವ ಎಷ್ಟೋ ಸಂದೇಹಗಳನ್ನು ಪ್ರಾಜ್ಞರಾದ ದೇಶಿಕರಲ್ಲಿ ಪ್ರಶ್ನಿಸಿ, ಪರಿಹರಿಸಿಕೊಳ್ಳುವ ಉದ್ದೇಶದಿಂದ ಸಮಾರಂಭದಲ್ಲಿ ಭಾಗವಹಿಸಿದ್ದಾರೆ.

ನೆಂಟರಿಷ್ಟರಲ್ಲಿ ಮುಖ್ಯರಾದವರೆಂದರೆ ದ್ರಾಕ್ಷಾರಾಮದ ಶ್ರೀ ಭೀಮೇಶ್ವರಾಲಯದ ಪುರೋಹಿತ ಭೀಮನ ಪಂಡಿತರು ತಮ್ಮ ಧರ್ಮ ಪತ್ನೀಸಮೇತರಾಗಿ ಬಂದಿದ್ದಾರೆ. ಮನಿಪುರದ ಭಾರದ್ವಾಜಗೋತ್ರದ ಕೋಟ ಪಲ್ಲಾರಾಧ್ಯ, ಗೌತಮ ಗೋತ್ರದ ಏಕೋರಾಮಾರಾಧ್ಯರು, ಮಗಳು

ವೇದವತಿ, ದೇಶಿಕರ ಜ್ಯೇಷ್ಠಪುತ್ರ ಸಕಲಾಗಮಾಚಾರ್ಯ, ಶಂಭುಭಟ್ಟ ಮುಂತಾದವರು.

ಪ್ರಕೃತ ಸಂದರ್ಭಕ್ಕೆ ಅನುಗುಣವಾದ ನಾಲ್ಕು ಮಾತುಗಳನ್ನು ದೇಶಿಕರು ಸಭೆಯನ್ನು ಉದ್ದೇಶಿಸಿ, ಮಾತನಾಡಬೇಕೆಂದು ನಿರ್ಧಾರ ವಾಗಿತ್ತು.

ಸಭಾಧ್ಯಕ್ಷತೆಯನ್ನು ವಿಜಯವಾಡ ನಗರಪಾಲಿಕೆಯ ಅಧ್ಯಕ್ಷರೂ ಮಲ್ಲೇಶ್ವರಾಲಯದ ಧರ್ಮಸಂಸ್ಥೆಯ ಅಧ್ಯಕ್ಷರೂ ಆದ ಶ್ರೀಮಂತ ಮಲ್ಲಿ ಕಾರ್ಜುನ ರೆಡ್ಡಿಯವರು ವಹಿಸಬೇಕೆಂದು ಕಾರ್ಯಕರ್ತರಾದ ವೇ|| ಆರಾಧ್ಯರು ಸೂಚಿಸಿದರು. ಆರಾಧ್ಯರು ಮುಂದುವರೆದು ಶ್ರೀಮಂತ ರೆಡ್ಡಿಯವರನ್ನು ಪರಿಚಯ ಮಾಡಿಸುತ್ತಾ—

"ಅವರು ಶ್ರೀ ಮಲ್ಲೇಶ್ವರಸ್ವಾಮಿಯ ಪರಮ ಭಕ್ತರೂ ದಾನ ಧರ್ಮ ಪರಾಯಣರೂ, ಸಮಾಜಕ್ಕಾಗಿ ತಮ್ಮನ್ನು ಅರ್ಪಿಸಿಕೊಂಡವರೂ ಮಹಾತ್ಯಾಗಿಗಳೂ ಆಗಿರುವರೆಂದು ಹೇಳಿ ಅವರನ್ನು ಸ್ವಾಗತಿಸಿ, ಇಂದಿನ ಸಭೆಯ ಅಗ್ರಾಸನವನ್ನು ಅಲಂಕರಿಸಬೇಗಂದು ಸಮಾರಂಭದ ಪರವಾಗಿ ವಿನಂತಿಸಿದರು.

ಸಭೆಯ ಅಪೇಕ್ಷೆಯಂತೆ ದೇಶಿಕರು ಪ್ರಕೃತ ಸಂದರ್ಭಕ್ಕೆ ಅನುಗುಣ ವಾಗಿ "ನಮ್ಮ ಸಂಸ್ಕಾರಗಳು ಮತ್ತು ಶಿಕ್ಷಣ"ಎಂಬ ವಿಷಯವನ್ನು ಕುರಿತು ಮಾತನಾಡುವುದಾಗಿ ಸಭೆಗೆ ನಿವೇದಿಸಿ ತಮ್ಮ ಉಪನ್ಯಾಸವನ್ನು ಪ್ರಾರಂಭಿ ಸಿದರು.

"ಮಾನವನು ಎಲ್ಲ ಪ್ರಾಣಿಗಳಿಗಿಂತ ಶ್ರೇಷ್ಠನೆನಿಸಿರುವುದಕ್ಕೆ ಅವನಲ್ಲಿ ಪೂರ್ವ ಪುಣ್ಯವಿಶೇಷದಿಂದ ಲಭಿಸಿರುವ ಜ್ಞಾನವೇ ಮುಖ್ಯವಾದ ಕಾರಣ. ಆಹಾರ-ನಿದ್ರೆ-ಭಯ ಮತ್ತು ಸಂತಾನ ಕ್ರಿಯೆಗಳು ಎಲ್ಲ ಜೀವಿಗಳಿಗಿರು ವಂತೆ ಮಾನವನಿಗೂ ಇವೆ. ಆದರೆ ಇದನ್ನು ಮಾಡಬೇಕು, ಇದನ್ನು ಮಾಡಬಾರದು ಎಂಬ ವಿಧಿ-ನಿಷೇಧ, ಯುಕ್ತ-ಅಯುಕ್ತ ವಿವೇಕವಿರು ವುದು ಮಾನವನಿಗೆ ಮಾತ್ರ. ಆದ್ದರಿಂದಲೇ ಅವನು ಎಲ್ಲ ಪ್ರಾಣಿಗಳಿಗಿಂತ

ಶ್ರೇಷ್ಠನೆಸಿದ್ದಾನೆ. ಅಲ್ಲದೆ ಅವನು ಆ ಪ್ರಾಣಿಗಳನ್ನು ಶಿಕ್ಷಿಸಿ, ಅವುಗಳನ್ನು ತನ್ನ ಅಧೀನದಲ್ಲಿಟ್ಟುಕೊಳ್ಳುವ ಅರ್ಹತೆಯನ್ನು ಸಹ ಹೊಂದಿದ್ದಾನೆ. ಇತರ ಪ್ರಾಣಿಗಳಿಗೆ ಈ ಬಗೆಯ ಬುದ್ಧಿ ಶಕ್ತಿ ಇಲ್ಲದುದರಿಂದ ಅವು ಸೃಷ್ಟಿಯ ಆದಿಯಲ್ಲಿದ್ದಂತೆ ಇಂದಿಗೂ ಯಾವ ಪ್ರಗತಿಯನ್ನೂ ಕಾಣದೆ ಮನುಷ್ಯನನ್ನೇ ಆಶ್ರಯಿಸಿವೆ.

ಮಾನವನಾದರೆ ಸಂಸ್ಕಾರದಿಂದ ಸಾಣೆ ಹಿಡಿದ ಶಸ್ತ್ರದಂತೆ ತೀಕ್ಷ್ಣಮತಿಯಾಗಿ ಕ್ಷಣ ಕ್ಷಣಕ್ಕೂ ಹೊಸ ಹೊಸ ವಿಷಯಗಳನ್ನು ಸಂಶೋಧಿಸಿ ತಿಳಿಯುತ್ತಾ ಭೂಗೋಳದಿಂದ ಖಗೋಳದವರೆಗೆ ಪರಮಾಣುವಿನಿಂದ ಪರಮಾತ್ಮನವರೆಗೆ ಇರುವ ಎಲ್ಲ ವಿಷಯಗಳಲ್ಲಿಯೂ ತನ್ನ ಸಂಶೋಧನೆಯನ್ನು ಮುಂದುವರಿಸಿದ್ದಾನೆ. ಅವನು ಇಂದು ಲೋಕಾಂತರ ಸಂಚಾರ, ದೂರಶ್ರವಣ, ದೂರದರ್ಶನದಂತಹ ಅತಿಮಾನುಷ ಸಿದ್ಧಿಗಳನ್ನು ತನ್ನ ಯೋಗಸಾಧನೆಯಿಂದ ಸಾಧಿಸಿ, ಸರ್ವಜ್ಞತ್ವ, ಸರ್ವಕರ್ತೃತ್ವ ಮತ್ತು ಎಲ್ಲ ವಿಷಯಗಳಲ್ಲಿಯೂ ಪರಮಾತ್ಮನ ಮೇಲೆ ಸ್ಪರ್ಧೆ ನಡೆಸಿದ್ದಾನೆ. ಇದೆಲ್ಲದರ ಮುಖ್ಯಕಾರಣ ಅವನು ಪಡೆಯುತ್ತಿರುವ ಅಪೂರ್ವ ಶಿಕ್ಷಣ.

ಶಿಕ್ಷಣದಿಂದ ಮಾನವನ ಬುದ್ಧಿಯು ಹರಿತವಾಗುತ್ತದೆ. ಸಂಸ್ಕಾರ ಶಿಕ್ಷಣಕ್ಕಿರುವ ಮತ್ತೊಂದು ಹೆಸರು. ದಹನ ಸಂಸ್ಕಾರವಿಲ್ಲದೆ ಚಿನ್ನ ಶುದ್ಧವಾಗುವುದಿಲ್ಲ. ಅಕ್ಕಿ ಗೋಧಿ ಮುಂತಾದ ಧಾನ್ಯಗಳು ಪಾಕಸಂಸ್ಕಾರವಿಲ್ಲದೆ ಉಪಭೋಗಕ್ಕೆ ಬರುವುದಿಲ್ಲ. ಸುಶಿಕ್ಷಿತನಾದ ಮಾನವನಿಂದ ಸಂಸ್ಕಾರ ಪಡೆದ ಕಲ್ಲು ಕಲೆಯೆನಿಸಿ ಶಿಲ್ಪವಾಗಿ ಕಳಾವಾಹನೆ ಪಡೆದು ಶಿವನಾಗಿ ಪೂಜೆಗೊಳ್ಳುತ್ತದೆ. ಕಾಡನ್ನು ಕಡಿದು ಉಳುಮೆ ಮುಂತಾದ ಸಂಸ್ಕಾರದಿಂದ ನೆಲವನ್ನು ಹದಗೊಳಿಸಿ, ಬೀಜ ಬಿತ್ತಿ, ಬೆಳೆದೆಗೆದು ಜಗತ್ತಿಗೆ ಅನ್ನದಾತನೆನಿಸಿದವನು ಮಾನವ. ಇದು ಅವನು ಪಡೆದ ಶಿಕ್ಷಣದ ಫಲ. ಈ ಶಿಕ್ಷಣವೇ ಸಂಸ್ಕಾರ.

ಸಂಸ್ಕಾರವನ್ನು ಪಡೆದ ಮಾನವ ತಾನು ಬಾಹ್ಯ ಜಗತ್ತಿನಲ್ಲಿ ನಾಗರಿಕನೆನಿಸಿ, ಸತ್ಪ್ರಜೆಯಾದರೆ, ಮಾತ್ರ ಸಾಲದು ; ಅವನು ಅಲ್ಲಿಂದ

ಮುಂದೆ ಹೋಗಿ, ತಾನು ಯಾರು? ಎಲ್ಲಿಂದ ಬಂದೆ? ಗುರಿಯೇನು? ಮುಂತಾದುವನ್ನು ಪ್ರಶ್ನಿಸಿಕೊಂಡು ಸುಖವೆಂದರೇನು? ನಿತ್ಯಸುಖವನ್ನು ಪಡೆಯುವ ಉಪಾಯ ಯಾವುದು? ಮುಂತಾದ ವಿಚಾರಗಳನ್ನು ತಮ್ಮ ಒಳ ಗಣ್ಣಿನಿಂದ ಕಂಡುಕೊಂಡಿದ್ದ ಪ್ರಾಚೀನ ಋಷಿ-ಮುನಿಗಳು, ಸಾಧು ಸಂತರು, ಪ್ರವಾದಿಗಳು ತೋರಿಸಿರುವ ಹಾದಿಯಲ್ಲಿ ತಾನು ನಡೆದು ಇತರರನ್ನು ನಡೆಸಿಕೊಂಡು ಹೋಗಬೇಕೆಂಬುದನ್ನು ಉಪನಿಷತ್ತು ಉಗ್ಗಡಿಸಿದೆ.

"ಅ ಸತ್ತಿನಿಂದ ಸತ್ತಿನ ಕಡೆಗೆ, ಕತ್ತಲಿನಿಂದ ಬೆಳಕಿನ ಕಡೆಗೆ, ಮರ್ತ್ಯತ್ವ ದಿಂದ ಅಮೃತತ್ವದ ಕಡೆಗೆ ನಮ್ಮನ್ನು ಒಯ್ಯಿ"* ಎಂದು ಋಷಿಯೊಬ್ಬನು ಭಗವಂತನನ್ನು ಬೇಡಿದ್ದಾನೆ. ಅದು ಕೇವಲ ಒಬ್ಬನ ಬಯಕೆಯಾಗದೆ ಪ್ರತಿಯೊಬ್ಬ ಮಾನವನ ಗುರಿಯಾಗಬೇಕು.

ಜೀವನ ವಿಕಾಸಕ್ಕೆ ಅಗತ್ಯವಾದ ಧಾರ್ಮಿಕ ಕ್ರಿಯೆಯೇ ಸಂಸ್ಕಾರ, ಆತ್ಮ-ಮನಸ್ಸು ಮತ್ತು ಶರೀರಗಳಲ್ಲಿರುವ ವಿಹಿತಕ್ರಿಯೆಯಿಂದ ಉಂಟಾದ ಅತಿಶಯ ವಿಶೇಷವೇ ಅದು !

ಶಾಸ್ತ್ರಕಾರರು ಸಂಸ್ಕಾರದ ಲಕ್ಷಣವನ್ನು ಹೀಗೆ ಹೇಳಿದ್ದಾರೆ– "ಕಾರ್ಯಾಂತರ ಯೋಗ್ಯತಾ ಜನಕತ್ವ ಮತ್ತು ಉತ್ಪನ್ನದುರಿತ ಧ್ವಂಸ ವುಳ್ಳದ್ದು ಸಂಸ್ಕಾರ" ಎಂದಿದ್ದಾರೆ. ಎಂದರೆ ಉದಾಹರಣೆಗೆ ಉಪನಯನ ಸಂಸ್ಕಾರವು ವೇದಾಧ್ಯಯನ ಮತ್ತು ದೇವತೋಪಾಸನ ಮುಂತಾದ ಕ್ರಿಯೆ ಗಳನ್ನು ಮಾಡಲು ಅರ್ಹತೆಯನ್ನು ಉಂಟುಮಾಡುವುದರ ಮೂಲಕ ಮೋಕ್ಷವೆಂಬ ಮಹಾಪ್ರಯೋಜನವನ್ನು ಗಳಿಸಿಕೊಡುತ್ತದೆ.

ಎರಡನೆಯದು ಉತ್ಪನ್ನದುರಿತಧ್ವಂಸ ; ಎಂದರೆ ಗರ್ಭಾಧಾನ ಮುಂತಾದ ಸಂಸ್ಕಾರಗಳು ಬೀಜ ಮತ್ತು ಗರ್ಭಸಂಬಂಧವಾದ ದುರಿತ (ಪಾಪ) ಗಳನ್ನು ದೂರ ಮಾಡುತ್ತವೆ. ಈ ಸಂಸ್ಕಾರಗಳನ್ನು ಪಡೆದ ಮಾನವನು "ಪರಬ್ರಹ್ಮನ" ಸಾಯುಜ್ಯವನ್ನು ಹೊಂದುತ್ತಾನೆ"

ಎಂದು ಆರ್ಯಮಹರ್ಷಿಗಳು ಹೇಳಿದ್ದಾರೆ.

---

* "ಅಸತೋ ಮಾ ಸದ್ಗಮಯ, ತಮಸೋ ಮಾ ಜ್ಯೋತಿರ್ಗಮಯ ಮೃತ್ಯೋರ್ಮಾ ಅಮೃತಂ ಗಮಯ"

ಉಪನಯನವು ಈಬಗೆಯ ಸಂಸ್ಕಾರಗಳಲ್ಲಿ ಬಹುಮುಖ್ಯವಾದದ್ದು. ಮಕ್ಕಳನ್ನು ಉತ್ತಮ ಶಿಕ್ಷಣ (ವಿದ್ಯೆ) ಮತ್ತು ಉತ್ತಮ ಗುಣಕರ್ಮ ಸ್ವಭಾವಗಳೆಂಬ ಭೂಷಣಗಳಿಂದ ಅಲಂಕರಿಸಬೇಕಲ್ಲದೆ ಚಿನ್ನದ ಒಡವೆಗಳಿಂದ ಅಲ್ಲ. ಒಮ್ಮೊಮ್ಮೆ ಅಂಥ ಆಭರಣಗಳನ್ನು ಧರಿಸುವುದರಿಂದ ಪ್ರಾಣಾಪಾಯವೂ ಉಂಟು. ಕಳ್ಳಕಾಕರರು ಒಡವೆಗಳ ಆಸೆಯಿಂದ ಮಕ್ಕಳ ಪ್ರಾಣವನ್ನು ತೆಗೆಯಲು ಹೇಸುವುದಿಲ್ಲ!

ಮಕ್ಕಳಿಗೆ ಉತ್ತಮಶಿಕ್ಷಣ ಕೊಡಿಸುವುದಕ್ಕಾಗಿ ಏರ್ಪಟ್ಟ ಸಂಸ್ಕಾರವೇ ಉಪನಯನ. ಉಪನಯನ ಎಂದರೆ ಬಾಲಕನನ್ನು ಆಚಾರ್ಯನ (ಉಪ) ಸಮೀಪಕ್ಕೆ, (ನಯನ) ಕಳಿಸುವುದು. ಈ ಸಂಸ್ಕಾರದಲ್ಲಿ ಉಪನಯನದ ಅಂಗವಾಗಿ ಗುರು (ಆಚಾರ್ಯ)ವು ಶಿಷ್ಯನನ್ನು ತನ್ನ ಹತ್ತಿರ ಕೂರಿಸಿಕೊಂಡು ಅವನಿಗೆ ಗಾಯಿತ್ರೀ ಮಹಾಮಂತ್ರವನ್ನು ಉಪದೇಶಿಸುತ್ತಾನೆ. ಅದರಿಂದ ವಟುವಿನ ಪ್ರಾಕೃತ ಜನ್ಮವು ಅಳಿದು, ನೂತನ ಜನ್ಮ (ಹುಟ್ಟು) ವುಂಟಾಗುವುದರಿಂದ ಅವನು "ದ್ವಿಜ" ನೆನಿಸುತ್ತಾನೆ.

ಈ ಜನ್ಮದ ತಾಯಿ ಗಾಯತ್ರಿ. ತಂದೆ ಆಚಾರ್ಯ. ಈ ಸಂಸ್ಕಾರದಲ್ಲಿ ನಡೆಯುವ ಮೌಂಜೀ (ನೊಸೆ ಹುಲ್ಲಿನ ಉಡಿದಾರ) ಬಂಧನ, ಮುಂತಾದುವು ಬ್ರಹ್ಮಚರ್ಯಾಶ್ರಮದ ಕೆಲವು ಮುಖ್ಯ ನಿಯಮಗಳು. ಅವು ಹೀಗಿವೆ—

ಗಂಡು ಮತ್ತು ಹೆಣ್ಣು ಮಕ್ಕಳ ಪರಸ್ಪರ ದರ್ಶನ, ಏಕಾಂತವಾಸ, ಗುಹ್ಯಭಾಷಣ, ಹೂವು, ಗಂಧ, ಮುಂತಾದ ಮೋಹಕ ವಿಷಯಗಳ ಸಂಬಂಧ, ಹೆಣ್ಣು ಮತ್ತು ಗಂಡು ಮಕ್ಕಳು ಒಟ್ಟಿಗೆ ಸೇರಿ ಆಟವಾಡುವುದು ಮುಂತಾದ ಎಂಟು ಬಗೆಯ ಮೈಥುನಗಳಿಂದ ದೂರವಿರುವುದು.

ವಿದ್ಯಾಭ್ಯಾಸ ಕಾಲದಲ್ಲಿ ಮಕ್ಕಳು ತಂದೆ-ತಾಯಿಗಳೊಡನೆ ಅಥವಾ ತಂದೆ-ತಾಯಿಗಳು ಮಕ್ಕಳೊಡನೆ ಯಾವ ಸಾಂಸಾರಿಕ ತಾಪತ್ರಯಗಳ ಪ್ರಸ್ತಾಪ ಮಾಡಬಾರದು.

ಗಾಯತ್ರೀ ಮಂತ್ರ— "ಓಂ ಭೂರ್ಭುವಸ್ಸುವಃ, ತತ್ಸವಿತುರ್ವರೇಣ್ಯಂ ಭರ್ಗೋ* ದೇವಸ್ಯ ಧೀಮಹಿ। ಧಿಯೋ ಯೋ ನಃ ಪ್ರಚೋದಯಾತ್" (ಯಜು ೩೬-೩)

*ಹರಃಸ್ಮರಹರೋ ಭರ್ಗಃ (ಅಮರ ನಿಘಂಟು)

ಮಂತ್ರಾರ್ಥ : ಭೂಃ-ಪ್ರಾಣ, ಭುವಃ-ಅಪಾನ, ಸುವಃ-ವ್ಯಾನ ಎಂದರೆ ಯಾವನು ಜಗತ್ತನ್ನು ಪ್ರಾಣದಂತೆ ಸಂರಕ್ಷಿಸುವನೋ, ಯಾವನು ಜೀವಿಗಳ ದುಃಖಗಳನ್ನು ಪರಿಹರಿಸುವನೋ, ಮತ್ತು ಯಾವನು ಇಡೀ ಜಗತ್ತನ್ನು ವ್ಯಾಪಿಸಿ ಎಲ್ಲವನ್ನೂ ಧರಿಸುವನೋ ಅಂಥ ಪರಮಾತ್ಮನು ಎಂದು ಅರ್ಥ.

(ಸವಿತುಃ ವರೇಣ್ಯಂ) ಜಗತ್ತನ್ನು ಸೃಜಿಸಿ, ಎಲ್ಲ ಸುಖಗಳನ್ನು ಕೊಡುವ, ಅತಿಶ್ರೇಷ್ಠನಾದ, (ಭರ್ಗೋ ದೇವಸ್ಯ) ಭರ್ಗನೆಂಬ ದೇವನ, (ತತ್) ಆ ದಿವ್ಯ ಸ್ವರೂಪನ್ನು (ಧೀಮಹಿ) ಧ್ಯಾನಿಸುತ್ತೇವೆ. ಯಾವ ಆ ಪರಮಾತ್ಮನು (ನಃ) ನಮ್ಮ (ಧಿಯಃ) ಬುದ್ಧಿಗಳನ್ನು (ಪ್ರಚೋದಯಾತ್) ಒಳ್ಳೆಯ ಕಾರ್ಯಗಳಿಗೆ ಪ್ರೇರಿಸಲಿ.

ಆಚಾರ್ಯನು ವಟುವಿಗೆ ಈ ಮಹಾಮಂತ್ರವನ್ನು ಅರ್ಥಸಹಿತ ಉಪದೇಶಿಸಿ, ಅವನಿಗೆ ಸಂಧ್ಯೋಪಾಸನೆಗೆ ಅಗತ್ಯವಾದ ಸ್ನಾನ,ಆಚಮನ, ಪ್ರಾಣಾಯಾಮ ಮೊದಲಾದ ಕ್ರಿಯೆಗಳನ್ನು ಕಲಿಸಬೇಕು.

ನೀರಿನಿಂದ ಶರೀರದ ಹೊರಗಿನ ಅವಯವಗಳನ್ನು ಶುದ್ಧಿಮಾಡಿ. ಸತ್ಯದಿಂದ ಮನಸ್ಸನ್ನು ಶುಚಿಗೊಳಿಸಿ, ವಿದ್ಯೆಯಿಂದ ಕಷ್ಟಗಳನ್ನು ಸಹಿಸಿಕೊಂಡು ಧರ್ಮವನ್ನು ಆಚರಿಸಬೇಕೆಂಬ ಜೀವನು ಜ್ಞಾನದಿಂದ ಪರಿಶುದ್ಧನಾಗುತ್ತಾನೆ.

ಮಂತ್ರೋಚ್ಚಾರಣೆಗೆ ಯೋಗ್ಯವಾದ ಮುಖದಲ್ಲಿ ಎಂಜಲಿನ ದೋಷ ಪರಿಹಾರಕ್ಕಾಗಿ ಆಚಮನ ಅಗತ್ಯ. ಪ್ರಾಣಾಯಾಮದಿಂದ ಅಗ್ನಿಪುಟದಿಂದ ಚಿನ್ನವು ಪರಿಶುದ್ಧವಾಗುವಂತೆ ಪ್ರಾಣಾಯಾಮದಿಂದ ಅಂತರಿಂದ್ರಿಯಗಳು ಶುದ್ಧವಾಗುತ್ತವೆ.

ಸಂಧ್ಯೋಪಾಸನೆಗೆ "ಬ್ರಹ್ಮಯಜ್ಞ"ವೆಂದು ಹೆಸರು. ರಾತ್ರಿಕಳೆದು ಸೂರ್ಯೋದಯ ಮತ್ತು ಸಂಜೆ ಸೂರ್ಯಮುಳುಗಿ ರಾತ್ರಿಯ ಆರಂಭ ಸಮಯಗಳಿಗೆ ಸಂಧ್ಯೆ ಎಂದು ಹೆಸರು. ಈ ಕಾಲಗಳಲ್ಲಿ ಮಾಡುವ ವಂದನಗೆ ಸಂಧ್ಯಾವಂದನೆ ಎಂದು ಹೆಸರು.

ಸಂಧ್ಯಾವಂದನೆಯನ್ನು ಪವಿತ್ರ ನದಿಯ ದಡ ಅಥವಾ ಏಕಾಂತ ಸ್ಥಳದಲ್ಲಿ ಮಾಡಬೇಕು. ಆಚಮನ, ಮಾರ್ಜನ ಮತ್ತು ಪ್ರಾಣಾಯಾಮಗಳು ಇಲ್ಲಿನ ಮುಖ್ಯ ಕ್ರಿಯೆಗಳು.

ಬಲ ಅಂಗೈಗೆ ಒಂದು ಉದ್ಧರಣೆ ನೀರನ್ನು ಹಾಕಿಕೊಂಡು ಅದನ್ನು ಮೂರು ಸಲ ಮಂತ್ರಪೂರ್ವಕ ಕುಡಿಯುವುದರಿಂದ ಕಂಠದಲ್ಲಿರುವ ಕಫ ಮತ್ತು ಪಿತ್ಥಗಳು ಸ್ವಲ್ಪ ಮಟ್ಟಿಗೆ ಕಡಮೆಯಾಗುತ್ತವೆ.

ಮಾರ್ಜನ-ಎಡ ಅಂಗೈಗೆ ಮೂರು ಉದ್ಧರಣೆ ನೀರು ಹಾಕಿಕೊಂಡು ನಡುಬೆರಳು ಮತ್ತು ಅನಾಮಿಕೆ, ಈ ಎರಡು ಬೆರಳುಗಳ ತುದಿಯಿಂದ ನೀರನ್ನು ಮಂತ್ರಪೂರ್ವಕವಾಗಿ ಕಣ್ಣು ಮೊದಲಾದ ಅಂಗಗಳ ಮೇಲೆ ಚಿಂಪಡಿಸಿಕೊಳ್ಳುವುದು. ಇದರಿಂದ ಆಲಸ್ಯವು ದೂರವಾಗುತ್ತದೆ. ಆಲಸ್ಯವಿಲ್ಲದಾಗ ಮಾರ್ಜನದ ಅಗತ್ಯವಿಲ್ಲ.

ಪ್ರಾಣಾಯಾಮವನ್ನು ಗುರುಮುಖದಿಂದ ಅರಿತು ಮಾಡಬೇಕು. ಸ್ತುತಿ, ಪ್ರಾರ್ಥನೆ ಮತ್ತು ಉಪಾಸನೆಗಳನ್ನು ಗುರು ಕಲಿಸಬೇಕು.

## ದೇವಯಜ್ಞ

ಅಗ್ನಿಹೋತ್ರ, ವಿದ್ವಾಂಸರ ಸಹವಾಸ ಮತ್ತು ಅವರ ಸೇವೆಗಳಿಗೆ 'ದೇವಯಜ್ಞ'ವೆಂದು ಹೆಸರು. ಸಂಧ್ಯೋಪಾಸನೆ ಮತ್ತು ಅಗ್ನಿಹೋತ್ರಗಳನ್ನು ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ಮಾಡಬೇಕು.

ದೇಶಿಕರು ಹೀಗೆ ಹೇಳುತ್ತಿರುವಾಗ ಸಭಾಸದರಲ್ಲೊಬ್ಬರು ಮೇಲೆದ್ದು ದೇಶಿಕರಿಗೆ ವಂದಿಸಿ,

"ಸ್ವಾಮಿ, ಹೋಮ ಮಾಡುವುದರಿಂದ ಏನು ಪ್ರಯೋಜನ? ದಯಮಾಡಿ ಅಪ್ಪಣೆ ಕೊಡಿಸಬೇಕು" ಎಂದು ವಿನಂತಿಸಿದರು.

"ದುರ್ಗಂಧವುಳ್ಳ ಜಲ ಮತ್ತು ವಾಯುಗಳಿಂದ ಪ್ರಾಣಿಗಳು ರೋಗ-ರುಜಿನಗಳಿಗೆ ತುತ್ತಾಗುತ್ತವೆ. ಸುಗಂಧಯುಕ್ತವಾದ ಜಲ-ವಾಯುಗಳಿಂದ ಅವುಗಳಿಗೆ ಆರೋಗ್ಯವುಂಟಾಗುತ್ತದೆ ಎಂಬುದು ಎಲ್ಲರಿಗೂ ತಿಳಿದೇ ಇದೆ. ಇದಕ್ಕಾಗಿ ಅಗ್ನಿಹೋತ್ರವು ಅಗತ್ಯ."

"ಸುಗಂಧ ದ್ರವ್ಯಗಳನ್ನು ಮೈಗೆ ಲೇಪಿಸಿಕೊಳ್ಳಬೇಕು. ತುಪ್ಪವನ್ನು ಆಹಾರದ ಜೊತೆ ಸೇವಿಸಬೇಕಲ್ಲದೆ ಅವುಗಳನ್ನು ಬೆಂಕಿಗೆ ಹಾಕಬಹುದೆ ?"

"ಪದಾರ್ಥ ರಹಸ್ಯವು ನಿಮಗೆ ತಿಳಿದಿದ್ದರೆ ನೀವು ಹೀಗೆ ಕೇಳುತ್ತಿರಲಿಲ್ಲ. ಏಕೆಂದರೆ ಪ್ರಪಂಚದಲ್ಲಿ ಯಾವ ಪದಾರ್ಥವೂ ನಾಶವಾಗುವುದಿಲ್ಲ. ಸುಗಂಧಯುಕ್ತವಾದ ಹೋಮಧೂಮವು ಬಹು ದೂರದವರೆಗೆ ಹರಡುವುದರಿಂದ ಜನರು ಅದನ್ನು ಗ್ರಹಿಸಿ ಉಲ್ಲಸಿತರಾಗುತ್ತಾರೆ. ಅಗ್ನಿಗೆ ಹಾಕಿದ ಪದಾರ್ಥವು ಸೂಕ್ಷ್ಮರೂಪದಿಂದ ಗಾಳಿಯಲ್ಲಿ ಬೆರೆತು ಬಹು ದೂರದವರೆಗೆ ವ್ಯಾಪಿಸಿ, ಅದು ದುರ್ಗಂಧವನ್ನು ನಾಶಮಾಡುತ್ತದೆ."

"ಹಾಗಾದರೆ ಕೇಸರಿ, ಕಸ್ತೂರಿ, ಸುಗಂಧ ಪುಷ್ಪಗಳು ಮತ್ತು ಅತ್ತರು ಮೊದಲಾದ ಪದಾರ್ಥಗಳು ಎಲ್ಲಿಯೋ ಇರಲಿ, ಅವುಗಳಿಂದ ಗಾಳಿಯು ಸುಗಂಧವಾಗಿರುವುದರಿಂದ ಅದರಿಂದ ಸುಖವಾಗುವುದಿಲ್ಲವೆ ?"

"ನೀವು ಹೇಳಿದಂತೆ ಸುಗಂಧ ದ್ರವ್ಯಗಳನ್ನು ಮನೆಯಲ್ಲಿ ಇಟ್ಟ ಮಾತ್ರದಿಂದ ಆ ಸುಗಂಧಕ್ಕೆ ಕೆಟ್ಟ ವಾಯುವನ್ನು ಹೊರದೂಡಿ, ಶುದ್ಧ ವಾಯುವನ್ನು ಮನೆಯೊಳಕ್ಕೆ ಪ್ರವೇಶ ಮಾಡಿಸುವ ಶಕ್ತಿ ಇರುವುದಿಲ್ಲ. ಏಕೆಂದರೆ ಆ ಸುಗಂಧಕ್ಕೆ ಭೇದಕಶಕ್ತಿ ಇರುವುದಿಲ್ಲ. ಆ ಶಕ್ತಿಯು ಬೆಂಕಿಗಿರುತ್ತದೆ. ಆದ್ದರಿಂದ ಅಗ್ನಿಯಲ್ಲಿ ಬಿದ್ದ ಸುಗಂಧದ್ರವ್ಯಗಳು ಹವಿಸ್ಸಾಗಿ, ಗಾಳಿಯಲ್ಲಿ ಬೆರೆತು ದುರ್ಗಂಧವನ್ನು ದೂರ ಮಾಡಿ, ಶುದ್ಧ ವಾಯುವನ್ನು ಒಳಕ್ಕೆ ತರುತ್ತದೆ."

"ಹಾಗಾದರೆ, ಹೋಮಕಾಲದಲ್ಲಿ ಮಂತ್ರಗಳನ್ನು ಏಕೆ ಪಠಿಸಬೇಕು ?"

"ಮಂತ್ರೋಚ್ಚಾರ ಮಾಡುತ್ತಾ ಹೋಮ ಮಾಡುವುದರಿಂದ ಮೊದಲನೆಯದಾಗಿ ಆ ಮಂತ್ರಗಳು ಕಂಠಪಾಠವಾಗುತ್ತವೆ. ಎರಡನೆಯದಾಗಿ ಮಂತ್ರದ ಅರ್ಥವನ್ನು ಮನನ ಮಾಡುವುದರಿಂದ ಮನಸ್ಸು ಏಕಾಗ್ರವಾಗುತ್ತದೆ."

"ಹೋಮ ಮಾಡದಿದ್ದರೆ ಪಾಪ ಬರುತ್ತದೆಯೆ ?"

"ಖಂಡಿತವಾಗಿಯೂ ಪಾಪ ಬರುವುದು ನಿಜ. ಏಕೆಂದರೆ ಮನುಷ್ಯನ ಶರೀರದಿಂದ ಪ್ರತಿಕ್ಷಣವೂ ದುರ್ಗಂಧವು ಹುಟ್ಟಿ, ಜಲ-ವಾಯುಗಳನ್ನು ಕೆಡಿಸುತ್ತದೆ. ಆದರಿಂದ ಬಗೆಬಗೆಯ ರೋಗಗಳು ಹುಟ್ಟಿ ಪ್ರಾಣಿಗಳು ಎಷ್ಟು ದುಃಖವನ್ನು ಅನುಭವಿಸುತ್ತವೆಯೋ ಅಷ್ಟು ಪಾಪವು ಮನುಷ್ಯನಿಗೆ ಬರುವುದು ಅನಿವಾರ್ಯ. ಅಂಥ ಪಾಪ ನಿವಾರಣೆಗಾಗಿ ಮಾನವನು ಸಾಧ್ಯವಾದಷ್ಟು ಸುಗಂಧ ದ್ರವ್ಯಗಳನ್ನು ಅಗ್ನಿಯಲ್ಲಿ ಹಾಕಿ ಜಲ-ವಾಯುಗಳನ್ನು ಶುದ್ಧಿಗೊಳಿಸುವುದು ಅತ್ಯಗತ್ಯ.

"ಒಬ್ಬನ ಊಟಕ್ಕೆ ನೀಡಿದ ತುಪ್ಪವು ಅವನೊಬ್ಬನಿಗೆ ಮಾತ್ರ ತೃಪ್ತಿಯನ್ನುಂಟುಮಾಡುತ್ತದೆ. ಆದರೆ ಅದೇ ತುಪ್ಪವನ್ನು ಅಗ್ನಿಯಲ್ಲಿ ಹೋಮ ಮಾಡುವುದರಿಂದ ಲಕ್ಷಗಟ್ಟಲೆ ಜನರಿಗೆ ಉಪಕಾರವಾಗುತ್ತದೆ."

"ಪ್ರತಿಯೊಬ್ಬ ಮನುಷ್ಯನೂ ಎಷ್ಟು ಆಹುತಿಗಳನ್ನು ಕೊಡಬೇಕು? ಆಹುತಿಗಳ ಪ್ರಮಾಣವೆಷ್ಟು ?"

"ಪ್ರತಿಯೊಬ್ಬನೂ ಹದಿನಾರು ಆಹುತಿಗಳನ್ನು ಕೊಡಬೇಕು. ಪ್ರತಿಯೊಂದು ಆಹುತಿಯೂ ಆರು ಮಾಷ (ಉದ್ದಿನ ಕಾಳು) ದಷ್ಟಾದರೂ ಇರಬೇಕು.

ಹಿಂದಿನ ಕಾಲದಲ್ಲಿ ಋಷಿ-ಮುನಿಗಳು, ರಾಜ-ಮಹಾರಾಜರು ಹೋಮಗಳನ್ನು ತಾವೂ ಮಾಡಿ ಇತರರಿಂದ ಮಾಡಿಸುತ್ತಲೂ ಇದ್ದರು. ಇದರಿಂದ ಆಗ್ಗೆ ನಾಡಿನಲ್ಲಿ ರೋಗ-ರುಜಿನಗಳ ಉಪಟಳವಿರಲಿಲ್ಲ. ಈಗಾದರೆ ಹೋಮವು ನಶಿಸಿದ್ದರಿಂದ ಜಲಮಾಲಿನ್ಯ ಮತ್ತು ವಾಯುಮಾಲಿನ್ಯಗಳುಂಟಾಗಿ ನದಿಗಳ ಶುದ್ಧೀಕರಣಾದಿಗಳಿಗಾಗಿ ಕೋಟಿಗಟ್ಟಲೆ ಹಣವು ವೆಚ್ಚವಾಗುತ್ತಿದೆಯಾದರೂ ಬಗೆ ಬಗೆಯ ರೋಗಗಳು ಹೆಚ್ಚಿ ಅವುಗಳನ್ನು ನಿವಾರಿಸಲು ಎಷ್ಟು ಮಂದಿ ವೈದ್ಯರು ಮತ್ತು ಆಸ್ಪತ್ರೆಗಳಾದರೂ ಸಾಕಾಗುತ್ತಿಲ್ಲ.

ಹಿಂದೆ ಹೇಳಿದಂತೆ ಬ್ರಹ್ಮಯಜ್ಞ ಮತ್ತು ದೇವಯಜ್ಞಗಳನ್ನು ಬ್ರಹ್ಮಚಾರಿಗಳು ಮಾಡಬೇಕು."

"ದ್ವಿಜರು ಆಚರಿಸುವ ಪಂಚಯಜ್ಞಗಳು ಯಾವುವು ?"

"ಬ್ರಹ್ಮಯಜ್ಞ, ದೇವಯಜ್ಞ, ಪಿತೃಯಜ್ಞ, ಅತಿಥಿಯಜ್ಞ ಮತ್ತು ವೈಶ್ವದೇವ ಯಜ್ಞಗಳು."

"ಈ ಪಂಚಯಜ್ಞಗಳಿಂದ ಏನು ಪ್ರಯೋಜನ ?"

"ಬ್ರಹ್ಮಯಜ್ಞದಿಂದ ವಿದ್ಯೆ, ಶಿಕ್ಷಣ, ಧರ್ಮ, ಸಭ್ಯತೆ ಮುಂತಾದ ಸುಗುಣಗಳು ವೃದ್ಧಿಸುತ್ತವೆ. ಅಗ್ನಿಹೋತ್ರದಿಂದ ಜಲ-ವಾಯುಗಳು ಶುದ್ಧವಾಗಿ ಪ್ರಪಂಚಕ್ಕೆ ನೆಮ್ಮದಿಯುಂಟಾಗುತ್ತದೆ.

ಪಿತೃಯಜ್ಞದಿಂದ ತಾಯಿ, ತಂದೆ, ಜ್ಞಾನಿಗಳ ಸೇವೆ ಮತ್ತು ಅವರ ಸತ್ಸಂಗವು ದೊರೆತು ನಮ್ಮ ಜ್ಞಾನವು ಹೆಚ್ಚಾಗುತ್ತದೆ.

ಅತಿಥಿಯಜ್ಞದಿಂದ ಅತಿಥಿಸತ್ಕಾರವು ನಡೆಯುತ್ತದೆ. ಬಲಿ ವೈಶ್ವ ದೇವ ಯಜ್ಞವೆಂದರೆ ಊಟಕ್ಕೆ ಮೊದಲು ಭೂತ ತೃಪ್ತಿಗಾಗಿ ಒಂದು ಮುಷ್ಟಿ ಅನ್ನವನ್ನು ತೆಗೆದು ಅದನ್ನು ದೀನ-ದಲಿತರಿಗೆ ಅಥವಾ ಪ್ರಾಣಿ ಗಳಿಗೆ ಕೊಡಬೇಕು."

"ಯಜ್ಞಗಳಲ್ಲಿ ಅಜಮೇಧ, ಅಶ್ವಮೇಧ, ಗೋಮೇಧ ಮತ್ತು ನರಮೇಧಗಳೂ ಸೇರಿವೆ. ಆ ಪ್ರಾಣಿಗಳನ್ನು ಆಯಾ ಯಜ್ಞಗಳಲ್ಲಿ ಬಲಿಗೊಟ್ಟು ಯಜ್ಞ ಮಾಡುವುದರಿಂದ ಪ್ರಾಣಿಹಿಂಸೆಯಾಗಿ ಪಾಪ ಬರು ವುದಿಲ್ಲವೆ ?"

"ಪ್ರಾಣಿಗಳನ್ನು ಹಿಂಸಿಸಿ ಯಜ್ಞ ಮಾಡಬೇಕೆಂದು ಎಲ್ಲಿಯೂ ಹೇಳಿಲ್ಲ. ಯಜ್ಞಕ್ಕೆ 'ಅಧ್ವರ' ಎಂಬ ಹೆಸರಿದೆ. ಮಹರ್ಷಿ ಯಾಸ್ಕರು 'ನಿರುಕ್ತ' ಎಂಬ ತಮ್ಮ ವೈದಿಕ ನಿಘಂಟಿನಲ್ಲಿ 'ಧ್ವರತಿರ್ಹಿಂಸಾ ; ಸಾ ನ ಭವತೀತಿ ಅಧ್ವರಃ' ಎಂದಿದ್ದಾರೆ. ಧ್ವರತಿ ಎಂದರೆ ಹಿಂಸೆ, ಅಂಥ ಹಿಂಸೆ ಯಿಲ್ಲದ್ದು ಅಧ್ವರ' ಎಂದ ಮೇಲೆ ಹಿಂಸೆ ಇದ್ದದ್ದು ಯಜ್ಞವೆನಿಸೀತೆ ?

ಇನ್ನು ಅಜಮೇಧ ಮತ್ತು ಅಶ್ವಮೇಧಗಳಲ್ಲಿ ಆಯಾ ಪ್ರಾಣಿ ಗಳನ್ನು ಕೊಲ್ಲಬೇಕೆಂದು ಎಲ್ಲಿ ಹೇಳಿದೆ ? ವೇದ ಮಂತ್ರಗಳಿಗೆ ಅಥವಾ

ವೈದಿಕ ಶಬ್ದಗಳಿಗೆ ಆಯಾ ವೇದಕ್ಕೆ ಸಂಬಂಧಿಸಿದ ಬ್ರಾಹ್ಮಣಗಳಲ್ಲಿ ಅವುಗಳ ವ್ಯಾಖ್ಯಾನವಿದೆ.

ಉದಾಹರಣೆಗೆ-'ರಾಷ್ಟ್ರಂ ವಾ ಅಶ್ವಮೇಧಃ' (ಶತಪಥ ೧೩-೧-೬೩) 'ಅನ್ನಂ ಹಿ ಗೌಃ'(ಶತ ೪-೩-೧-೨೫)'ಅಗ್ನಿರ್ವಾ ಅಶ್ವಃ, ಆಜ್ಯಂ ಮೇಧಃ' (ಶತಪಥ).

ಎಂದರೆ ಕುದುರೆ, ಹಸು, ಆಡು ಮುಂತಾದ ಪ್ರಾಣಿಗಳನ್ನು ಸಾಯಿಸಿ ಹೋಮ ಮಾಡಬೇಕೆಂಬ ವ್ಯಾಖ್ಯಾನವು ಯಾವ ಬ್ರಾಹ್ಮಣದಲ್ಲಿಯೂ ಇಲ್ಲ. ಆದರೆ ಇತ್ತೀಚೆಗೆ ಮಧು-ಮಾಂಸ ಭಕ್ಷಕರೂ, ವಿಷಯ ಲಂಪಟರೂ ಆದ ಕೆಲವು ವಾಮಮಾರ್ಗಿಗಳು ಎಂದರೆ 'ಮಹೀಧರ' ಮುಂತಾದವರು ಆ ಮಂತ್ರಗಳಿಗೆ ಸ್ವಕಪೋಲಕಲ್ಪಿತವಾದ ಅಪಾರ್ಥಗಳನ್ನು ಮಾಡಿ, ಪ್ರಾಣಿಗಳನ್ನು ಬಲಿಗೊಟ್ಟು ಅಶ್ವಮೇಧಾದಿಗಳನ್ನು ಮಾಡಬೇಕೆಂದು ಭಾಷ್ಯ ಬರೆದಿದ್ದಾರೆ.

ವಾಸ್ತವವಾಗಿ 'ಅಶ್ವ' ಎಂದರೆ ರಾಷ್ಟ್ರ ; ಮೇಧವೆಂದರೆ ಅಭಿವೃದ್ಧಿ 'ಏಧವೃದ್ಧೌ' ಎಂಬ ಧಾತ್ವರ್ಥವನ್ನು ಅನುಸರಿಸಿ ರಾಷ್ಟ್ರದ ಸಮಗ್ರತೆ ಮತ್ತು ಐಕಮತ್ಯವನ್ನು ಸಾಧಿಸುವುದೇ ಅಶ್ವಮೇಧ. ರಾಮಾಯಣದ ಶ್ರೀರಾಮ, ಮಹಾಭಾರತದ ಯುಧಿಷ್ಠಿರ ಮುಂತಾದವರು ಸುಲಕ್ಷಣವಾದ ಅಶ್ವವನ್ನು ಎಲ್ಲ ರಾಜ್ಯಗಳಿಗೆ ಕಳಿಸಿ, ಎದುರಾದವರನ್ನು ಯುದ್ಧದಲ್ಲಿ ಸೋಲಿಸಿ, ಶರಣಾದವರಿಗೆ ಸೂಕ್ತ ನೆರವಿತ್ತು ರಾಷ್ಟ್ರವನ್ನು ಬಲಿಷ್ಠ ರಾಷ್ಟ್ರವನ್ನಾಗಿ ಮಾಡಿ,ರಾಷ್ಟ್ರದ ಸರ್ವತೋಮುಖ ಏಳ್ಗೆಗೆ ಕಾರಣರಾಗುತ್ತಿದ್ದರು.

ಇಂಥ ಸಂದರ್ಭದಲ್ಲಿ ಮಹೀಧರ ಮುಂತಾದವರು ಅಶ್ಲೀಲಾರ್ಥಗಳನ್ನು ಕಲ್ಪಿಸಿ, ಪುತ್ರಕಾಮನೆಯಿಂದ ಅಶ್ವಮೇಧವಾಗುತ್ತಿತ್ತೆಂದೂ, ಅಶ್ವಮೇಧದಲ್ಲಿ ದಿಗ್ವಿಜಯ ಮಾಡಿಬಂದ ಕುದುರೆಯನ್ನು ರಾಣಿಯ ಮೇಲೆ ಪ್ರಯೋಗಿಸಿ, ಅವಳಿಂದ ಅಶ್ವದಂತೆ ತೇಜಸ್ವಿಯಾದ ಪುತ್ರನನ್ನು ಪಡೆಯುತ್ತಿದ್ದರೆಂದೂ, ರಾಜನ ಇತರ ರಾಣಿಯರನ್ನು ಯಜ್ಞದಲ್ಲಿ ಭಾಗವಹಿಸಿದ್ದ ಋತ್ವಿಜ-ಪುರೋಹಿತರು ಬಳಸುತ್ತಿದ್ದರೆಂದೂ ಮಾಡಿರುವ ವ್ಯಾಖ್ಯಾನಗಳು ನೀತಿಬಾಹಿರ ಮಾತ್ರವಲ್ಲ, ಅದು ವಿಜ್ಞಾನಕ್ಕೆ ಒಪ್ಪುವ ಮಾತುಗಳೇ ಅಲ್ಲ.

ಮೇಲಾಗಿ ಶ್ರೀರಾಮ ಮತ್ತು ಯುಧಿಷ್ಠಿರಾದಿಗಳು ಪುತ್ರ-ಪೌತ್ರರನ್ನು ಪಡೆದ ಮೇಲೆ ದಿಗ್ವಿಜಯಕ್ಕಾಗಿ ಅಶ್ವಮೇಧವನ್ನು ಆಚರಿಸಿದ್ದುದು ಎಲ್ಲರೂ ಬಲ್ಲ ವಿಷಯ !

ಇನ್ನು ಐತಿಹಾಸಿಕ ಯುಗದಲ್ಲಿದ್ದ ಉಜ್ಜಯನಿಯ ಎರಡನೇ ವಿಕ್ರಮಾದಿತ್ಯನು ಅಶ್ವಮೇಧವನ್ನು ಆಚರಿಸಿದ ಬಗ್ಗೆ ಉಲ್ಲೇಖವಿದೆಯೇ ಹೊರತು ಅಲ್ಲಿ ಮೇಲೆ ಹೇಳಿದ ಅಶ್ಲೀಲಾರ್ಥವು ನಡೆದಂತೆ ಯಾವ ಐತಿಹಾಸಿಕರೂ ಅದನ್ನು ಉಲ್ಲೇಖಿಸಿಲ್ಲ. ಆದ್ದರಿಂದ ಅಶ್ವಮೇಧವು ರಾಷ್ಟ್ರದ ಪುನರುತ್ಥಾನದ ಸಂಕೇತ.

ಗೋಮೇಧವು ರಾಷ್ಟ್ರದಲ್ಲಿ ಗೋ ಸಮೃದ್ಧಿಯ ಸಂಕೇತ. ಗೋ ಸಂಪತ್ತನ್ನು ರಾಷ್ಟ್ರದಲ್ಲಿ ಹೆಚ್ಚಿಸಿ, ಅವುಗಳ ಹಾಲು, ಮೊಸರು, ಬೆಣ್ಣೆ ತುಪ್ಪ ಮುಂತಾದ ಪೌಷ್ಠಿಕಾಂಶಗಳನ್ನು ಸಮೃದ್ಧಿಗೊಳಿಸುವುದು ಮತ್ತು ಕೃಷಿ-ವಾಣಿಜ್ಯಗಳಿಂದ ರಾಷ್ಟ್ರವನ್ನು ಸಂಪತ್ ಭರಿತವನ್ನಾಗಿ ಮಾಡುವುದು. ಅದರಂತೆ ಅಜಮೇಧಾದಿಗಳು ಆಡು, ಕುರಿ, ಆಕಳು ಎಮ್ಮೆ ಮುಂತಾದುವನ್ನು ಅಭಿವೃದ್ಧಿ ಮಾಡುವುದರ ಸಂಕೇತ. ಪ್ರಾಣಿ ಸಂಪತ್ತು ಹೆಚ್ಚಿದಲ್ಲಿ ಇಡಿಯ ಮಾನವ ಲೋಕವು ಸಂಪದ್ಭರಿತವಾಗುತ್ತದೆ.

ಪ್ರಶ್ನೆ-"ಪಾರಾಶರ ಸ್ಮೃತಿಯಲ್ಲಿ ಅಶ್ವಾಲಂಬ, ಗವಾಲಂಬ ಸಂನ್ಯಾಸ, ಪಲಪೈತೃಕ, (ಮಾಂಸದಿಂದ ಪಿತೃತರ್ಪಣ) ಮತ್ತು ಮೈದುನ (ದೇವರ) ನಿಂದ ಮಕ್ಕಳನ್ನು ಪಡೆವುದು ಕಲಿಯುಗದಲ್ಲಿ ನಿಷಿದ್ಧ" ಎಂದು ಹೇಳಿದೆ. ಅಂದಮೇಲೆ ಕಲಿಯುಗಕ್ಕೆ ಹಿಂದಿನ ಯುಗಗಳಲ್ಲಿ ಅಂಥ ಯಾಗಗಳು ಇದ್ದವೆಂದು ಸಿದ್ಧವಾಗುವುದಿಲ್ಲವೆ ?"

"ಇಲ್ಲ ; ಇದು ವಾಮ ಮಾರ್ಗಿಗಳು ಕಲ್ಪಿಸಿರುವ ಪ್ರಕ್ಷಿಪ್ತ ಶ್ಲೋಕ. ಮೂಲ ಪಾರಾಶರ ಸ್ಮೃತಿಯಲ್ಲಿ ಈ ಶ್ಲೋಕವಿಲ್ಲ."

ಹೀಗೆ ವೈದಿಕ ಸಂಸ್ಕಾರಗಳು ಲೋಕ ಹಿತಕ್ಕಾಗಿ ಏರ್ಪಟ್ಟಿವೆ. ಅವುಗಳಲ್ಲಿ ಅತಿ ಮುಖ್ಯವಾದದ್ದು ಉಪನಯನ ಸಂಸ್ಕಾರ. ಅದು ಇಂದು

ಇಲ್ಲಿ ಏರ್ಪಟ್ಟಿದೆ. ಈ ಸಂದರ್ಭದಲ್ಲಿ ನೀವು ನನ್ನ ಉಪನ್ಯಾಸವನ್ನು ಏರ್ಪಡಿಸಿರುವುದಕ್ಕಾಗಿ ತಮಗೆ ಆಭಾರಿಯಾಗಿದ್ದೇನೆ."

ಎಂದು ದೇಶಿಕರು ಸಭೆಗೆ ವಂದಿಸಿ ಕುಳಿತರು. ವಂದನಾರ್ಪಣೆಯೊಡನೆ ಸಭೆ ಮುಕ್ತಾಯವಾಯಿತು.

ಮರುದಿನದಿಂದ ದೀಕ್ಷಿತರ ಸಮ್ಮುಖದಲ್ಲಿ ಶಂಭು ಭಟ್ಟರ ಆಚಾರ್ಯತ್ವದಲ್ಲಿ ಶ್ರೀಪತಿಯ ಅಕ್ಷರಾರಂಭ, ಉಪನಯನ ಮತ್ತು ಶಿವದೀಕ್ಷೆಗಳು ಸಾಂಗವಾಗಿ ಆರಂಭವಾದವು. ಸಮಾರಂಭಕ್ಕೆ ಆಗಮಿಸಿದ್ದ ಬಂಧು ವರ್ಗದಲ್ಲಿ ಮುಖ್ಯರಾದವರು ಋತ್ವಿಜರಾಗಿ ವರಿಸಲ್ಪಟ್ಟಿದ್ದರು.

ದೀಕ್ಷಿತರು ಉಪನೀತರಾಗಲಿರುವ ವಟುಗಳಿಗೆ ಉಪನಯನದಲ್ಲಿ ಬಳಸಲ್ಪಡುವ ಕೆಲ ಕೆಲವು ಮುಖ್ಯ ಮಂತ್ರಗಳಿಗೆ ಕ್ರಿಯೆಗಳಿಗೆ ಸ್ಥೂಲವಾದ ಅರ್ಥವಿವರಣೆಯನ್ನೂ ಕೊಡುತ್ತಿದ್ದರು.

ಉಪನಯನ ಸಂಸ್ಕಾರದಲ್ಲಿ ಶ್ರೀಪತಿ ತಾತನವರನ್ನು ಅಲ್ಲಲ್ಲಿ ಶಂಭು ಭಟ್ಟರನ್ನು ಆಯಾ ಸಂಸ್ಕಾರದ ವಿಶೇಷಾರ್ಥಗಳನ್ನು ಕುರಿತು ಪ್ರಶ್ನಿಸಿ ಸಮಾಧಾನಪಡೆಯುತ್ತಿದ್ದ. ಬಂಧು ವರ್ಗದಲ್ಲಿ ಕೆಲವರು ವೈದಿಕಾಗಮಿಕ ಕ್ರಿಯೆಗಳಲ್ಲಿ ತಮಗಿದ್ದ ಸಂದೇಹಗಳನ್ನು ಪ್ರಶ್ನೆ ಮಾಡಿ ಪೂಜ್ಯ ದೇಶಿಕರಿಂದ ವಿವರಣೆ ಪಡೆಯುತ್ತಿದ್ದರು.

ಉಪನಯನ ಸಂಸ್ಕಾರ, ಗಾಯತ್ರೀ ಮಂತ್ರೋಪದೇಶಗಳಿಂದ ಸಂಸ್ಕೃತರಾದ ವಟುಗಳ ಮುಖದಲ್ಲಿ ದ್ವಿಜತ್ವದ ದಿವ್ಯತೇಜಸ್ಸು ಪ್ರಜ್ವಲಿಸಿತು. ಇದರಿಂದ ಶ್ರೀಪತಿಯ ಮನಸ್ಸು ಪುಟಕ್ಕಿಟ್ಟ ಚಿನ್ನದಂತೆ ಸಾಣೆ ಹಿಡಿದ ಶಸ್ತ್ರದಂತೆ ಮತ್ತಷ್ಟು ತೀಕ್ಷ್ಣವಾಯಿತು.

೨

ಶ್ರೀಪತಿಯ ಶಿಕ್ಷಣ ತೈತ್ತಿರೀಯೋಪನಿಷತ್ ಶಿಕ್ಷಾವಲ್ಲಿಯಿಂದ ಆರಂಭವಾಯಿತು. ಪೂಜಾವಿಧಿಯು ದೇವಸ್ಥಾನದಲ್ಲಿ ಪ್ರತಿನಿತ್ಯವೂ ನಡೆದೇ ಇದ್ದುದರಿಂದ ಅದು ಅವನಿಗೆ ಸಾಕಷ್ಟು ಕಂಠಸ್ಥವಾಗಿಯೇ ಇತ್ತು.

ಈಗ ಪ್ರತಿದಿನ ಬೆಳಗಿನ ಎರಡು ಗಂಟೆ ವೇದಾಧ್ಯಯನಕ್ಕೆ ಮೀಸಲಾಯಿತು. ಮಧ್ಯಾಹ್ನದ ಎರಡು ಗಂಟೆಗಳಲ್ಲಿ ಒಂದು ಗಂಟೆ ಸಂಸ್ಕೃತ

ನಿಘಂಟು-ಶಬ್ದ-ಧಾತುಪಾಠಗಳು, ಮತ್ತೊಂದು ಗಂಟೆ ಭಾಷಾವಾಚಕ ಬಾಲಪಾಠಗಳು.

ಸಂಜೆ ಒಂದು ಗಂಟೆ ಆಟ.

ಆಟದಿಂದ ಹಿಂದಿರುಗಿದ ಶ್ರೀಪತಿ ತಾಯಿಯ ಬಳಿ ಕುಳಿತು ಅಂದಂದಿನ ಪಾಠಗಳ ಚಿಂತನ ನಡೆಸುತ್ತಿದ್ದ.

ಎರಡನೆಯ ವರ್ಷದಿಂದ ಪ್ರಾತಃಕಾಲದ ವೇದಾಧ್ಯಯನದ ಎರಡು ಗಂಟೆಗಳಲ್ಲಿ ಒಂದು ಗಂಟೆಯ ಕಾಲ ಅಷ್ಟಾಧ್ಯಾಯ ಸೂತ್ರ (ವ್ಯಾಕರಣ) ಪಾಠಕ್ಕೆ ಕೊಟ್ಟು ವೇದಾಧ್ಯಯನವನ್ನು ಒಂದು ಗಂಟೆಗೆ ಸೀಮಿತಗೊಳಿಸಲಾಯಿತು.

ಶ್ರೀಪತಿಯ ಭಾಷಾ ಶಿಕ್ಷಣದಲ್ಲಿ ಗಣಿತ, ಚರಿತ್ರೆ – ಭೂಗೋಳ ಮುಂತಾದ ವ್ಯಾವಹಾರಿಕ ಶಿಕ್ಷಣವೂ ಮುಂದುವರಿಯುತ್ತಿತ್ತು.

ಮೂರನೆಯ ವರ್ಷದಿಂದ ಶ್ರೀಪತಿ ಮುಂಜಾನೆ ನಿತ್ಯ ಕರ್ಮಗಳನ್ನು ಮುಗಿಸಿ ಒಂದು ತಾಸು ಯೋಗಾಸನ ತರಗತಿಗೆ ಹಾಜರಾಗತೊಡಗಿದ. ಮುಂದಿನ ಎರಡು ಗಂಟೆಗಳ ಅಭ್ಯಾಸದಲ್ಲಿ ರಘುವಂಶ-ಕುಮಾರಸಂಭವಗಳು ತಲೆ ಹಾಕಿದ್ದವು. ಮಧ್ಯಾಹ್ನದ ಭಾಷಾಧ್ಯಯನದ ಜೊತೆಗೆ ಸಂಸ್ಕೃತ ಗದ್ಯ ಗ್ರಂಥಗಳು ನಡೆಯತೊಡಗಿದ್ದವು.

ಮುಂದಿನ ನಾಲ್ಕು ವರ್ಷಗಳಲ್ಲಿ ಶ್ರೀಪತಿ ಸಂಹಿತೆ, ಬ್ರಾಹ್ಮಣ ಮತ್ತು ಉಪನಿಷತ್ತುಗಳಲ್ಲಿ ಮುಖ್ಯವಾದ ಭಾಗಗಳನ್ನು ಪೂರ್ಣಗೊಳಿಸಿದ್ದನಲ್ಲದೆ ಸಂಸ್ಕೃತದಲ್ಲಿ ಪಂಚಕಾವ್ಯಗಳು, ಹಲವಾರು ನಾಟಕಗಳು, ಛಂದಸ್ಸು ಅಲಂಕಾರ, ತರ್ಕ ಮತ್ತು ವ್ಯಾಕರಣಗಳಲ್ಲಿ ಸಾಕಷ್ಟು ಪ್ರವೇಶ ಪಡೆದಿದ್ದ. ಭಾಷಾ ವಿಭಾಗದಲ್ಲಿ ಆರೋಗ್ಯಶಾಸ್ತ್ರ, ವ್ಯವಸಾಯಶಾಸ್ತ್ರ, ಪ್ರಾಣಿ-ಪಕ್ಷಿ ವಿಜ್ಞಾನಗಳಲ್ಲಿ ಪ್ರವೇಶವಾಗಿತ್ತು.

'ಬೆರಳು ತೋರಿದರೆ ಹಸ್ತವನ್ನು ನುಂಗುವ ಕುಶಾಗ್ರಮತಿ' ಎಂಬ ಪ್ರಶಸ್ತಿ ಶ್ರೀಪತಿಗೆ ಅಧ್ಯಾಪಕರಿಂದ ದೊರೆತಿದ್ದುದರಿಂದ ಶಾಲೆಯ ಅನೇಕ ವಿದ್ಯಾರ್ಥಿಗಳು ಶ್ರೀಪತಿಯನ್ನು ಆಶ್ರಯಿಸಿ, ತಮಗೆ ತರಗತಿಯಲ್ಲಿ ನಡೆಯುವ ಪಾಠಗಳಲ್ಲಿನ ಕ್ಲಿಷ್ಟ ವಿಷಯಗಳನ್ನು ಪರಿಹರಿಸಿಕೊಳ್ಳುತ್ತಿದ್ದರು.

ಕಡೆಯ ವರ್ಷ ಶ್ರೀಪತಿ ಪಾಠಶಾಲೆಯಲ್ಲಿ ಏರ್ಪಟ್ಟಿದ್ದ ನಾಟಕಾಂತ ಸಾಹಿತ್ಯ ಪರೀಕ್ಷೆಗೆ ಕುಳಿತು ಪ್ರಥಮ ದರ್ಜೆಯಲ್ಲಿ ಮೊದಲಿಗನಾಗಿ ಉತ್ತೀರ್ಣನಾಗಿದ್ದ. ಹನ್ನೆರಡನೆಯ ವಯಸ್ಸಿಗೆ ಈ ಪರೀಕ್ಷೆಯನ್ನು ಕೊಟ್ಟವರು ವವರಲ್ಲಿಯೂ ಪ್ರಾಯಃ ಶ್ರೀಪತಿಯೇ ಮೊದಲಿಗನಾಗಿದ್ದ.

ತನ್ನ ಹದಿಮೂರನೆಯ ವಯಸ್ಸಿಗೆ ವಿದ್ಯಾಪೀಠವನ್ನು ಹತ್ತುವವನು ಇನ್ನೈದು ವರ್ಷಗಳಲ್ಲಿ ಪದವೀಧರನೆನಿಸುತ್ತಾನೆ ಎಂಬ ಸಂತೋಷ ಆರಾಧ್ಯ ದಂಪತಿಗಳಿಗೆ!

ಈ ಸುದ್ದಿಯನ್ನು ತಾತನವರಿಗೂ ಶಂಭು ಮಾವನವರಿಗೂ ಮೊದಲು ತಿಳಿಸುವ ಅಪೇಕ್ಷೆ ಶ್ರೀಪತಿಯದು. ತಂದೆ-ತಾಯಿಗಳಿಗೆ ತಿಳಿದರೆ ಸಾಕು ಎಂಬುದು ಭಾಗೀರಥಿಯ ಹೆಬ್ಬಯಕೆ.

ಆ ರಾತ್ರಿ ಚಿರಂಜೀವಿಯ ಕೋರಿಕೆಯನ್ನು ಭಾಗೀರಥಿ ಬುದ್ಧಿಯವರ ಗಮನಕ್ಕೆ ತಂದಳು. ಬುದ್ಧಿಯವರ ಆದೇಶದಂತೆ ರಾಮುಡು ಗಾಡಿಯನ್ನು ಸಿದ್ಧಪಡಿಸಿದ. ಈ ಸಲ ಮಗನ ಜೊತೆ ಭಾಗೀರಥಿ ಮಗಳು ಕುಮುದಿನಿಯೊಡನೆ ಪ್ರಯಾಣಕ್ಕೆ ಸಿದ್ಧಳಾದಳು.



೮

## ಬೆರಳ ಆರತಿ ! ಕುರುಳ ಚಾಮರ !

### ೧

ಇತ್ತ ಕಾಶಿಯಲ್ಲಿ 'ಮಹೋಪಾಧ್ಯಾಯ' ಪ್ರಶಸ್ತಿ ಗಳಿಸಿ, ವಿಶೇಷ ಪ್ರಬಂಧವನ್ನೂ ಬರೆದು ವಿದ್ಯಾಪೀಠದ ದರ್ಶನ ವಿಭಾಗದಲ್ಲಿ ಸಹಾಯೋಪಾಧ್ಯಾಯನಾಗಿದ್ದ ಮಂಚಣ್ಣನ ಕೀರ್ತಿ ದಿನೇ ದಿನೇ ಬೆಳೆಯುತ್ತಿತ್ತು. ಅವನ ಭಕ್ತಿಪಾರವಶ್ಯ ಜನತೆಯಲ್ಲಿ ವಿಶೇಷ ಕುತೂಹಲವನ್ನು ಕೆರಳಿಸಿತ್ತು.

ತಂದೆಯ ಜೊತೆಯಲ್ಲಿ ವಿಶ್ವೇಶ್ವರಸ್ವಾಮಿಯ ಅರ್ಚನೆಯಲ್ಲಿ ಸಹಾಯಕನಾಗಿ ಮಂಚಣ್ಣ ಭಾಗವಹಿಸುತ್ತಿದ್ದ. ಅವನು ಹದಿಹರಯದ ಮನೋಜ್ಞವ್ಯಕ್ತಿತ್ವದ ಯುವಕ. ಮುಖದಲ್ಲಿ ಆಗ ತಾನೇ ಗಡ್ಡ ಮೀಸೆಗಳು ಮೊಳೆತು ಹೊರಬರಲು ಇಣುಕುತ್ತಿದ್ದವು. ಗುಂಗುರು ಗುಂಗುರಾಗಿ ತಲೆ ತುಂಬ ನೀಳವಾಗಿ ಬೆಳೆದಿದ್ದ ಕುರುಳುಗಳು ಜಡೆಗಟ್ಟಿ ತೂಗುತ್ತಾ ಹಿಮ್ಮಡಿಗೆ ಮುತ್ತಿಡುತ್ತಿದ್ದವು. ಅದನ್ನವನು ತಲೆಯ ಮೇಲೆ ಮುಡಿಯಂತೆ ಎತ್ತಿ ಕಟ್ಟಿರುತ್ತಿದ್ದ. ಪೂಜೆಗೆ ಕುಳಿತ ಮಂಚಣ್ಣ ಪಾರ್ವತಿಯ ತಪಸ್ಸನ್ನು ಪರೀಕ್ಷಿಸ ಬಂದ ವಟುವಿನಂತೆ ದಿವ್ಯ ತೇಜಸ್ಸಿನಿಂದ ಬೆಳಗುತ್ತಿದ್ದ. ಯುವ ಋಷಿಯಂತೆ ರಾಜಿಸುತ್ತಿದ್ದ ಅವನಲ್ಲಿ ಜನತೆಗೆ ಅಮಿತ ಒಲವು ಬೆಳೆದಿತ್ತು.

ವಿದ್ಯಾಪೀಠದಲ್ಲಿ ಮಗನಿಗೆ ಸಹಾಯೋಪಾಧ್ಯಾಯ ಪದವಿ ದೊರೆತ ಮೇಲೆ ಶಂಭುಭಟ್ಟರು ವಿಶ್ವೇಶ್ವರಾಲಯದಲ್ಲಿ ತಾವು ನಡೆಸುತ್ತಿದ್ದ ಅರ್ಚಕತ್ವ ಕಾಯಕವನ್ನು ಗುರುಪೀಠದ ಅಪ್ಪಣೆ ಪಡೆದು ಮಗನಿಗೆ ವಹಿಸಿದ್ದರು.

ಮಂಚಣ್ಣನ ದೇವತಾರ್ಚನ ಕ್ರಮ ಅಪೂರ್ವವಾಗಿತ್ತು. ಈ ಕಾಯಕವನ್ನವನು ತ್ರಿಕರಣಪೂರ್ವಕವಾಗಿ ನೆರವೇರಿಸುತ್ತಾ ಅದಕ್ಕೆ ಹೊಸ

ಮೆರುಗನ್ನು ತಂದಿದ್ದ. ಇದರಿಂದ ಭಕ್ತವೃಂದದಲ್ಲಿ ವಿಶೇಷ ಶ್ರದ್ಧಾಸಕ್ತಿಗಳು ಮೂಡಿ ದೇವಾಲಯದಲ್ಲಿ ದಿನೇದಿನೇ ಭಕ್ತಾದಿಗಳ ಸಂದಣಿ ಬೆಳೆಯುತ್ತಿತ್ತು.

ಬ್ರಾಹ್ಮ ಮುಹೂರ್ತದಲ್ಲೆದ್ದು ಮಂಚಣ್ಣ ನಿತ್ಯಕರ್ಮಗಳನ್ನು ಪೂರೈಸಿ, ಗಂಗೆಯಲ್ಲಿ ಮಿಂದು ಹೂಪತ್ರೆಗಳನ್ನು ಸಂಗ್ರಹಿಸುತ್ತಿದ್ದ. ಅಲ್ಲಿಂದ ಮನೆಗೆ ಬಂದು ಸಂಧ್ಯೆ–ಶಿವಾರ್ಚನೆ-ಅಗ್ನಿಕಾರ್ಯಗಳನ್ನು ಮುಗಿಸಿ ದೇವಾಲಯಕ್ಕೆ ಆಗಮಿಸುತ್ತಿದ್ದ.

ದೇವಾಲಯದ ಸೇವಕವರ್ಗ ಆ ವೇಳೆಗೆ ದೇವಾಲಯವನ್ನು ಶುಚಿಗೊಳಿಸಿ ಅರ್ಚನೆಗೆ ಅಣಿಪಡಿಸಿರುತ್ತಿತ್ತು. ಪ್ರಾತಃಕಾಲ ಏಳುಗಂಟೆಗೆ ಆರಂಭವಾದ ಮಂಚಣ್ಣನ ಪೂಜೆ ಮೂರುತಾಸಿನವರೆಗೆ ಅವ್ಯಾಹತವಾಗಿ ನಡೆಯುತ್ತಿತ್ತು. ಮಹಾನ್ಯಾಸಪೂರ್ವಕ ಏಕವಾರ ರುದ್ರಾಭಿಷೇಕ ಅಲ್ಲಿಯ ನಿತ್ಯವಿಧಿ. ವಿಶೇಷದಿನಗಳಲ್ಲಿ ಭಕ್ತಾದಿಗಳ ಅಪೇಕ್ಷೆಯಂತೆ ಏಕಾದಶವಾರ, ಮಹಾರುದ್ರ ಮತ್ತು ಅತಿರುದ್ರಕಲ್ಪಗಳೂ ಏರ್ಪಡುವುದುಂಟು. ಸಹಸ್ರ ಬಿಲ್ವಾರ್ಚನೆ-ರಾಜೋಪಚಾರಾದಿಗಳು ವೈಭವೋಪೇತವಾಗಿ ನೆರವೇರುತ್ತಿದ್ದುವು. ಅಪೂರ್ವವಾದ ಈ ದೃಶ್ಯವನ್ನು ನೋಡಲು ಸ್ಥಳಪರಸ್ಥಳದ ಭಕ್ತಾದಿಗಳು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ದೇವಾಲಯದ ಅಂಗಳದಲ್ಲಿ ಕಿಕ್ಕಿರಿದು ತುಂಬಿರುತ್ತಿದ್ದರು. ಅದಕ್ಕೆ ಮುಖ್ಯ ಕಾರಣ ರಾಜೋಪಚಾರಗಳಲ್ಲಿ ಬರುವ ಆರತಿ ಮತ್ತು ಚಾಮರೋಪಚಾರಗಳಲ್ಲಿ ನಡೆವ ವೈಶಿಷ್ಟ್ಯ ಜನರ ಮನಸ್ಸನ್ನುಸೂರೆಗೊಂಡಿತ್ತು.

ಮಂಚಣ್ಣ ಆಕಳ ತುಪ್ಪದಲ್ಲಿ ತೋಯಿಸಿದ ಬತ್ತಿಗಳನ್ನು ಎರಡೂ ಹಸ್ತಗಳ ಬೆರಳತುದಿಗಳಿಗೆ ಜೋಡಿಸಿ, ಅದಕ್ಕೆ ಜ್ಯೋತಿಯನ್ನು ಹೊತ್ತಿಸಿ ವಿಶ್ವನಾಥನಿಗೆ ಬೆಳಗಲು ಪ್ರಾರಂಭಿಸುತ್ತಿದ್ದ.

ಆರತಿಯ ಸಮಯದಲ್ಲಿ ವೇದೋಪನಿಷತ್ತುಗಳ, ಪೂರ್ವಾಚಾರ್ಯರ ಹಾಗೂ ತಾನೇ ರಚಿಸಿದ ಸಂಸ್ಕೃತ ಮತ್ತು ಕನ್ನಡ ಸೂಕ್ತಿಗಳನ್ನು ಹಾಗೂ ವಚನಗಳನ್ನೂ ಸುಶ್ರಾವ್ಯವಾಗಿಪಠಿಸುತ್ತಾ ಮಂಚಣ್ಣ ಪರವಶನಾಗುತ್ತಿದ್ದ. ಈ ಸಮಯದಲ್ಲಿ ಭಕ್ತವೃಂದದಲ್ಲಿ ಭಕ್ತಿಯ ಆವೇಶ ಹೊಂದಿದ ಅನೇಕ ಸ್ತ್ರೀ ಪುರುಷರೂ ಮಂಗಳಗಳನ್ನು ಹಾಡುತ್ತಿದ್ದರು.

ಸುಮಾರು ಅರ್ಧತಾಸಿನವರೆಗೆ ನಡೆವ ಆರತಿಸೇವೆಯಲ್ಲಿ ಬತ್ತಿಗಳಲ್ಲಿನ ತುಪ್ಪವು ಹಿಂಗಿಹೋಗಿದ್ದರೂ ಮಂಚಣ್ಣನ ಭಕ್ತಿರಸ ಆಜ್ಯದಿಂದಲೋ ಎಂಬಂತೆ ಬೆಳಗುವ ಜ್ಯೋತಿಗಳು ಮತ್ತಷ್ಟು ಜಾಜ್ವಲ್ಯಮಾನವಾಗಿ ಬೆಳಗುತ್ತಿದ್ದವು. ಭಕ್ತಜನಚಿತ್ತಚುಂಬಕವಾದ ಅಪೂರ್ವ ಆರತಿಯು ತರುವಾಯ ಚಾಮರೋಪಚಾರವು ಆರಂಭವಾಗುತ್ತಿತ್ತು.

ಆದರಲ್ಲಿ ಮಂಚಣ್ಣ ತನ್ನ ಮಂಡೆಯ ಜಟಾಜೂಟಗಳನ್ನು ಕೆದರಿ ತನ್ನ ಹಿಡಿಗೆ ಬಂದಷ್ಟು ಕುರುಳಿನ ಜಡೆಗಳನ್ನು ಕಿತ್ತು ಕಿತ್ತು ಶಿವನಿಗೆ ಚಾಮರಮಾಡಿ ಬೀಸುವ ದೃಶ್ಯ ಅತ್ಯದ್ಭುತವಾಗಿರುತ್ತಿತ್ತು.

ಕೂಡಲೇ ಮಂಚಣ್ಣನ ವೀರಭಕ್ತಿಗೆ ಒಲಿದ ವಿಶ್ವೇಶ್ವರನ ಕೃಪಾವರ್ಷವೋ ಎಂಬಂತೆ ಪುಷ್ಪವೃಷ್ಟಿಯಾಗುತ್ತಿತ್ತು. ಅಷ್ಟರಲ್ಲಿ ಗರ್ಭಗೃಹದಿಂದ ಚಿಮ್ಮಿಬಂದ ದಿವ್ಯಪ್ರಕಾಶವೊಂದು ಮಂಚಣ್ಣನನ್ನು ತಕ್ಕೈಸಿ "ವೀರಭಕ್ತ ! ಜಯ ಜಯ" ಎಂದು ಘೋಷಿಸುತ್ತಿತ್ತು. ಭಕ್ತವೃಂದ ಆನಂದಬಾಷ್ಪಗಳನ್ನು ಸುರಿಸುತ್ತಾ ಕರತಾಡನ ಮಾಡಿ ಹರ್ಷೋದ್ಗಾರ ಮಾಡುತ್ತಿತ್ತು.

ಆ ತರುವಾಯ ಮಂಚಣ್ಣ ವಿಶ್ವೇಶ್ವರನಿಗೆ ಮಹಾಮಂಗಳಾರತಿ ಬೆಳಗಿ, ತನ್ನ ಪವಿತ್ರಹಸ್ತಗಳಿಂದ ಭಕ್ತರಿಗೆ ತೀರ್ಥಪ್ರಸಾದ ನೀಡುತ್ತಿದ್ದ. ಮಂಚಣ್ಣನ ಕೈಯಿಂದ ತೀರ್ಥಪ್ರಸಾದ ಸ್ವೀಕರಿಸಲು ಜನರ ನೂಕುನುಗ್ಗಲು ಹೇಳತೀರದು.

ಜನಜನಿತವಾಗಿ ಹರಡಿದ್ದ ಸುದ್ದಿ ಗುರುಮಠ ಮತ್ತು ಅರಮನೆಗಳವರೆಗೂ ಮುಟ್ಟಿತ್ತು. ಆಶ್ಚರ್ಯ ಮತ್ತು ಕುತೂಹಲಾವಿಷ್ಟರಾದ ಶ್ರೀಮನ್ಮಹಾರಾಜರು ಕುಟುಂಬವರ್ಗದೊಡನೆ ಜಗದ್ಗುರುಗಳನ್ನೊಳಗೊಂಡು ಒಂದು ದಿನ ದೇವಾಲಯಕ್ಕೆ ಭೇಟಿಕೊಟ್ಟರು. ಮಂಚಣ್ಣನ ವೀರಭಕ್ತಿಯನ್ನು ಕಣ್ಣಾರೆಕಂಡ ಅವರು ನಿಬ್ಬೆರಗಾದರು. ಮಂಚಣ್ಣನಿಗೆ ಪ್ರಣಾಮ ಮಾಡಿದುದಲ್ಲದೆ ಅವರು "ಶಿವಲೆಂಕ" ಎಂಬ ಅಂಕಿತದ ಅಪೂರ್ವವಾದ ಸುವರ್ಣಪದಕವೊಂದನ್ನು ಮಂಚಣ್ಣನಿಗೆ ತೊಡಿಸಿ ಶಾಲುಜೋಡಿ ಹೊದಿಸಿ ಗೌರವಿಸಿದರು. ಶಿವಲೆಂಕ ಮಂಚಣ್ಣನ ಮಹಿಮೆ ದಿಗಂತ ವಿಶ್ರಾಂತವಾಯಿತು.

೨

ಒಂದು ದಿನ ಮುಂಜಾನೆ ಮಂಚಣ್ಣ ಮಣಿಕರ್ಣಿಕಾ ಸ್ನಾನಘಟ್ಟದ ಪುಷ್ಪವಾಟಿಕೆಯಲ್ಲಿ ಸ್ವಾಮಿಯ ಪೂಜೆಗೆ ಪತ್ರಪುಷ್ಪಾದಿಗಳನ್ನು ಬಿಡಿಸುತ್ತಿದ್ದ. ಪುಷ್ಪವಾಟಿಕೆಯ ಮತ್ತೊಂದು ತುದಿಯಲ್ಲಿ ಹದಿಹರಯದ ಕನ್ಯೆಯರು ಕೆಲವರು ಹೂ ಬಿಡಿಸುವುದಕ್ಕಾಗಿ ಅದೇ ಪುಷ್ಪವಾಟಿಕೆಯನ್ನು ಪ್ರವೇಶಿಸಿದ್ದನ್ನು ಮಂಚಣ್ಣ ಗಮನಿಸಿದ. ಹೆಣ್ಣುಮಕ್ಕಳ ಕಲರವವನ್ನು ಆಲಿಸಿದ ಮಂಚಣ್ಣ ಪುಷ್ಪವಾಟಿಕೆಯಿಂದ ಹೊರಬರುತ್ತಿದ್ದ.

ಅಷ್ಟರಲ್ಲಿ ಅವರಲ್ಲೊಬ್ಬಳು "ಗುರುಗಳಿಗೆ ನಮಸ್ಕಾರ !" ಎಂದು ಮುಂದೆ ಬಂದು ಮಂಚಣ್ಣನ ಕಾಲಿಗೆರಗಿದಳು. ಕಮನೀಯವಾದ ವ್ಯಕ್ತಿತ್ವದ ಸ್ಫುರದ್ರೂಪಿ ಕನ್ಯೆಯನ್ನು ಮಂಚಣ್ಣ ತಲೆ ಎತ್ತಿ ನೋಡಿದ್ದು ಅದೇ ಮೊದಲು. ಕೂಡಲೆ ಅವನಿಗರಿವಿಲ್ಲದೆಯೇ ಅವನಲ್ಲಿ ಕೆಲವು ಬದಲಾವಣೆಗಳಾಗಿದ್ದವು. ಅವಳ ಮೃದು ಹಸ್ತಸ್ಪರ್ಶದಿಂದ ಆಪಾದಮಸ್ತಕ ಮಂಚಣ್ಣ ಬೆವತಿದ್ದ. ಮೈ ನವಿರೆದ್ದಿತ್ತು. ಕೈಕಾಲು ನಡುಗುತ್ತಿದ್ದವು. ಎದೆ ಡವ ಡವ ಹೊಡೆಯತೊಡಗಿತ್ತು. ಆದರೂ ಮಂಚಣ್ಣ ಸಾವರಿಸಿಕೊಂಡು

"ನೀನು ಯಾರು ? ಯಾರ ಮಗಳು ? ಏನು ಓದುತ್ತಿರುವೆ ?" ಎಂದು ಪ್ರಶ್ನಿಸಿದ.

"ಗುರುಗಳೆ, ನಾನು ಶರಭಾರಾಧ್ಯರ ಮಗಳು ವಿಶಾಲಾಕ್ಷಿ ! ಗುರುಕುಲದ ವಿದ್ಯಾರ್ಥಿನಿ" ಎಂದಳು ತಲೆತಗ್ಗಿಸಿ ಕಾಲಹೆಬ್ಬೆರಳಿನಿಂದ ನೆಲ ಕೆರೆಯುತ್ತಾ.

"ಏನು ನಮ್ಮ ಆಚಾರ್ಯ ಶರಭಾರಾಧ್ಯರೆ ?"

ಎಂದು ಪ್ರಶ್ನಿಸುತ್ತಿರುವಂತೆ ಅವಳ ಸಖಿಯರು ಚಪ್ಪಾಳೆ ತಟ್ಟಿ ಹರ್ಷೋದ್ಗಾರ ಮಾಡತೊಡಗಿದ್ದರು.

"ಹೌದು ಗುರುಗಳೆ!" ಎಂದು ಹೇಳುತ್ತಾ ವಿಶಾಲಾಕ್ಷಿ ಚಿಗರಿಯಂತೆ ಹಾರಿ ಸಖಿಯರನ್ನು ಸೇರಿ ಮರೆಯಾದಳು.

ನಡೆದ ಆಕಸ್ಮಿಕ ದರ್ಶನ-ಸ್ಪರ್ಶನ-ಸಂಭಾಷಣಗಳಿಂದ ತನ್ನಲ್ಲಾದ ಬದಲಾವಣೆಗಳನ್ನು ಕಂಡು ಮಂಚಣ್ಣ ತನಗೆ ತಾನೇ ಹೀಯಾಳಿಸಿಕೊಂಡ. "ಇನ್ನೆಂದಿಗೂ ಹೀಗಾಗಬಾರ"ದೆಂದು ವಿಶ್ವನಾಥನಲ್ಲಿ ಮೊರೆಇಟ್ಟ.

ಮನೆಗೆ ಬಂದ ಮಂಚಣ್ಣ ಸಂಧ್ಯೆ ಶಿವಾರ್ಚನೆಗಳನ್ನು ಮುಗಿಸಿ ದೇವಾಲಯದ ದಾರಿ ಹಿಡಿದ. ದಾರಿಯುದ್ದಕ್ಕೂ ಅವನ ಕಣ್ಣ ಮುಂದೆ ವಿಶಾಲಾಕ್ಷಿಯ ಮುಗುಳ್ನಗೆಯ ಮುದ್ದು ಮುಖ ಮತ್ತೆ ಮತ್ತೆ ಸುಳಿಯ ತೊಡಗಿತು.

ದೇವತಾರ್ಚನೆಯ ಕಡೆಯಲ್ಲಿ ಮಂಚಣ್ಣ ಸ್ವಾಮಿಗೆ ಪುಷ್ಪಾಂಜಲಿಯನ್ನು ಅರ್ಪಿಸಿದಾಗಲೂ ವಿಶ್ವೇಶ್ವರ ಮೂರ್ತಿಯಲ್ಲಿ ವಿಶಾಲಾಕ್ಷಿ ಅನ್ನಪೂರ್ಣೆಯಾಗಿ ಕಂಡಂತಾಯಿತು! ವಿಹ್ವಲನಾದ ಮಂಚಣ್ಣ "ಅಮ್ಮ, ಇದೇನು ನಿನ್ನ ಲೀಲೆ! ನನಗೇಕೆ ಈ ಭವ ಬಂಧನದ ತೊಡಕು! ನಿರಾತಂಕವಾಗಿ ನಿಮ್ಮ ಸೇವೆಯನ್ನು ನನಗೆ ಅನುಗ್ರಹಿಸಬಾರದೆ?" ಎಂದು ಅಂಗಲಾಚಿದ.

"ಇದು ಬಂಧನವಲ್ಲ ಮಗು! ಇದು ನೀನು ಸಂಸಾರಸಾಗರವನ್ನು ಸುಲಭವಾಗಿ ದಾಟಲು ಶಿವನು ಅನುಗ್ರಹಿಸಿದ ಸುಭದ್ರ ನಾವೆ. ಇದು ಮಾನವ ಜಾತಿಯ ಒಂದು ಸ್ವಾಭಾವಿಕ ನಿಯಮ ಮತ್ತು ಸಾಧನ.

"ಸ್ತ್ರೀ ಪುರುಷರು ಈ ಬಂಧನಕ್ಕೆ ಒಳಗಾಗದೆ ಇತರ ಪ್ರಾಣಿಗಳಂತೆ ಸ್ವತಂತ್ರವಾಗಿ ಇರಲು ಸಾಧ್ಯವಿಲ್ಲವೆ?" ಎಂದು ಒಳಮನಸ್ಸು ನುಡಿಯಿತು.

"ಇಲ್ಲ; ಹಾಗಿರುವುದಾದರೆ ಮೃಗಗಳಿಗೂ ಮಾನವರಿಗೂ ಏನು ವ್ಯತ್ಯಾಸ? ಇಹ–ಪರ ಸುಖ ಸಾಧನಕ್ಕಾಗಿ ಪ್ರಾಚೀನ ಮಹರ್ಷಿಗಳು ವಿವಾಹವನ್ನು ಒಂದು ಸಂಸ್ಕಾರ ಎಂದಿದ್ದಾರೆ. ವಿವಾಹವು ಸ್ತ್ರೀಪುರುಷರ ಎರಡು ಆತ್ಮಗಳ ಪರಸ್ಪರ ಏಕೀಕರಣ. ಎರಡು ಅರ್ಧಾಂಗಗಳ ಸಮೀಕರಣ ಮತ್ತು ಸ್ತ್ರೀ ಪುರುಷರ ಅಪೂರ್ಣತೆಯನ್ನು ಪೂರ್ಣಗೊಳಿಸುವ ಮುಖ್ಯ ಸಾಧನ. ಸ್ತ್ರೀ ಪುರುಷರ ಶರೀರ ಮಂದಿರಗಳಲ್ಲಿರುವ ಎರಡು ಆತ್ಮಗಳು

ಒಂದು ಮತ್ತೊಂದನ್ನು ಆಹ್ವಾನಿಸುವಲ್ಲಿ ವಿವಾಹ ಸಂಸ್ಕಾರವು ಅವೆರಡನ್ನು ಪರಸ್ಪರ ಒಂದು ಗೂಡಿಸುತ್ತದೆ. ಸಂಸಾರ ಯಾತ್ರೆಯು ಸುಖಮಯ ವಾಗಿಯೂ ಶಾಂತಿಪೂರ್ಣವಾಗಿಯೂ ನಡೆಯುವುದಕ್ಕಾಗಿ ವಿವಾಹವೆಂಬ ಸೇತುವೆ ರಚಿತವಾಗಿದೆ. ಇದು ಕೇವಲ ಕಾಮೋಪಭೋಗಕ್ಕಾಗಿಯೇ ಅಲ್ಲ; ಮುಖ್ಯವಾಗಿ ಅದು ಸತ್ ಸಂತಾನ ಲಾಭಕ್ಕಾಗಿ ಏರ್ಪಟ್ಟಿದೆ; ಜಗತ್ ಪಿತೃವಾದ ಪರಶಿವನು ಪರಾಶಕ್ತಿಸ್ವರೂಪಿಣಿಯಾದ ಜಗನ್ಮಾತೆಯೊಂದಿಗೆ ಅರ್ಧನಾರೀಶ್ವರನೆನಿಸಿರುವುದು ಭಾರತ ಗೃಹಸ್ಥ ಧರ್ಮದ ಒಂದು ಪವಿತ್ರ ಸಂಕೇತ. ಬ್ರಹ್ಮಚರ್ಯಾದಿ ಆಶ್ರಮದವರೆಲ್ಲರೂ ಆಶ್ರಯಿಸಿರುವುದು ಗೃಹಸ್ಥನನ್ನೇ. ಎಲ್ಲ ಆಶ್ರಮದವರಿಗೂ ಉತ್ತಮ ಗೃಹಸ್ಥನೇ ಗುರು ಎಂದು ಪೂರ್ವಾಚಾರ್ಯರು ನುಡಿದಿದ್ದಾರೆ. ಅಗಸ್ತ್ಯಾದಿ ಮಹರ್ಷಿಗಳೂ ಶರಣ-ಸಂತರೂ ಗೃಹಸ್ಥರೇ ಆಗಿದ್ದಾರೆ.

ನಿನ್ನನ್ನು ಒಲಿದು ಬಂದಿರುವ ಕನ್ಯೆ ನಿನ್ನ ಶ್ರೇಯಸ್ಸಾಧನೆಗಾಗಿ ಶಿವನು ಅನುಗ್ರಹಿಸಿರುವ ಒಂದು ವರಪ್ರಸಾದ. ಅನುರೂಪಳಾದ ಅವಳ ಕೈ ಹಿಡಿದು ಮುನ್ನಡೆ ! ನಿನಗೆ ಒಳ್ಳೆಯದಾಗಲಿ!"

ಎಂಬ ಆತ್ಮ ಸಂದೇಶವೊಂದು ಅವನ ಕರ್ಣಕುಹರದಲ್ಲಿ ಪ್ರತಿಧ್ವನಿಸಿ ದಂತಾಯಿತು. ಕೂಡಲೇ ಸ್ವಾಮಿಗೆ ಅಲಂಕರಿಸಿದ್ದ ಪುಷ್ಪಗುಚ್ಛವೊಂದು ಸ್ವಾಮಿಯ ಬಲಭುಜದಿಂದ ಜಾರಿ ಪಾದದ ಬಳಿ ಬಿತ್ತು. ಮಂಚಣ್ಣ ಅದನ್ನು ಕೈಗೆತ್ತಿಕೊಂಡಾಗ ವಿಶಾಲಾಕ್ಷಿ ಎದುರಿಗೆ ಬಂದು ವಂದಿಸಿದಳು. ಮಂಚಣ್ಣ ಪುಷ್ಪಗುಚ್ಛವನ್ನು ಅವಳ ಜೋಗಸೆಗೆ ಹಾಕಿದ. ಅವಳು ಅದನ್ನು ಕಣ್ಣಿಗೊತ್ತಿಕೊಂಡು, ತಲೆಯಲ್ಲಿ ಮುಡಿದುಕೊಂಡಳು.

೩

ವಿಶಾಲಾಕ್ಷಿ ಏರುಂಜವ್ವನದ ರಮಣೀಯ ವ್ಯಕ್ತಿತ್ವದ ಚೆಲುವೆ. ಅವಳು ಕನ್ಯಾ ಗುರುಕುಲದಲ್ಲಿ ನಾಟಕಾಂತ ಸಾಹಿತ್ಯದವರೆಗೆ ಅಭ್ಯಾಸ ಮಾಡಿ, ಭಕ್ತಿಮಾರ್ಗದಲ್ಲಿ ಅಡಿ ಇಟ್ಟಿದ್ದ ಮುಗ್ಧಕನ್ಯೆ.

ವಿಶಾಲಾಕ್ಷಿಯ ಪರಿಚಯವಾಗಿ, ಭಗವದನುಗ್ರಹದ ಅನುಮತಿ ದೊರೆತ ಮೇಲೆ ಮಂಜಣ್ಣ ಅವಳ ಮುಗ್ಧ ಭಕ್ತಿಗೆ ಒಲಿದಿದ್ದ. ಮೇಲಾಗಿ ಅವನಲ್ಲಿ ಅವಳನ್ನು ತನ್ನವಳನ್ನಾಗಿಸಿಕೊಳ್ಳುವ ತವಕ ಮೂಡಿತ್ತು ; ಮಾತ್ರವಲ್ಲದೆ ಅದು ಅವನ ಮನಸ್ಸನ್ನು ಲೋಹಚುಂಬಕ ಮಣಿಯಂತೆ ಕ್ಷಣ-ಕ್ಷಣವೂ ಆಕರ್ಷಿಸಿಯೂ ಇತ್ತು. ಅದೇ ಭಾವನೆ ಅವಳಲ್ಲಿಯೂ ಮೂಡಿದ್ದರೆ ಅಪರಾಧವೆನಿಸೀತೆ ?

ಅದೇ ಸಂಜೆ ಗುರುಕುಲದಿಂದ ಬಂದ ಕನಕಲತಾ ತಾಯಿಯ ಬಳಿ ಬಂದು—

"ಅಮ್ಮಾ, ನಿನಗೊಂದು ಹೊಸ ಸುದ್ದಿ!" ಎಂದಳು.

"ಏನು ಸುದ್ದಿಯಮ್ಮಾ ಅದು !" ಶ್ರೀದೇವಿ ಮಗಳನ್ನು ಸಹಜವಾಗಿ ಪ್ರಶ್ನಿಸಿದಳು.

"ಈ ದಿನ ಮುಂಜಾನೆ ಗುರುಕುಲದ ಕೆಲವು ಕನ್ಯೆಯರು ವಿಶಾಲಾಕ್ಷಿಯನ್ನು ಚುಡಾಯಿಸಿ ಗೇಲಿ ಮಾಡುತ್ತಿದ್ದರಮ್ಮಾ !"

"ಯಾಕಂತೆ ?" ಶ್ರೀದೇವಿ ಕೇಳಿದರು ಕುತೂಹಲದಿಂದ.

"ಮುಂಜಾನೆ ಗುರುಕುಲದ ಕೆಲವು ಕನ್ನೆಯರೊಂದಿಗೆ ವಿಶಾಲಾಕ್ಷಿ ಮಣಿಕರ್ಣಿಕೆ ಸ್ನಾನ ಘಟ್ಟದ ಹೂವಿನ ತೋಟಕ್ಕೆ ಪೂಜೆಗೆ ಹೂ ಕೊಯ್ಯಲು ಹೋಗಿದ್ದಳಂತೆ !"

"ಹೋಗಿರುವುದು ಅಸಂಭವವಲ್ಲ. ಏಕೆಂದರೆ ಈಚೆಗೆ ಮಂಚಣ್ಣನ ವೈಭವದ ಪೂಜೆಗೆ ಅನೇಕರು ಹೂ ಪತ್ರೆಗಳನ್ನು ತಂದುಕೊಡುತ್ತಿದ್ದಾರಂತೆ. ಆದರಂತೆ ಗುರುಕುಲದ ಹುಡುಗಿಯರೂ ಹೂ ತರಲು ಹೋಗಿರಬಹುದು!"

"ಅದು ಸರಿಯಮ್ಮಾ, ಅದೇ ಸಮಯಕ್ಕೆ ಅಣ್ಣನೂ ಅದೇ ಪುಷ್ಪ ವಾಟಿಕೆಯಲ್ಲಿ ಹೂ ಬಿಡಿಸುತ್ತಿದ್ದನಂತೆ !"

"ಹುಚ್ಚು ಹುಡುಗಿ, ಅದು ನಿಮ್ಮ ಅಣ್ಣನ ನಿತ್ಯಕಾರ್ಯಕ. ಏಕೆಂದರೆ ಅವನು ಪ್ರತಿದಿನವೂ ಗಂಗೆಯಲ್ಲಿ ಮಿಂದು ಅಲ್ಲಿಂದಲೇ ಹೂ ಬಿಡಿಸಿ ತರುತ್ತಿರುವುದು ! ಅದು ಎಲ್ಲರಿಗೂ ಗೊತ್ತು!"

"ಸರಿ, ಮುಂದೆ ಕೇಳಿ. ಅಣ್ಣನನ್ನು ಕಂಡು ಉಳಿದ ಹುಡುಗಿಯರೆಲ್ಲ ನಾಚಿ ಹಿಂಜರಿಯುತ್ತಿದ್ದಾಗ, ಈ ವಿಶಾಲಾ 'ಗುರುಗಳಿಗೆ ನಮಸ್ಕಾರ' ಎಂದು ಹೋಗಿ, ಅಣ್ಣನ ಕಾಲಿಗೆರಗಿದಳಂತೆ !"

"ಆಮೇಲೆ !?"

"ಅಣ್ಣ ಅವಳನ್ನು ನೋಡಿ, 'ನೀನು ಯಾರು ? ಹೆಸರು ಏನು ? ಏನು ಓದುತ್ತಿರುವೆ ?' ಎಂದನಂತೆ !"

"ಆಗ ವಿಶಾಲಾಕ್ಷಿ ತನ್ನ ತಂದೆಯ ಹೆಸರು ಹೇಳುತ್ತಿದ್ದಂತೆ ಗೆಳತಿಯರು ಚಪ್ಪಾಳೆ ತಟ್ಟಿ ನಗೆಯಾಡುತ್ತಿದ್ದುದನ್ನು ಕೇಳಿ ವಿಶಾಲಾ ಅಲ್ಲಿಂದ ಓಡಿಹೋದಳಂತೆ !"

"ಅದರಲ್ಲಿ ತಪ್ಪೇನು ? ನಿಮ್ಮ ಅಣ್ಣನಿಗೆ ಅವಳು ಯಾರು ಎಂಬುದೇನು ಗೊತ್ತು ? ಅದಕ್ಕಾಗಿ ಕೇಳಿರಬೇಕು.!"

"ಇದೇ ನೆಪವಾಗಿ ಗೆಳತಿಯರು ಅವಳನ್ನು ಗೇಲಿ ಮಾಡುತ್ತಿದ್ದರು.!"

"ಹುಡುಗಿಯರ ಸ್ವಭಾವವೇ ಹೀಗೆ."

ಎಂದುಕೊಂಡು ಶ್ರೀದೇವಿ ಒಳಗೆ ನಡೆದಳು. ಅಷ್ಟರಲ್ಲಿ ಆಚಾರ್ಯ ಶರಭಾರಾಧ್ಯರು ಮುಂಬಾಗಿಲಿಗೆ ಬಂದು,

"ಶಂಭು ಭಟ್ಟರಿದ್ದಾರೆಯೆ ?" ಎಂದು ಕೇಳಿದರು.

"ಬನ್ನಿ, ಒಳಗೆ ಕೂತುಕೊಳ್ಳಿ. ಅಪ್ಪಾಜಿಗೆ ಹೇಳುತ್ತೇನೆ"

ಎಂದು ಕನಕಾ ಒಳಹೊಕ್ಕು ತಾಯಿಗೆ ಸುದ್ದಿ ಮುಟ್ಟಿಸಿದಳು. ಶ್ರೀದೇವಿ ಭಟ್ಟರಿಗೆ ಶರಭಾರಾಧ್ಯರು ಬಂದಿರುವುದನ್ನು ಹೇಳಿ, ಕನಕಾ ತನಗೆ ತಿಳಿಸಿದ ವಿಷಯವನ್ನು ಸೂಕ್ಷ್ಮವಾಗಿ ಸೂಚಿಸಿದಳು.

ಶಂಭು ಭಟ್ಟರು ಆರಾಧ್ಯರನ್ನು ಆದರದಿಂದ ಬರಮಾಡಿಕೊಂಡರು. ಅಷ್ಟರಲ್ಲಿ ಶ್ರೀದೇವಿ ಇಬ್ಬರಿಗೂ ಬಾದಾಮಿ ಹಾಲು ತಂದಿತ್ತು—

"ಆಚಾರ್ಯರು ಅಪರೂಪಕ್ಕೆ ಬಂದಂತಾಯಿತು!" ಎಂದಳು.

"ಹೌದು ತಾಯಿ, ಈದಿನ ನನ್ನ ಮನಸ್ಸಿಗೆ ನಮ್ಮ ಚಿರಂಜೀವಿಗಳ ಬಗ್ಗೆ ಹೊಳೆದ ಒಂದು ವಿಷಯುವನ್ನು ನಿಮ್ಮ ಗಮನಕ್ಕೆ ತರಲು ಬರಬೇಕಾಯಿತು!"

"ಬಹಳ ಸಂತೋಷ, ಹೇಳಿ" ಎಂದು ಭಟ್ಟರು ದನಿಗೂಡಿಸಿದರು.

"ಚಿರಂಜೀವಿ ಮಂಜಣ್ಣ ಮತ್ತು ಅವನ ಅರ್ಚನೆಗಳ ವಿಷಯ ಸದ್ಯಃ ಜನತೆಯಲ್ಲಿ ಒಳ್ಳೆ ಸುದ್ದಿಯಾಗಿರುವುದು ನನಗೆ ತುಂಬಾ ಸಂತೋಷ! ಈಚೀಚೆಗೆ ನಮ್ಮ ಕುಮಾರಿ ವಿಶಾಲಾಕ್ಷಿಯೂ ಆ ಪೂಜೆಯಲ್ಲಿ ತುಂಬಾ ಭಕ್ತಿ ಶ್ರದ್ಧೆಗಳಿಂದ ಭಾಗವಹಿಸುತ್ತಿದ್ದಾಳೆ. ಮೇಲಾಗಿ ಅವರಲ್ಲಿ ಪರಸ್ಪರ ಪ್ರೇಮಾಂಕುರದ ಸೂಚನೆಗಳೂ ಕಾಣುತ್ತಿವೆ ಎಂಬುದು ಕರ್ಣಾಕರ್ಣಿಕೆಯಿಂದ ಕೇಳಿಬರುತ್ತಿವೆ. ನಿಮ್ಮ ಒಪ್ಪಿಗೆಯಾದರೆ ಈ ಶುಭಕಾರ್ಯವನ್ನು ವಿಶ್ವನಾಥನ ಸನ್ನಿಧಿಯಲ್ಲಿಯೇ ನೆರವೇರಿಸಬಾರದೇಕೆ ?"

ಎಂದು ಆರಾಧ್ಯರು ಭಟ್ಟರ ಮುಂದೆ ತಮ್ಮ ಸಮ್ಮತಿ ವ್ಯಕ್ತಪಡಿಸಿದರು.

"ಬಹಳ ಸಂತಸದ ವಿಚಾರ! ನಿಮ್ಮಲ್ಲಿ ಸಂಬಂಧ ಬೆಳೆಸುವ ವಿಷಯದಲ್ಲಿ ನಮಗೆಲ್ಲ ಸಮ್ಮತ. ಮೇಲಾಗಿ ಚಿ. ಮಂಜಣ್ಣ ನಿಮ್ಮ ಖಾಸಾ ಶಿಷ್ಯ. ಆತನ ಬಗೆಗೆ ತಾವು ಯೋಚಿಸಿದ್ದು ತುಂಬಾ ಸಂಗತವಾಗಿದೆ. ನಾನು ಈ ಸಲ ಬೇಸಗೆಗೆ ತೀರ್ಥರೂಪರಲ್ಲಿಗೆ ಹೋಗಿಬರುವ ಸಂಕಲ್ಪ ಮಾಡಿದ್ದೇನೆ. ಅಲ್ಲಿ ಅವರ ಅನುಮತಿ ಪಡೆದು ಬರುತ್ತೇನೆ. ಅನಂತರ ಈ ಶುಭ ಕಾರ್ಯವನ್ನು ನೆರವೇರಿಸಿದರಾಯಿತು!"

ಎಂದು ಶಂಭು ಭಟ್ಟರು ಸಂತೋಷದಿಂದ ಆರಾಧ್ಯರನ್ನು ಬೀಳ್ಕೊಟ್ಟರು.



೯

# ಕೋಶ ಓದು ! ದೇಶ ನೋಡು :

೧

'ಕಣ್ಣರಿಯದುದನ್ನು ಕರುಳರಿಯಿತು' ಎಂಬ ಗಾದೆ ಶಂಭು ಭಟ್ಟರು ಮತ್ತು ಗುರುಲಿಂಗಾರಾಧ್ಯರ ಮುದಿಗೊಂಡದ ಆಕಸ್ಮಿಕ ಸಮಾಗಮಕ್ಕೆ ಬಹು ಸುಂದರವಾಗಿ ಅನ್ವಯಿಸುತ್ತದೆ. ಶ್ರೀಪತಿಗೆ ತನ್ನ ಪರೀಕ್ಷೆಯ ಫಲಿತಾಂಶ ಪ್ರಕಟವಾದ ಕೂಡಲೇ ಶಂಭುಮಾವನಿಗೆ ಈ ವಿಷಯ ಮೊಡಲು ತಿಳಿಸಬೇಕು ಎಂದು ಹೊಳೆದಿತ್ತು. ಅದರಂತೆ ಶರಭಾರಾಧ್ಯರು ತಮ್ಮ ಈ ಉಭಯ ಚಿರಂಜೀವಿಗಳ ಶುಭಕಾರ್ಯದ ಸಲಹೆ ನೀಡಿದಾಗ ಶಂಭು ಭಟ್ಟರಿಗೂ ಮುದಿಗೊಂಡಕ್ಕೆ ಹೋಗಿ ಬರುವ ಅಗತ್ಯ ನೆನಪಿಗೆ ಬಂದಿತ್ತು.

ತಾನು ತವರಿಗೆ ಬಂದ ಒಂದೆರಡು ದಿನದೊಳಗೆ ಕಾಶಿಯಿಂದ ಅಣ್ಣ ಮಗಳು ಕನಕಲತೆಯೊಂದಿಗೆ ಬಂದದ್ದು ಭಾಗೀರಥಿಗೆ ಅಮಿತಾನಂದವನ್ನು ಉಂಟು ಮಾಡಿತು. ಶಂಭುವಿಗಂತೂ ತಾನು ಬರುವ ವೇಳೆಗೇ ಅಕ್ಕ-ಭಾವ ಶ್ರೀಪತಿಯೊಂದಿಗೆ ಮುದಿಗೊಂಡಕ್ಕೆ ಬಂದಿದ್ದುದು "ಕಾಕತಾಳೀಯ" (ಕಾಗೆ ಬರುವುದು, ಅದೇವೇಳೆಗೆ ತಾಳೆ ಹಣ್ಣು ಕೆಳಗೆ ಬೀಳುವುದು) ದಂತೆ ಆಗಿತ್ತು. ಆಕಸ್ಮಿಕವಾಗಿ ಒದಗಿ ಬಂದ ಈ ಘಟನೆಯನ್ನು ದೇಶಿಕರು 'ದೈವಚಿತ್ತ'ವೆಂದು ಬಣ್ಣಿಸಿದ್ದು ಸಹಜವಾಗಿಯೇ ಇತ್ತು.

ಆರಾಧ್ಯರು ಶಂಭುವನ್ನು ಭುಜ ತಟ್ಟಿ "ಏನಯ್ಯಾ, 'ನೆನೆದವರ ಮನದಲ್ಲಿ' ಎಂಬಂತೆ ಪ್ರತ್ಯಕ್ಷನಾದೆ ! ಎಲ್ಲರೂ ಕ್ಷೇಮ ತಾನೆ ?" ಎಂದು ಪರಸ್ಪರ ಗಾಢಾಲಿಂಗನ ಮಾಡಿದರು.

ಶ್ರೀಪತಿ ಹಿಂದೆ ಕಂಡಿದ್ದ ಬಾಲಕನಲ್ಲ. ಈಗ ಅವನು ಹನ್ನೆರಡು ತುಂಬಿದ ಸುಕುಮಾರ! ಪ್ರಾಥಮಿಕ ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಪ್ರೌಢವಿದ್ಯಾಭ್ಯಾಸಕ್ಕೆ ಅರ್ಹತೆ ಪಡೆದಿರುವ ಅಭ್ಯರ್ಥಿ ಅವನು!

ಶ್ರೀಪತಿಗೆ ಶಂಭುಮಾವನನ್ನು ನೋಡಿ 'ತಾತ, ಮಾವ ಬಂದರು!' ಎಂದು ಚಪ್ಪಾಳೆ ತಟ್ಟುತ್ತಾ ಕುಣಿದಾಡಬೇಕೆನಿಸಿತ್ತು. ಆದರೆ, ಮಾವನ ಜೊತೆ ಒಬ್ಬ ಅಪರಿಚಿತ ಹೆಣ್ಣು ಹುಡುಗಿ ಇದ್ದುದರಿಂದ ಅವನು ಗಾಂಭೀರ್ಯ ತಳೆದು ಸುಮ್ಮನಾದ!

ಮಣಿಕರ್ಣಿಕೆ-ಭಾಗೀರಥಿಯರು ಅವಳನ್ನು ಒಳಗೆ ಕರೆದು ಉಪಚರಿಸುತ್ತಿದ್ದರು. ಭಾಗೀರಥಿ ಶ್ರೀಪತಿಯನ್ನು ಒಳಗೆ ಕರೆದು

"ಮಾವನ ಮಗಳು ಕಣೊ! ಕನಕಲತೆ. ಅವಳೂ ಓದುತ್ತಿದ್ದಾಳೆ." ಎಂದು ಪರಿಚಯಿಸಿದಳು. ಮಣಿಕರ್ಣಿಕೆ ಕನಕಳನ್ನು ಕುರಿತು "ಅಮ್ಮ-ಅಣ್ಣ ಹೇಗಿದ್ದಾರಮ್ಮ?" ಎಂದು ಕ್ಷೇಮ ಸಮಾಚಾರ ವಿಚಾರಿಸಿದಳು. ಕನಕೆಗೆ ಶ್ರೀಪತಿಯದು ಹೊಸ ಪರಿಚಯ! ಅವನನ್ನು ಮಾತನಾಡಿಸಲು ಸಂಕೋಚ! ಆದರೂ ಶ್ರೀಪತಿ ಅವಳ ಕೈ ಹಿಡಿದು "ಏನು ಓದುತ್ತಿದ್ದೀಯಾ? ಎಂದು ಕೇಳಿದಾಗ ಕನಕಾಳ ಮೈ ಬೆವತಿತ್ತು. ಅವನಿಂದ ಅವಳು ಕೈ ಬಿಡಿಸಿಕೊಂಡು ಅಜ್ಜಿಯ ಹಿಂದೆ ಹೋಗಿ ಅವಿತುಕೊಂಡಳು! ಅಜ್ಜಿ 'ಕನಕಾ, ಪತಿ ನಿನ್ನ ಖಾಸಾ ಅತ್ತೆಯ ಮಗ ಕಣೆ' ಎಂದು ಅವಳನ್ನು ಎತ್ತಿಕೊಂಡು ರಮಿಸಿದಳು.

ದೇಶಿಕರು ಮತ್ತು ಆರಾಧ್ಯರು ಎಲ್ಲ ಚಿರಂಜೀವಿಗಳ ಮಧುರ ಸಂಭಾಷಣವನ್ನು ಕೇಳುತ್ತಾ ಆನಂದದ ಕಡಲಿನ ಬೆಳ್ದೆರೆಗಳಲ್ಲಿ ತೇಲುತ್ತಿದ್ದರು.

ಶ್ರೀಪತಿ ಕನಕಳನ್ನು ಕರೆದೊಯ್ದು ತಾನು ಐದಾರು ವರ್ಷಗಳ ಹಿಂದೆ ಇಲ್ಲಿಗೆ ಬಂದಿದ್ದುದಾಗಿಯೂ, ಇಲ್ಲಿನ ಬೆಟ್ಟದ ಮೇಲೆ ದೇವಾಲಯ, ದೊಣೆ, ಜಾರುಬಂಡೆಗಳಿರುವುದಾಗಿಯೂ ತಾನಲ್ಲಿ ಈಜು ಕಲಿತದ್ದು ಮುಂತಾದ ಅನುಭವಗಳನ್ನು ಹೇಳಿ, ನಾಳೆ ವಿಶ್ವಮಾವನ ಜೊತೆ ಅಲ್ಲಿಗೆ ಹೋಗೋಣವೆಂದು ಹೇಳಿ ಅವಳ ಕುತೂಹಲವನ್ನು ಕೆರಳಿಸಿದ್ದ.

ಭಾಗೀರಥಿ ತಾಯಿಗೆ ಆಯಾಸವಾಗುವುದು ಬೇಡ! ಎಂದು ತಾನೇ ಅಡಿಗೆಮನೆ ಅಧಿಕಾರ ವಹಿಸಿಕೊಂಡಳು. ರಾತ್ರಿ ಪ್ರಸಾದದ ತರುವಾಯ ಎಲ್ಲರೂ ವಿಶ್ರಮಿಸಿದರು.

ಮುಂಜಾನೆ ದೇಶಿಕರು ಮಗ ಮತ್ತು ಅಳಿಯಂದಿರೊಡನೆ ತೋಟದ ಹಾದಿ ಹಿಡಿದರು. ವಿಶ್ವ ಮಡಿಮಾಡುವ ವಸ್ತ್ರಗಳನ್ನು ತೆಗೆದುಕೊಂಡು ನದಿಯಲ್ಲಿ ಮಡಿಮಾಡಿ, ಹೂ ಪತ್ರೆಗಳನ್ನು ಬಿಡಿಸಿಕೊಂಡು ಬಂದು ಮನೆಯ ಹಿತ್ತಲಿನಲ್ಲಿ ಕಟ್ಟಿದ್ದ ಹಗ್ಗಗಳ ಮೇಲೆ ಒದ್ದೆ ಬಟ್ಟೆಗಳನ್ನು ಒಣ ಹಾಕುತ್ತಿದ್ದ. ಅಷ್ಟರಲ್ಲಿ ಭಾಗೀರಥಿ ಹುಡುಗರಿಗೆ ಸ್ನಾನಮಾಡಿಸಿ ಅಡಿಗೆಮನೆ ಸೇರಿದ್ದಳು.

ದೇಶಿಕರು ಮನೆಗೆ ಹಿಂದಿರುಗಿ, ಅಂಗಳದಲ್ಲಿ ಕುಳಿತು ಲೋಕಾಭಿರಾಮವಾಗಿ ಮಾತುಕತೆ ನಡೆಸಿದ್ದರು. ಅಷ್ಟರಲ್ಲಿ ವಿಶ್ವ ಸ್ನಾನ ಮಡಿ ಮಾಡಿಕೊಂಡು ಬೆಟ್ಟಕ್ಕೆ ಹೊರಟುನಿಂತು ತಂದೆ ಭಾವಂದಿರಿಗೆ ವಂದಿಸಿದ. ಅಷ್ಟರಲ್ಲಿ ಶ್ರೀಪತಿ "ತಾತ, ನಾನೂ ಕನಕಾ ವಿಶ್ವಮಾವನ ಜೊತೆ ಬೆಟ್ಟಕ್ಕೆ ಹೋಗಿಬರುತ್ತೇವೆ" ಎಂದ.

ಆರಾಧ್ಯರು ಮಧ್ಯೆ ಬಾಯಿ ಹಾಕಿ, "ನೀನು ಬೇಕಾದರೆ ಹೋಗು, ಅವಳೇತಕ್ಕೆ, ಮರಿ ?" ಎಂದು ಪ್ರಶ್ನಿಸಿದರು. ಆದರೆ ದೇಶಿಕರು "ವಿಶ್ವಾ, ಜೋಪಾನವಪ್ಪ, ಕನಕಾಗೆ ಇದು ಹೊಸ ಜಾಗ! ದೊಣೆ ಬಳಿ ಎಚ್ಚರವಾಗಿ ನೋಡಿಕೊ !" ಎಂದು ಸೂಚಿಸಿದರು.

ತಂದೆಯುವರು ತನ್ನ ಬಯಕೆಯನ್ನು ಹತ್ತಿಕ್ಕಿದರೂ ತಾತ ತನ್ನ ಹಂಬಲನ್ನು ಈಡೇರಿಸಿದ್ದಕ್ಕಾಗಿ ಶ್ರೀಪತಿ ಕೃತಜ್ಞತೆಯಿಂದ ತಾತನಿಗೆ, ಅನಂತರ ತಂದೆ-ಮಾವನವರಿಗೂ ವಂದಿಸಿ ವಿಶ್ವನನ್ನು ಹಿಂಬಾಲಿಸಿದ.

ಶ್ರೀಪತಿ ಕನಕಲತೆಯರು ಪರಸ್ಪರ ಸಲುಗೆಯಿಂದ ಮಾತನಾಡುತ್ತಾ ಬೆಟ್ಟವೇರಿದರು. ವಿಶ್ವ ದೇವಾಲಯದ ಬೀಗ ತೆಗೆದು ಮೊದಲು ಅಲ್ಲಿ ಕಸ ಗೂಡಿಸಿ, ಸಾರಿಸಿ, ಪಾತ್ರೆಗಳನ್ನು ಶುಚಿಗೊಳಿಸಿ, ಮಡಿವಸ್ತ್ರಗಳನ್ನು ತೆಗೆದುಕೊಂಡು ದೊಣೆಗೆ ಸ್ನಾನಕ್ಕಿಳಿದ.

ಅಷ್ಟರಲ್ಲಿ ಶ್ರೀಪತಿ ಕನಕಳಿಗೆ ದೇವಾಲಯದ ಪರಿಸರವನ್ನೆಲ್ಲ ಪರಿಚಯಿಸಿ ಹಿಂದಿರುಗಿ ಬಂದಿದ್ದ. ವಿಶ್ವನು ಸ್ನಾನವಸ್ತ್ರ ಧರಿಸಿ ದೊಣೆಗಿಳಿದು

ಈಜತೊಡಗಿದಾಗ ಪತಿಯೂ ಅವನನ್ನು ಹಿಂಬಾಲಿಸಿ ನೀರಿಗೆ ಧುಮುಕಿದ. ಅವನು ದೋಣೆಯಲ್ಲಿ ಈಜಿದುದನ್ನು ನೋಡುತ್ತಿದ್ದ ಕನಕೆಗೆ ಕುತೂಹಲ ಕೆರಳಿತ್ತು. ಆದರೆ ಶ್ರೀಪತಿ "ಮಾವ, ಕಳೆದ ಸಲ ನಾನು ಇಲ್ಲಿಗೆ ಬಂದಿದ್ದಾಗ ದೊಡ್ಡಮಾವ ನನಗೆ ಈಜು ಕಲಿಸಿದರು". ಈಗ ಕನಕಾಗೆ ನೀವು ಕಲಿಸಿರಿ! ಎಂದು ಹೇಳಿ ಕನಕೆಯನ್ನು ಈಜು ಕಲಿಯಲು ಪ್ರೋತ್ಸಾಹಿಸಿದ! ಕನಕ ಸಂಕೋಚಪಡುತ್ತಿದ್ದಾಗ ವಿಶ್ವಣ್ಣನೇ ಅವಳ ಕೈ ಹಿಡಿದು "ಬಾಮ್ಮ, ಹೆದರಬೇಡ! ನಾನು ಸುಲಭವಾಗಿ ಈಜು ಕಲಿಸುತ್ತೇನೆ." ಎಂದು ದೋಣೆಯ ನೀರಿನ ಮೇಲೆ ತನ್ನ ತೋಳುಗಳನ್ನು ಚಾಚಿ ಅವುಗಳ ಮೇಲೆ ಕನಕಳನ್ನು ಬೋರಲಾಗಿ ಮಲಗಿಸಿಕೊಂಡು ಈಜಲು ಹೇಳಿದ. ಶ್ರೀಪತಿ–"ಕನಕಾ, ಎರಡೂ ಕೈಗಳಿಂದ ನೀರನ್ನು ಹೊಟ್ಟೆಯ ಕೆಳಗೆ ಎಳೆಯುತ್ತಾ ಕಾಲು ಜೋಡಿ! ಬಾಯಿಗೆ ಬಂದ ನೀರನ್ನು ಹೊರಗೆ ಉಗುಳುತ್ತಿದ್ದರೆ ಆಯಾಸವಾಗುವುದಿಲ್ಲ!" ಎಂದು ಅವಳಿಗೆ ಎಚ್ಚರಿಕೆ ಕೊಡುತ್ತಿದ್ದ.

ವಿಶ್ವಣ್ಣನ ತೋಳುಗಳ ಮೇಲೆ ಮಲಗಿದ ಅವಳಿಗೆ ಭಯಕ್ಕೆ ಕಾರಣವಿರಲಿಲ್ಲ. ಹೀಗೆ ಎರಡು ಮೂರು ಸುತ್ತು ದೋಣೆಯನ್ನು ಬಳಸಿದ ಮೇಲೆ ಕನಕೆಗೆ ಭಯಬಿಟ್ಟು ಅವಳು ತಾನೆ ನೀರಿನ ಮೇಲೆ ಈಜಲು ಪ್ರಯತ್ನಿಸುತ್ತಿದ್ದಳು. ಅಷ್ಟರಲ್ಲಿ ವಿಶ್ವಣ್ಣ ಇಂದು ಇಷ್ಟು ಸಾಕು; ನಾಳೆ ಮತ್ತೆ ಈಜಬಹುದು ಎಂದು ಅವಳನ್ನು ದಡಕ್ಕೆ ಕಳುಹಿಸಿದ. ಶ್ರೀಪತಿ ಮಾತ್ರ ವಿಶ್ವಮಾವನ ಜೊತೆ ದೋಣೆಯಿಂದ ಹೊರಕ್ಕೆ ಬರದೆ ತುಂಬಾ ಹೊತ್ತು ತಾನು ಕೃಷ್ಣಾನದಿಯಲ್ಲಿ ಈಜಿಗೆ ಅಭ್ಯಾಸ ಮಾಡಿಕೊಂಡಿದ್ದ ಈಜುವ ವಿವಿಧ ಪ್ರಕಾರಗಳನ್ನು ಪ್ರದರ್ಶಿಸುತ್ತಿದ್ದ. ಅದನ್ನೆಲ್ಲ ದಡದ ಮೇಲೆ ನಿಂತು ನೋಡುತ್ತಿದ್ದ ಕನಕಾಗೆ ತಾನೂ ಅವನಂತೆ ಈಜಬೇಕೆಂಬ ಕುತೂಹಲ ಕೆರಳಿದ್ದರೆ ಹೆಚ್ಚಲ್ಲ!

ಅಷ್ಟರಲ್ಲಿ ವಿಶ್ವಮಾವ "ಪತಿ, ಬೇಗ ಬಾ, ಪೂಜಾಕ್ಕೆ ಹೊತ್ತಾಗುತ್ತೆ!" ಎಂದಾಗ ಪತಿ ದೋಣೆಯಿಂದ ಹೊರಬಂದು ಮಡಿವಸ್ತ್ರ ಧರಿಸಿ, ಮಾವನ ಜೊತೆ ಪೂಜೆಗೆ ಕುಳಿತ. ಇಬ್ಬರೂ ಸಂಧ್ಯಾವಂದನೆ, ಇಷ್ಟಲಿಂಗಾರ್ಚನೆಗಳನ್ನು ಮುಗಿಸಿ, ಸ್ವಾಮಿಯ ಅಭಿಷೇಕವನ್ನು ಆರಂಭಿಸಿ

ದರು. ಕನಕೆಯೂ ತಾನೂ ಭಸ್ಮಧಾರಣ ಮಾಡಿಕೊಂಡು ಕೈ ಜೋಡಿಸಿ ಅವರ ಹಿಂದೆ ಕುಳಿತಳು. ರುದ್ರಾಭಿಷೇಕ, ಏಕೋತ್ತರ ಶತನಾಮ ಪೂಜೆಗಳನ್ನು ಮಾಡಿದ ಮೇಲೆ ಅಗ್ನಿಕಾರ್ಯವನ್ನು ವಿಶ್ವ ನೆರವೇರಿಸಿದ. ಪೂಜೆ ಮುಗಿಸಿ, ವಿಶ್ವ ತಾನು ತಂದಿದ್ದ ಹಾಲು-ತುಪ್ಪ,ನೈವೇದ್ಯ-ಫಲ ಮುಂತಾದುವನ್ನು ಸ್ವಾಮಿಗೆ ಸಮರ್ಪಿಸಿದ. ಪ್ರಸಾದವನ್ನು ಹಂಚಿಕೊಂಡು ಮೂವರೂ ಸೇವಿಸಿದರು. ಅನಂತರ ಎಲ್ಲರೂ ಮನೆ ದಾರಿ ಹಿಡಿದರು. ಕನಕಳನ್ನು ದೊಣೆಯಲ್ಲಿ ಈಜಿಸಿದ ವಿಷಯ ಕೇಳಿ ಅಜ್ಜಿ ಅತ್ತೆ ಅಚ್ಚರಿಗೊಂಡರು.

ಹೀಗೆ ಸುಮಾರು ಎಂಟು ಹತ್ತು ದಿನಗಳವರೆಗೆ ಕನಕಾ ಶ್ರೀಪತಿ ಜೊತೆ ಬೆಟ್ಟ ಹತ್ತಿ, ನಿರ್ಭಯವಾಗಿ ದೊಣೆಯಲ್ಲಿ ಈಜುವುದನ್ನು ಕಲಿತಳು. ಒಂದು ದಿನ ವಿಶ್ವಣ್ಣ ಇಬ್ಬರನ್ನೂ ಬೆಟ್ಟದ ಕುಂಬಿ (ನೆತ್ತಿ)ಯುವರೆಗೂ ಕರೆದೊಯ್ದಿದ್ದ. ಬೆಟ್ಟದ ತುದಿಯಿಂದ ಕೆಳಕ್ಕೆ ನೋಡಿದಾಗ ಕನಕಳಿಗೆ ಆದ ಅನುಭವ ಹೊಚ್ಚಹೊಸತು. ಅವಳಿಗೆ ಪ್ರತಿದಿನವೂ ಬೆಟ್ಟದ ತುದಿಗೇರಿ ಅಲ್ಲಿಂದ ಸುತ್ತುಮುತ್ತು ನೋಡಿ ಆನಂದಿಸುವ ಕುತೂಹಲ ಅಮಿತವಾಗಿತ್ತು. ಆದರೆ, ಚಿಕ್ಕಪ್ಪನು ಅದಕ್ಕೆಲ್ಲ ಅವಕಾಶ ಕೊಡಲಿಲ್ಲ !

ಶ್ರೀಪತಿಯು ಪ್ರತಿದಿನ ಮಾವನನ್ನು ಜೇನು ಕೀಳಲು ಪ್ರೇರೇಪಿಸಿ, ಎಂಟು ಹತ್ತು ಸೀಸೆ ಜೇನು ಸಂಗ್ರಹಿಸಿದ್ದ. ಈ ಮಧ್ಯೆ ಕನಕಾ–ಶ್ರೀಪತಿಯರಲ್ಲಿ ಸಲಿಗೆ ಬೆಳೆದಿತ್ತು' ಕನಕಾ ಹೇಳಿದಳು.

"ಶ್ರೀಪತಿ, ನನಗೆ ಈ ಕಡೆಯಲ್ಲೆಲ್ಲ ಸಂಚರಿಸಿ ಪ್ರೇಕ್ಷಣೀಯ ಸ್ಥಳಗಳನ್ನು ನೋಡುವ ಆಸೆಯಾಗಿದೆ" ಎಂದಳು. ಶ್ರೀಪತಿಗೂ ಅದೇ ಬೇಕಾಗಿತ್ತು. ಈಗ ಕನಕಾ ಅದನ್ನೇ ಬಯಸಿದ್ದು ಅವನಿಗೆ ತನ್ನ ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತೆ ಆಗಿತ್ತು. ಶ್ರೀಪತಿ ಕನಕಳ ಆಸೆಯನ್ನು ತಂದೆಯವರ ಗಮನಕ್ಕೆ ತಂದೂ ಬಿಟ್ಟ.

"ಅಣ್ಣ, ಮನೆ ಬಿಟ್ಟು ಬಂದು ತುಂಬಾ ದಿನವಾಯಿತು. ನಾಳೆ ನೀನೂ ಕನಕಾ ಜೊತೆ ಬೆಜವಾಡಕ್ಕೆ ಬರಬೇಕು" ಎಂದು ಭಾಗೀರಥಿ

ವಿನಂತಿಸಿದಳು. ಆರಾಧ್ಯರೂ ಅವಳೊಡನೆ ದನಿಗೂಡಿಸಿ ಹೇಳಿದರು. ಶಂಭೂಗೆ—

"ಅಪ್ಪ, ಕನಕ ಬೆಜವಾಡ ಮತ್ತು ಅದರ ಸುತ್ತು ಮುತ್ತಿನ ಪ್ರೇಕ್ಷಣೀಯ ಸ್ಥಳಗಳನ್ನು ನೋಡಬೇಕೆಂದು ಪತಿಗೆ ತಿಳಿಸಿದ್ದಾಳಂತೆ ! ಮಕ್ಕಳ ಕುತೂಹಲವನ್ನು ನಾವು ಹತ್ತಿಕ್ಕುವುದು ಸರಿಯಲ್ಲ. ನಿನಗೆ ಹೇಗೂ ಎರಡು ತಿಂಗಳು ರಜೆ ಇದೆ. ಕಾರಣ, ನನಗೂ ಬಿಡುವು ಇದೆ. ನಾಳೆಯೇ ಬೆಜವಾಡಕ್ಕೆ ಹೊರಡೋಣ !" ಎಂದರು. ತಂಗಿ-ಭಾವರ ಮಾತು ಮೀರುವಂತಿರಲಿಲ್ಲ ಶಂಭೂಗೆ. ಪ್ರತಿ ಆಡಲು ಅವಕಾಶವಿಲ್ಲದೆ 'ತಥಾಸ್ತು' ಎಂದ ಶಂಭು.

ಮರುದಿನ ರಾಮುಡು ಗಾಡಿ ಕಟ್ಟಿದ. ದೇಶಿಕರು ಮತ್ತು ಮಣಿಕರ್ಣಿಕೆಯರು ಊರ ಮುಂದಿನವರೆಗೂ ಬಂದು ಎಲ್ಲರನ್ನೂ ಬೀಳ್ಕೊಟ್ಟರು.

೨

ಅದೇ ಸಂಜೆಗೆ ಗಾಡಿಯಲ್ಲಿ ಎಲ್ಲರೂ ಬೆಜವಾಡ ಸೇರಿದರು. ಬುದ್ಧಿಯುವರು ಊರಿನಲ್ಲಿಲ್ಲದಾಗ ಮನೆಯ ಉಸ್ತುವಾರಿ ನೋಡುತ್ತಿದ್ದವರು ಶಿವಶಂಕರ ಮತ್ತು ವೆಂಕಟಮ್ಮ.

ಶಿವಶಂಕರ ನಾಟಕಾಂತ ಸಾಹಿತ್ಯ ಪರೀಕ್ಷೆಯಲ್ಲಿ ಈ ಸಲ ಉತ್ತೀರ್ಣನಾಗಿ ಬುದ್ಧಿಯುವರ ಆಣತಿಯಂತೆ ಮಲ್ಲೇಶ್ವರಸ್ವಾಮಿಯ ಕೈಂಕರ್ಯದ ಹೊಣೆ ಹೊತ್ತಿದ್ದ.

ಊರಿಗೆ ಬಂದಮೇಲೆ ಶ್ರೀಪತಿಯದೇ ಪಾರುಪತ್ಯ ! ಉಪಾಹಾರ ಮುಗಿದ ಮೇಲೆ ಅವನು ಕನಕಳ ಜೊತೆ ಇಂದ್ರಕೀಲ, ತೋಟ, ಕೃಷ್ಣೆಯಲ್ಲಿನ ಈಜಾಟಗಳಲ್ಲಿ ಒಂದು ವಾರದವರೆಗೆ ಸುತ್ತಾಡಿ ನಗರದ ಮುಖ್ಯಸ್ಥಳಗಳನ್ನೆಲ್ಲ ಕನಕಲತೆಗೆ ಪರಿಚಯ ಮಾಡಿಕೊಟ್ಟ !

ಆ ದಿನ ಸಂಜೆ ಬೆಜವಾಡದ ಸುತ್ತುಮುತ್ತಿನ ಐತಿಹಾಸಿಕ ಪ್ರೇಕ್ಷಣೀಯ ಸ್ಥಳಗಳ ಪ್ರಶ್ನೆ ಬಂದಾಗ ಆರಾಧ್ಯರು—

"ಇಲ್ಲಿಗೆ ಹತ್ತಿರದಲ್ಲಿ ಅಮರಾವತಿ, ನಾಗಾರ್ಜುನ ಕೊಂಡ, ಮಹಾಬಲಿಪುರ, ದೇವರಕೊಂಡ ಮುಂತಾದ ಸ್ಥಳಗಳು ಬೇಕಾದಷ್ಟಿವೆ!" ಎಂದರು.

"ಆದರೆ, ಭಾವ ನನಗಿರುವುದು ಎರಡು ತಿಂಗಳ ರಜೆ. ಈಗಾಗಲೇ ಅದರಲ್ಲಿ ಹದಿನೈದು ದಿನಗಳು ಮುಗಿದಿವೆ. ಮೇಲಾಗಿ ವೈಶಾಖ ಶುದ್ಧ ಬಿದಿಗೆ ಮಂಚಣ್ಣನ ಮದುವೆಯ ನಿಶ್ಚಯ ಕಾರ್ಯ ಏರ್ಪಡಬೇಕಾಗಿದೆ. ಅದಕ್ಕಾಗಿ ನಾನು ಹದಿನೈದು ದಿನ ಮುಂಚೆಯಾದರೂ ಕಾಶಿಯಲ್ಲಿರಬೇಕು. ಸದ್ಯಃ ಇಲ್ಲಿಗೆ ಸಮೀಪದ ಅಮರಾವತಿ ಮತ್ತು ನಾಗಾರ್ಜುನ ಕೊಂಡಗಳನ್ನು ಮಾತ್ರ ಇಟ್ಟುಕೊಳ್ಳೋಣ" ಎಂದು ಶಂಭು ತನ್ನ ಅನಿವಾರ್ಯತೆಯನ್ನು ಸೂಚಿಸಿದ.

"ಆಗಬಹುದು, ಎಲ್ಲ ಸ್ಥಳಗಳನ್ನೂ ಸಾಂಗವಾಗಿ ನೋಡಬೇಕೆಂದರೆ ಒಂದೆರಡು ತಿಂಗಳಾದರೂ ಬೇಕಾಗುತ್ತೆ. ಇನ್ನು ಇಲ್ಲಿಂದ ಮುದಿಗೊಂಡಕ್ಕೆ ಹೋಗಿ, ಅಲ್ಲಿಂದ ನೀವು ಅಪ್ಪಾಜಿಯವರ ಅನುಮತಿ ಪಡೆದು, ಕಾಶೀ ಸೇರುವವರೆಗೆ ನೋಡಬೇಕಾದ ಸ್ಥಳಗಳು ಕಡಮೆ ಇವೆಯೆ ?"

ಎಂದರು ಆರಾಧ್ಯರು ದೂರಾಲೋಚನೆ ಮಾಡಿ.

"ಎರಡನೆಯದಾಗಿ ಪ್ರೇಕ್ಷಣೀಯ ಸ್ಥಳಗಳ ಸಂಪರ್ಕವುಳ್ಳ ಮಾರ್ಗದರ್ಶಿಯೊಬ್ಬರಿಲ್ಲದಿದ್ದರೆ ನಮ್ಮ ಪ್ರವಾಸ ಫಲಿಸುವುದಿಲ್ಲ. ಹಾಗಿಲ್ಲದೆ ನಾವೇ ತಿರುಗಾಡಿದರೆ ಕೇವಲ ಬೆಟ್ಟ-ಗುಡ್ಡ ತಿರುಗಿ ಸುಮ್ಮನೆ ಮೈನೋವು ಮಾತ್ರ. ಅದು ಪ್ರವಾಸಕ್ಕೆ ಬದಲು ಪ್ರಯಾಸವೇ ಆಗುತ್ತೆ. ಅಂಥವರೊಬ್ಬರನ್ನು ಹೊಂಚುವುದು ತಾನೇ ಹೇಗೆ ?" ಎಂದರು ಶಂಭು ಸಂದೇಹ ಸೂಚಿಸಿ.

ಅದಕ್ಕೆ ಆರಾಧ್ಯರು "ಶಂಭು ಮೇಲೆ ಹೇಳಿದ ಸ್ಥಳಗಳು ಅಭುಕ್ತ ಮೂಲೆಯಲ್ಲಿರುವ ಅಜ್ಞಾತ ಸ್ಥಳಗಳೇನಲ್ಲ. ಈಚೆಗೆ ನಮ್ಮ ಇಂದ್ರಕೀಲ, ಅಮರಾವತಿ, ನಾಗಾರ್ಜುನ ಕೊಂಡ ಮುಂತಾದ ಸ್ಥಳಗಳು ಅಂತರರಾಷ್ಟ್ರೀಯ ಪ್ರಖ್ಯಾತಿ ಪಡೆದಿವೆ. ಪ್ರತಿನಿತ್ಯವೂ ಅಲ್ಲಲ್ಲಿಗೆ ಹೋಗಿಬರುವ

ಯಾತ್ರಿಕರು ಹೇರಳವಾಗಿರುತ್ತಾರೆ. ನಿಮಗೆ ದಾರಿಯಲ್ಲಿಯೇ ಅಂತಹ ಮಾರ್ಗದರ್ಶಿ ಸಿಕ್ಕೇ ಸಿಕ್ಕುತ್ತಾರೆ!" ಎಂದರು ನಿರ್ಧಾರ ಗತ್ತಿನಲ್ಲಿ.

ಪ್ರೇಕ್ಷಣೀಯ ಸ್ಥಳಗಳನ್ನು ನೋಡಲು ಅಣ್ಣನ ಜೊತೆ ಮಕ್ಕಳನ್ನು ಕಳಿಸುವುದು.ಮತ್ತು ಶ್ರೀಪತಿಯ ಕಾಶೀ ಪ್ರಯಾಣ ನಿರ್ಧಾರವಾದ ಮೇಲೆ ಈ ಬೀಳ್ಕೊಡುಗೆಗಳು ಎದುರಾಗಿ ಭಾಗೀರಥಿಗೆ ಕಳವಳಕ್ಕಿಟ್ಟುಕೊಂಡಿತ್ತು. ರಾತ್ರಿಯೆಲ್ಲ ಶ್ರೀಪತಿಯ ಅಗಲಿಕೆಯಿಂದ ತಾನು ದಿನಗಳೆವುದು ಹೇಗೆ ? ಎಂಬ ಯೋಚನೆ ಅವಳನ್ನು ಚುಚ್ಚತೊಡಗಿತ್ತು.

ಉಪನಯನಕ್ಕೆ ಬಂದಿದ್ದಾಗಲೇ ಶಂಭು ಉನ್ನತ ವಿದ್ಯಾರ್ಜನೆಗಾಗಿ ಶ್ರೀಪತಿಯನ್ನು ಕಾಶಿಗೆ ಕರೆದೊಯ್ಯುವ ನಿರ್ಧಾರ ತಿಳಿಸಿದ್ದ. ಆದರೆ ಐದು ವರ್ಷ ಎಂಬುದು ಎಷ್ಟೋ ದೂರವಿದ್ದಂತಿತ್ತು.ಈಗ ಅದು ಹತ್ತಿರಕ್ಕೇ ಬಂದಿತ್ತು. ಇನ್ನು ಕಾಶಿಯಲ್ಲಿ ಅವನ ಪೋಷಣೆಗೆ ಖಾಸಾ ಅಣ್ಣನ ಮನೆಯೇ ಇದೆ. ಪ್ರಕೃತ ಅವಳಿಗಿದ್ದ ಆತಂಕ ಶ್ರೀಪತಿಯ ರಕ್ಷಣೆ ಹೇಗೆ ? ಎಂಬುದು. ಅದಕ್ಕಾಗಿ ಅವಳು ರಾತ್ರಿಯೆಲ್ಲ ಯೋಚಿಸಿ ಒಂದು ನಿರ್ಧಾರಕ್ಕೆ ಬಂದಿದ್ದಳು.

ಭಾಗೀರಥಿ ಹೊತ್ತಿಗೆ ಮುಂಚೆಯೇ ಎದ್ದು ಮನೆ ಕೆಲಸಗಳನ್ನು ಮುಗಿಸಿ ಮೂವರ ಪ್ರಯಾಣಕ್ಕೆ ಬೇಕಾದ ಸಿದ್ಧತೆ ಮಾಡಿ ದೇವರ ಸೇವೆಗೆಂದು ಹಣ್ಣು-ಕಾಯಿ ಹಿಡಿದು ಮಲ್ಲೇಶ್ವರನಿಗೆ ಪೂಜೆ ಸಲ್ಲಿಸಿದಳು. ಅನಂತರ ಕನಕದುರ್ಗಾ ದೇವಾಲಯಕ್ಕೆ ನಡೆದಳು. ಭಾಗೀರಥಿಯ ಸೂಚನೆಯಂತೆ ಅರ್ಚಕರು ಅವಳು ಪುಷ್ಕಳವಾಗಿ ತಂದಿದ್ದ ಬಿಡಿಹೂ-ಪತ್ರೆ ಮತ್ತು ಕುಸುಮ ಮಾಲೆಗಳನ್ನು ದೇವಿಗೆ ಅಲಂಕರಿಸಿ, ಮಗನ ಹೆಸರಿನಲ್ಲಿ ಒಂದು ಕುಂಕುಮಾರ್ಚನೆಯನ್ನು ಮಾಡಿ ಹಣ್ಣು-ಕಾಯಿಗಳನ್ನು ಸಮರ್ಪಿಸಿ ಮಂಗಳಾರತಿ ಬೆಳಗಿದರು. ಭಾಗೀರಥಿ ತನ್ನ ಮನಸ್ಸಿನಲ್ಲಿ 'ತಾಯಿ, ಶ್ರೀಪತಿಯ ರಕ್ಷಣೆಯ ಹೊಣೆ ನಿನ್ನದು. ನೀನು ಜಗನ್ನಾಟಕ ಸೂತ್ರಧಾರಳು. ನಾವು ನಿನ್ನ ಕೈಯ ಸೂತ್ರದ ಗೊಂಬೆಗಳು. ನಮ್ಮ ರಕ್ಷಣೆ ಎಲ್ಲಿಯವರೆಗೆ ? ಈ ದಿಸೆಯಲ್ಲಿ ನೀನೇ

ಎಂದೆಂದಿಗೂ ಅವನ ಶ್ರೀರಕ್ಷೆ!' ಎಂದು ತನ್ನ ಹಂಬಲವನ್ನು ತೋಡಿ ಕೊಳ್ಳುತ್ತಿದ್ದಳು. ಅದೇ ವೇಳೆಗೆ ಸರಿಯಾಗಿ ಭಾಗೀರಥಿಯ ಬಯಕೆ ಫಲಿಸಿತೆಂಬಂತೆ ಅವಳು ನಿರೀಕ್ಷಿಸುತ್ತಿದ್ದ ಪುಷ್ಪದ ಪ್ರಸಾದವಾಯಿತು. ಅರ್ಚ ಕರು ತೀರ್ಥಪ್ರಸಾದವನ್ನು ಕೊಟ್ಟು ಅವಳ ಜೊಗಸೆಗೆ ಪ್ರಸಾದವಾಗಿದ್ದ ಪುಷ್ಪವನ್ನಿಟ್ಟರು.

ಮನೆಗೆ ಬರುವ ವೇಳೆಗೆ ಆರಾಧ್ಯರು ಮಲ್ಲೇಶ್ವರನಿಗೆ ಬಲಿವಂದು ಬಾಗಿಲಿಗೆ ಬಂದರು. ಭಾಗೀರಥಿ ಪತಿದೇವರಿಗೆ ವಂದಿಸಿ ಶ್ರೀಪತಿಯನ್ನು ಕರೆದು ದೇವಿಯ ಪ್ರಸಾದವನ್ನು ಅವನ ಹಣೆಗಿಟ್ಟು, ಕನಕಲತೆಗೂ ಹಣೆಗೆ ಕುಂಕುಮ ಧರಿಸಿದಳು. ಶಂಭು ತಾನೇ ಮುಂದೆ ಬಂದು ಪ್ರಸಾದ ಸ್ವೀಕರಿ ಸಿದ ಶ್ರೀಪತಿಯು ತಂದೆ-ತಾಯಿಯರಿಗೆ ವಂದಿಸಿದಾಗ ಕನಕಳೂ ಅವನನ್ನು ಅನುಕರಿಸಿದಳು. ಶಂಭು ಭಾವನ ಪಾದಗಳಿಗೆರಗಿದ. ಎಲ್ಲರೂ ಮನೆಗೆ ಬಂದು ಪ್ರಸಾದ ಸ್ವೀಕರಿಸಿದರು. ಪ್ರಯಾಣಕ್ಕೆ ಮೂವರೇ ಆದರೆಂದು ಯೋಚಿಸಿದ ಆರಾಧ್ಯರು ತಾವೂ ಅಮರಾವತಿಗೆ ಹೊರಡಲು ಸಿದ್ಧ ರಾದರು.

ಮನೆ ಬಿಡುವ ಮುನ್ನ ಭಾಗೀರಥಿ 'ನಿಮಗೆ ದೇವಿಯ ಶ್ರೀರಕ್ಷೆಯಿದೆ! ಎಲ್ಲ ಅನುಕೂಲವಾಗುತ್ತದೆ. ಸುಖವಾಗಿ ಹೋಗಿ ಬನ್ನಿ!' ಎಂದು ಹರ ಸಿದಳು. ಆರಾಧ್ಯರು "ನಮಗೆ ಮಲ್ಲಿನಾಥನ ಅಭಯ ಹಸ್ತವಿರುವಾಗ ಅದೆಂತಹ ಭಯ!" ಎಂದು ಮರುನುಡಿದರು.

೬

ಕೃಷ್ಣೆ ಮೈತುಂಬಿ ಹರಿಯುತ್ತಿದ್ದಳು. ಅಮರಾವತಿ, ನಾಗಾರ್ಜುನ ಕೊಂಡಗಳ ಕಡೆ ಪ್ರಯಾಣಿಸುವವರು ದೋಣಿ ಹರಿಗೋಲುಗಳಲ್ಲಿ ಕುಳಿತು ನದಿ ದಾಟಬೇಕಾಗಿತ್ತು. ಪ್ರಯಾಣಿಕರು ದೋಣಿಗಾಗಿ ದಡದಲ್ಲಿ ಗುಂಪು ಗುಂಪಾಗಿ ಕಾಯುತ್ತ ನಿಂತಿದ್ದರು. ಆರಾಧ್ಯರು ಶಂಭು ಮತ್ತು ಚಿರಂಜೀವಿ ಗಳು ದೋಣಿಗಾಗಿ ನಿಂತಿದ್ದ ಎಡೆಗೆ ಒಬ್ಬ ಮುದುಕಿ ಬಂದು ನಿಂತಳು.

ಸುಮಾರು ಐವತ್ತು ಅರವತ್ತು ಮೀರಿದ ಪ್ರಾಯ. ತಲೆಯಮೇಲೆ ಅಲ್ಲಲ್ಲಿ ಬಿಳಿಗೂದಲು ಮಿಣುಕುತ್ತಿದ್ದವು. ಸುಕ್ಕುಗಟ್ಟಿದ ಮುಖ. ಮಾಸಲು ಸೀರೆ, ಹರಿದ ಕುಪ್ಪಸ ತೊಟ್ಟ ಮುದುಕಿಯ ಕಣ್ಣುಗಳಲ್ಲಿ ಮಾತ್ರ ಹೊಳಪು ಬೆಳಗುತ್ತಿತ್ತು ! ಕೈಯಲ್ಲೊಂದು ಕೋಲು ! ಹತ್ತಿರ ಬಂದ ಮುದುಕಿ ಕಂಡು ಆರಾಧ್ಯರು

"ಎಲ್ಲಿಗೆ ಹೊರಟಿದ್ದೀಯಮ್ಮ ?" ಎಂದು ಪ್ರಶ್ನಿಸಿದರು.

"ಅಮರಾವತಿಯ ಕಡೆ !" ಎಂದಳು ಆಕೆ.

"ಅಲ್ಲಿ ಯಾರಿದ್ದಾರೆ ತಾಯಿ ?" ಎಂದು ಶಂಭು ವಿನಯದಿಂದ ಕೇಳಿದ.

ಶ್ರೀಪತಿ, ಮಧ್ಯೆ ಬಾಯಿಹಾಕಿ "ಅದೇನೇನಮ್ಮ ನಿಮ್ಮ ಊರು ?" ಎಂದ.

ಅವಳು ಹೇಳಿದಳು "ಅದೇ ಏಕಪ್ಪ ? ಅದು, ಇದು ಎಲ್ಲವೂ ನನ್ನ ಊರೆ !" ಎಂದಳು ಎಲ್ಲರ ಕುತೂಹಲ ಕೆರಳಿಸುತ್ತ.

ಆಗ ಎಲ್ಲರ ದೃಷ್ಟಿ ಮುದುಕಿಯ ಕಡೆ ತಿರುಗಿತು.

"ಹೆಸರೇನಮ್ಮ ?" ಎಂದರು ಆರಾಧ್ಯರು.

"ಜನ ನನ್ನನ್ನು ದುಗ್ಗಮ್ಮ ಎಂದು ಕರೀತಾರೆ" ಎಂದಳು.

ಬೆಜವಾಡದ ಪ್ರಾಂತದಲ್ಲಿ ಕನಕದುರ್ಗೆಯ ಭಕ್ತರು ಹೆಚ್ಚು, ಜನ ತಮ್ಮ ಗಂಡುಮಕ್ಕಳಿಗೆ "ದುಗ್ಗಪ್ಪ" ಎಂದು ಹೆಣ್ಣುಮಕ್ಕಳಿಗೆ "ದುಗ್ಗಮ್ಮ" ಎಂದು ಹೆಸರಿಟ್ಟಿರುವುದು ಸಹಜ ! ಅಂಥ ಭಕ್ತರಲ್ಲಿ ಈ ಅಜ್ಜಿಯೂ ಒಬ್ಬಳಿರಬೇಕೆಂದು ಶಂಭುಗೆ ವಿವರಿಸಿದರು ಆರಾಧ್ಯರು.

ಹೀಗೆ ಮಾತನಾಡುತ್ತಿದ್ದಂತೆ ದೋಣಿಯೊಂದು ಅವರ ಮಗ್ಗುಲಿಗೆ ಬಂತು. ಎಲ್ಲರೂ ದೋಣಿಯನ್ನೇರಿ ಕುಳಿತರು. ಅಷ್ಟೇನೂ ದೊಡ್ಡದಲ್ಲದ ಆ ದೋಣಿಯಲ್ಲಿ ಅಡ್ಡವಾಗಿ ಹಾಸಿದ್ದ ಹಲಗೆಗಳ ಮೇಲೆ ೧೦-೧೨ ಜನಕ್ಕೆ ಹೆಚ್ಚು ಜನ ಕೂಡಲು ಅವಕಾಶವಿರಲಿಲ್ಲ. ದುಗ್ಗವ್ವ ಕೋಲೂರಿಕೊಂಡು ಅದರ ಸಹಾಯದಿಂದ ದೋಣಿಯ ಮೇಲೇರಿ ಬಂದು ಹಿಂದಿನ ಹಲಗೆಯ

ಮೇಲೆ ಕುಳಿತಳು. ಇತರ ಪ್ರಯಾಣಿಕರೂ ದೋಣಿಯನ್ನೇರಿ ಖಾಲಿಯಾಗಿದ್ದ ಸ್ಥಳಗಳನ್ನು ಭರ್ತಿ ಮಾಡಿದರು.

ದೋಣಿ ಏರುವ ಸಂದರ್ಭದಲ್ಲಿ ಆರಾಧ್ಯರು ಶಂಭು ಮತ್ತು ಇಬ್ಬರು ಮಕ್ಕಳು ಮಧ್ಯದ ಅಡ್ಡ ಹಲಗೆಯ ಮೇಲೆ ಕುಳಿತಿದ್ದರು. ಮತ್ತೊಂದು ಮಧ್ಯದ ಹಲಗೆಯ ಮೇಲೆ ಮತ್ತೆ ನಾಲ್ವರು ಪ್ರಯಾಣಿಕರು. ಹಿಂದೆ ಮತ್ತು ಮುಂದಿನ ಚಿಕ್ಕ ಅಡ್ಡ ಪಟ್ಟಿಗಳಲ್ಲಿ ಇಬ್ಬರಿಗೆ ಮಾತ್ರ ಸ್ಥಳಾವಕಾಶ. ಅಲ್ಲಿ ಮೂವರು ಕೂಡಬಹುದಾದರೂ ಹಿಂದೆ ಮತ್ತು ಮುಂದಿರುವ ನಾವಿಕರು ಆಗಾಗ್ಗೆ ಆ ಪಟ್ಟಿಯ ಮೇಲೆ ಕುಳಿತು ಹುಟ್ಟು ಹಾಕ ಬೇಕಾಗಿರುವುದರಿಂದ ಅಲ್ಲಿ ಇಬ್ಬರಿಗೆ ಹೆಚ್ಚಾಗಿ ಯಾರನ್ನೂ ಕೂಡಿಸುವುದಿಲ್ಲ. ಮುದುಕಿಯು ಹಿಂದಿನ ಅಡ್ಡ ಪಟ್ಟಿಯ ಮೇಲೆ ಕುಳಿತಿದ್ದಳು. ಇನ್ನೇನು ದೋಣಿ ಮುಂದಕ್ಕೆ ಹೊರಡುವ ವೇಳೆಗೆ ಸರಿಯಾಗಿ ಒಬ್ಬ ಹಾವಾಡಿಗ ಹಾವಿನ ಬುಟ್ಟಿ ಸಹಿತ ತನ್ನ ಮಗನೊಡನೆ ದೋಣಿ ಏರಿದ. ನಾವಿಕರು ಹಾವಾಡಿಗರನ್ನು ಬುಟ್ಟಿ ಸಹಿತ ಸಾಮಾನ್ಯವಾಗಿ ದೋಣಿ ಏರಿಸುವುದಿಲ್ಲ ! ಆದರೂ ಅವನು 'ಬೇರೆ ಯಾವುದೂ ದೋಣಿ ಇಲ್ಲ' ಎಂದು ಅಂಗಲಾಚಿ ದೋಣಿ ಏರಿದ್ದ.

ನಾವಿಕರಿಬ್ಬರೂ ಆ ಕಡೆ ಈ ಕಡೆ ಹುಟ್ಟು ಹಾಕುತ್ತಾ ದೋಣಿ ನಡೆಸುತ್ತಿದ್ದರು. ತೊರೆ ರಭಸದಿಂದ ಹರಿಯುತ್ತಿತ್ತು ! ಬಿರುಗಾಳಿ ಬೀಸುತ್ತಿತ್ತು ! ದೋಣಿ ಅರ್ಧ ನದಿಗೆ ಬಂದಾಗ ಪ್ರವಾಹದ ಸೆಳೆತ ಜೋರಾಯಿತು. ಬೀಸುತ್ತಿದ್ದ ಬಿರುಗಾಳಿ ಸುಳಿಗಾಳಿಯಾಗಿ ಬೀಸತೊಡಗಿತು. ಅಕಸ್ಮಾತ್ ಪ್ರವಾಹದ ಸುಳಿಯೂ ಅಲ್ಲಿ ಕೂಡಿಬಂದಿತ್ತು. ಇದರಿಂದಾಗಿ ದೋಣಿ ನೀರಿನ ಸುಳಿಗೆ ಸಿಕ್ಕಿ ಗರ್ರನೆ ತರಗೆಲೆಯಂತೆ ತಿರುಗತೊಡಗಿತು. ನಾವಿಕರು ಬಹು ಪ್ರಯತ್ನಮಾಡಿ ದೋಣಿಯನ್ನು ಹತೋಟಿಗೆ ತರಲು ಪ್ರಯತ್ನ ನಡೆಸಿದ್ದರು. ಅಷ್ಟರಲ್ಲಿ ಹಾವಾಡಿಗನ ಮಗ ಅಜ್ಜಿಯ ಕೋಲನ್ನು ಅಜ್ಜಿಯ ಕಡೆಯಿಂದ ಸೆಳೆಯಲು ಮೇಲೆದ್ದ. ಅವನು ಸೆಳೆದ ಕೋಲಿನ ತುದಿ ಜನರ ಕಾಲ್ದೆಸೆಯಲ್ಲಿದ್ದ ಹಾವಿನ ಬುಟ್ಟಿಗೆ ತಾಕಿ, ಬುಟ್ಟಿಯ ಬಾಯಿ ತೆರೆಯಿತು ! ಈಚೆಗೆ ಬರಲು ಹಾತೊರೆಯುತ್ತಿದ್ದ ಹಾವು ಹೊರ

ನುಗ್ಗಿ ದೋಣಿಯು ತುಂಬ ಹರಿದಾಡತೊಡಗಿತು ! ಹಲಗೆಯ ಮೇಲೆ ಕುಳಿತಿದ್ದವರು ಹೆದರಿ ಎಲ್ಲರೂ ಒಂದು ಪಕ್ಕಕ್ಕೆ ಸರಿದರು. ಆಗ ದೋಣಿಯು ಹಿಂಭಾಗ ನೀರಿನಲ್ಲಿ ಮುಳುಗತೊಡಗಿತು. ಕಡೆ ಅಂಚಿನಲ್ಲಿದ್ದ ಅಜ್ಜಿ ಹೆದರಿ ಮೇಲೆದ್ದಾಗ ಊರುಗೋಲು ಕೈಗೆ ಸಿಕ್ಕಲಿಲ್ಲ. ನಿಲ್ಲಲು ಪಟ್ಟು ಸಿಕ್ಕದೆ ಅವಳು ನೀರಿಗೆ ಉರುಳಿದಳು. ಅವಳು ಓ ! ! ಹೋ ! ! ಎಂದು ಕೂಗುತ್ತಾ ಎರಡೂ ಕೈಗಳನ್ನು ಮೇಲೆತ್ತಿ ಆರ್ತನಾದಮಾಡತೊಡಗಿದಳು! ಅವಳ ಧುಃಸ್ಥಿತಿಯನ್ನು ಕಂಡ ಶ್ರೀಪತಿ ನೀರಿಗೆ ಧುಮುಕಿ ಮುದುಕಿಯ ಕಡೆ ಈಜಿಕೊಂಡು ನಡೆಯುತ್ತಿದ್ದ ! ಆರಾಧ್ಯರು ತಮ್ಮ ಮೈಮೇಲಿನ ಶಲ್ಯವನ್ನು ನೀರಿಗೆಸೆದು!

"ಪತಿ, ಮುದುಕಿ ಹತ್ತಿರ ಹೋಗಬೇಡ ! ಅವಳು ಭಯದಿಂದ ನಿನ್ನನ್ನು ಬಿಗಿದಪ್ಪಿದರೆ ಇಬ್ಬರೂ ನೀರುಪಾಲಾಗುತ್ತೀರಿ !" ಎಂದು ಎಚ್ಚರಿಸಿದರು. ಪತಿ ಶಲ್ಯದ ಒಂದು ತುದಿಯನ್ನು ಮುದುಕಿಯ ಕಡೆ ಎಸೆದು ಇನ್ನೊಂದು ತುದಿಯನ್ನು ಬಿಗಿಯಾಗಿ ಹಿಡಿದಿದ್ದ. ಆರ್ತಳಾಗಿದ್ದ ಮುದುಕಿಗೆ ಶಲ್ಯದ ಸೆರಗು ಸಿಕ್ಕಿತು. 'ನೀರಿನಲ್ಲಿ ಮುಳುಗುವವನಿಗೆ ಒಂದು ಹುಲ್ಲು ಕಡ್ಡಿ ಸಿಕ್ಕಿದರೂ ಸಾಕು' ಎಂಬಂತೆ ಅವಳು ಶಲ್ಯದ ತುದಿಯನ್ನು ಬಿಗಿಯಾಗಿ ಹಿಡಿದಳು. ಪತಿ ನೀರಿನಲ್ಲಿ ಈಜುತ್ತಾ ಮುದುಕಿಯನ್ನು ಎಳೆದೆಳೆದು ತಂದು ದಡ ಸೇರಿಸಿದ.

ನಾವಿಕರು ನಾವೆಯನ್ನು ಬಲವಾಗಿ ಹಿಡಿದು ಹುಟ್ಟು ಹಾಕುತ್ತಾ ದಡಕ್ಕೆ ಬಂದಿದ್ದರು. ಮುದುಕಿ ನೀರಿನಲ್ಲಿ ತಟ್ಟಾಡುತ್ತಾ ನಡುವಿನಷ್ಟು ಆಳದ ನೀರಿನಲ್ಲಿ ನಿಂತು ನಡುಗುತ್ತಿದ್ದಳು,

ಈ ಅವಾಂತರದಲ್ಲಿ ಹಾವಾಡಿಗ ಹಾವನ್ನು ಲಾಘವವಾಗಿ ಕುತ್ತಿಗೆ ಹಿಡಿದು ಬುಟ್ಟಿ ಸೇರಿಸಿದ್ದ. ಇದರಿಂದ ದೋಣಿಯಲ್ಲಿದ್ದ ಜನರು ತಮ್ಮ ತಮ್ಮ ಸ್ಥಳಗಳಲ್ಲಿ ನಿರ್ಭಯರಾಗಿ ಕುಳಿತರು. ಇಷ್ಟರಲ್ಲಿ ಹಾವಾಡಿಗನ ಮಗ ನದಿಯಲ್ಲಿ ಬಿದ್ದು ತೇಲುತ್ತಿದ್ದ ಅಜ್ಜಿಯ ಕೋಲನ್ನು ತಂದು ನಡುವಿನುದ್ದದ ನೀರಿನಲ್ಲಿ ನಿಂತಿದ್ದ ಮುದುಕಿಗೆ ಕೊಟ್ಟಿದ್ದ. ಮುದುಕಿಯು ಉಟ್ಟಿದ್ದ ಬಟ್ಟೆಗಳೆಲ್ಲ ತೊಯ್ದು ಒದ್ದೆಯಾಗಿದ್ದವು. ಕನಕಲತೆ

ಹಿಡಿದಿದ್ದ ಕೈಚೀಲದಲ್ಲಿ ಭಾಗೀರಥಿ ಸಮಯಾನುಸಾರ ಬೇಕಾಗುವುದೆಂದು ಊಹಿಸಿ ಒಂದು ಲಂಗ, ಸೀರೆ, ಕುಪ್ಪಸಗಳು ಮತ್ತು ನೀರುಪಂಚೆಗಳನ್ನು ಮಡಿಚಿ ತುರುಕಿದ್ದಳು.

ಮುದುಕಿ ಗಡಗಡ ನಡುಗುತ್ತಿದ್ದುದನ್ನು ಗಮನಿಸಿದ ಕನಕಾ— "ಅಪ್ಪಾಜಿ, ನನ್ನ ಕೈಚೀಲದಲ್ಲಿ ಒಣಗಿದ ಬಟ್ಟೆಗಳಿವೆ. ಮುದುಕಿಗೆ ಕೊಡುತ್ತೇನೆ" ಎಂದು ದಡ ಸೇರಿದ ಮುದುಕಿಗೆ ಮಡಿ ವಸ್ತ್ರಗಳನ್ನು ತಂದಿತ್ತಳು. ಮುದುಕಿ ಮರದ ಹಿಂದೆ ಹೋಗಿ ಒದ್ದೆ ಬಟ್ಟೆಗಳನ್ನು ಕಳಚಿ, ಬೇರೆ ವಸ್ತ್ರ ಧರಿಸಿ, ಬಂದು ಶ್ರೀಪತಿಗೆ ಮತ್ತು ಕನಕಾಗೆ ಕೃತಜ್ಞತೆ ಹೇಳುತ್ತಿದ್ದಳು. ಆರಾಧ್ಯರು—

"ಶಂಭು, ನೀನು ಶ್ರೀಪತಿಗೆ ಈಜು ಕಲಿಸಿದ್ದು ಸಾರ್ಥಕವಾಯಿತು. ಈ ಈಜು ಕಲಿತವನನ್ನು ಮಾತ್ರವಲ್ಲದೆ, ನೀರು ಪಾಲಾಗುತ್ತಿದ್ದ ಬೇರೆಯವರ ಪ್ರಾಣವನ್ನೂ ಉಳಿಸಬಲ್ಲುದು" ಎಂದು ಅಭಿನಂದಿಸಿದರು.

ಎಲ್ಲರೂ ದಡ ಸೇರಿ ನಾವಿಕರಿಗೆ ಮೂಲ್ಯವನ್ನಿತ್ತು, ಒಂದು ಮರದ ನೆರಳಿನಲ್ಲಿ ಬಂದು ಕುಳಿತರು. ಈ ಅವಧಿಯಲ್ಲಿ ಹಾವಾಡಿಗ ಮತ್ತು ಅವನ ಮಗ ಅಪರಾಧಿಗಳಂತೆ ಹಾವಿನ ಪುಟ್ಟಿಯೊಡನೆ ಕಾಣೆಯಾಗಿದ್ದರು.

ಆ ಮರದ ಹತ್ತಿರ ಬಂದ ನಾವಿಕ, "ನೋಡಿ ಬುದ್ಧಿ, ಇದಕ್ಕಾಗಿಯೇ ನಾವು ಯಾವಾಗಲೂ ಹಾವಾಡಿಗರನ್ನು ನಾವೆ ಏರಿಸುವುದಿಲ್ಲ. ಈ ದಿನ ಅವರ ಪೇಚಾಟ ನೋಡಿ ದೋಣಿ ಏರಿಸಿದ್ದಕ್ಕೆ ಎಂತಹ ಅನಾಹುತವಾಯಿತು ! ಸದ್ಯ ನಿಮ್ಮ ಆ ಹುಡುಗನ ಸಾಹಸ ಮೆಚ್ಚತಕ್ಕದ್ದು!" ಎಂದು ಶ್ರೀಪತಿಗೆ ನಮಸ್ಕರಿಸಿ, ಮುನ್ನಡೆದರು.

ಮುದುಕಿ ಮರದ ನೆರಳಿನಲ್ಲಿ ಕುಳಿತು ಸುಧಾರಿಸಿಕೊಂಡ ಮೇಲೆ ಶ್ರೀಪತಿಯ ಹತ್ತಿರ ಬಂದು, "ನನ್ನಪ್ಪಾ, ಈ ಚಿಕ್ಕ ವಯಸ್ಸಿಗೆ ಎಂಥ ಪವಾಡ ಮೆರೆದೆಯಪ್ಪ ! ಸದ್ಯ ನನ್ನ ಪ್ರಾಣ ಉಳಿಸಿದೆ. ನೂರು ವರ್ಷ ಬಾಳಪ್ಪಾ!" ಎಂದು ಹರಸಿ, ಕೋಲು ಹಿಡಿದು ಮುನ್ನಡೆದಳು. ಅಷ್ಟರಲ್ಲಿ ಆರಾಧ್ಯರು, "ದುಗ್ಗವ್ವಾ, ಎಲ್ಲಿಗೆ ಹೋಗುತ್ತಿ ? ಇಲ್ಲಿ ಬಾ ! ನಾವೂ ಬರುತ್ತೇವೆ, ಹೋಗೋಣ!" ಎನ್ನಲು, ಮುದುಕಿ ಕೋಲೂರಿಕೊಂಡು ಮರದ ಹತ್ತಿರ ಬಂದಳು.

ಶಂಭು ಹೆಗಲಿಗೆ ಏರಿಸಿದ್ದ ಎರಡು ಕೈಚೀಲಗಳಲ್ಲಿ ಭಾಗೀರಥಿ ತುಂಬಿ ಕಳಿಸಿದ್ದ ಬುತ್ತಿ, ಖಾರ ಮತ್ತು ಸಿಹಿ ತಿನಿಸುಗಳಿದ್ದುವು. ತಿರುಪದ ಎರಡು ತಂಬಿಗೆಗಳಲ್ಲಿ ಶೋಧಿಸಿದ ನೀರು ತುಂಬಿತ್ತು.

ಬುತ್ತಿಯನ್ನು ಅಮರಾವತಿಗೆಂದು ಎತ್ತಿಟ್ಟು ಶಂಭು, ಖಾರ-ಸಿಹಿ ತಿನಿಸುಗಳ ಅರ್ಧದಷ್ಟು ಹೊರತೆಗೆದು ಎಲ್ಲರಿಗೂ ಹಂಚಿದ. ಉಪಾಹಾರ ಮಾಡಿಕೊಂಡು, ನೀರು ಕುಡಿದ ಅವರು ಅಮರಾವತಿ ದಾರಿ ಹಿಡಿದರು.

ಆರಾಧ್ಯರು ಮುದುಕಿಗೆ, "ದುಗ್ಗವ್ವಾ, ನೀನು ಅಮರಾವತಿಯನ್ನು ನೋಡಿದ್ದೀಯಾ ?" ಎಂದರು.

"ಏನು ಸ್ವಾಮಿ, ಹೀಗೆ ಕೇಳುತ್ತೀರಿ ! ನನಗೆ ಎಷ್ಟು ವಯಸ್ಸಾಗಿದೆ ನೋಡಿ ! ಇಷ್ಟು ವಯಸ್ಸಿಗೆ ಭಾರತದಲ್ಲಿ ನಾನು ನೋಡದ ಸ್ಥಳವೇ ಇಲ್ಲ. ಅಮರಾವತಿ ಮತ್ತು ನಾಗಾರ್ಜುನಕೊಂಡದ ಇತಿಹಾಸವೆಲ್ಲ ನನಗೆ ಚೆನ್ನಾಗಿ ಗೊತ್ತಿದೆ. ಬೇಕಾದರೆ ನಿಮಗೆ ಅದೆಲ್ಲವನ್ನೂ ವಿಸ್ತಾರ ವಾಗಿ ಬಿಡಿಸಿ ಹೇಳಬಲ್ಲೆ. ಬನ್ನಿ, ಆ ನಮ್ಮಪ್ಪ ನನ್ನ ಪ್ರಾಣ ಉಳಿಸಿದ. ನೀವೆಲ್ಲ ನನಗೆ ಸಹಾಯ ಮಾಡಿದ್ದೀರಿ. ನಿಮ್ಮ ಉಪಕಾರವನ್ನು ಮರೆಯ ಲಾದೀತೆ ? ನನಗೆ ಎಷ್ಟೇ ಕೆಲಸವಿದ್ದರೂ, ನೀವು ನೋಡಬೇಕಾಗಿರುವ ಸ್ಥಳಗಳೆಲ್ಲವನ್ನು ಪರಿಚಯ ಮಾಡಿಕೊಡುತ್ತೇನೆ. ನನಗೆ ನೀವೇನೂ ಕೊಡಬೇಡಿ, ಹೊತ್ತು ಹೊತ್ತಿಗೆ ಸರಿಯಾಗಿ ಒಂದು ತುತ್ತು ಪ್ರಸಾದ ಕೊಟ್ಟರೆ ಸಾಕು, ನನ್ನೊಡೆಯಾ !" ಎಂದು ಕೈ ಮುಗಿದಳು.

ಶಂಭುಗೆ ಮುದುಕಿಯ ಮಾತು ಕೇಳಿ ತನ್ನ ತಲೆಯ ಮೇಲಿದ್ದ ಒಂದು ಭಾರ ಇಳಿದಂತಾಗಿತ್ತು. 'ಆಯಾ ಸ್ಥಳಗಳನ್ನು ಚೆನ್ನಾಗಿ ಬಲ್ಲ ಮಾರ್ಗದರ್ಶಿಯೊಬ್ಬನಿಲ್ಲವಲ್ಲಾ' ಎಂಬ ಅವನ ಸಂಶಯ ಈಗ ದೂರ ವಾಗಿತ್ತು.

ದುಗ್ಗವ್ವ ಕೋಲೂರಿಕೊಂಡು ಮುಂದೆ ಮುಂದೆ ನಡೆಯು ತ್ತಿದ್ದಳು. ಅವಳನ್ನು ಹಿಂಬಾಲಿಸುವುದು ಯಾರಿಗೂ ಸಾಧ್ಯವಾಗಿರಲಿಲ್ಲ. ಎಲ್ಲರೂ ಅವಳನ್ನು ಹಿಂಬಾಲಿಸಿ ಅಮರಾವತಿಯನ್ನು ತಲುಪಿದರು.

ಶ್ರೀಪತಿ ದುಗ್ಗವ್ವೆಯ ಹತ್ತಿರ ಬಂದು, "ಅಜ್ಜಿ, ಈ ಕ್ಷೇತ್ರದ ಮಾಹಿತಿಯನ್ನು ನಮಗೆ ಮಾಡಿಕೊಡು !" ಎಂದ.

ದುಗ್ಗವ್ವೆ ಹೇಳತೊಡಗಿದಳು—

"ಮರಿ, ಅಮರಾವತಿಗೆ ಅಮರಾರಾಮ ಎಂಬ ಹೆಸರಿದೆ. ಹಿಂದೆ ಇದಕ್ಕೆ 'ಧಾನ್ಯಕಟಕ' ಎಂಬ ಹೆಸರಿತ್ತು !"

"ಅಜ್ಜಿ, 'ಧಾನ್ಯಕಟಕ' ಮುಂದೆ 'ಅಮರಾರಾಮ,' 'ಅಮರಾವತಿ' ಎಂದು ಹೆಸರನ್ನು ಪಡೆಯಲು ಕಾರಣವೇನು ?" ಎಂದಳು ಕನಕಾ ಮಧ್ಯೆ ಬಾಯಿ ಹಾಕಿ.

"ಅದೇ ಹೇಳುತ್ತಿದ್ದೇನೆ ಮರಿ, ಕೇಳಿರಿ ! ಇಲ್ಲಿ ಹೆಚ್ಚಾಗಿ ಧಾನ್ಯ ಬೆಳೆಯುತ್ತಿದ್ದುದರಿಂದ 'ಧಾನ್ಯಕಟಕ' ಎಂಬ ಹೆಸರು ಇದಕ್ಕೆ ಅನ್ವರ್ಥಕವಾಗಿದೆ. ಇದೇ ಪರಿಸರದಲ್ಲಿರುವ 'ನೆಲ್ಲೂರು' ಎಂಬುದೂ ಇದೇ ಅರ್ಥವನ್ನು ಸಮರ್ಥಿಸುತ್ತದೆ. ಕೃಷ್ಣೆ ಮತ್ತು ಗೋದಾವರಿಗಳ ಮಧ್ಯದಲ್ಲಿರುವ ಈ ಪ್ರದೇಶವನ್ನು 'ನೆಲ್ಲಿನ ಕಣಜ' ಎಂದು ಇಂದಿಗೂ ಕರೆಯುತ್ತಾರೆ.

ಪುರಾತನ ಕಾಲದಿಂದಲೂ ಈ ಬೆಟ್ಟದ ಮೇಲಿರುವ ಅಮರೇಶ್ವರ ಲಿಂಗದ ಹಿರಿಮೆ ಅದ್ಭುತ. ಈ ಕಾರಣದಿಂದ ಅನೇಕ ಋಷಿ-ಮುನಿಗಳು ಅಮರೇಶ್ವರನ ಸಾನ್ನಿಧ್ಯದಲ್ಲಿ ಉಗ್ರ ತಪಸ್ಸನ್ನು ಮಾಡಿ ಸಿದ್ಧಿ ಪಡೆದಿದ್ದರಿಂದ ಈ ಕ್ಷೇತ್ರಕ್ಕೆ ಅಮರಾರಾಮ, ಅಮರಾವತಿ ಎಂಬ ಹೆಸರುಗಳು ಬಂದಿವೆ.

ಈಗ್ಗೆ ನೂರಾರು ವರ್ಷಗಳ ಕೆಳಗೆ ಈ ಪ್ರಾಂತವನ್ನು ಆಳುತ್ತಿದ್ದ ಸಾತವಾಹನರು ಇಲ್ಲಿ ಜೀರ್ಣವಾಗಿದ್ದ ಅಮರೇಶ್ವರಾಲಯವನ್ನು ಉದ್ಧಾರ ಮಾಡಿದರು. ಇಲ್ಲಿ ಪ್ರತಿವರ್ಷವೂ ಶಿವರಾತ್ರಿಯಲ್ಲಿ ನಡೆಯುತ್ತಿರುವ ಉತ್ಸವ ಬಹು ಮುಖ್ಯವಾದದ್ದು.

ಎರಡನೆಯದಾಗಿ ಬೌದ್ಧಯುಗದಲ್ಲಿ ಈ ಕ್ಷೇತ್ರ ಬಹುಮಟ್ಟಿಗೆ ಪ್ರಖ್ಯಾತವಾಯಿತು. ಇಲ್ಲಿ ನಿರ್ಮಿತವಾಗಿರುವ ಬೌದ್ಧಸ್ತೂಪಗಳು ಯಾತ್ರಿಕರನ್ನು ಆಕರ್ಷಿಸುವ ಕೇಂದ್ರ ಬಿಂದು."

ಮಧ್ಯೆ ಬಾಯಿ ಹಾಕಿ ಆರಾಧ್ಯರು ಶಂಭುವನ್ನು ಕುರಿತು—

"ಶಂಭು, ನಮ್ಮ ದರ್ಶನ ವಿಭಾಗದಲ್ಲಿ ಬೌದ್ಧದರ್ಶನವೂ ಒಂದು. ಆ ಧರ್ಮದ ಬಗೆಗೆ ಚಾರಿತ್ರಿಕವಾದ ಹಿನ್ನೆಲೆ ತಿಳಿದಿರುವುದು ಒಳ್ಳೆಯದು. ಶ್ರೀಪತಿಗೆ ಇನ್ನು ಮುಂದೆ ಬೌದ್ಧ ದರ್ಶನವು ಪತ್ಯವೇ ಆಗುತ್ತದೆ. ಆ ಬಗ್ಗೆ ನೀನು ಅದನ್ನು ವಿವರಿಸಿದರೆ ಒಳ್ಳೇದು" ಎಂದರು.

ಹೀಗೆ ಮಾತನಾಡುತ್ತಾ ಅವರು ಮಧ್ಯಾಹ್ನದ ವೇಳೆಗೆ ಅಮರಾರಾಮದ ಮಹಾಸ್ತೂಪದ ಬಳಿ ಬಂದಿದ್ದರು. ಬಿಸಿಲು ತೀಕ್ಷ್ಣವಾಗಿತ್ತು. ಪತಿ ಮತ್ತು ಕನಕಲತೆಯರು ಅಲ್ಲಿನ ವಿಹಾರಗಳನ್ನೂ ಸ್ತೂಪಗಳ ರಚನೆಗಳನ್ನೂ ನೋಡಿ ಪರವಶರಾಗಿದ್ದರು.

"ಅಜ್ಜಿ, ಈ ಸ್ತೂಪೆಗಳು ಮತ್ತು ಅವುಗಳ ರಚನೆ ಜಗದ್ವಿಖ್ಯಾತವಾದದ್ದು, ಬುದ್ಧನ ತರುವಾಯ ಸಾವಿರಾರು ವರ್ಷಗಳ ಅನಂತರ ಇವುಗಳು ನಿರ್ಮಿತವಾಗಿವೆ ಎನ್ನುತ್ತಾರೆ. ಅಂದ ಮೇಲೆ ಈ ಶಿಲ್ಪ ರಚನೆಗೆ ಯಾವುದು ಆಧಾರ ?" ಎಂದ ಶ್ರೀಪತಿ ಅಜ್ಜಿಯ ಕಡೆ ತಿರುಗಿ.

ಅಜ್ಜಿ ಉತ್ತರಿಸಿದಳು—"ಮರಿ, ನಿನ್ನ ಸಂದೇಹ ವಿಚಾರಪೂರಿತವಾಗಿದೆ. ಏಕೆಂದರೆ ಶಿಲ್ಪಿಗಳು ತಮಗೆ ತಿಳಿದಂತೆ ಶಿಲ್ಪಗಳನ್ನು ನಿರ್ಮಿಸುವುದಿಲ್ಲ. ಈ ದಿಸೆಯಲ್ಲಿ ಇಲ್ಲಿ ನಿರ್ಮಿಸಿರುವ ಸ್ತೂಪಶಿಲ್ಪಕ್ಕೆ ಆಧಾರ ಬುದ್ಧನ ಜಾತಕ ಕಥೆಗಳು. ಅವುಗಳ ಆಧಾರದ ಮೇಲೆ ಶಿಲ್ಪಿಗಳು ಈ ಮನೋಹರವಾದ ಶಿಲ್ಪಗಳನ್ನು ನಿರ್ಮಿಸಿದರು.

ಮೇಲಾಗಿ ಈ ಅಮರಾವತಿಯಲ್ಲಿ ವಾಸ್ತು ಮತ್ತು ಶಿಲ್ಪಕ್ಕೆ ವ್ಯತ್ಯಾಸವನ್ನು ಕಾಣುವುದು ಕಷ್ಟ. ಇಲ್ಲಿಯ ಮಹಾಕೃತಿ ಎಂದರೆ ಅಲ್ಲಿ ಕಾಣುವ ಮಹಾಸ್ತೂಪ. ಈ ಮಹಾಸ್ತೂಪವು ಸುಮಾರು ಐದು ನೂರು ವರ್ಷಗಳ ಅವಧಿಯಲ್ಲಿ ನಾಲ್ಕು ಹಂತಗಳಲ್ಲಿ ನಿರ್ಮಾಣವಾಯಿತು ಎಂದು ಹೇಳಲಾಗಿದೆ.

ಈ ಮಹಾಸ್ತೂಪದ ವ್ಯಾಸ ೧೬೨ ಅಡಿ, ಎತ್ತರ ೧೨೦ ಅಡಿಗಳು. ಈ ಸ್ತೂಪವು ಹಾಲುಗಲ್ಲಿನ ಶಿಲ್ಪಫಲಕಗಳಿಂದ ಆವೃತವಾಗಿದೆ. ಇದಕ್ಕೆ ನಾಲ್ಕು ದಿಕ್ಕುಗಳಲ್ಲಿ ಐದು ಆಯುತ ಸ್ತಂಭಗಳಿವೆ, ಇದರ ಅಂಡದ

ಮೇಲೆ ಚಚ್ಚೌಕವಾದ ಹರ್ಮಿಕೆ ಮತ್ತು ಅದರ ಮೇಲೆ ಒಂದು ಛತ್ರಿಯೂ ಇದೆ. ಈ ಶಿಲಾಫಲಕಗಳಲ್ಲಿ ಅವದಾನದ ಕತೆಗಳು ಅಂಕಿತವಾಗಿವೆ. ಬುದ್ಧನ ಜೀವನಕ್ಕೆ ಸಂಬಂಧಿಸಿದ ಅನೇಕ ಘಟನೆಗಳು ಅವುಗಳಲ್ಲಿ ಬರೆಯಲ್ಪಟ್ಟಿವೆ."

—ಎಂದು ಅಜ್ಜಿ ಮಹಾಸ್ತೂಪದ ಪರಿಚಯ ಮಾಡುತ್ತಿದ್ದಾಗ ಕನಕಾ ಬಳಲಿದಂತೆ ಕಂಡುದನ್ನು ಪತಿ ಮಾವನಿಗೆ ಸೂಚಿಸಿದ. ಅದನ್ನು ಕಂಡ ಆರಾಧ್ಯರು ಶಂಭುವನ್ನು ಕುರಿತು "ಅಪ್ಪ. ಮಕ್ಕಳು ಬಳಲಿದ್ದಾರೆ. ಇಲ್ಲಿ ಪ್ರಶಸ್ತವಾದ ನೀರಿನ ಕೊಳವೂ ಇದೆ. ಎಲ್ಲರೂ ಕೈಕಾಲು ತೊಳೆದುಕೊಳ್ಳಿ, ನಮ್ಮ ಬುತ್ತಿಯನ್ನು ಇಲ್ಲಿ ಮುಗಿಸಿ ಸ್ವಲ್ಪ ವಿಶ್ರಮಿಸಿಕೊಂಡು ಅನಂತರ ಮುಂದುವರಿಯೋಣ !" ಎಂದು ಎಚ್ಚರಿಸಿದರು.

ಶಂಭು, ಬುತ್ತಿಯನ್ನು ಬಿಚ್ಚಿ, ಎಲ್ಲರಿಗೂ ಬಾಳೆಎಲೆ ಹಾಕಿ, ಬುತ್ತಿಯನ್ನು ಹಂಚಿದ. ಸಾರು ಅನ್ನ, ಮೊಸರು ಅನ್ನ, ಉಪ್ಪಿನಕಾಯನ್ನು ನಂಚಿಕೊಂಡು ಎಲ್ಲರೂ ಊಟಮಾಡಿದರು. ಅಜ್ಜಿ, ಶಂಭುವನ್ನು ಎಲ್ಲರ ಜೊತೆ ಕೂಡಿಸಿ, ತಾನೇ ಎಲ್ಲರಿಗೂ ಬಡಿಸಿದಳು. ಆರಾಧ್ಯರು ಅಜ್ಜಿಯ ಪೂರ್ವೋತ್ತರಗಳನ್ನು ತಿಳಿಯಲು ಅಸಮರ್ಥರಾಗಿದ್ದರು. ಅಜ್ಜಿ ಜಾತಿಯಲ್ಲಿ ಯಾವ ಪಂಗಡಕ್ಕೆ ಸೇರಿದವಳೆಂದು ತಿಳಿಯಲಾಗದಿದ್ದರೂ ಅವಳ ಸೌಜನ್ಯ, ಲೋಕಾನುಭವ ಮತ್ತು ಶಾಸ್ತ್ರಪರಿಚಯಗಳು ಅವಳ ಮಾತುಗಳಿಂದ ಸ್ಪಷ್ಟವಾಗಿದ್ದವು. ಏನೇ ಆದರೂ ಪ್ರವಾಸಕಾಲದಲ್ಲಿ ಎಂತಹ ಆಚಾರಸ್ಥನಾದರೂ 'ಪಥಿ (ದಾರಿಯಲ್ಲಿ) ಶೂದ್ರವದಾಚರೇತ್' ಎಂಬ ನುಡಿಯಂತೆ ಅಜ್ಜಿಯನ್ನು ಸಾಕ್ಷಾತ್ ಕನಕದುರ್ಗೆಯೆಂದೇ ಭಾವಿಸಿ, ಅವಳ ಹಸ್ತದಿಂದ ಬಡಿಸಿದ ಆಹಾರವನ್ನು ಕಂಠಪೂರ್ತಿ ಸೇವಿಸಿದರು. ಎಲ್ಲರೂ ಪ್ರಸಾದವನ್ನು ತೆಗೆದುಕೊಂಡ ಮೇಲೆ ಶಂಭು ತಿನಿಸುಗಳ ಕೈಚೀಲದಿಂದ ಚಕ್ಕುಲಿ, ಖಾರದ ಸೇವೆ, ನಿಪ್ಪಟ್ಟು ಹಾಗೂ ಸಿಹಿತಿನಿಸುಗಳನ್ನು ಎಲೆಗಳಲ್ಲಿ ಹಾಕಿ ಎಲ್ಲರ ಮುಂದೆ ಇಡಲು ಕನಕಾಗೆ ಸೂಚಿಸಿದ.

ಅಜ್ಜಿ ತಾನೂ ಪ್ರಸಾದ ಸ್ವೀಕರಿಸಿದಳು. ನೀರು ಕುಡಿದು ಮರದ ನೆರಳಿನಲ್ಲಿ ಎಲ್ಲರೂ ವಿಶ್ರಮಿಸಿದರು. ಅನಂತರ ಆರಾಧ್ಯರು ಕೊಳದಲ್ಲಿ ಮುಖ ತೊಳೆದು ಬಂದು, ಪ್ರಯಾಣಕ್ಕೆ ಸಿದ್ಧರಾದರು. ಉಳಿದವರೂ ಅವರನ್ನು ಅನುಕರಿಸಿದರು.

ದುಗ್ಗವ್ವೆ ಶಂಭು ಮತ್ತು ಆರಾಧ್ಯರನ್ನು ಕುರಿತು—

"ಸ್ವಾಮಿ, ಇಲ್ಲಿನ ಶಿಲ್ಪಗಳಲ್ಲಿರುವ ಒಂದು ವಿಶೇಷವನ್ನು ನೀವು ಗಮನಿಸಬೇಕು!" ಎಂದು ಎಚ್ಚರಿಸಿದಳು. ಎಲ್ಲರೂ ಅಜ್ಜಿಯ ಮಾತಿನ ಕಡೆ ಗಮನ ಹರಿಸಿದರು. ಅಜ್ಜಿ ಹೇಳಿದಳು—"ಇಲ್ಲಿಯ ಶಿಲ್ಪಗಳಲ್ಲಿ ಸ್ತ್ರೀ ವಿಗ್ರಹಗಳು ನಯನ ಮನೋಹರವಾಗಿವೆ. ಇವರಲ್ಲಿ ನಾಲ್ವರು ಸ್ತ್ರೀಯರು ಬುದ್ಧನ ಪಾದವನ್ನು ಪೂಜಿಸುತ್ತಿದ್ದಾರೆ. ಅವರ ಅಂಗವಿನ್ಯಾಸ ಎಷ್ಟು ರಮ್ಯವಾಗಿ ಚಿತ್ರಿತವಾಗಿದೆ ನೋಡಿ! ಆ ಸ್ತ್ರೀಯರ ಶಿಲ್ಪದಲ್ಲಿ ಶೃಂಗಾರಕ್ಕೆ ಎಡೆಕೊಡುವ ಒಂದಾದರೂ ಸೂಚನೆ ಹುಡುಕಿದರೂ ದೊರೆಯುವುದಿಲ್ಲ! ಅವರೆಲ್ಲರೂ ಬುದ್ಧನ ಉಪದೇಶಗಳಿಂದ ಪ್ರಭಾವಿತರಾಗಿದ್ದಾರೆ. ಇದೇ ಈ ಚಿತ್ರ(ಶಿಲ್ಪ)ಗಳಲ್ಲಿರುವ ವೈಶಿಷ್ಟ್ಯ!" ಎಂದಳು.

ಆರಾಧ್ಯರು ಮತ್ತು ಶಂಭು ಅಜ್ಜಿಯ ವಿವೇಕಪೂರ್ಣವಾದ ಪರಿಶೀಲನಾದೃಷ್ಟಿಗೆ ಬೆರಗಾದರು.

ಮುಂದುವರಿದು ಅಜ್ಜಿ ಹೇಳಿದರು, ಪ್ರಾಣಿಶಿಲ್ಪಗಳ ಕಡೆ ಅವರ ಗಮನ ಸೆಳೆದು—"ಸ್ವಾಮಿ, ಈ ಪ್ರಾಣಿಶಿಲ್ಪಗಳು ಎಷ್ಟು ಸಹಜವಾಗಿವೆ ನೋಡಿ! ಅದು ಈ ಶಿಲ್ಪದ ಮತ್ತೊಂದು ವೈಶಿಷ್ಟ್ಯ!

ಅದೋ, ಅಲ್ಲಿ ಕೆತ್ತಲ್ಪಟ್ಟಿರುವ ಆನೆ ಕೋಪಗೊಂಡು ಜನರಿಗೆ ಭೀತಿಯನ್ನುಂಟುಮಾಡುತ್ತಾ ಓಡಿಬರುತ್ತಿದೆ. ಮುಂದೆ ಬುದ್ಧನ ದರ್ಶನವಾದ ಕೂಡಲೇ ಎಷ್ಟು ಸೌಮ್ಯವಾಗಿ ಬುದ್ಧನ ಪಾದದಡಿಯಲ್ಲಿ ಮುದುಡಿಕೊಂಡು ನಿಂತಿದೆ ನೋಡಿ, ಇದು ಈ ಶಿಲ್ಪಿಯ ವಿಶಿಷ್ಟ ರಚನಾ ವೈಖರಿ!"

"ಮಾವ, ಬೌದ್ಧ ಧರ್ಮದಲ್ಲಿ ಎರಡು ಭೇದಗಳಿವೆ ಎನ್ನುತ್ತಾರೆ. ಅವು ಯಾವುವು?" ಎಂದ ಶ್ರೀಪತಿ.

ಶಂಭು ಹೇಳಿದ, "ನಿಜ ಮರಿ, ಬೌದ್ಧರಲ್ಲಿ 'ಹೀನಯಾನ' ಮತ್ತು 'ಮಹಾಯಾನ' ಎಂಬ ಎರಡು ಪ್ರಭೇದಗಳಿವೆ."

"ಅವುಗಳನ್ನು ಗುರ್ತಿಸುವುದು ಹೇಗೆ ಮಾವ?"

"ಹೀನಯಾನದಲ್ಲಿ ಬುದ್ಧನ ಪಾದ, ಬೋಧಿವೃಕ್ಷ, ಸಿಂಹಾಸನ ಮುಂತಾದ ಸಂಕೇತಗಳಿರುತ್ತವೆ. ಈ ಸಂಕೇತಗಳಿಂದ ಅದು ಹೀನ ಯಾನಕ್ಕೆ ಸೇರಿದ ಶಿಲ್ಪವೆಂದು ಗುರ್ತಿಸಬಹುದು. ಆದರೆ ಇತ್ತೀಚೆಗೆ ಗಾಂಧಾರ ಮತ್ತು ಮಥುರಾ ಶಿಲ್ಪಗಳಿಂದ ಪ್ರಭಾವಿತರಾದ ಈ ಶಿಲ್ಪಿಗಳಿಂದ ಇಲ್ಲಿಯೂ ಸಹ ಮಹಾಯಾನ ಸೂಚಕವಾದ ಬುದ್ಧ ವಿಗ್ರಹಗಳು ನಿರ್ಮಾಣ ವಾಗಿವೆ.

ಮಹಾಪುರುಷ ಲಕ್ಷಣಗಳನ್ನು ಒಳಗೊಂಡ ಬುದ್ಧ ವಿಗ್ರಹಗಳು ಈ ಅಮರಾವತಿಯ ವಿಗ್ರಹಗಳಲ್ಲಿ ಸ್ಪಷ್ಟಗೊಂಡಿವೆ ಎಂದು ವಿದ್ವಾಂಸರು ಊಹಿಸಿದ್ದಾರೆ.

ಬೌದ್ಧ ದರ್ಶನವನ್ನಾಗಲಿ, ಗೌತಮ ಬುದ್ಧನ ಚಾರಿತ್ರವನ್ನಾಗಲಿ ಸಂಪೂರ್ಣವಾಗಿ ಕಂಡರಿಯದ ಶ್ರೀಪತಿ ಅಮರಾವತಿಯ ಬುದ್ಧ ವಿಗ್ರಹ ಗಳನ್ನೂ ಬೌದ್ಧ ವಿಹಾರಗಳನ್ನೂ ಕಂಡು ಪುಳಕಿತನಾದ.

ಅವನು ಅಜ್ಜಿಯ ಕಡೆ ತಿರುಗಿ, "ಅಜ್ಜಿ, ಈ ಭಾಗದಲ್ಲಿ ಬೌದ್ಧ ಧರ್ಮವನ್ನು ಸ್ವೀಕರಿಸಿ, ಅದನ್ನು ಪ್ರಭಾವಿತವನ್ನಾಗಿ ಮಾಡಿದವರು ಯಾರು ?" ಎಂದು ಪ್ರಶ್ನಿಸಿದ.

ಅಜ್ಜಿ ಉತ್ತರಿಸಿದಳು, "ಇದ್ದಾರೆ ಮರಿ, ಅವರಲ್ಲಿ 'ಸಿದ್ಧ ನಾಗಾ ರ್ಜುನ' ಎಂಬ ಆಚಾರ್ಯನ ಹೆಸರು ಸುಪ್ರಸಿದ್ಧ. ಆತ ಇಲ್ಲಿಗೆ ಸಮೀಪ ದಲ್ಲಿರುವ ಅವನ ಹೆಸರಿನ ಬೆಟ್ಟದಲ್ಲಿ ಸಮಾಧಿ ಹೊಂದಿದ್ದಾನೆ. ಆದ್ದ ರಿಂದಲೇ ಆ ಬೆಟ್ಟವು 'ನಾಗಾರ್ಜುನ ಕೊಂಡ' ಎಂದು ಪ್ರಸಿದ್ಧವಾಗಿದೆ. ಅವನು ಬೌದ್ಧ ಧರ್ಮದ ಮಾಧ್ಯಮಿಕ ಶಾಖೆಯ ಮಹಾವಿದ್ವಾಂಸ."

ಅಜ್ಜಿಯ ಮಾತು ಕೇಳಿ ಶಂಭು ಚಕಿತನಾದ. ಆತ ಕೇಳಿದ—

"ದುಗ್ಗವ್ವ, ನೀನು ನೋಡಿದರೆ ಅವಿದ್ಯಾವಂತ ಹೆಣ್ಣು ಮಗಳಂತೆ ಕಾಣುತ್ತಿದ್ದೀಯೆ. ಆದರೆ ನಿನ್ನ ಅನುಭವ ನೋಡಿದರೆ ಎಂತಹ ದಾರ್ಶನಿಕರೂ ಅಚ್ಚರಿ ಪಡುವಂತೆ ಇದೆ! ನೀನು ಎಲ್ಲಿಯುವರೆಗೂ ಓದಿದ್ದೆ ತಾಯಿ ?" ಎಂದ.

ಅಜ್ಜಿ ಉತ್ತರಿಸಿದಳು—"ಅಪ್ಪ, ನೀವೆಲ್ಲ ದೊಡ್ಡ ವಿದ್ವಾಂಸರು. ನಿಮಗೆ ತಿಳಿದಷ್ಟು ನಾನು ತಿಳಿಯಲು ಸಾಧ್ಯವೆ? ಒಂದು ಮಾತು ನೆನಪಿಗೆ ಬರುತ್ತೆ. ಓದು ಎರಡು ವಿಧ. ಒಂದು ಶಾಲೆಯಲ್ಲಿ ಕಲಿತ ಓದು. ಮತ್ತೊಂದು ಲೋಕಾನುಭವದಿಂದ ಅರಿತದ್ದು. ಇದರಲ್ಲಿ ನಾನು ಯಾವ ಶಾಲೆಯಲ್ಲಿಯೂ ಓದಿದವಳಲ್ಲ. ಆದರೆ ನಿಮ್ಮಂತಹವರ 'ವೃದ್ಧಸೇವಾನುರಾಗಂ' ಎಂಬ ಮಾತಿದೆಯಲ್ಲ, ಅದರಂತೆ ಬಲ್ಲವರಿಂದ ತಿಳಿದದ್ದು, ಹಿಂದೆ ಋಷಿಗಳ ಕಾಲದಲ್ಲಿ ದನ ಕಾಯಲು ಹೋಗಿದ್ದ ಉಪಮನ್ಯುವಿನಂತಾದ ಋಷಿ ಶಿಷ್ಯರು ಕಾಡಿನಲ್ಲಿ ದನ ಕಾಯುತ್ತಿದ್ದು ಮಹರ್ಷಿಗಳಾಗಿ ಮಂತ್ರಗಳನ್ನು ಕಂಡಿಲ್ಲವೆ ?" ಎಂದಳು.

ಅದನ್ನು ಕೇಳಿದ ಆರಾಧ್ಯರು ಮೂಗಿನ ಮೇಲೆ ಬೆರಳಿಟ್ಟು ಕೊಂಡರು. ಶಂಭು ಮಂತ್ರಮುಗ್ಧನಂತೆ ಮೌನ ಧರಿಸಿದ. ಅಜ್ಜಿ ಹೇಳಿದಳು—

ಸ್ವಾಮಿ, ರತ್ನವನ್ನು ಮಸಿ ಬಟ್ಟೆಯಲ್ಲಿ ಕಟ್ಟಿದ ಮಾತ್ರಕ್ಕೆ ಅದರ ಹೊಳಪು ಕಡಮೆಯಾದೀತೆ ?" ಎಂದು ಸವಾಲು ಹಾಕಿದಳು.

ಪತಿ "ಅಜ್ಜಿಯು ಯಾರೇ ಆಗಿರಲಿ ಅವಳು ಮಹಾಮಾತೆ" ಎಂದು ವಂದಿಸಿದ. ಕನಕಳೂ ಅವನನ್ನು ಅನುಸರಿಸಿದಳು. ಶಂಭು ಮತ್ತು ಆರಾಧ್ಯರು ಅಜ್ಜಿಗೆ ಕೈಮುಗಿದು, "ತಾಯಿ, ನಾಗಾರ್ಜುನಕೊಂಡದ ಪರಿಚಯವೂ ನಿನಗೆ ಇದ್ದಂತೆ ಕಾಣುತ್ತದೆ. ಆದ್ದರಿಂದ ನೀನು ನಮ್ಮ ಜೊತೆ ಇದ್ದು ನಾಳೆಯೂ ನಾಗಾರ್ಜುನಕ್ಕೆ ನಮ್ಮನ್ನು ಕೊಂಡೊಯ್ದು ಅದರ ಪರಿಚಯ ಮಾಡಿಕೊಡಬೇಕು" ಎಂದರು.

"ಅಪ್ಪ, ನಿಮಗೆ ಬರೀ ನಾಗಾರ್ಜುನಕೊಂಡ ಮಾತ್ರವೇ ಏಕೆ ? ನನಗೆ ಈ ಭರತಖಂಡದಲ್ಲಿರುವ ಎಲ್ಲ ಕ್ಷೇತ್ರಗಳ ಪರಿಚಯವೂ ಇದೆ.

ಈ ನನ್ನಪ್ಪ ನನಗೆ ಪ್ರಾಣದಾನ ಮಾಡಿದ. ಈ ಮರಿ ಏನೇನು ನೋಡ ಬೇಕು ಎನ್ನುವನೋ ಅದನ್ನೆಲ್ಲ ನಾನೇ ಬಂದು ಪರಿಚಯ ಮಾಡಿಕೊಡು ತ್ತೇನೆ."

—ಎಂದು ಹೇಳಿದಳು. ಅವರು ಊರಿನ ದಾರಿ ಹಿಡಿದರು. ದೋಣಿ ಇಳಿದಾಗ ಶ್ರೀಪತಿ ಅಜ್ಜಿಯನ್ನು ಮನೆಗೆ ಕರೆತರಲು ಮಾಡಿದ ಪ್ರಯತ್ನ ಫಲಿಸಲಿಲ್ಲ.

ಅಜ್ಜಿ ಹೇಳಿದಳು, "ಮರಿ, ನನಗೆ ಭಾರತದಲ್ಲೆಲ್ಲಾ ಸುಪರಿಚಿತ ರಿದ್ದಾರೆ. ನಾನು ಅಲ್ಲಲ್ಲಿ ತಂಗಿದ್ದು ನಿಮ್ಮ ಪ್ರವಾಸದಲ್ಲಿ ಸೇರಿಕೊಳ್ಳು ತ್ತೇನೆ. ಯೋಚನೆ ಬೇಡ" ಎಂದು ಹೇಳಿ ಆರಾಧ್ಯರನ್ನು ಹಿಂಬಾಲಿಸಿ ದಳು, ಊರ ಹತ್ತಿರ ಬರುವ ವೇಳೆಗೆ ಅವಳು ಕಾಣೆಯಾಗಿದ್ದಳು.

ಇನ್ನೂ ಸಂಜೆಗೆಂಪು ಮಾಸುವ ಮುನ್ನವೇ ಮನೆಗೆ ಹಿಂದಿರುಗಿದ ಯಾತ್ರಿಕರನ್ನು ಕಂಡು ಭಾಗೀರಥಿಗೆ ತುಂಬಾ ಖುಷಿಯೇ ಆಯಿತು. ಅವಳು ಶ್ರೀಪತಿಯನ್ನು ಕರೆದು--

"ಏನು ಅಷ್ಟು ದೂರ ನಡೆದು ನಿಮಗೆ ಆಯಾಸವಾಗಲಿಲ್ಲವೆ ?" ಎಂದು ಅವನ ಬೆನ್ನು ಚಪ್ಪರಿಸಿ, "ಕನಕಾ, ನೀನೂ ಅವರ ಜತೆ ನಡೆದೆ ಯಲ್ಲಾ ಕಾಲು ನೋಯಲಿಲ್ಲವೆ ?" ಎಂದು ತಲೆ ನೇವರಿಸಿದಳು.

ಶ್ರೀಪತಿ ದೋಣಿಯಲ್ಲಿ ನಡೆದ ಅಪಘಾತವನ್ನು ತಾಯಿಗೆ ತಿಳಿಸಿ ದಾಗ ಅವಳು ಆಶ್ಚರ್ಯಚಕಿತಳಾದಳು.

"ಯಾರು ಆ ದುಗ್ಗವ್ವೆ ? ಮನೆಗೆ ಕರೆತರಬಾರದಾಗಿತ್ತೆ ?" ಎಂದು ಪತಿದೇವರನ್ನು ಆಕ್ಷೇಪಿಸಿದರು. ಆದರೆ ಬುದ್ಧಿಯವರು ಗಂಭೀರವಾಗಿ ಹೇಳಿದರು, "ಭಾಗು, ಅದು ನಿಗೂಢ ರಸಸ್ವಪ್ನ ! ಏಕೆಂದರೆ, ನಾನು ಅವಳ ಮಾಸಿದ ಸೀರೆ, ಹರಿದ ಕುಪ್ಪಸ, ಸುಕ್ಕುಕಟ್ಟಿದ ಮುಖ, ನರೆ ಕೂದಲು ಬೆರೆತ ಮುಡಿಗಳನ್ನು ಕಂಡು,ಅವಳು ಸಾಮಾನ್ಯ ಹೆಂಗುಸೆಂದು ಭಾವಿಸಿದ್ದೆ. ಹೆಸರು ಕೇಳಿದರೆ 'ದುಗ್ಗವ್ವ' ಎಂದಳು. 'ನನಗೆ ಭಾರತದ ಎಲ್ಲ ತೀರ್ಥಕ್ಷೇತ್ರಗಳು, ಅಲ್ಲಿಯ ಇತಿಹಾಸವನ್ನೆಲ್ಲ ಬಲ್ಲೆ, ಎಲ್ಲೆಡೆಯೂ

ನನ್ನವರಿದ್ದಾರೆ' ಎಂದೆಲ್ಲ ಹೇಳಿದಳಲ್ಲದೆ ಆವಳು ಬೌದ್ಧದರ್ಶನ, ಉಪನಿಷತ್ತಿನ ಕತೆಗಳು ಮುಂತಾದುವನ್ನೆಲ್ಲ ಮಾತನಾಡಿದಳು. ಕಡೆಗೆ "ರತ್ನವನ್ನು ಮಸಿಬಟ್ಟೆಯಲ್ಲಿ ಕಟ್ಟಿದರೆ ಅದರ ಹೊಳಪಿಗೆ ಕುಂದೆ?' ಎಂದು ನಮ್ಮ ಹಿಂದೆ ಬರುತ್ತಿದ್ದವಳು ಊರ ಮುಂದೆ ಬಂದಾಗ ಹಿಂದಿರುಗಿ ನೋಡಿದರೆ ಕಾಣಲೇ ಇಲ್ಲ !"

—ಎಂದರು. ಕತೆ ಕೇಳಿದ ಭಾಗೀರಥಿಗೆ ಸೋಜಿಗ ! ಆವಳು "ನನ್ನ ತಾಯಿಯ ದರ್ಶನಕ್ಕೆ ಹೋದಾಗ ಬಲಗಡೆ ಪುಷ್ಪವಾಯಿತು. ಎಲ್ಲಾ ಅವಳ ಮಹಿಮೆ ! ಯಾವ ರೂಪದಿಂದ ಬಂದು ನಮ್ಮ ಶ್ರೀಪತಿಗೆ ದಾರಿ ತೋರುವಳೊ !" ಎಂದು ಮನಸಾ ದೇವಿಗೆ ವಂದಿಸಿದಳು.

೪

ಮರುದಿನ ನಾಲ್ವರೂ ಮುಂಜಾನೆ ನಿತ್ಯಾಹ್ನಿಕಗಳನ್ನು ಮುಗಿಸಿಕೊಂಡು ನದಿಯ ದಡಕ್ಕೆ ಬರುವ ವೇಳೆಗೆ ದುಗ್ಗವ್ವೆ ಇವರಿಗಾಗಿ ಕಾಯುತ್ತಿದ್ದಳು. ಶ್ರೀಪತಿ ಕೇಳಿದ—

"ಅಜ್ಜಿ, ನೀನು ರಾತ್ರೆ ನಮ್ಮ ಮನೆಗೆ ಬರಲಿಲ್ಲವಲ್ಲಾ ಎಂದು ಅಮ್ಮ ತುಂಬಾ ಕಳವಳಪಟ್ಟಳು" ಎಂದ.

ಅಜ್ಜಿ ಹೇಳಿದಳು, "ಕಳವಳ ಏತಕ್ಕೆ ಮರಿ ? ನನಗೆ ಎಲ್ಲೆಡೆ ಸಾಕಷ್ಟು ಪರಿಚಿತರಿದ್ದಾರೆ. ಯಾವುದಕ್ಕೂ ಯೋಚನೆ ಇಲ್ಲ" ಎಂದಳು. ಐದು ಜನವೂ ಒಂದು ದೋಣಿಯನ್ನು ಹತ್ತಿ ಸುಖವಾಗಿ ನದಿ ದಾಟಿದರು. ಅಜ್ಜಿ ಕೋಲೂರಿಕೊಂಡು ನಾಗಾರ್ಜುನಕೊಂಡದ ದಾರಿ ಹಿಡಿದಳು.

ಗುಂಟೂರು, ಪಲ್ನಾಡುಗಳಿಗೆ ಸೇರಿದ ಒಂದು ಪ್ರಕೃತಿ ಸೌಂದರ್ಯದ ಬೀಡು ಎನಿಸಿದ ಕಣಿವೆಯ ದಾರಿಯಲ್ಲಿ ಅಜ್ಜಿ ಮುನ್ನಡೆದಿದ್ದಳು. ಅದರ ಸುತ್ತಮುತ್ತ ಎತ್ತರವಾದ ಪರ್ವತಗಳು, ಪಶ್ಚಿಮಕ್ಕೆ ಕೃಷ್ಣೆಯ ತೀರ

ಪ್ರದೇಶ. ಅದನ್ನು ಕಂಡು ನಿಬ್ಬೆರಗಾದ ಪತಿ ಅಜ್ಜಿಯನ್ನು ಕುರಿತು ಕೇಳಿದ—

"ಅಜ್ಜಿ, ಈ ಕಣಿವೆ ಯಾವುದು ?" ಎಂದು.

"ಈ ಕಣಿವೆಯ ಕತೆ ತುಂಬಾ ಪುರಾತನವಾದದ್ದು. ಪ್ರಾಚೀನ ಶಿಲಾಯುಗದಲ್ಲಿ ಬಳಸುತ್ತಿದ್ದ ಶಿಲಾಯುಧಗಳು ಇಲ್ಲಿ ದೊರೆತಿವೆಯಾದ್ದರಿಂದ, ಅಂದಿನಿಂದಲೂ ಮಾನವರು ಇಲ್ಲಿ ವಾಸಿಸುತ್ತಿದ್ದರೆಂದು ತಿಳಿದು ಬಂದಿದೆ. ಕಲ್ಲಿನ ಕೊಡಲಿ, ಬಂಡೆಕಲ್ಲಿನ ಆಯುಧಗಳು, ಚಕ್ಕೆ ಕಲ್ಲಿನ ಆಯುಧಗಳು ಆದಿ ಶಿಲಾಯುಗಕ್ಕೆ ಸೇರಿದವುಗಳು. ಇಷ್ಟೇ ಅಲ್ಲದೆ, ಇಲ್ಲಿ ಆದಿ ಶಿಲಾಯುಗ, ಮಧ್ಯ ಶಿಲಾಯುಗ, ಸೂಕ್ಷ್ಮ ಶಿಲಾಯುಗ, ಅಂತ್ಯ ಶಿಲಾಯುಗ ಹಾಗೂ ಕಬ್ಬಿಣ ಯುಗದವರೆಗೂ ಮಾನವರು ಆಗಾಗ್ಗೆ ಬಳಸುತ್ತಿದ್ದ ಆಯುಧಗಳು ದೊರೆತಿರುವುದರಿಂದ ಇಲ್ಲಿ ಅಂದಿನಿಂದಲೂ ಜನವಸತಿ ಇದ್ದಂತೆ ತಿಳಿದು ಬಂದಿದೆ.

ಐತಿಹಾಸಿಕವಾಗಿ ಈ ಪ್ರದೇಶವನ್ನು ಮಗಧ ದೇಶದ ನಂದರಾಜರು ಮೊದಲು ಆಳುತ್ತಿದ್ದರು. ಮುಂದೆ ಇದು ಮೌರ್ಯ ಚಕ್ರಾಧಿಪತ್ಯದಲ್ಲಿ ಸೇರಿಹೋಯಿತು ಎಂದು ಹೇಳುತ್ತಾರೆ. ಇಂದಿಗೆ ಸುಮಾರು ಒಂದು ಸಾವಿರ ವರ್ಷಗಳಿಗೆ ಹಿಂದೆ ಮೌರ್ಯರ ಸಾಮಂತರಾದ ಸಾತವಾಹನರು ಈ ನಾಡನ್ನು ಆಳುತ್ತಿದ್ದರು. ಈ ವಂಶದ ಗೌತಮಿ ಶಾತಕರ್ಣಿ ಮತ್ತು ಶಾತವಾಹನ ರಾಜರು ಇಲ್ಲಿ ಬೌದ್ಧ ಧರ್ಮಕ್ಕೆ ಆಶ್ರಯ ಕೊಟ್ಟಿದ್ದರು. ಆದ್ದರಿಂದ ಹಲವಾರು ಸ್ತೂಪಗಳು, ಚೈತ್ಯಾಲಯಗಳು ಮತ್ತು ಸಂಘಾರಾಮಗಳು ಇಲ್ಲಿ ಕಟ್ಟಲ್ಪಟ್ಟಿವೆ.

ಇವರ ರಾಜಧಾನಿ 'ಧಾನ್ಯಕಟಕ' (ಅಮರಾವತಿ). ಮುಖ್ಯ ರಾಜಧಾನಿ ವಿಜಯಪುರ. ಅದು ಈ ನಾಗಾರ್ಜುನಕೊಂಡದ ಕಣಿವೆಯಲ್ಲಿತ್ತು ಎಂಬ ಪ್ರವಾದವಿದೆ.

ಸಾತವಾಹನರ ಮೊದಲ ದೊರೆ ವಾಸಿಷ್ಠ ಪುತ್ರ ಶ್ರೀಶಾಂತಮೂಲ; ಕೊನೆಯ ದೊರೆ ನಾಲ್ಕನೆ ಪುಲಿಮಾಯಿ. ಇಕ್ಷ್ವಾಕುಗಳು ಮೊದಲು ಸಾತವಾಹನರ ಸಾಮಂತರಾಗಿದ್ದರು. ಅನಂತರ ಅವರು ಸ್ವತಂತ್ರ

ರಾದರು. ಅವರ ಕಾಲದಲ್ಲಿ ನಾಗಾರ್ಜುನಕೊಂಡ ಪ್ರದೇಶದಲ್ಲಿ ಅಗ್ನಿಷ್ಟೋಮ ಮತ್ತು ಅಶ್ವಮೇಧ ಯಾಗಗಳನ್ನು ಮಾಡಿದಂತೆ ಹೇಳುತ್ತಾರೆ. ಅವನೇ ಮಹಾಸೇನ ಸಮ್ರಾಟ. ಆತ ಕಾರ್ತಿಕೇಯ ಸ್ವಾಮಿಯ ಭಕ್ತ.

ಈ ಪ್ರದೇಶವು ಇಕ್ಷ್ವಾಕು ರಾಜರ ಆಳ್ವಿಕೆಯಲ್ಲಿದ್ದಾಗ ಅವರು ಬೌದ್ಧ ಧರ್ಮಕ್ಕೆ ಆಶ್ರಯವಿತ್ತಿದ್ದರಿಂದ ಬೌದ್ಧ ಧರ್ಮವು ಇಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿತ್ತಂತೆ ! ಇಕ್ಷ್ವಾಕುಗಳು ವೈದಿಕ ಧರ್ಮಾನುಯಾಯಿಗಳು. ಅವರು ಶಿವನ ಉಪಾಸಕರು. ಅವರು ವೈಷ್ಣವ ಧರ್ಮಕ್ಕೂ ಉತ್ತೇಜನ ಕೊಟ್ಟಿದ್ದರು. ನಾಗಾರ್ಜುನಕೊಂಡದಲ್ಲಿ ಅನೇಕ ಸ್ತೂಪಗಳೂ ಚೈತ್ಯಾಲಯಗಳೂ ಇವೆ. ಅಲ್ಲಿರುವ ಮಹಾಚೈತ್ಯವನ್ನು ಕಟ್ಟಿಸಿದವಳು ವಾಸಿಷ್ಟ ಪುತ್ರ ಶ್ರೀಶಾಂತಮೂಲನ ಸಹೋದರಿ. ಅವಳಿಗೆ 'ಮಹಾದಾನಪತಿನಿ' ಎಂಬ ಬಿರುದಿತ್ತು. ಅವಳು ಬೌದ್ಧ ಭಿಕ್ಷುಗಳ ಸಹಾಯಾರ್ಥವಾಗಿ ಅನೇಕ ದಾನ-ದತ್ತಿಗಳನ್ನೂ ಕೊಡಿಸಿದ್ದಳು"

ಮುಂತಾದ ಕಣಿವೆಯ ಕತೆಯನ್ನು ಅಜ್ಜಿ ಹೇಳುತ್ತಿದ್ದಾಗ ಅವರಿಗೆ ದಾರಿ ಸವೆದುದೇ ತಿಳಿಯಲಿಲ್ಲ. ಆ ವೇಳೆಗಾಗಲೇ ಅವರು ನಾಗಾರ್ಜುನ ಕೊಂಡದ ಬುಡ ಸೇರಿದ್ದರು. ಆರಾಧ್ಯರು ಮಧ್ಯೆ ಬಾಯಿ ಹಾಕಿ, "ಶಂಭು, ನಮ್ಮಲ್ಲಿ ಬಳಕೆಯಲ್ಲಿರುವ ದರ್ಶನಗಳಲ್ಲಿ ಬೌದ್ಧದರ್ಶನ ಪ್ರಮುಖವಾದದ್ದು. ಅದರಲ್ಲಿ ನಾಗಾರ್ಜುನ ಬೌದ್ಧ ಧರ್ಮದ ಮಾಧ್ಯಮಿಕ ಶಾಖೆಯ ಪ್ರವರ್ತಕನೆಂದೂ ನೀನು ಹೇಳಿದೆ ! ಆ ಬಗ್ಗೆ ಇನ್ನೂ ಸ್ವಲ್ಪ ವಿವರಿಸಿದರೆ ಶ್ರೀಪತಿಗೆ ತುಂಬಾ ಉಪಕಾರವಾಗುತ್ತದೆ" ಎಂದರು.

ಶಂಭು, "ನಿಜ ಭಾವ, ನಾಗಾರ್ಜುನಾಚಾರ್ಯ ಮಾಧ್ಯಮಿಕ ಶಾಖೆಯ ಬೌದ್ಧ ಮತ ಪ್ರವರ್ತಕ. ಆತ ಇದೇ ಆಂಧ್ರ ಪ್ರಾಂತಕ್ಕೆ ಸೇರಿದ 'ವೇದಲಿ' ಎಂಬ ಗ್ರಾಮದಲ್ಲಿ ಹುಟ್ಟಿದನಂತೆ.

ಈತ ಹುಟ್ಟಿನಿಂದ ಬ್ರಾಹ್ಮಣ. ಮುಂದೆ ಬೌದ್ಧ ಭಿಕ್ಷುವಾಗಿ ಪರಿವರ್ತಿತನಾದ." ಅಷ್ಟರಲ್ಲಿ ಶ್ರೀಪತಿ ಮಧ್ಯ ಬಾಯಿ ಹಾಕಿ, "ಮಾವ,

ಶ್ರೋತ್ರಿಯನಾಗಿದ್ದ ನಾಗಾರ್ಜುನ ಭಿಕ್ಷು ಆಗಲು ಕಾರಣವೇನು ?" ಎಂದು ಪ್ರಶ್ನಿಸಿದ.

"ನಾಗಾರ್ಜುನನ ಗುರು ಯಾರು ಎಂಬುದು ತಿಳಿದುಬಂದಿಲ್ಲ. ಈತ ಸಿಂಹಭದ್ರ ಎಂಬ ಭಿಕ್ಷುವನ್ನು ಆಶ್ರಯಿಸಿ, 'ಸರ್ವಾಸ್ತಿವಾದ' ಶಾಸ್ತ್ರಗಳನ್ನು ಅಭ್ಯಾಸ ಮಾಡಿದನೆಂದೂ ಅನಂತರ ಶ್ರಾವಕನಾದ ಈತ 'ಪ್ರಜ್ಞಾಧರ' ಎಂಬ ಹೆಸರಿನಿಂದ ಬೌದ್ಧಸಂಘದಲ್ಲಿ ಹದಿಮೂರನೆಯ ಆಚಾರ್ಯನಾಗಿ 'ನಾಗಾರ್ಜುನಾಚಾರ್ಯ' ಎಂಬ ಹೆಸರು ತಳೆದ.

ಆಂಧ್ರ ಚಕ್ರವರ್ತಿ ಶಾತವಾಹನನ ಕಾಲದಲ್ಲಿ ಈತ ರಾಜಗುರುವಾಗಿದ್ದ ಎಂದು ಇತ್‌ಸಿಂಗ್ (ಚೀನಾ ಬೌದ್ಧ ಯಾತ್ರಿಕ) ಬರೆದಿದ್ದಾನೆ. ಈತನಿಗೆ ಧರ್ಮಬುದ್ಧಿ ಬೆಳೆಯಲೆಂದು ನಾಗಾರ್ಜುನ 'ಸುಹೃಲ್ಲೇಖ' ಎಂಬ ಗ್ರಂಥವನ್ನು ರಚಿಸಿದನಂತೆ !

ಶಾತವಾಹನ ನಾಗಾರ್ಜುನನಿಗಾಗಿ ಕೋಸಲದ ದಕ್ಷಿಣದಲ್ಲಿ ವಿಹಾರವೊಂದನ್ನು ನಿರ್ಮಿಸಿ, ಅದಕ್ಕೆ ಸಮೀಪದಲ್ಲಿರುವ 'ಭ್ರಮರಗಿರಿ' ಎಂಬ ಬೆಟ್ಟದ ಮೇಲೆ 'ಮಹಾಚೈತ್ಯ'ವೊಂದನ್ನು ನಿರ್ಮಿಸಿ ಆ ಬೆಟ್ಟವನ್ನು 'ಶ್ರೀಪರ್ವತ' ಎಂದು ಹೆಸರಿಸಿದ. ಅದೇ ಈ ನಾಗಾರ್ಜುನಕೊಂಡ ಎಂದು ಹೇಳುತ್ತಾರೆ.

ಇಲ್ಲಿ ನಾಗಾರ್ಜುನ ಹಲವಾರು ವರ್ಷ ವಾಸವಾಗಿದ್ದು, ಧರ್ಮಪ್ರಸಾರ ಮಾಡಿದ. ಮಹಾಯಾನ ಪಂಥವು ಆರಂಭವಾದದ್ದು ಇಲ್ಲಿಂದಲೇ ಎಂದು ಕೇಳಿದ್ದೇನೆ"

—ಎಂದ ಶಂಭು ಭಟ್ಟರಿಗೆ ಬೆಂಬಲವಾಗಿ ಅಜ್ಜಿ ಹೇಳಿದಳು.

"ಇಲ್ಲಿ ನಾಗಾರ್ಜುನ ಅನೇಕ ವರ್ಷಗಳ ಕಾಲ ತಪಸ್ಸನ್ನು ಮಾಡಿದನೆಂದೂ, ಮಂಜುಶ್ರೀ ಬೋಧಿಸತ್ವನು ಅವನಿಗೆ ಕಾಣಿಸಿಕೊಂಡು 'ಅಕ್ಷಯ ಮತಿಸೂತ್ರ'ವನ್ನು ಬೋಧಿಸಿದನೆಂದೂ ಅದರ ಆಧಾರದ ಮೇಲೆ ನಾಗಾರ್ಜುನ 'ಮಾಧ್ಯಮಿಕ ಪಂಥ'ವನ್ನು ಪರಿವರ್ತಿಸಿದನೆಂದೂ ಕೇಳಿದ್ದೇನೆ.

ಎರಡನೆಯದಾಗಿ ನಾಗಾರ್ಜುನನಿಗೆ ವೈದ್ಯ, ಜ್ಯೋತಿಷ್ಯ, ಖಗೋಳ ಶಾಸ್ತ್ರ ಮತ್ತು ರಸವಾದಗಳಲ್ಲಿಯೂ ಅಪೂರ್ವ ಪಾಂಡಿತ್ಯವಿತ್ತಂತೆ ! ಇದರಿಂದ ನಾಗಾರ್ಜುನ ನೀಚಲೋಹಗಳನ್ನು ಚಿನ್ನವಾಗಿ ಪರಿವರ್ತಿಸುತ್ತಿದ್ದನೆಂಬ ಪ್ರವಾದವೂ ಇದೆ.

ಮೂರನೆಯದಾಗಿ ನಾಗಾರ್ಜುನನ ನ್ಯಾಯ ಪದ್ಧತಿಯನ್ನು ಅನಂತರದ ಅನೇಕ ದಾರ್ಶನಿಕರು ಅನುಸರಿಸುತ್ತಿದ್ದರಂತೆ. ಇವರಲ್ಲಿ ಗೌಡಪಾದ, ಶಂಕರಾಚಾರ್ಯ, 'ಖಂಡನಖಂಡಖಾದ್ಯ' ಗ್ರಂಥಕರ್ತೃ ಶ್ರೀಹರ್ಷ ಮುಂತಾದವರೂ ಸೇರಿದ್ದರೆಂದು ನಿಮ್ಮಂತಹವರ ಮುಖದಿಂದ ಕೇಳಿದ್ದೇವೆ.

ಕಾಶ್ಮೀರದ ಹುಷ್ಕ, ಜುಷ್ಕ ಮತ್ತು ಕಾನಿಷ್ಕರು ನಾಗಾರ್ಜುನನಿಗೆ ತುಂಬಾ ಗೌರವ ತೋರಿಸುತ್ತಿದ್ದರಂತೆ !"

ಅಜ್ಜಿ ನಾಗಾರ್ಜುನನ ಕತೆಯ ಜೊತೆಗೆ ಬೌದ್ಧ ಧರ್ಮದ ಇತಿಹಾಸವನ್ನೇ ಅಂಗೈ ನೆಲ್ಲಿಕಾಯಿಯಂತೆ (ಕರತಲಾಮಲಕ) ಮಾಡಿಕೊಂಡವಳಂತೆ, ಅದನ್ನು ಸಂಪೂರ್ಣವಾಗಿ ತಿಳಿದವಳಂತೆ ಹೇಳುತ್ತಿದ್ದುದನ್ನು ಕೇಳುತ್ತಿದ್ದ ಶ್ರೀಪತಿ ಬೆರಗಾಗಿದ್ದ. ಮತ್ತು ಕೇಳಿದ—"ಮಾವ, ನೀನು ನಾನು ಕೇಳಿದ ಪ್ರಶ್ನೆಗೆ ಗಮನವನ್ನೇ ಕೊಡಲಿಲ್ಲ" ಎಂದು ಆಕ್ಷೇಪಿಸಿದ.

ಶಂಭು ಅವನ ಕಡೆ ತಿರುಗಿ, "ಏನು ಮರಿ ನಿನ್ನ ಆಕ್ಷೇಪ ?" ಎಂದ.

"ಅದೇ ಮಾವ, ಶ್ರೋತ್ರಿಯನಾಗಿದ್ದ ನಾಗಾರ್ಜುನ ಬೌದ್ಧ ಭಿಕ್ಷುವಾದದ್ದೇಕೆ ?" ಎಂದು.

"ಮರಿ, ನಿನ್ನ ಸಂದೇಹ ಯೋಗ್ಯವಾಗಿದೆ. ಏಕೆಂದರೆ ಬೌದ್ಧ ಧರ್ಮ ಪ್ರಾರಂಭವಾದದ್ದೇ ಬ್ರಾಹ್ಮಣರಿಂದ.

ಗೌತಮ ಬುದ್ಧ ಕ್ಷತ್ರಿಯನಲ್ಲವೆ ? ಅವನು ಅಯೋಧ್ಯೆಯ ಅರಸು ಶುದ್ಧೋದನ ಎಂಬ ರಾಜನ ಮಗ. ಅವನ ಹೆಸರು 'ಸಿದ್ಧಾರ್ಥ' ಎಂದು."

"ಆ ರಾಜಪುತ್ರ ಗೌತಮ ಬುದ್ಧನಾದದ್ದು ಹೇಗೆ ?"

"ಈ ರಾಜಪುತ್ರನು ಲೋಕದಲ್ಲಿರುವ ದುಃಖ, ದಾರಿದ್ರ್ಯ, ಹುಟ್ಟು, ಸಾವು, ನೋವು, ರೋಗ-ರುಜಿನಗಳನ್ನು ಕಂಡು ಜನರನ್ನು ಇವುಗಳಿಂದ ಪಾರು ಮಾಡಲು ನಿರ್ಧರಿಸಿದ. ಈ ತನ್ನ ಗುರಿಯನ್ನು ಸಾಧಿಸಲು ಅವನು ಹೆಂಡತಿ, ಮಗ, ತನ್ನ ರಾಜತ್ವ (ಅಧಿಕಾರ) ಗಳನ್ನು ತ್ಯಜಿಸಿ, ಕಾಡಿಗೆ ಹೋಗಿ ಹಲವಾರು ವರ್ಷ ತಪಸ್ಸು ಮಾಡಿದ ವಿಷಯ ನಿನಗೆ ಗೊತ್ತು. ಮುಂಡೆ ಅವನು ಒಂದು ಅರಳಿ ಮರದ ಬುಡದಲ್ಲಿ ಧ್ಯಾನ ಮಗ್ನನಾಗಿದ್ದಾಗ ಅವನಿಗೆ ಹೊಳೆದ ಸತ್ಯ ಇದು—

"ಜಗತ್ತು ದುಃಖಕರ. ಈ ದುಃಖಕ್ಕೆ ಕಾರಣ ನಮ್ಮ ದುರಾಶೆ. ಜನ ದುರಾಶೆಯನ್ನು ಬಿಟ್ಟು ಅಹಿಂಸಾತ್ಮಕವಾದ ನೀತಿಯ ಹಾದಿಯಲ್ಲಿ ನಡೆದರೆ ನಿತ್ಯಸುಖ ಎಂಬ ಮೋಕ್ಷವು ದೊರೆಯುತ್ತದೆ' ಎಂಬುದು."

"ಸರಿ, ಇದು ಒಳ್ಳೆಯದೇ ಅಲ್ಲವೆ ? ಇದಕ್ಕಾಗಿ ಅವನು ಹೊಸ ಪಂಥವನ್ನು ಸ್ಥಾಪಿಸುವ ಅಗತ್ಯವೇನಿತ್ತು ? ವೈದಿಕ ಪಂಥದಲ್ಲಿಯೂ ಕೂಡ 'ಮಾ ಹಿಂಸ್ಯಾತ್ ಸರ್ವಾ ಭೂತಾನಿ,' "ಅಹಿಂಸಾ ಪರಮೋ ಧರ್ಮಃ' ಎಂಬ ಉಕ್ತಿಗಳಿವೆಯಲ್ಲವೆ ?"

"ಇವೆ ನಿಜ ; ಅಷ್ಟೇ ಅಲ್ಲ, ಮೂಲ ವೈದಿಕ ಧರ್ಮದಲ್ಲಿ ಇಂತಹ ಇನ್ನೂ ಎಷ್ಟೋ ಅಮೂಲ್ಯ ತತ್ವಗಳಿವೆ. ಆದರೆ ಬುದ್ಧನು ಜನ್ಮ ತಳೆದ ಕಾಲದಲ್ಲಿ ಮೂಲ ವೈದಿಕ ಧರ್ಮವು ಮಲಿನವಾಗಿತ್ತು. ಅದರ ಸ್ಥಾನ ದಲ್ಲಿ ಎಷ್ಟೋ ಅನುಚಿತ ಸಂಪ್ರದಾಯಗಳೂ, ಮೌಢ್ಯಗಳೂ ತಲೆ ಹಾಕಿ ದ್ದವು. ಉದಾಹರಣೆಗೆ ಮೂಲ ವೈದಿಕ ಧರ್ಮ ಗುಣ-ಕರ್ಮ-ಸ್ವಭಾವ ಗಳಿಂದ ಬ್ರಾಹ್ಮಣಾದಿ ವರ್ಣಗಳನ್ನು ವಿಂಗಡಿಸಿತ್ತು. ಮುಂದೆ ಅದು ಮಾಯವಾಗಿ ಹುಟ್ಟಿನಿಂಡ ಬ್ರಾಹ್ಮಣ್ಯ ಮುಂತಾಗಿ ವರ್ಣಗಳ ವಿಭಾಗ ಏರ್ಪಟ್ಟಿತ್ತು. ಇದರಿಂದ ಬ್ರಾಹ್ಮಣಾದಿ ವರ್ಣಗಳಲ್ಲಿ ಬ್ರಾಹ್ಮಣನು ಶ್ರೇಷ್ಠ, ಉಳಿದವರು ಕನಿಷ್ಠ ಎಂಬ ತಾರತಮ್ಯ ಬೆಳೆದಿತ್ತು.

ಎರಡನೆಯದಾಗಿ, ವೈದಿಕ ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಯಜ್ಞ-ಯಾಗಾದಿಗಳಲ್ಲಿ ಆಡು, ಕುರಿ, ಹಸು, ಕುದುರೆ ಮುಂತಾದ ಮೂಕ ಪ್ರಾಣಿಗಳನ್ನು ಬಲಿಕೊಡುತ್ತಿದ್ದರು, ಮತ್ತು ಧರ್ಮದ ಹೆಸರಿ

ನಲ್ಲಿ ಮಧು-ಮಾಂಸಾದಿಗಳ ಸೇವನೆ, ಸ್ತ್ರೀಯರ ಮೇಲೆ ಅತ್ಯಾಚಾರ ಪ್ರಸಂಗಗಳು ಹೇರಳವಾಗಿ ನಡೆಯುತ್ತಿದ್ದವು. ಅದನ್ನೆಲ್ಲ ನೋಡಿ ಗೌತಮ ಬುದ್ಧನು ನೂತನ ಧರ್ಮವನ್ನು ಸ್ಥಾಪಿಸಿದ."

ಇದೇ ದೃಷ್ಟಿಯಿಂದಲೇ ಪ್ರಾಯಃ ಬುದ್ಧನಿಗಿಂತ ಸ್ವಲ್ಪ ಮೊದಲು 'ಮಹಾವೀರ' ಎಂಬ ರಾಜನೊಬ್ಬ ಯಜ್ಞಗಳಲ್ಲಿ ನಡೆಯುತ್ತಿದ್ದ ಪಶು ಬಲಿಯನ್ನು ಕಂಡು ಕಣ್ಣೀರಿಟ್ಟು, ಅಹಿಂಸಾ ಪ್ರಧಾನವಾದ ಜೈನಧರ್ಮ ವನ್ನು ಸ್ಥಾಪಿಸಿದ."

"ಮಾವ, ಮೂಲ ವೈದಿಕ ಧರ್ಮದಲ್ಲಿ ಪ್ರಾಣಿಹಿಂಸೆ ಇಲ್ಲವೆಂದ ಮೇಲೆ ಮುಂದೆ ಯಜ್ಞ-ಯಾಗಾದಿಗಳಲ್ಲಿ ಪಶುಬಲಿಯನ್ನು ತಡೆಯಲು ಬೇರೆ ಧರ್ಮಗಳನ್ನು ಸ್ಥಾಪಿಸುವ ಅಗತ್ಯವೇನಿತ್ತು ಎಂಬುದು ನನ್ನ ಸಂಶಯ. ಈ ವಿಚಾರವನ್ನು ಯಾರೂ ಅವರಿಗೆ ಹೇಳಲಿಲ್ಲವೆ ?"

"ನಿಜ ಮರಿ, ನಿನ್ನ ಪ್ರಶ್ನೆ ಸಾಧುವಾದದ್ದೆ ! ನೀನು ಹೇಳಿದಂತೆ ಜಿನ, ಬುದ್ಧರಿಗಿಂತ ಸಾವಿರಾರು ವರ್ಷಗಳ ಹಿಂದೆಯೇ ಎಂದರೆ ಪ್ರಾಯಃ ವೇದಗಳ ಕಾಲದಲ್ಲಿಯೇ ದಕ್ಷಬ್ರಹ್ಮನು 'ಅಜಮೇಧ' ಎಂಬ ಪಶು ಯಾಗ ವನ್ನು ಆರಂಭಿಸಿದ್ದ. ಆಗ ಅಂದಿನ ವೀರ ಶಿವಭಕ್ತರು, ಅದನ್ನು ಅಂದರೆ ಯಜ್ಞದಲ್ಲಿ ಪಶುವನ್ನು ಬಲಿಕೊಡುವ ಯಾಗವನ್ನು ಪ್ರತಿಭಟಿಸಿದರು. ಈ ವೀರಶೈವರ ಪ್ರತಿನಿಧಿಯಾದ ರುದ್ರನು ವೀರಭದ್ರನಾಗಿ ದಕ್ಷನನ್ನು ಶಿಕ್ಷಿಸಿ, ಪಶುಯಾಗವನ್ನು ನಿಲ್ಲಿಸಿದ್ದಲ್ಲದೆ, ಅದನ್ನು ಅಹಿಂಸಾತ್ಮಕವಾಗಿ ಪರಿವರ್ತಿಸಿದ ಕತೆ ಪುರಾಣಗಳಲ್ಲಿ ಸುಪ್ರಸಿದ್ಧವಾಗಿದೆ."

"ಅಂದರೆ ಮಾವ, ವೀರಭದ್ರನು ಪಶುವಧೆಯನ್ನು ಮಾಡುವ ಯಜ್ಞದಲ್ಲಿನ ಪಶುಬಲಿಯನ್ನು ನಿಲ್ಲಿಸಿ ಅದನ್ನು ಅಹಿಂಸಾತ್ಮಕವಾಗಿ ನೆರ ವೇರಿಸಿದ ಕತೆ ಮಹಾವೀರ ಮತ್ತು ಗೌತಮ ಬುದ್ಧರಿಗೆ ತಿಳಿದಿರಲಿಲ್ಲವೆ ?"

"ತಿಳಿದಿರಬಹುದು ; ಆದರೆ ಅಂದಿನ ವೈದಿಕ ಧರ್ಮಾನುಯಾಯಿ ಗಳಲ್ಲಿ ಬೆಳೆದು ಬಂದಿದ್ದ ಸ್ವಾರ್ಥ, ಅಸೂಯೆ ಮತ್ತು ಶೋಷಕ ಪ್ರವೃತ್ತಿ ಗಳು ಜನಸಾಮಾನ್ಯರನ್ನು ಬಹುವಾಗಿ ಶೋಷಿಸುತ್ತಿದ್ದವು.

ಬ್ರಾಹ್ಮಣಾದಿ ಚಾತುರ್ವರ್ಣ್ಯದಲ್ಲಿ ಅಗ್ರಜರೆನಿಸಿದ್ದವರು ರಾಜ-ಮಹಾರಾಜರನ್ನು ಹೊಗಳಿ, ಮೊದಲು ಅವರನ್ನು ಕೈವಶ ಮಾಡಿಕೊಂಡು ಉಳಿದವರ ಮೇಲೆ ದಬ್ಬಾಳಿಕೆಯನ್ನು ನಡೆಸಿದ್ದರು. ಇದಕ್ಕೆ ಪ್ರಬಲವಾದ ಉದಾಹರಣೆಗಳು ರಾಮಾಯಣ–ಮಹಾಭಾರತಗಳಲ್ಲಿಯೇ ಹೇರಳವಾಗಿ ದೊರೆಯುತ್ತವೆ. ಉದಾ– 'ತಪಸ್ಸು ಮಾಡುವ ಅಧಿಕಾರವು ಬ್ರಾಹ್ಮಣನಿಗೆ ಮಾತ್ರ ; ಶೂದ್ರನಿಗಿಲ್ಲ, ಎಂಬ ನಿಯಮವನ್ನು ಈ ಅಗ್ರವರ್ಣಿಗಳು ರಚಿಸಿದ್ದರಿಂದ ತಪೋಮಗ್ನನಾಗಿದ್ದ ಶಂಬೂಕನೆಂಬ ಶೂದ್ರ ತಪಸ್ವಿಯನ್ನು ರಾಮ ನಿಷ್ಕರುಣೆಯಾಗಿ ಕೊಂದು ಬಂದ. ಮಹಾಭಾರತದಲ್ಲಿ 'ವೇದಾದಿ ಶಾಸ್ತ್ರಗಳನ್ನು ಅಭ್ಯಾಸ ಮಾಡುವ ಅಧಿಕಾರ ಬ್ರಾಹ್ಮಣರಿಗೆ ಮಾತ್ರ ಇದೆ' ಎಂಬ ನಿಯಮವನ್ನು ರಚಿಸಿದ್ದರಿಂದ ಮಹಾ ಗುರು ಭಕ್ತರೂ ಅಪ್ರತಿಮ ವೀರರೂ ಆಗಿದ್ದ ಕರ್ಣ ಮತ್ತು ಏಕಲವ್ಯರಂತಹ ಬಿಲ್ಗಾರರು ಕಲಿತ ವಿದ್ಯೆ ಅವರಿಗೆ ಫಲಿಸದಂತೆ ಖಾಸಾ ಅವರ ವಿದ್ಯಾ ಗುರುಗಳೇ ಶಪಿಸಿ ಅವರನ್ನು ನಿರಾಶೆಗೊಳಿಸಿದರು.

ಇದೆಲ್ಲವನ್ನೂ ನೋಡಿಯೇ ಜೈನ–ಬೌದ್ಧ ಧರ್ಮಗಳು ವೈದಿಕ ಧರ್ಮದಿಂದ ಬೇರ್ಪಡಲು ಕಾರಣವಾಯಿತು."

"ಹಾಗಾದರೆ ದಕ್ಷನನ್ನು ಪ್ರತಿಭಟಿಸಿದ ಆ ವೀರಶೈವ ವೈದಿಕ ಧರ್ಮವನ್ನು ತೊರೆಯಿತೆ ?"

"ಇಲ್ಲ ; ಏಕೆಂದರೆ ಜ್ಞಾನಿಗಳಾದ ವೈದಿಕ ಋಷಿಗಳಲ್ಲಿ ಅಗಸ್ತ್ಯ, ಅತ್ರಿ, ಭಾರದ್ವಾಜ, ದೂರ್ವಾಸ, ದಧೀಚಿ ಮುಂತಾದ ಮಹರ್ಷಿಗಳು ಹುಟ್ಟಿನಿಂದ ಪರಿಗಣಿಸಲ್ಪಡುತ್ತಿದ್ದ ವರ್ಣಧರ್ಮವನ್ನು ತಿರಸ್ಕರಿಸಿ, ತಾವು ಅತಿವರ್ಣಾಶ್ರಮಿಗಳೆಂದು ಘೋಷಿಸಿಕೊಂಡರು. ಮತ್ತು ಗುರುಮುಖದಿಂದ ಶಿವದೀಕ್ಷೆ ಪಡೆದು ಶಿವನ ಕೃಪೆ (ಶಕ್ತಿಪಾತ)ಗೆ ಪಾತ್ರರಾದವರೆಲ್ಲರೂ ಯಾವುದೇ ವರ್ಣ-ಜಾತಿ-ಆಶ್ರಮ ಮತ್ತು ಸ್ತ್ರೀ–ಪುರುಷ ಭೇದವಿಲ್ಲದೆ ಎಲ್ಲರೂ ಮುಕ್ತರಾಗಬಹುದು ಎಂದು ಘೋಷಿಸಿ ಸಾಮಾನ್ಯ ಜನತೆಯನ್ನು ಮೇಲೆತ್ತಿ 'ಪರಮ ವೈದಿಕ'ರೆನಿಸಿದ್ದಾರೆ."

ಎಂಬ ಶಂಭುವಿನ ತತ್ವವಿಚಾರ ನಡೆಯುತ್ತಿದ್ದಂತೆ ಅವರು ನಾಗಾರ್ಜುನಕೊಂಡದ ಮೇಲಿರುವ ಒಂದು ನಿರ್ಮಲ ಪುಷ್ಕರಿಣಿಯ ಬಳಿ ಬಂದಿದ್ದರು. ಅದನ್ನು ಕಂಡ ಆರಾಧ್ಯರು, "ಈ ಸ್ಥಳ ತುಂಬಾ ಪ್ರಶಸ್ತವಾಗಿದೆ. ಇಲ್ಲಿ ನಮ್ಮ ಉಪಾಹಾರವನ್ನು ಏಕೆ ತೆಗೆದುಕೊಳ್ಳಬಾರದು?" ಎಂದು ಎಚ್ಚರಿಸಿದರು.

ಆರಾಧ್ಯರ ಸೂಚನೆಯನ್ನು ಎಲ್ಲರೂ ಒಮ್ಮತದಿಂದ ಒಪ್ಪಿಕೊಂಡರು. ಅದಕ್ಕೆ ಮುಖ್ಯ ಕಾರಣ ಪುಷ್ಕರಿಣಿಯ ಜಲವು ನಿರ್ಮಲವಾಗಿದ್ದುದು ಎನ್ನುವುದಕ್ಕಿಂತ ಎಲ್ಲರಿಗೂ ಬಿಸಿಲಿನಲ್ಲಿ ನಡೆದು ತುಂಬಾ ಹಸಿವಾಗಿದ್ದುದು ಮುಖ್ಯಕಾರಣವೆಂದರೆ ತಪ್ಪಾಗದು.

ಈಗಿನ ಉಪಾಹಾರವನ್ನು ದುಗ್ಗವ್ವೆಯೇ ಎಲ್ಲರಿಗೂ ಬಡಿಸಬೇಕೆಂದು ಶ್ರೀಪತಿ ಸೂಚಿಸಿದ. ಅಜ್ಜಿ ಎಲ್ಲರಿಗೂ ಬಾಳೆ ಎಲೆಗಳಲ್ಲಿ ಸಾರನ್ನ-ಮೊಸರನ್ನ ಮತ್ತು ಉಪ್ಪಿನಕಾಯಿಗಳನ್ನು ಇಟ್ಟಾಗ ಕನಕಲತೆ ಅವುಗಳನ್ನು ಅವರವರ ಮುಂದೆ ಕೊಂಡೊಯ್ದಳು. ಜೊತೆಯಲ್ಲಿ ನಂಚಿಕೊಳ್ಳಲು ಚಕ್ಕುಲಿ ಮುಂತಾದ ತಿನಿಸುಗಳನ್ನು ಹಂಚಲು ಮರೆಯಲಿಲ್ಲ ದುಗ್ಗವ್ವೆ.

ಎಲ್ಲರೂ ಕಂಠಪೂರ್ತಿ ಆಹಾರ ಸ್ವೀಕರಿಸಿದ ಮೇಲೆ ಆರಾಧ್ಯರು ಮರದ ನೆರಳಿನಲ್ಲಿ ಪಂಚೆ ಹಾಸಿ ವಿಶ್ರಾಂತಿ ಪಡೆದರು. ಮುಂದೆ ಅಜ್ಜಿ ಬೆಟ್ಟದ ಮೇಲೆ ಎಲ್ಲರನ್ನೂ ಸುತ್ತಾಡಿಸಿ, ಆಯಾ ವಿಹಾರಗಳ ಮತ್ತು ಸ್ತೂಪಗಳ ಪರಿಚಯವನ್ನು ಆಮೂಲಾಗ್ರವಾಗಿ ಮಾಡಿಸುತ್ತಿದ್ದಳು. ದುಗ್ಗವ್ವೆಯ ಮಾತುಗಳಲ್ಲಿ ದರ್ಶನ–ಇತಿಹಾಸ, ವೇದೋಪನಿಷತ್ತುಗಳ ಸಮರ್ಥನೆಗಳು ತುಂಬಿದ್ದುದನ್ನು ಗಮನಿಸಿದ ಶಂಭು ಮತ್ತು ಆರಾಧ್ಯರು ಅವಳಲ್ಲಿ ಭಕ್ತಿ ತಳೆದು, ಇಷ್ಟು ಮಹತ್ವದ ವಿಷಯಗಳನ್ನು ತಿಳಿಸಿದ ದುಗ್ಗವ್ವೆಗೆ ಕೃತಜ್ಞತೆ ಸಲ್ಲಿಸಿದರು. ಶ್ರೀಪತಿ ಆನಂದಿಸಿದ.

* * *

೫

ಮಗನ ಮದುವೆಗೆ ಬರಲು ತಂಗಿ–ಭಾವಂದಿರನ್ನು ಒಪ್ಪಿಸಿ, ಅವರ ಅನುಮತಿ ಪಡೆದು ಶಂಭುಭಟ್ಟರು ಮಗಳು ಮತ್ತು ಶ್ರೀಪತಿಗಳೊಡನೆ ಮುದಿಗೊಂಡಕ್ಕೆ ಹೊರಡಲು ಸಿದ್ಧರಾದರು. ರಾಮುಡು ಗಾಡಿ ಸಿದ್ಧ ಪಡಿಸಿದ.

ಶ್ರೀಪತಿ ಮುದಿಗೊಂಡದಿಂದ ಮುಂದಕ್ಕೆ ಮಾವನೊಡನೆ ಕಾಶಿಗೆ ಪಯಣಿಸುವನೆಂದು ತಿಳಿದು ಭಾಗೀರಥಿಗೆ ಎದೆ ಧಸ್ಸೆಂದಿತು! ಇನ್ನು ಅಭ್ಯಾಸ ಮುಗಿಯುವವರೆಗೆ ಅವನ ಮುಖ ಕಾಣುವಂತಿರಲಿಲ್ಲ! ಇನ್ನೊಂದು ತಿಂಗಳಿಗೆ ಮಂಜಣ್ಣನ ಮದುವೆಗೆ ತಾವೇ ಹೋಗುವುದೆಂದಿದ್ದರೂ ಅವಳಿಗೆ ಸಮಾಧಾನವಿರಲಿಲ್ಲ.

ಆದರೆ ಪ್ರಯಾಣವನ್ನು ತಡೆಯುವುದೂ ಅವಳಿಗೆ ಸಾಧ್ಯವಿರಲಿಲ್ಲ. ಶ್ರೀಪತಿಯ ಅಗಲಿಕೆಯ ಅಳಲನ್ನು ಕಡಿಮೆ ಮಾಡಲು ಹೆಣ್ಣು ಕೂಸೊಂದನ್ನು ಅವಳ ಕೈ ಆಸರೆಗೆ ಶಿವನು ಕೊಟ್ಟಿದ್ದ. ಆದರೂ ಭಾಗೀರಥಿ ಹೊರಗಿನ ಒತ್ತಡಗಳಿಗೆ ಮಗನ ಅಗಲಿಕೆಯನ್ನು ಒಪ್ಪಿದ್ದರೂ, ಹೃದಯದ ಅಂತರಾಳದಲ್ಲಿ ಅವನನ್ನು ಕಳಿಸುವುದು ಅವಳಿಗೆ ಸುತರಾಂ ಇಷ್ಟವಿರಲಿಲ್ಲ! ತಾಯಿಯ ಈ ಒಳತೋಟೆಯನ್ನು ಮಗನಿಗೆ ತಿಳಿಸಿದರೆ ಶ್ರೀಪತಿಯಾದರೂ ತನ್ನ ಪ್ರಯಾಣವನ್ನು ನಿಲ್ಲಿಸಿ, ತಾಯಿಗೆ ಸಮಾಧಾನ ತಂದಾನು ಎಂದರೆ ಅದು ಎಂದಿಗೂ ಸಾಧ್ಯವಿಲ್ಲ ಎಂದು ಸಿದ್ಧವಾಗಿತ್ತು ಎಂಡ ಮೇಲೆ ಅವನನ್ನು ತಡೆವುದು ಅಪಶಕುನವೆನಿಸಿ, ಎಲ್ಲರ ನಿಂದೆಗೂ ಗುರಿಯಾಗುವ ಭಯ ಅವಳಿಗೆ ತುಂಬಿತ್ತು. ಈ ಬಗೆಬಗೆಯ ಮನಸ್ಸಿನ ತುಯ್ದಾಟಗಳಿಂದ ಅವಳು ತಾಯಿ ಕನಕದುರ್ಗೆಯ ಗುಡಿಗೈದಿ "ಅಮ್ಮಾ, ಎಲ್ಲಾ ನಿನ್ನ ದಯೆ! ನೀನೇ ಅವನನ್ನು ರಕ್ಷಿಸುವವಳು! ನಾವು ಎಲ್ಲಿಯವರೆಗೂ ಇದ್ದೇವು! ಎಂದು ದೇವಿಗೆ ಶರಣಾದಳು.

ಅರ್ಚಕರು ಮಂಗಳಾರತಿ ಮಾಡಿದರು. ಪ್ರಸಾದವನ್ನು ಸ್ವೀಕರಿಸಿದ ಭಾಗೀರಥಿ ಮತ್ತೊಮ್ಮೆ ದೇವಾಲಯವನ್ನು ಪ್ರದಕ್ಷಿಣೆ ಮಾಡಿ ದೇವಿಗೆ ಕೈ

ಮುಗಿದಳು. ಆರಾಧ್ಯರೂ ಮಲ್ಲೇಶ್ವರನಿಗೆ ವಂದಿಸಿ ಬರುವ ವೇಳೆಗೆ ಶಂಭು, ಮಗಳು ಶ್ರೀಪತಿಗಳ ಜೊತೆ ಪ್ರಯಾಣಕ್ಕೆ ಸಿದ್ಧರಾಗಿ ದೇವಾಲಯಕ್ಕೆ ಅಡಿಯಿಟ್ಟರು. ದ್ವಾರದಲ್ಲಿಯೇ ನಿಂತಿದ್ದ ಭಾವನಿಗೆ ಶಂಭು ಬಂದು ನಮಸ್ಕರಿಸಿದ. ಶ್ರೀಪತಿ ಕನಕಲತೆಯರು ಹಿರಿಯರಿಗೆಲ್ಲ ವಂದಿಸಿ "ಹೋಗಿ ಬರುತ್ತೇವೆ" ಎಂದು ಹೇಳಿದರು. ಭಾಗೀರಥಿ ಮಗನನ್ನೆತ್ತಿಕೊಂಡು ವಾತ್ಸಲ್ಯಾತಿರೇಕದಿಂದ ಅವನನ್ನು ಆಲಿಂಗಿಸಿ, ಮುದ್ದುಮಾಡಿ ನೆಟ್ಟಗೆತೆಗೆದು ಬೀಳ್ಕೊಟ್ಟಳು. ಪಕ್ಕದಲ್ಲಿಯೇ ನಿಂತಿದ್ದ ಕನಕಳನ್ನೂ ಎತ್ತಿ ಮುದ್ದಾಡಿ ಹೋಗಿ ಬಾ! ಎಂದು ಹರಸಿದಳು. ಕುಮುದಿನಿ ಓಡಿ ಬಂದು "ಅಣ್ಣಾ"! ಎಂದಳು. ಶ್ರೀಪತಿ ಅವಳನ್ನು ಎತ್ತಿಕೊಂಡು ರಮಿಸಿ ಬೀಳ್ಕೊಟ್ಟ. ಕನಕ ಕುಮುದಿನಿಯನ್ನು ಗಲ್ಲ ಅಲುಗಿಸಿ "ಬರಲಾ ಮರಿ!" ಎಂದು ಅವಳ ಗಲ್ಲಕ್ಕೆ ಮುತ್ತಿಟ್ಟಳು.

ಅಷ್ಟರಲ್ಲಿ ಬುದ್ಧಿಯವರು "ಉ! ಇನ್ನು ಬಿಸಿಲಾಗುತ್ತೆ! ಗಾಡಿ ಕಟ್ಟಿದ್ದಾನೆ; ಹೊರಡಿ!" ಎಂದರು. ಶಾಲೆಯ ಉಪಾಧ್ಯಾಯರು ಮತ್ತು ವಿದ್ಯಾರ್ಥಿಗಳು ಗಾಡಿಯ ಬಳಿಗೆ ಬಂದು ಶುಭ ಕೋರಿ ಬೀಳ್ಕೊಟ್ಟರು. ಎಲ್ಲರೂ ಗಾಡಿ ಹತ್ತಿದಾಗ, ಅಣುಗರಿಬ್ಬರೂ ಬಲಹಸ್ತವನ್ನು ತಿರುಗಿಸುತ್ತಾ ಕೈ ಬೀಸಿದರು! ಎತ್ತುಗಳ ಗೆಜ್ಜೆ-ಗಂಟೆಗಳ ಧ್ವನಿ ಕೇಳುವವರೆಗೂ ಬುದ್ಧಿಯವರು ಮತ್ತು ಭಾಗೀರಥಿಯರು ಅಲ್ಲಿಯೇ ನಿಂತಿದ್ದು ಹಿಂದಿರುಗಿದರು.



## ೧೧

# ಕೃಷ್ಣೆಯಿಂದ ಗಂಗೆಯವರೆಗೆ

## ೧

ದಾರಿಯುದ್ದಕ್ಕೂ ಶ್ರೀಪತಿ ಅಮರಾರಾಮ ಮತ್ತು ನಾಗಾರ್ಜುನ ಕೊಂಡಗಳನ್ನು ನೋಡಿ ಬಂದ ಬಗೆಗೆ ಮಾವನೊಡನೆ ಪ್ರಶ್ನಿಸಿ, ಅಲ್ಲಿಯ ಐತಿಹಾಸಿಕ ಹಿನ್ನೆಲೆಯ ಬಗೆಗೆ, ಬೌದ್ಧಧರ್ಮದ ಬಗೆಗೆ, ಅಲ್ಲಿನ ಶಿಲ್ಪಗಳ ಬಗೆಗೆ ತಾನು ತಿಳಿದುಕೊಂಡ ಅಂಶಗಳನ್ನೆಲ್ಲ ಪುನರುಚ್ಚರಿಸಿ—

"ಮಾವ, ನಾವು ನೆನ್ನೆ ಮೊನ್ನೆ ಪ್ರೇಕ್ಷಣೀಯ ಸ್ಥಳಗಳಿಗೆ ಭೇಟಿ ಇತ್ತದ್ದು ಒಳ್ಳೆಯದಾಯಿತು! ಎರಡು ದಿನ ನಮ್ಮ ಪ್ರವಾಸದ ವಿವರಗಳನ್ನೆಲ್ಲ ಎರಡು ವರ್ಷ ಓದಿದ್ದರೂ ತಿಳಿವುದು ಸಾಧ್ಯವಾಗಿರಲಿಲ್ಲ!" ಎಂದ.

ಕನಕಲತೆ "ಅಪ್ಪಾಜಿ, ನೀವು ಶ್ರೀಪತಿಗೆ ಈಜು ಕಲಿಸಿದ್ದು ಎಷ್ಟು ಸಹಾಯವಾಯಿತು ದುರ್ಗವ್ವೆಗೆ!" ಎಂದು ದುರ್ಗವ್ವೆಯ ವಿಷಯ ನೆನಪಿಸಿದಳು! ಶ್ರೀಪತಿ ಅವಳನ್ನು ದೇವಿಯೇ ಕಳಿಸಿರಬೇಕು! ಇಲ್ಲದಿದ್ದರೆ ಇಷ್ಟು ವಿಸ್ತಾರವಾಗಿ ಆ ಕ್ಷೇತ್ರಗಳ ವಿಷಯಗಳನ್ನು ನಮಗೆ ತಿಳಿಸುವವರು ಯಾರಿದ್ದರು?" ಎಂದ.

ಸಂಜೆಗೆ ಮುನ್ನ ಗಾಡಿ ಮುದಿಗೊಂಡ ತಲುಪಿತ್ತು. ಅಜ್ಜಿ ತಾತಂದಿರು ಎಲ್ಲರನ್ನೂ ಸಂತಸದಿಂದ ಬರಮಾಡಿಕೊಂಡರು.

ಮರುದಿನ ಎಲ್ಲರೂ ಬೆಟ್ಟಕ್ಕೆ ಹೋಗಿ ದೇವತಾಸೇವೆ ಮಾಡಿಕೊಂಡು ಬಂದರು. ಶ್ರೀಪತಿ ದೊಣೆಯಲ್ಲಿ ಈಜಲು ಇಳಿದಾಗ, ಕನಕಳೂ ಅವನನ್ನು

ಹಿಂಬಾಲಿಸಿ ಚೆನ್ನಾಗಿ ಈಜಿದಳು. ಸಂಜೆಗೆ ಮನೆಗೆ ಹಿಂದಿರುಗಿ ವಿಶ್ರಮಿಸಿದರು.

ಡಾತ್ರಿ ದೇಶಿಕರು ಶಂಭುವನ್ನು ಕೂರಿಸಿಕೊಂಡು ಮುಂದಿನ ಪ್ರಯಾಣದ ಬಗೆಗೆ ಚಿಂತಿಸಿದರು. ಮಣಿಕರ್ಣಿಕೆ ಇಬ್ಬರೂ ಮೊಮ್ಮಕ್ಕಳನ್ನು ಇನ್ನೂ ಒಂದು ವಾರ ಉಳಿಸಿಕೊಳ್ಳಬೇಕೆಂದು ಬಯಸಿದ್ದಳು. ಆದರೆ ಶಂಭುಗೆ ಪ್ರಯಾಣ ವಿಳಂಬ ಮಾಡಲು ಸಾಧ್ಯವಿರಲಿಲ್ಲ. ಮದುವೆ ಕಾರ್ಯ ಏನಿಲ್ಲವೆಂದರೂ ಗಟ್ಟಿಯಾಗಿ ಒಂದು ತಿಂಗಳು ಉಳಿದಿತ್ತು.

ಕನಕಲತೆಯು ಮುಂದಿನ ತರಗತಿಗೆ ಸೇರಬೇಕಾಗಿದ್ದಿತು. ಇನ್ನು ಶ್ರೀಪತಿ ಮಹಾವಿದ್ಯಾಲಯ ಬಾಗಿಲು ತೆರೆಯುವ ಮೊದಲೇ ತನ್ನ ಪ್ರವೇಶ ಪತ್ರಿಕೆಯನ್ನು ವಿದ್ಯಾಪೀಠಕ್ಕೆ ಕೊಡುವುದಿತ್ತು. ಈ ಕಾರಣಗಳಲ್ಲದೆ ಶ್ರೀಪತಿಗೆ ದಾರಿಯಲ್ಲಿ ಅಲ್ಲಲ್ಲಿ ದೊರೆಯುವ ಎಲ್ಲ ಪ್ರೇಕ್ಷಣೀಯ ಸ್ಥಳಗಳನ್ನೂ ತೋರಿಸುವುದಾಗಿ ಶಂಭು ಮಾತುಕೊಟ್ಟಿದ್ದ. ಈ ಎಲ್ಲ ಕಾರಣಗಳಿಂದ ಶಂಭು, ತಾಯಿಯನ್ನು ಒಪ್ಪಿಸಿ ಪ್ರಯಾಣವನ್ನು ನಿರ್ಧರಿಸಿದ್ದ. ಮೇಲಾಗಿ ಅವನೂ ಮದುವೆ ವೇಳೆಗೆ ಕಾಶಿಗೆ ಬರುವುದು ಅನಿವಾರ್ಯವೂ ಆಗಿತ್ತು.

೨

ಮುದಿಗೊಂಡದಲ್ಲಿ ತಂದೆ ತಾಯಿಗಳಿಂದ ಆಶೀರ್ವಾದ ಪಡೆದು ಚಿರಂಜೀವಿಗಳೊಡನೆ ಪ್ರಯಾಣಿಸಿದ ಶಂಭುಭಟ್ಟರ ಮೊದಲ ಭೇಟಿ ಕೊಲ್ಲಿಪಾಕಿಗೆ.

ಕೊಲ್ಲಿಪಾಕಿ ಆಂಧ್ರ ಪ್ರದೇಶದಲ್ಲಿದೆ. ಇಲ್ಲಿ ಆಚಾರ್ಯ ರೇಣುಕರು ಲಿಂಗೋದ್ಭವರೆನಿಸಿ ಅನುಷ್ಠಾನ ಮಾಡಿದರು. ಅದು ಭಗವಾನ್ ಸೋಮನಾಥನು ನಲೆಸಿರುವ ಪವಿತ್ರತೀರ್ಥ ಕ್ಷೇತ್ರ! ಅದರ ಸುತ್ತಮುತ್ತ ತಪೋಯೋಗ್ಯವಾದ ಸಣ್ಣಸಣ್ಣ ಗುಡ್ಡಗಳಿವೆ. ಅವುಗಳಲ್ಲಿ ರೇಣುಕಗಿರಿಯೂ ಒಂದು. ಉದ್ಭವಮೂರ್ತಿ ಎನಿಸಿದ ಸೋಮನಾಥ ಲಿಂಗವು ಯುಗಯುಗಗಳಿಂದ ದೇವ-ದಾನವ-ಮಾನವರಿಂದ ಪೂಜೆಗೊಳ್ಳುತ್ತಿದೆ ಎಂಬ ಐತಿಹ್ಯವನ್ನು ಚಿರಂಜೀವಿಗಳಿಗೆ ವಿವರಿಸಿ ಹೇಳಿದರು ಶಂಭುಭಟ್ಟರು. ಶ್ರೀಪತಿ—

"ಮಾವ, ಆದಿಯಲ್ಲಿ ಆಚಾರ್ಯರು ರೇಣುಕರು ಲಿಂಗೋದ್ಭವರೆನಿಸಿ ಇಲ್ಲಿ ಅನುಷ್ಠಾನ ಮಾಡಿದರೆಂದು ನೀವು ಹೇಳಿದಿರಿ. 'ಲಿಂಗೋದ್ಭವ' ಶಬ್ದದ ಅರ್ಥವನ್ನು ವಿವರಿಸಿ ಹೇಳಬೇಕು. ಏಕೆಂದರೆ ಆ ಬಗ್ಗೆ ನನಗೆ ತುಂಬಾ ಸಂದೇಹವಿದೆ!"

"ಹುರಿ, ನಿನ್ನ ಪ್ರಶ್ನೆ ನೇರವಾಗಿದೆ. ಅನೇಕರು ಲಿಂಗೋದ್ಭವ ಎಂದ ತಕ್ಷಣ ಲಿಂಗದಿಂದಲೇ ಆಚಾರ್ಯರು ಅವತರಿಸಿದರೆಂದು ಭಾವಿಸುತ್ತಾರೆ, ಇದು ಅನೇಕ ಸಂದೇಹಗಳಿಗೆ ಎಡೆಕೊಡುತ್ತದೆ.

"ಲಿಂಗವೆಂದರೆ ಸ್ಥೂಲವಾಗಿ ಪೀಠ ಗೋಮುಖಾದಿಗಳಿಂದ ಪಂಚ ಸೂತ್ರ ಸಮ್ಮತವಾಗಿ ರಚಿತವಾದ ಶಿಲ್ಪ. ಅದು ಶಿವಾಗಮೋಕ್ತವಾಗಿ ಸಂಸ್ಕರಿಸಲ್ಪಟ್ಟು ಪರಶಿವನ ಪ್ರತೀಕವಾದ ಶಿವಲಿಂಗವೆನಿಸುತ್ತದೆ."

"ಅಂದ ಮೇಲೆ ಮಾವ, ಅಂಥ ಶಿಲಾಮಯ ಲಿಂಗದಿಂದ ಆಚಾರ್ಯರು ಉದಯಿಸಿದರು ಎಂದರೆ ಸಂಗತವಾಗುತ್ತದೆಯೆ?"

"ಮರಿ, ನೀನು ತಿಳಿದಿರುವ ಬಗೆ ನಿನ್ನ ಎಳೆವಯಸ್ಸಿಗೆ ಯುಕ್ತವಾಗಿಯೇ ಇದೆ. ಏಕೆಂದರೆ ಭಾಷೆಯಲ್ಲಿ ನಾವು ಬಳಸುವ ಪದಗಳಿಗೆ ಇರುವ ವಿಶೇಷಾರ್ಥಗಳ ವಿಚಾರವು ನಿನಗೆ ಮುಂದೆ ವಿದ್ಯಾಪೀಠದಲ್ಲಿ ಅಭ್ಯಾಸ ಮಾಡುವಾಗ್ಗೆ ವೇದ್ಯವಾಗುತ್ತದೆ. ಅದನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸುತ್ತೇನೆ. ಸಾವಧಾನವಾಗಿ ಕೇಳು!"

ಇಲ್ಲಿ ಶಬ್ದ ಮತ್ತು ಅರ್ಥಗಳ ಸ್ವರೂಪವನ್ನು ಮೊದಲು ತಿಳಿಯಬೇಕು.

ಮಾತು ಶಬ್ದರೂಪವಾದದ್ದು. ಶಬ್ದವು ಅರ್ಥವುಳ್ಳದ್ದು! ಶಬ್ದಕ್ಕೆ ಅರ್ಥಕೊಡುವ ಸಾಮರ್ಥ್ಯವಿದೆ. ಈ ಸಾಮರ್ಥ್ಯಕ್ಕೆ 'ಶಕ್ತಿ' ಎಂದು ಹೆಸರು. ಸಂಕೇತ, ವೃತ್ತಿ ಎಂಬುವು ಶಕ್ತಿಯ ಪರ್ಯಾಯ ಪದಗಳು. ಒಂದು ಶಬ್ದವನ್ನು ಕೇಳಿದ ಕೂಡಲೇ ಮನಸ್ಸಿಗೆ ಹೊಳೆಯುವ ಸುಪ್ರಸಿದ್ಧವಾದ ಅರ್ಥವನ್ನು ಮುಖ್ಯಾರ್ಥ ಅಥವಾ ವಾಚ್ಯಾರ್ಥ ಎಂದು ಹೇಳಲಾಗಿದೆ. ಉದಾ :- ಘಟ, ಪಟ, ಪುಸ್ತಕ, ಲೇಖನಿ ಮುಂತಾದವು. ಪದವನ್ನು ಕೇಳಿದಾಗ ಅದರ ಅರ್ಥದ ಬಗೆಗೆ ಆಗುವ ಮಾನಸಿಕ ವ್ಯಾಪಾರವೇ ವೃತ್ತಿ. ಇಲ್ಲಿ ಇದನ್ನು ಅಭಿಧಾವೃತ್ತಿ ಎನ್ನಲಾಗಿದೆ.

ಕೆಲವು ಸಂದರ್ಭಗಳಲ್ಲಿ ಇಂಥ ಶಬ್ದಗಳಿಗೆ ಮುಖ್ಯಾರ್ಥವು ಹೊಂದಿಕೆಯಾಗುವುದಿಲ್ಲ. ಉದಾ :- 'ಆ ಮಹಾತ್ಮರನ್ನು ನೋಡಲು ಊರಿಗೆ ಊರೇ ಬಂದಿತ್ತು' 'ಮಂಚವು ಅಳುತ್ತದೆ' 'ವೀಣೆ ಕೇಳುತ್ತದೆ' ಎಂಬಲ್ಲಿ ಊರು ಬರುವುದು, ಮಂಚ ಅಳುವುದು, ವೀಣೆ ಕೇಳುವುದು ಅಸಂಗತ. ಆದ್ದರಿಂದ ಇಲ್ಲಿ ಮುಖ್ಯಾರ್ಥಕ್ಕೆ ಸಂಬಂಧಿಸಿದಪದಕ್ಕೆ ಅರ್ಥವನ್ನು ಹೇಳಬೇಕು. ಆಗ 'ಊರು' ಎಂಬುದು ಊರಿನ ಜನ ಎಂದೂ, 'ವೀಣೆ' ಎಂಬುದಕ್ಕೆ ವೀಣೆಯ ಧ್ವನಿ ಎಂದೂ, 'ಮಂಚ' ಎಂಬುದಕ್ಕೆ 'ಮಂಚದಲ್ಲಿ ಮಲಗಿರುವ ಮಗು' ಎಂದೂ ಅರ್ಥವಾಗುತ್ತದೆ. ಈ ಬಗೆಯ ಅರ್ಥವನ್ನು ಲಕ್ಷ್ಯಾರ್ಥ ಅಥವಾ ಸೂಚ್ಯಾರ್ಥ ಎನ್ನುತ್ತಾರೆ. ಈ ಅರ್ಥ ಬರುವುದು ಲಕ್ಷಣಾವೃತ್ತಿಯಿಂದ.

ಹೀಗೆ ಸರಳವಾಗಿ ಅರ್ಥವಾಗುವಂತೆ ಹೇಳುವುದನ್ನು ಬಿಟ್ಟು ವಕ್ರವಾಗಿ ಹೇಳುವಲ್ಲಿ ಅರ್ಥಪುಷ್ಟಿ ಕೊಡುವ ಒಂದು ಪ್ರಯೋಜನವಿರುತ್ತದೆ. ಈ ಪ್ರಯೋಜನವು ವಾಚ್ಯಾರ್ಥವಲ್ಲ, ಲಕ್ಷ್ಯಾರ್ಥವೂ ಅಲ್ಲ. ಅದೇ ವ್ಯಂಗ್ಯಾರ್ಥ. ಧ್ವನಿ, ಧ್ವನನ, ದ್ಯೋತನ ಎಂಬುವು ವ್ಯಂಗ್ಯದ ಪರ್ಯಾಯ ಪದಗಳು. ಈ ಅರ್ಥ ತೋರಿದ್ದು ವ್ಯಂಜನಾವೃತ್ತಿಯಿಂದ.

ಉದಾ- 'ಊರಿಗೆ ಊರೇ ಬಂದಿತ್ತು' ಎಂಬಲ್ಲಿ ಆ ಊರಿನ ಜನ ಬಾಹುಳ್ಯ, 'ಮಂಚವು ಅಳುತ್ತದೆ' ಎಂಬಲ್ಲಿ ಆ ಅಳುವಿನ ಆರ್ತತೆ, ವೀಣೆ ಕೇಳುತ್ತದೆ' ಎಂಬಲ್ಲಿ ಆ ಧ್ವನಿಯ ಮಾಧುರ್ಯ ಮುಂತಾದುವು ಪ್ರಯೋಜನಗಳು. ಈ ವ್ಯಂಗ್ಯಾರ್ಥವು ಕೇವಲ ಲಕ್ಷ್ಯಾರ್ಥದ ಮೂಲಕವೇ ತೋರಬೇಕೆಂದಿಲ್ಲ. ಅದು ಮುಖ್ಯಾರ್ಥದಿಂದಲೂ ತೋರಬಹುದು.

ಪ್ರಕೃತ 'ಲಿಂಗೋದ್ಭವ' ಎಂಬುದು ವೀರಶೈವದ ಪಾರಿಭಾಷಿಕ ಪದ. ಅದು ಲಾಕ್ಷಣಿಕಪದ. ಇಲ್ಲಿ ಶಿಲಾಮಯಲಿಂಗದಿಂದ ಆಚಾರ್ಯರು ಉದ್ಭವಿಸುವುದು ಅಸಂಭವ. ಆದ್ದರಿಂದಲೇ ಈ ಪದಕ್ಕೆ 'ಲಿಂಗಗುಣಗಳನ್ನು ಹೊಂದಿದವನು ಎಂದು ಅರ್ಥ ಮಾಡಬೇಕು. ಇದರಿಂದ ಆಚಾರ್ಯರು ಮಹಾಮಹಿಮರು' ಎಂಬುದೇ ಇಲ್ಲಿ ಪ್ರಯೋಜನ."

"ಮಾವಾ, ನೀವು ಹೇಳಿದ್ದು ಶಾಸ್ತ್ರಸಮ್ಮತವಿರಬಹುದು. ಆದರೆ ಆ ಬಗೆಯ ಅರ್ಥ ಹೇಳಲು ಆಧಾರವಿದೆಯೆ ?"

"ಆಧಾರವಿದೆ! ವೀರಶೈವದಲ್ಲಿ ಶಿವದೀಕ್ಷೆ ಪಡೆದ ಸಾಧಕನು ತನ್ನ ಸಾಧನೆಯನ್ನು ನೂರೊಂದು(ಏಕೋತ್ತರಶತ)ಸ್ಥಳಗಳೆಂಬ ಮೆಟ್ಟಲಿನ ಏಣಿಯನ್ನು ಏರಿ ಲಿಂಗದಲ್ಲಿ ಸಮರಸನಾಗಬೇಕೆಂದು ಹೇಳಿದೆ. ಇವುಗಳಲ್ಲಿ ಮೊದಲ ನಲವತ್ತುನಾಲ್ಕು ಸ್ಥಳಗಳಲ್ಲಿ 'ಭಕ್ತ' ಮೊದಲಾಗಿ'ಐಕ್ಯ'ದವರೆಗಿನಆರು(ಷಟ್) ಸ್ಥಳಗಳಿವೆ. ಇವುಗಳಿಗೆ 'ಅಂಗಸ್ಥಳ'ಗಳೆಂದು ಹೆಸರು. 'ಅಂಗ'ನೆಂದರೆ ಶಿವನಿಗೆ ಅಭಿಮುಖನಾದ ಸಂಸ್ಕಾರ ಪಡೆದ ಜೀವಿ. ಈ ಅಂಗನು 'ಪಿಂಡಸ್ಥಲ'ದಿಂದ 'ಸಹಭಾಜನ' ಸ್ಥಳದವರೆಗೆ ಸಾಧನೆಮಾಡಿ ಅಂಗ ಗುಣಗಳನ್ನು ಕಳೆದು ಲಿಂಗಗುಣಗಳನ್ನು ಮೈಗೂಡಿಸಿಕೊಂಡ ಲಿಂಗಸ್ವರೂಪಿ. ಲಿಂಗಸ್ವರೂಪಿಯೇ 'ಲಿಂಗೋದ್ಭವ' ಅಥವಾ ಜೀವನ್ಮುಕ್ತ ಮುಂದಿನ ಐವತ್ತೇಳು ಸ್ಥಳಗಳು 'ಲಿಂಗಸ್ಥಳ'ಗಳು ಲಿಂಗೋದ್ಭವನು ಆಚರಿಸುವ ಸ್ಥಳಗಳು. ಜೀವನ್ಮುಕ್ತನಾದ ಲಿಂಗೋದ್ಭವನು ವಿದೇಹ ಮುಕ್ತಿಯವರೆಗೆ ನಿರ್ಲಿಪ್ತನಾಗಿ, ಅನಾಸಕ್ತಯೋಗಿ ಎನಿಸಿರುತ್ತಾನೆ. ಇವನೇ "ಸ್ಥಿತಪ್ರಜ್ಞ".

ಲಿಂಗೋದ್ಭವನು ಎಲ್ಲರಂತೆ ಕಾಣುತ್ತಿದ್ದರೂ ಅವನ ಲೋಕವಿಲಕ್ಷಣವಾದ ನಡೆ-ನುಡಿಗಳು ನೀರಿನಲ್ಲಿದ್ದರೂ ನೀರು ಅಂಟದ ಕಮಲದ ಎಲೆಯಂತೆ, ಕೆಸರಿನಲ್ಲಿದ್ದರೂ ಕೆಸರಾಗದ ಕುಂಬಾರಹುಳುವಿನಂತೆ ಸಂಸಾರದಲ್ಲಿದ್ದರೂ ನಿರ್ಲಿಪ್ತನಾಗಿರುತ್ತಾನೆ. ವೀರಶೈವ ಇವನನ್ನು 'ಶರಣ' ಎನ್ನುತ್ತದೆ. "ಪ್ರಾಪಂಚಿಕ ಸುಖಂ ನಾಸ್ತಿ ಶರಣಸ್ಥಳಮುತ್ತಮಂ" ಎಂದು ಶಿವಾಗಮವು ಉಲ್ಲೇಖಿಸಿದೆ. ಕನ್ನಡದಲ್ಲಿ ಇಂಥವನನ್ನು 'ಉಂಡೂ ಉಪವಾಸಿ, ಬಳಸಿಯೂ ಬ್ರಹ್ಮಚಾರಿ' ಎನ್ನಲಾಗಿದೆ, ಇದೇ 'ಲಿಂಗೋದ್ಭವ' ಪದದ ಲಾಕ್ಷಣಿಕಾರ್ಥ. ಇಲ್ಲಿ ತೋರುವ ಎಲ್ಲ ವಿಶಿಷ್ಟ ಅರ್ಥಗಳೂ ವ್ಯಂಜನಾವೃತ್ತಿಯಿಂದ ವೇದ್ಯವಾಗುತ್ತವೆ.

ಮಾವನು 'ಲಿಂಗೋದ್ಭವ' ಪದಕ್ಕೆ ವಿಶೇಷಾರ್ಥಗಳನ್ನು ವಿವರಿಸಿದಾಗ ಶ್ರೀಪತಿ ದಿಗ್ಮೂಢನಾದ. ಈ ದಿಸೆಯಲ್ಲಿ ತಾನು ತಿಳಿದಿದ್ದುದು ಸಾಗರದಲ್ಲಿ ಒಂದು ಹನಿಯಷ್ಟೂ ಅಲ್ಲವೆಂದು ನಿರ್ಧರಿಸಿಕೊಂಡು ಹೇಳಿದ—

"ಮಾವ, ಇಷ್ಟು ಕ್ಲಿಷ್ಟವಾದ ಶಾಸ್ತ್ರವಿಚಾರವನ್ನು ಎಷ್ಟು ಸರಳವಾಗಿ ನೀವು ವಿವರಿಸಿದಿರಿ. ಜ್ಞಾನದ ಮೇರುವಿನಂತಿರುವ ನೀವು ದೊರೆತಿರುವುದು ನನ್ನ ಭಾಗ್ಯ!" ಎಂದು ವಿಚಾರಮಗ್ನನಾದ ಶ್ರೀಪತಿ.

ಕನಕಾ ಕೇಳಿದಳು—'ಅಪ್ಪಾಜಿ, ಶ್ರೀಪತಿ ಈ ಪ್ರಶ್ನೆ ಎತ್ತಿದಾಗ ನನಗೂ ಆ ಸಂಶಯ ಬಂದಿತ್ತು! ಆದರೆ ಶ್ರೀಪತಿ ಅದನ್ನು ಪ್ರಶ್ನಿಸಿ ನಿಮ್ಮಿಂದ ಇಷ್ಟು ರಹಸ್ಯ ವಿಷಯಗಳನ್ನು ತಿಳಿಸುವಂತೆ ಮಾಡಿದ! ಆದರೆ ಇದರಲ್ಲಿ ನನಗೆ ಅರ್ಥವಾಗಿರುವುದು ಅತ್ಯಲ್ಪ! ಆದರೂ ಒಂದು ಸ್ಥೂಲ ವಾದ ಅರ್ಥವನ್ನು ಗ್ರಹಿಸಿದ ನನ್ನ ಮನಸ್ಸಿಗೆ ಎಷ್ಟೋ ನೆಮ್ಮದಿಯಾಗಿದೆ. ಇನ್ನು ಶ್ರೀಪತಿ ನಿಮ್ಮನ್ನು ಹೊಗಳಿದ್ದು ಹೆಚ್ಚೆಂದು ನಾನು ಭಾವಿಸುವು ದಿಲ್ಲ!" ಎಂದು

ಮೂವರೂ ಸೋಮನಾಥ ಕ್ಷೇತ್ರದಲ್ಲಿ ಸ್ನಾನಮಾಡಿ ಸ್ವಾಮಿಯನ್ನು ವಿಧ್ಯುಕ್ತವಾಗಿ ಅರ್ಚಿಸಿದರು.

೩

ಮುಂದೆ ಅವರು ಭಾರತದ ಹನ್ನೆರಡು ಜ್ಯೋತಿರ್ಲಿಂಗಗಳಲ್ಲಿ ಒಂದಾದ "ವೈದ್ಯನಾಥೇಶ್ವರನು" ನೆಲೆಸಿರುವ "ಪರಳಿ" ಕ್ಷೇತ್ರವನ್ನು ಕುರಿತು ಪ್ರಯಾಣಿಸಿದರು.

"ಪರಳಿ" ಎಂದೊಡನೆಯೇ ಶ್ರೀಪತಿ—

"ಮಾವ, "ಪರಳ್ಯಾಂ ವೈದ್ಯನಾಥಂ ಚ" ಎಂದು "ದ್ವಾದಶ ಜ್ಯೋತಿ ರ್ಲಿಂಗಸ್ತುತಿ"ಯಲ್ಲಿ ಹೇಳಿರುವ ಪರಳಿ ಇದೇ ಅಲ್ಲವೆ?" ಎಂದು ಪ್ರಶ್ನಿಸಿದ.

"ನಿಜ ಮರಿ, ಈ ಸ್ವಾಮಿಯನ್ನು ಜ್ಯೋತಿರ್ಲಿಂಗ ಸ್ತುತಿಯಲ್ಲಿ "ವೈದ್ಯನಾಥ" ಎಂದು ಹೆಸರಿಸಲಾಗಿದೆ."

"ಮಾವ, ಇಲ್ಲಿ ನನಗೆ ಮತ್ತೊಂದು ಸಂಶಯವುಂಟಾಗಿದೆ!"

"ಏನು ಹೇಳು!"

"ಕೊಲ್ಲಿಪಾಕಿಯ ಸೋಮನಾಥ ಲಿಂಗವನ್ನು ನೀವು 'ಉದ್ಭವ ಲಿಂಗ'ವೆಂದಿರಿ. ಇಲ್ಲಿರುವ ವೈದ್ಯನಾಥ ಲಿಂಗವನ್ನು "ಜ್ಯೋತಿರ್ಲಿಂಗ" ವೆನ್ನುತ್ತಿದ್ದೀರಿ. ಆದರೆ ಇವೆರಡಕ್ಕಿರುವ ವ್ಯತ್ಯಾಸವೇನು?"

"ಮರಿ, ನಿನ್ನ ಪ್ರಶ್ನೆ ಒಪ್ಪತಕ್ಕದ್ದೆ! 'ಉದ್ಭವಲಿಂಗವೆಂದರೆ ಹುಟ್ಟುಶಿಲೆಯಿಂದ ಮೂಡಿಬಂದದ್ದು. ಉಳಿದ ಲಿಂಗಗಳು ಆಗಮೋಕ್ತ ವಾದ ಉತ್ತಮ ಶಿಲೆಗಳನ್ನು ಶಿಲ್ಪಶಾಸ್ತ್ರದಂತೆ ಕಡೆದವು ಎಂದು ಅರ್ಥ."

"ಹಾಗಾದರೆ ಹುಟ್ಟುಶಿಲೆಯಿಂದ ಮೂಡಿ ಬಂದ ಲಿಂಗಗಳೆಲ್ಲ ಪ್ರಾಕೃತ. ಶಿಲ್ಪಿ ನಿರ್ಮಿತ ಲಿಂಗಗಳು ಆಗಮೋಕ್ತ ಸಂಸ್ಕಾರ ಪಡೆದಿರುವು ದರಿಂದ ಅವು ಅಪ್ರಾಕೃತ. ಅಂದ ಮೇಲೆ ಹುಟ್ಟು ಶಿಲೆಯ ಅಸಂಸ್ಕೃತ ಉದ್ಭವ ಲಿಂಗಗಳಿಗಿಂತ ಆಗಮೋಕ್ತ ಸಂಸ್ಕಾರ ಪಡೆದವುಗಳೇ ಶ್ರೇಷ್ಠವೆನಿ ಸುವುದಿಲ್ಲವೇ ?"

"ಉದ್ಭವ ಲಿಂಗಗಳನ್ನು ನೀನು ಅಸಂಸ್ಕೃತವೆಂದು ಹೇಳಿದ್ದು ಒಂದು ದೃಷ್ಟಿಯಿಂದ ಸರಿ. ಆದರೆ ಉದ್ಭವಶಿಲೆ "ಸಜೀವ ಶಿಲೆ". ಶಿಲ್ಪಿ ವಾಗಿ ಕಡೆದ ಲಿಂಗವು "ನಿರ್ಜೀವ ಶಿಲೆ." ಆದ್ದರಿಂದಲೇ ಶಿಲ್ಪವಾಗಿ ಕಡೆದ ಶಿಲೆಗೆ ಆಗಮೋಕ್ತ ಲಕ್ಷಣ, ಸಂಸ್ಕಾರ, ಪ್ರಾಣಪ್ರತಿಷ್ಠೆಗಳ ಅಗತ್ಯವುಂಟು. ಆದರೆ ಉದ್ಭದಲಿಂಗಗಳಲ್ಲಿನ ಕಲೆ ಸ್ವಯಂಸಿದ್ಧ. ಅಂತಹ ಜೀವಕಲೆ ಯನ್ನೇ 'ಜ್ಯೋತಿ' ಎನ್ನುವುದು. ಆದ್ದರಿಂದ ಜ್ಯೋತಿರ್ಲಿಂಗಗಳೆಲ್ಲವೂ ಉದ್ಭವಲಿಂಗಗಳೇ !

"ಹಾಗಾದರೆ "ಜ್ಯೋತಿರ್ಲಿಂಗಸ್ತುತಿ"ಯಲ್ಲಿ ಕೇವಲ ಹನ್ನೆರಡನ್ನು ಮಾತ್ರ ಜ್ಯೋತಿರ್ಲಿಂಗವೆಂದು ಕರೆಯಲು ಕಾರಣವೇನು ?"

"ಮರಿ, ಉದ್ಭವಲಿಂಗಗಳೆಲ್ಲ ಜ್ಯೋತಿರ್ಲಿಂಗಗಳೇ ! ಆದರೆ ಅವೆಲ್ಲ ವನ್ನೂ ಆರಾಧಿಸುವುದು ಎಲ್ಲರಿಗೂ ಸಾಧ್ಯವಾಗುವುದಿಲ್ಲ. ಅದಕ್ಕಾಗಿ ಹಿಂದಿನವರು ಅವುಗಳಲ್ಲಿ ಹನ್ನೆರಡನ್ನು ಮಾತ್ರ ಆರಿಸಿಕೊಂಡು ಮಾನವನು ತನ್ನ ಜೀವಿತ ಕಾಲದಲ್ಲಿ ಇಷ್ಟನ್ನಾದರೂ ಒಮ್ಮೆ ದರ್ಶನ ಮಾಡಿ ಪೂಜಿಸಿ, ಧನ್ಯನಾಗಲಿ ಎಂದು ಸೂಚಿಸಿದ್ದಾರೆ. ಇದರಿಂದ ಭಾರತದಲ್ಲೆಲ್ಲ ಶೈವಸಂಸ್ಕೃತಿ ಬಹಳ ಹಿಂದಿನಿಂದಲೂ ಹರಡಿತ್ತು ಎಂಬ ಪ್ರಜ್ಞೆ ಮಾನವನಿಗೆ ಮೂಡು ತ್ತದೆ.

"ಮಾವ, ನಿನ್ನ ಉತ್ತರದಿಂದ ನನ್ನ ಒಂದು ಸಂದೇಹವೇನೋ ಪರಿ ಹಾರ ವಾಗಿದೆ. ಆದರೆ ಇಲ್ಲಿ ನನಗೆ ಮತ್ತೊಂದು ಸಂದೇಹವುಂಟಾಗಿದೆ. ದಯಮಾಡಿ, ಆ ಸಂದೇಹವನ್ನು ವಿವರಿಸಿ ಪರಿಹರಿಸಬೇಕು. ಏಕೆಂದರೆ ಸ್ಥಾವರ ಲಿಂಗಾರ್ಚನೆ ಎಂದರೆ ಮೂಗು ಮುರಿಯುವ ವೀರಶೈವದಲ್ಲಿ ಆಚಾರ್ಯರನ್ನು ಸ್ಥಾವರಲಿಂಗೋದ್ಭವರು ಎಂದು ಕರೆದಿರುವುದು ಸರಿಯೆ ?

"ಭಾಪು! ಒಳ್ಳೆಯ ಪ್ರಶ್ನೆಯನ್ನೇ ಕೇಳಿದೆ! ಆದರೆ ಮರಿ, ವೀರಶೈವದಲ್ಲಿ ಹೇಳಿರುವ ಜ್ಯೋತಿರ್ಲಿಂಗವು ಸಾಮಾನ್ಯ ಶೈವರು ಹೇಳುವ ಬಾಹ್ಯ ಶಿಲಾ ಮಯ ಜ್ಯೋತಿರ್ಲಿಂಗವಲ್ಲ. ಕಾಶಿ ಮತ್ತು ಶ್ರೀಶೈಲಗಳನ್ನು ಬಿಟ್ಟರೆ ಉಳಿದೆಲ್ಲ ಜ್ಯೋತಿರ್ಲಿಂಗ ಕ್ಷೇತ್ರಗಳಲ್ಲೆಲ್ಲಿಯೂ ಆಚಾರ್ಯರ ಹುಟ್ಟನ್ನು ಹೇಳಿಲ್ಲ. ಅಲ್ಲಿ ಹೇಳಿರುವ ಜ್ಯೋತಿರ್ಲಿಂಗವು ಪಾರಿಭಾಷಿಕ. ಏಕೆಂದರೆ ಆಚಾರ್ಯ ರೇಣುಕರು ಆಗಸ್ತ್ಯಮುನಿಗೆ ಬೋಧಿಸುವಾಗ–ಮೂಲಾಧಾರ ಹೃದಯ ಮತ್ತು ಭ್ರೂಮಧ್ಯಗಳಲ್ಲಿರುವ ಪರಬ್ರಹ್ಮರೂಪವಾದ ಶಿವಕಲೆಯನ್ನು ಜ್ಯೋತಿರ್ಲಿಂಗ ಎನ್ನಲಾಗಿದೆ.* ಅಂಗಸ್ಥಳಗಳನ್ನು ದಾಟಿ ಲಿಂಗಸ್ಥಳಗಳಿಗೆ ಅಡಿಯಿಟ್ಟು ಮೇಲೆ ಹೇಳಿದ ಆಂತರಿಕ ಜ್ಯೋತಿರ್ಲಿಂಗಾನುಸಂಧಾನ ಮಾಡುವ ಆಚಾರ್ಯರು 'ಲಿಂಗೋದ್ಭವ'ರೆನಿಸಿರುವುದು ಸಂಗತವಾಗಿದೆ."

"ಹಾಗಾದರೆ ಹೀಗೆ ಅಂತರ್ಲಿಂಗಾನುಸಂಧಾನ ಮಾಡುವ ಈ ಆಚಾರ್ಯರು ಬಾಹ್ಯದ ಜ್ಯೋತಿರ್ಲಿಂಗಗಳು ನೆಲೆಸಿರುವ ಈ ಶೈವ ಕ್ಷೇತ್ರಗಳಲ್ಲಿ ತಮ್ಮ ಧರ್ಮಪೀಠಗಳನ್ನು ಸ್ಥಾಪಿಸಿರುವ ಉದ್ದೇಶವೇನು ?"

"ಭೇಷ್ ! ನಿನ್ನ ಪ್ರಶ್ನೆ ನಿನ್ನ ಅದ್ಭುತ ಪ್ರತಿಭೆಗೆ ನಿದರ್ಶನ ! ಮರಿ ಇಲ್ಲಿ ನೀನೊಂದು ವಿಷಯವನ್ನು ಗಮನಿಸ ಬೇಕು. ಅದೆಂದರೆ-ಶೈವ ಮತ್ತು ವೀರಶೈವಗಳು ಪರಸ್ಪರ ವಿರೋಧಿಗಳಲ್ಲ ; ಬದಲಾಗಿ ಅವು ಪರಸ್ಪರ ಪೂರಕ ಗಳು. ಶಿಕ್ಷಣ ಕ್ರಮದಲ್ಲಿ ಕೆಳತರಗತಿಯವನು ಉತ್ತೀರ್ಣನಾಗಿ ಮೇಲ್ತರ ಗತಿಗೆ ತಾನೇ ಸೇರಬೇಕು ! ಬಾಹ್ಯ ಜ್ಯೋತಿರ್ಲಿಂಗಾರಾಧನೆಯಿಂದ ಸಾಧಕ ಮುನ್ನಡೆದು ತನ್ನಲ್ಲಿಯೇ ಇರುವ ಅಂತರ್ಲಿಂಗಾನುಸಂಧಾನ ಮಾಡುತ್ತಾ ಅಮೃತತ್ವವನ್ನು ಹೊಂದುತ್ತಾನೆ. ವೀರಶೈವಾಚಾರ್ಯರ ಆಯಾ ಶೈವಕ್ಷೇತ್ರಗಳಲ್ಲಿ ಲಿಂಗಾನುಷ್ಠಾನ ಮಾಡಿ "ಲಿಂಗೋದ್ಭವರೆನಿಸಿದ ರಲ್ಲದೆ, ಅಂಥ ಶೈವಕ್ಷೇತ್ರಗಳಿಗೆ ಬರುವ ಸಾಮಾನ್ಯ ಶಿವಭಕ್ತರಲ್ಲಿಯೂ "ಶಕ್ತಿಪಾತಾ"ದಿ ಲಕ್ಷಣಗಳನ್ನು ಗುರ್ತಿಸಿ, ಅವರಿಗೆ ಉನ್ನತಸ್ತರದ ಲಿಂಗ

---

* ಮೂಲಾಧಾರೇ ಚ ಹೃದಯೇ ಭ್ರೂಮಧ್ಯೇ ಸರ್ವದೇಹಿನಾಂ ।
ಜ್ಯೋತಿರ್ಲಿಂಗಂ ಸದಾ ಭಾತಿ ಯದ್ ಬ್ರಹ್ಮೇತ್ಯಾಹುರಾಗಮಾಃ ॥

ಧಾರಣ ದೀಕ್ಷೆಯನ್ನಿತ್ತು, ಇಷ್ಟಲಿಂಗಾನುಸಂಧಾನದ ಕಡೆ ತಿರುಗಿಸುವು ದಕ್ಕಾಗಿಯೇ ಇವರು ಅಂಥ ಶೈವಕ್ಷೇತ್ರಗಳಲ್ಲಿ ತಮ್ಮ ಧರ್ಮಪೀಠಗಳನ್ನು ಸ್ಥಾಪಿಸಿ ವೀರಶೈವ ಧರ್ಮವನ್ನು ಪ್ರಚಾರ ಮಾಡಿದರು. ಅದೇ ವೀರ ಶೈವದ ವೈಶಿಷ್ಟ್ಯ.

ಶಂಭುಭಟ್ಟರ ಸಮಾಧಾನದಿಂದ ಶ್ರೀಪತಿ ಮತ್ತು ಕನಕಲತೆಯರ ಸಂದೇಹಗಳೆಲ್ಲ ಸಂಪೂರ್ಣವಾಗಿ ಪರಿಹಾರವಾಗಿದ್ದವು! ಇದಕ್ಕಾಗಿ ಶ್ರೀಪತಿ ಮಾವನಿಗೆ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಒಪ್ಪಿಸಿದ್ದ.

೪

## ಎರಗಿ ಬಂದ ವಿಪತ್ತು!

ಪರಳೀ ಕ್ಷೇತ್ರಕ್ಕೆ ನೂರಾರು ಮಂದಿ ಭಕ್ತರು ಯಾತ್ರಾರ್ಥಿಗಳಾಗಿ ಬಂದಿದ್ದರು. ಅವರಲ್ಲಿ ತಮಗೆ ಬಂಧುಗಳಾದ ದ್ರಾಕ್ಷಾರಾಮದ ಭೀಮೇ ಶ್ವರಲಿಂಗದ ಪುರೋಹಿತರಾದ ಭೀಮನ ಪಂಡಿತರ ಚಿರಪರಿಚಿತ ಬ್ರಾಹ್ಮಣ ದಂಪತಿಗಳು ಶಂಭುಭಟ್ಟರನ್ನು ಗುರ್ತಿಸಿ ಕ್ಷೇಮಸಮಾಚಾರವನ್ನು ಪ್ರಶ್ನಿಸಿ ದರು.

ಈರ್ವರೂ ವೈದ್ಯನಾಥಸ್ವಾಮಿಯ ಸೇವೆಯನ್ನು ಜೊತೆಯಲ್ಲಿಯೇ ಮಾಡಿದ್ದಾಯಿತು. ಮುಂದೆ ಅವರು ಘುಸೃಣೇಶ್ವರ ಜ್ಯೋತಿರ್ಲಿಂಗ ಮತ್ತು ಉಜ್ಜನಿ ಮಹಾಕಾಲೇಶ್ವರ ಮುಂತಾದ ಕ್ಷೇತ್ರಗಳಿಗೂ ಪ್ರವಾಸ ಮಾಡುವ ಸಂಕಲ್ಪ ತಳೆದುದ್ದರಿಂದ ಶಂಭುಭಟ್ಟರಿಗೆ ಒಳ್ಳೆಯ ಜೊತೆ ದೊರೆತಂತಾಗಿ ಅವರಿಗೆ ತುಂಬಾ ಸಂತೋಷವೇ ಆಗಿತ್ತು.

ಸಾವಿತ್ರಿ ಮತ್ತು ಸದಾಶಿವಶಾಸ್ತ್ರಿ ಎಂಬ ಈ ಬ್ರಾಹ್ಮಣ ದಂಪತಿಗಳ ಪುತ್ರ ಶ್ರೀಕಾಂತ. ಅವನಿಗಿನ್ನೂ ಎಂಟು ವರ್ಷವೂ ಮೀರಿರಲಿಲ್ಲ. ಮಗನ ಉಪನಯನವನ್ನು ಮುಗಿಸಿದ ಅವರು ಭಾರತಯಾತ್ರೆ ಕೈಗೊಂಡಿ ದ್ದುದರಿಂದ ಮಗನನ್ನೂ ಅವರು ಒಡಗೊಂಡು ತೀರ್ಥಯಾತ್ರೆ ಹೊರಟಿ ದ್ದರು. ಎರಡು ಕುದುರೆ ಗಾಡಿಗಳಲ್ಲಿ ಈ ಎರಡು ಕುಟುಂಬಗಳೂ ಘುಸೃಣೇಶ್ವರದಾರಿ ಹಿಡಿದಿದ್ದರು.

ಕುದುರೆ ಗಾಡಿಗಳಲ್ಲಿ ಪರಳಿಯಿಂದ ಘುಸೃಣೇಶ್ವರಕ್ಕೆ ಐದು ದಿನದ ಹಾದಿ. ಎರಡು ದಿನಗಳು ಕಳೆದ ಮೇಲೆ ಅವರು ವಿಂಧ್ಯ ಪರ್ವತದ ಅರಣ್ಯವನ್ನು ಪ್ರವೇಶಿಸಿದ್ದರು. ಕಾಡು ದಟ್ಟವಾಗಿತ್ತು. ಜನಸಂಚಾರ ವಿರಳವಾಗಿತ್ತು. ಕತ್ತಲಾಗುತ್ತಿದ್ದಂತೆ ಗಾಡಿಗಳವರು ಒಂದು ನದಿಯ ದಡದಲ್ಲಿ ಗಾಡಿಗಳನ್ನು ನಿಲ್ಲಿಸಿ ವಾಸ್ತವ್ಯ ಮಾಡಬೇಕೆಂದು ಸೂಚಿಸಿ ಬಿಡು ಬಿಟ್ಟರು. ಅವರು ತಮ್ಮಲ್ಲಿದ್ದ ಆಹಾರ ಸೇವಿಸಿದರು, ಬೆಳಗಿನ ಝಾವಕ್ಕೆ ಗಾಡಿ ಕಟ್ಟಲು ನಿರ್ಧರಿಸಿ ಎಲ್ಲರೂ ಪವಡಿಸಿದರು. ಮಾರ್ಗಾಯಾಸ ದಿಂದ ಗಾಢ ನಿದ್ದೆಗೆ ವಶವಾಗಿದ್ದರು.

ಸರಿಹೊತ್ತಿನ ಸಮಯಕ್ಕೆ ಭೀಕರ ಧ್ವನಿಯೊಂದು ಅವರನ್ನು ಎಚ್ಚರಿಸಿತು. ಪಂಜುಗಳ ಬೆಳಕು ಕತ್ತಲನ್ನು ಭೇದಿಸಿ ದಾರಿ ಮಾಡಿ ಕೊಡುತ್ತಿತ್ತು. ಆಯುಧಪಾಣಿಗಳಾದ ನಾಲ್ವರು ಕ್ರೂರಿಗಳು ಗಾಡಿಗಳ ಹತ್ತಿರ ಬಂದು ಮಲಗಿದ್ದ ಮಕ್ಕಳನ್ನು ಪರೀಕ್ಷಿಸುತ್ತಿದ್ದರು. ಅವರಲ್ಲಿ ಮೊದಲು ಎಚ್ಚೆತ್ತವಳು ಬ್ರಾಹ್ಮಣಿ ಸಾವಿತ್ರಿ.

"ಯಾರಪ್ಪ ನೀವು ? ಮಕ್ಕಳನ್ನು ಮುಟ್ಟಬೇಡಿ. ನಿಮಗೆ ಹಣ ಬೇಕಾದರೆ ನಾನು ಕೊಡುತ್ತೇನೆ. ಮಕ್ಕಳು ಹೆದರುತ್ತವೆ. ಅವರನ್ನು ದಯಮಾಡಿ ಮುಟ್ಟಬೇಡಿ!" ಎಂದಳು ಸಾವಿತ್ರಿ ಬಾಯೊಣಗಿಸಿಕೊಂಡು.

"ನಮಗೆ ಹಣ ಬೇಡ, ಎಳೆ ವಯಸ್ಸಿನ ಹುಡುಗನೊಬ್ಬ ಬೇಕು!" ಎಂದಿತು ಆ ಭೀಕರ ಮೂರ್ತಿ ! ಇವರ ಮಾತುಗಳಿಗೆ ಉಳಿದವರು ಎಚ್ಚೆತ್ತರು. ಶಂಭು ಭಟ್ಟರು ಮುಂದೆ ಬಂದು,

"ಏ ! ಬಾ ಇಲ್ಲಿ ! ಹುಡುಗ ಬೇಕಾದರೆ ನಮ್ಮ ಹುಡುಗನಿದ್ದಾನೆ. ಆ ಹಸುಗೂಸನ್ನು ಮುಟ್ಟಬೇಡ!" ಎನ್ನುವಷ್ಟರಲ್ಲಿ ಒಂದು ಕ್ರೂರ ದೇಹ ಬ್ರಾಹ್ಮಣ ಕುವರನನ್ನು ಬಾಚಿ ಹೆಗಲಿಗೇರಿಸಿಕೊಂಡು ನಡೆಯುತ್ತಿತ್ತು. ಬ್ರಾಹ್ಮಣಿ ಚೀರಿದಳು. ಬ್ರಾಹ್ಮಣ ಕಂಗಾಲಾಗಿದ್ದ. ಶಂಭು ಆ ಘಾತು ಕರನ್ನು ಹಿಂಬಾಲಿಸಿದ. ಸದಾಶಿವ ಶಾಸ್ತ್ರಿಯೂ ಶಂಭುವಿನ ಹಿಂದೆ ನಡೆದಿದ್ದ. ಶ್ರೀಪತಿ ಮತ್ತು ಕನಕಲತೆಯರು ಅಲ್ಲಿದ್ದಾರೆ, ಈ ಸೂಚಿಗ ವನ್ನು ಗಮನಿಸುತ್ತಾ.

ಗಾಢಾಂಧಕಾರದಲ್ಲಿ ಕಲ್ಲು-ಮುಳ್ಳುಗಳ ಹಾದಿಯಲ್ಲಿ ಎಡವುತ್ತ, ಬೀಳುತ್ತಾ, ಏಳುತ್ತಾ ಎಲ್ಲರೂ ಆ ಬೆಳಕನ್ನು ಹಿಂಬಾಲಿಸಿದರು. ಬ್ರಾಹ್ಮಣಿಯ ಕಂಠ ಗದ್ಗದಿತವಾಗಿದೆ. ಕೂಗಿಕೊಳ್ಳಲು ಕೂಗೂ ಹೊರಡದಂತಾಗಿದೆ. ಭೀತಿಯಿಂದ ಮೈ ರೋಮಾಂಚಿತವಾಗಿದೆ. ಬ್ರಾಹ್ಮಣಿಯ ಗೋಳಾಟ ಹೇಳತೀರದು. ಸ್ವಲ್ಪ ದೂರ ನಡೆಯುತ್ತಿದ್ದಂತೆ ಒಂದು ಭೀಕರ ವ್ಯಕ್ತಿ ಹಿಂದಿರುಗಿ ಹೀಗೆಂದಿತು—

"ಯಾರೂ ಮುಂದಕ್ಕೆ ಬರಬೇಡಿ. ಮುಂದೆ ನಮ್ಮ ಗುರುವಿನ ಆಶ್ರಮವಿದೆ. ಅವರ ಅಪ್ಪಣೆಯಂತೆ ನಾವು ಈ ಬಾಲಕನನ್ನು ಕೊಂಡೊಯ್ಯುತ್ತಿದ್ದೇವೆ. ಇದು ನಮ್ಮ ಗುರುವಿನ ತಪಸ್ಸಿನ ಕೊನೆಯ ದಿನ. ಇಂದು ಭೈರವೇಶ್ವರನಿಗೆ ನಮ್ಮ ಗುರುವಿನ ಶಿಶುಬಲಿಯ ಹರಕೆಯಿದೆ. ಇದರಿಂದ ಪ್ರಸನ್ನನಾದ ಭೈರವನು ನಮ್ಮ ಗುರುವಿನ ಇಷ್ಟಾರ್ಥವನ್ನು ನೆರವೇರಿಸುವನು. ಗುರು ಕರುಣಿಸಿ ಶಿಶುವನ್ನು ಬದುಕಿಸಿ ನಿಮಗೆ ಕೊಡಬಹುದು. ನಿಲ್ಲಿ!" ಎಂದು ಗಡುಸಿನ ಕಂಠದಿಂದ ಎಚ್ಚರಿಸಿತು.

ಶಂಭು ಹೇಳಿದ, "ನಿಮ್ಮ ಗುರುವಿಗೆ ಇನ್ನೊಬ್ಬ ಬಾಲಕನನ್ನು ಕೊಡುತ್ತೇನೆ. ಆ ಬಾಲಕನನ್ನು ಹಿಂದಿರುಗಿಸಿ" ಎಂದ. ಅಷ್ಟರಲ್ಲಿ ಮತ್ತೊಂದು ಭೀಕರಾಕೃತಿ ಹೀಗೆಂದಿತು—

"ಹಾಗಿದ್ದರೆ ನೀವೊಬ್ಬರು ಮಾತ್ರ ನಮ್ಮ ಹಿಂದೆ ಬನ್ನಿ. ನಮ್ಮ ಗುರುವಿಗೆ ನಿಮ್ಮ ಬಿನ್ನಹವನ್ನು ಒಪ್ಪಿಸಿ. ಅವರ ಇಷ್ಟ, ನಿಮ್ಮ ಪುಣ್ಯ!" ಎಂದು ಅದು ಮುನ್ನಡೆಯಿತು. ಶಂಭು ಅವರನ್ನು ಹಿಂಬಾಲಿಸಿದ. ಉಳಿದವರಿಗೆ ಈ ಶಾಸನವನ್ನು ಮೀರುವ ಧೈರ್ಯ ಬರಲಿಲ್ಲ. ಆದರೂ ಆ ಬ್ರಾಹ್ಮಣಿಯು ಮಾತ್ರ ಮುನ್ನುಗ್ಗಿದಳು ಗೋಳಾಡುತ್ತಾ—

ಅಷ್ಟರಲ್ಲಿ ಶಾಸ್ತ್ರಿಗಳು "ಶಂಭು ಇರುವಾಗ ನಮಗೇನು ಭಯ ? ಅವರು ಹಿಂದಿರುಗಿ ಬರುವವರೆಗೂ ಕಾಯೋಣ. ತಡೆ !" ಎಂದ. ಸಾವಿತ್ರಿಯನ್ನು ತಡೆದರು. ಆದರೆ ಶ್ರೀಪತಿ-ಕನಕೆಯರು ಪರಸ್ಪರ ಮುಖ ನೋಡಿಕೊಂಡು ಪ್ರಶಾಂತವಾಗಿದ್ದರು.

ಸುಮಾರು ಒಂದು ಹರಿದಾರಿ ನಡೆದ ಮೇಲೆ ದೂರದಲ್ಲಿ ಮಿಣುಕು ದೀಪದ ಬೆಳಕಿನಲ್ಲಿ ಗವಿಯೊಂದು ಕಾಣಿಸಿತು. ಗರ್ಭಗುಡಿಯಲ್ಲಿರುವ ಭೈರವಮೂರ್ತಿಗೆ ಕೆಂಪುಕಣಗಿಲೆಯ ದಪ್ಪ ಹೂವಿನಹಾರ ಹಾಕಿದೆ. ಅದರ ಮೇಲೆ ದೇವಕಣಗಿಲೆಯಹೂವಿನ ಅಲಂಕಾರ. ಪಕ್ಕದ ವೇದಿಕೆಯಲ್ಲಿ ಸ್ಥಾಪಿಸಿದ ಕಲಶದಲ್ಲಿ ದುರ್ಗಾಪೂಜೆ ಸಾಂಗವಾಗಿ ನಡೆದಿದೆ. ಮಧು-ಮಾಂಸ--ಮತ್ಸ್ಯ-ಮಹಿಳಾ-ಮದ್ಯಾದಿಗಳು ಯಥೇಚ್ಛವಾಗಿ ಶೇಖರಿಸಲ್ಪಟ್ಟಿವೆ. ಹಣ್ಣುಹಂಪಲುಗಳ ನೈವೇದ್ಯಗಳು, ಕಾಪಾಲಿಕ ತರುಣ ತರುಣಿಯರ ಬಳಗ ಲೆಕ್ಕವಿಲ್ಲದಷ್ಟು ! ಗರ್ಭಗುಡಿಯ ಬಾಗಿಲಿನ ಎರಡೂಕಡೆ ಭೀಕರ ವೇಷದ ಕಟುಕರಿಬ್ಬರು ಮಚ್ಚು ಹಿಡಿದು ನಿಂತಿದ್ದರು ! ಅವರ ಕ್ರೂರ ಮುಖಗಳು ಕುಂಕುಮ ಅರಿಸಿನಗಳಿಂದ ಲಿಪ್ತವಾಗಿ ಮತ್ತಷ್ಟು ಭೀಕರವಾಗಿ ಕಾಣುತ್ತಿದ್ದವು. ಅವರ ಕೈಲಿದ್ದ ಮಚ್ಚುಗಳೂ ಕುಂಕುಮ ಅರಿಸಿನಗಳಿಂದ ರೂಷಿತವಾಗಿ ಕೆಂಪುಕಣಗಿಲೆ ಹಾರಗಳಿಂದ ಅಲಂಕೃತವಾಗಿವೆ.

"ಎಲ್ಲಿ ನಿಮ್ಮ ಗುರು !" ಎಂದು ಶಂಭು ಉಗ್ರವಾಗಿ ಎಚ್ಚರಿಸಿದ

ಆಯುಧಪಾಣಿಗಳು ಭೀತರಾಗಿ ಶಂಭುವನ್ನು ನೋಡುತ್ತಿದ್ದರು. ಶಂಭುವನ್ನು ಕರೆತಂದವನು ಗರ್ಭಗುಡಿಗೆ ಬಲಗಡೆಯ ಗುಹೆಯ ಕಡೆ ಕೈ ತೋರಿದ. ಶಂಭು ಆ ಕಡೆ ನುಗ್ಗಿದ. ಅಷ್ಟರಲ್ಲಿ ಅವನನ್ನು ತಡೆದು ಆತ ಹೇಳಿದ. "ಸ್ವಲ್ಪ ತಡೆ ! ಅವರು ಧ್ಯಾನಮಗ್ನರಾಗಿದ್ದಾರೆ. ಧ್ಯಾನ ಮುಗಿದಾಗ ಗಂಟೆ ಬಾರಿಸುತ್ತದೆ. ಬಾಗಿಲು ತೆರೆಯುತ್ತದೆ. ಅವರ ಸೂಚನೆಯಂತೆ ಶಿಶು ಬಲಿಯಾಗುತ್ತದೆ. ಅದಕ್ಕೆ ಮುನ್ನ ನಿಮ್ಮ ಬಿನ್ನಹವನ್ನು ಕೇಳಿಕೊಳ್ಳಿ !" ಎಂದ ಶಿಷ್ಯ.

ಶಂಭು ಬಾಗಿಲ ಕಿಂಡಿಯಲ್ಲಿ ಕಂಡ ದೃಶ್ಯವೇ ಬೇರೆ ! ಅಷ್ಟರಲ್ಲಿ ನೂರು ಸಿಡಿಲುಗಳು ಮೊರೆದಂತೆ ಭಯಂಕರ ಶಬ್ದ ಕೇಳಿ ಬಂತು ! ಅದು ಗುಹೆಗಳಲ್ಲಿ ಪ್ರತಿಧ್ವನಿತವಾಗಿ ಶಾಂತವಾಯಿತು. ಬ್ರಾಹ್ಮಣ–ಬ್ರಾಹ್ಮಣಿಯರು"ನಮ್ಮ ಶಂಭುಗೆ ಏನು ಅಪಾಯ ಒದಗಿತೋ !" ಎಂದು ಗದ್ಗದಿತರಾಗಿ ಕಂಗಾಲಾದರು. ಶ್ರೀಪತಿಯು ಮಾತ್ರ ಪ್ರಸನ್ನನಾಗಿಯೇ ಗಂಭೀರವಾಗಿದ್ದ. ಕನಕಳ ಕುತೂಹಲ ಮಿಗಿಲಾಗಿತ್ತು.

ಗುರು ಬಾಯಲ್ಲಿ ರಕ್ತ ಸುರಿಸುತ್ತಾ ಹೊರಬಂದು ಗುಡಿಗೆ ನುಗಿ "ಅಮ್ಮಾ ಮನ್ನಿಸು ! ಮನ್ನಿಸು ! ನನ್ನದು ಸರ್ವಥಾ ಅಪರಾಧವಾಯಿತು ! ಇನ್ನೆಂದೆಂದೂ ನಿನ್ನ ಆಜ್ಞೆಯನ್ನು ಮೀರುವುದಿಲ್ಲ !" ಎಂದು ಅಡ್ಡ ಬಿದ್ದ.

ಭೈರವನ ಸ್ಥಾನದಲ್ಲಿ ದುರ್ಗಿಯ ರೂಪ ಪ್ರಜ್ವಲಿಸಿ ಮಾಯವಾಯಿತು. ಭೈರವಮೂರ್ತಿ ಪ್ರಸನ್ನವಾಗಿ ಗೋಚರಿಸಿತು. ಗುರು ಹಿಂದಿರುಗಿ ಬಂದು ಶಂಭುಭಟ್ಟರಿಗೆ ಸಾಷ್ಟಾಂಗ ಪ್ರಣಾಮ ಮಾಡಿ ಕೈ ಮುಗಿದು ಬೇಡತೊಡಗಿದ. "ಸ್ವಾಮಿ, ನೀವು ಕ್ಷಮಿಸಬೇಕು. ನನ್ನ ತಾಮಸಪೂಜೆ ಅಮ್ಮನಿಗೆ ಇಷ್ಟವಾಗಲಿಲ್ಲ ! ಹನ್ನೆರಡು ವರ್ಷಗಳಿಂದ ಭೈರವನ ಕೃಪೆ ಪಡೆಯಲು ಮಧು-ಮಾಂಸಾದಿಗಳಿಂದ ಅವನನ್ನು ಆರಾಧಿಸುತ್ತಿದ್ದೆ ! ನನಗಿಂದು ಜ್ಞಾನೋದಯವಾಯಿತು !" ಎಂದು ಅಂಗಲಾಚುತ್ತಿದ್ದ.

ಅಷ್ಟರಲ್ಲಿ ಗರ್ಭಗುಡಿಯಿಂದ ಹೊರಬಿದ್ದ ಹೆಣ್ಣು ರೂಪವೊಂದು ಬಿಳಿಯ ಸೀರೆ ಕುಪ್ಪಸ ತೊಟ್ಟು ಶಂಭುಭಟ್ಟರ ಬೆನ್ನು ಚಪ್ಪರಿಸುತ್ತಿತ್ತು. ಹಿಂದಿರುಗಿ ನೋಡಿದ ಶಂಭುಗೆ ಗಾಬರಿಯೋ ಗಾಬರಿ ! "ಏನು ತಾಯಿ ; ಈ ಕಗ್ಗಾಡಿನಲ್ಲಿ ಕಾಣಿಸಿಕೊಂಡು ನಮ್ಮನ್ನು ಉದ್ಧರಿಸಿದಿರಿ" ಎಂದು ಕೈ ಮುಗಿದ.

ಅಷ್ಟರಲ್ಲಿ ಬ್ರಾಹ್ಮಣ-ಬ್ರಾಹ್ಮಣಿಯರು ಶ್ರೀಪತಿಯೊಂದಿಗೆ ಭೈರವ ಗುಹೆಯ ಹತ್ತಿರ ಬಂದಿದ್ದರು. ಆ ಕಾಪಾಲಿಕಗುರು: ಬಾಲಕ ಶ್ರೀಕಾಂತನನ್ನು ಎತ್ತಿಕೊಂಡು ಬಂದು ಬ್ರಾಹ್ಮಣಿಯ ಪಾದದ ಬಳಿ ನಿಲ್ಲಿಸಿ ಸಾಷ್ಟಾಂಗ ಮಾಡಿದ. ಮತ್ತು ಶ್ರೀಪತಿಯನ್ನು ಗುರ್ತಿಸಿ ಕೈ ಮುಗಿದ. ಅಷ್ಟು ಹೊತ್ತಿಗೆ ದುಗ್ಗವ್ವೆ ಶ್ರೀಪತಿಯ ತಲೆ ಸವರಿ ಬೆನ್ನು ಚಪ್ಪರಿಸುತ್ತಿದ್ದಳು. ಕನಕಾ ಬಿಡುಗಣ್ಣುಗಳಿಂದ ದುಗ್ಗವ್ವೆಗೆ ವಂದಿಸುವಷ್ಟರಲ್ಲಿ ದುಗ್ಗವ್ವೆ ಕನಕಳನ್ನು ಬಳಿಗೆಳೆದುಕೊಂಡು ರಮಿಸುತ್ತಿದ್ದಳು.

ಗುರು ಶ್ರೀಪತಿಯನ್ನು ಕುರಿತು ಹೇಳಿದ "ಸ್ವಾಮಿ, ನನ್ನ ಹೆಸರು ಕಪಾಲಭೈರವ. ಇದುವರೆಗೆ ತಾಮಸಪೂಜೆ ಮಾಡಿ, ದಿಕ್ಕು ತಪ್ಪಿ, ನರಕದ ದಾರಿ ಹಿಡಿದಿದ್ದೆ. ನನ್ನನ್ನು ಉದ್ಧರಿಸಿದವಳು ಈ ನನ್ನ ತಾಯಿ ! ನನಗೆ ಜ್ಞಾನೋದಯವಾಯಿತು. ಈ ತಾಯಿಯು ತೋರಿಸಿದ ಹಾದಿಯಲ್ಲಿ ನನ್ನ

ದಾರಿ ಕಂಡುಕೊಂಡಿದ್ದೇನೆ. ಮಹಾತೇಜಸ್ವಿಯೂ ಉಜ್ವಲ ಭವಿಷ್ಯವುಳ್ಳವನೂ ಆದ ನಿನ್ನ ಸಹಚರನಾಗಿ ನಾನಿದ್ದು ನನ್ನ ಋಣವನ್ನು ತೀರಿಸುತ್ತೇನೆ" ಎಂದು ಕಾಪಾಲಿಕ ಶ್ರೀಪತಿಗೆ ಕೈ ಮುಗಿದು ದುಗ್ಗವ್ವೆಗೆ ವಂದಿಸಿ ಮುನ್ನಡೆದ. ಗುರುವಿನ ಶಿಷ್ಯರು ನಿಬ್ಬೆರಗಾಗಿ ನೋಡುತ್ತಿದ್ದರು! ಗಾಡಿಗಳವರು ಈ ಅದ್ಭುತವನ್ನು ನಮ್ಮ ಜೀವನದಲ್ಲೆಂದಿಗೂ ಕಾಣೆವೆಂದು ಆಶ್ಚರ್ಯ ಚಕಿತರಾಗಿದ್ದರು. ದುಗ್ಗವ್ವೆ "ನಾನು ಘುಸೃಣೇಶ್ವರನ ಸನ್ನಿಧಿಯಲ್ಲಿ ನಿಮ್ಮನ್ನು ಸೇರಿಕೊಳ್ಳುತ್ತೇನೆ" ಎಂದು ಹೇಳಿ ಮುನ್ನಡೆದಳು. ಗಾಡಿಗಳು ಕಟ್ಟುತ್ತಿದ್ದಂತೆ ದುಗ್ಗವ್ವೆ ಮತ್ತೆ ಕಾಣಲಿಲ್ಲ!

ಶ್ರೀಪತಿ ಕೇಳಿದ—"ಮಾವ, ಈ ಕಪಾಲಭೈರವ ಮತ್ತು ದುಗ್ಗವ್ವೆಯರ ರಹಸ್ಯವೇ ತಿಳಿಯಲಿಲ್ಲ! ನೀವು ಅವರ ಗುಹೆಯಲ್ಲಿ ಕಂಡದ್ದೇನು?" ಎಂದು.

"ಮರಿ, ಪೂಜೆಯಲ್ಲಿ ದಕ್ಷಿಣಾಚಾರ ಮತ್ತು ವಾಮಾಚಾರ ಎಂಬ ಭೇದಗಳಿವೆ. ನಾವು ಮಾಡುವ ಪೂಜೆ ದಕ್ಷಿಣಾಚಾರದ್ದು. ಕಾಪಾಲಿಕರದು ವಾಮಾಚಾರ. ಮುಂದೆ ನೀನು ತಂತ್ರಗಳ ಅಭ್ಯಾಸ ಮಾಡುವಾಗ ವಾಮಾಚಾರದ ಪರಿಚಯವಾಗುತ್ತದೆ. ಈಗ ಅದರ ವಿಚಾರ ಬೇಡ!" ಎಂದು ಶಂಭು ಭಟ್ಟರು ಆ ಪ್ರಕರಣಕ್ಕೆ ಮುಕ್ತಾಯ ಹಾಡಿದರು.

೪

ದತ್ತಾಶ್ರಮ

ಎರಡು ದಿನಗಳವರೆಗೆ ಕುದುರೆಗಾಡಿಗಳು ಕಾಡುಹಾದಿಯಲ್ಲಿ ಮುನ್ನಡೆಯುತ್ತಿದ್ದವು. ಅವು ಗಿರ್‌ನಾರ್ ಪರ್ವತದ ತಪ್ಪಲಿನಲ್ಲಿ ಹೋಗುತ್ತಿದ್ದಾಗ ಆಶ್ರಮವೊಂದು ಕಾಣಿಸಿತು. ಆಶ್ರಮದ ವಟುಗಳಿಬ್ಬರು

ಗಾಡಿಗಳನ್ನು ತಡೆದು ಪ್ರಯಾಣಿಕರನ್ನು ಆಶ್ರಮಕ್ಕೆ ಸ್ವಾಗತಿಸಿದರು. ವಟುಗಳಿಂದ ದತ್ತಾತ್ರೇಯರ ಪ್ರಭಾವವನ್ನು ಕೇಳಿದ ಶಂಭುಭಟ್ಟರು ಎಲ್ಲರನ್ನು ಕರೆದುಕೊಂಡು ಆಶ್ರಮ ಪ್ರವೇಶ ಮಾಡಿದರು. ಆಶ್ರಮದ ಗುರು ದತ್ತಾತ್ರೇಯರು ಬಂದವರಿಗೆ ಉಚಿತ ಸತ್ಕಾರಕ್ಕೆ ವ್ಯವಸ್ಥೆ ಮಾಡಿದ್ದರು.

ಶಾಬರೀ ಮಂತ್ರಸಿದ್ಧರಾದವರು ದತ್ತರು. ಮಂತ್ರಪ್ರಭಾವದಿಂದ ಬಯಸಿದ ವಸ್ತು ಅವರಿಗೆ ಸುಲಭವಾಗಿ ಲಭ್ಯವಾಗುತ್ತಿತ್ತು. ಅಣುವಾಗುವುದು, ಬೃಹತ್ತಾಗುವುದು, ಬಯಸಿದ್ದನ್ನು ಪಡೆವುದು ಮುಂತಾದ ಅಷ್ಟ (ಎಂಟು) ಸಿದ್ಧಿಗಳು ದತ್ತರಿಗೆ ಆ ಮಂತ್ರ ಸಿದ್ಧಿಯಿಂದ ಲಭ್ಯವಾಗಿದ್ದವು.

ದತ್ತರು ಶ್ರೀಪತಿಯನ್ನು ಬಳಿಗೆ ಕರೆದು, "ನಿನಗೆ ಈ ಸಿದ್ಧಿಯ ಆಗತ್ಯವಿಲ್ಲವೆಂಬುದನ್ನು ನಿನ್ನ ಮುಖದ ವರ್ಚಸ್ಸು ಹೇಳುತ್ತದೆ. ನೀನು ಈಗ ಹೊರಟಿರುವ ಕಾರ್ಯವು ಯಶಸ್ವಿಯಾಗಲಿ!" ಎಂದು ಹರಸಿ, ಬೀಳ್ಕೊಟ್ಟರು.

## ಮತ್ಸ್ಯೇಂದ್ರನಾಥಾಶ್ರಮ

ಮುಂದೆ ಅವರ ಹಾದಿಯ ಬದಿಯಲ್ಲಿ ಮಾರ್ತಾಂಡಪರ್ವತ ತಲೆಯೆತ್ತಿ ಗಗನವನ್ನು ಚುಂಬಿಸುತ್ತಿತ್ತು. ಪರ್ವತದಲ್ಲಿ ನೂರಾರು ತಪೋಯೋಗ್ಯವಾದ ಗುಹೆಗಳು. ಅವುಗಳಲ್ಲಿ ಅನೇಕ ಸಾಧು-ಸಂತರು ಅನುಷ್ಠಾನಗಳಲ್ಲಿ ತೊಡಗಿದ್ದರು.

ಅವರಲ್ಲಿ ಮತ್ಸ್ಯೇಂದ್ರನಾಥನ ಹೆಸರನ್ನು ಶಂಭು ಕೇಳಿದ್ದರು. ಹಠಯೋಗದಲ್ಲಿ ಪರಿಣತನಾದ ಮತ್ಸ್ಯೇಂದ್ರನ ಆಶ್ರಮದಲ್ಲಿ ಅನೇಕ ಸಾಧಕರಿದ್ದರು. ಅವರ ಸಾಧನೆಯನ್ನು ಗುರ್ತಿಸಿ ಮತ್ಸ್ಯೇಂದ್ರನಾಥ ಅವರಲ್ಲಿ ಕೆಲವರಿಗೆ ಹಠಯೋಗದಲ್ಲಿ, ಕೆಲವರಿಗೆ ಅಷ್ಟಾಂಗಯೋಗದಲ್ಲಿ ಮತ್ತೆ ಕೆಲವರಿಗೆ ರಾಜಯೋಗದಲ್ಲಿ ಶಿಕ್ಷಣ ಕೊಡುತ್ತಿದ್ದ. ಶ್ರೀಪತಿಯು

ಮತ್ಸ್ಯೇಂದ್ರನ ವಜ್ರಕಾಯವನ್ನು ಕುತೂಹಲದಿಂದ ನೋಡತೊಡಗಿದ. ಅಷ್ಟರಲ್ಲಿ ಮತ್ಸ್ಯೇಂದ್ರ ಮುಖಲಕ್ಷಣಗಳಿಂದ ಶ್ರೀಪತಿಯನ್ನು ಗುರ್ತಿಸಿ, "ಮರಿ, ನನ ಶರೀರದ ದಾರ್ಢ್ಯವನ್ನಲ್ಲವೆ ನೀನು ನೋಡಿ ಸೋಜಿಗ ಗೊಂಡಿರುವೆ ! ಇದು ಮಹತ್ವದ್ದಲ್ಲ. ಆದರೆ ಕಣ್ಣಿಗೆ ಕಾಣುವ ಕಾಯ ವನ್ನು ಅಕಾಯವನ್ನಾಗಿ ಪರಿವರ್ತಿಸಬಲ್ಲ ಯೋಗವನ್ನು ನೀನು ಸಾಧಿಸುವ ಭವಿಷ್ಯ ಪಡೆದಿರುವೆ!" ಎಂದಾಗ ಶ್ರೀಪತಿಯ ಮುಖ ಅರಳಿತು.

"ಇರುವೆಗಲ್ಲವೆ ಇರುವೆಯ ಹಾದಿ ಗುರ್ತಾಗುವುದು !" ಎಂದ ಮತ್ಸ್ಯೇಂದ್ರ ಶ್ರೀಪತಿಯ ಬೆನ್ನ ಚಪ್ಪರಿಸಿ, "ನೀನು ನಿರ್ದೇಹಿಯಾಗಿ ಲೋಕಪೂಜ್ಯನಾಗುವ ದಿವ್ಯಲಕ್ಷಣಗಳು ನಿನ್ನಲ್ಲಿ ಕಾಣುತ್ತಿವೆ. ನಿನಗೆ ಒಳ್ಳೆಯದಾಗಲಿ !" ಎಂದು ಹರಸಿ ಬೀಳ್ಕೊಟ್ಟ.

ಹೀಗೆ ವಿಂಧ್ಯ ಪರ್ವತಗಳಲ್ಲಿ ಅನೇಕ ಗುಹೆಗಳಲ್ಲಿ ಅನುಷ್ಠಾನ ಮಾಡು ತ್ತಿದ್ದ ಸಿದ್ಧರ ಜೀವನ-ಸಾಧನೆ-ಸಿದ್ಧಿಗಳನ್ನು ಗಮನಿಸಿದ ಶ್ರೀಪತಿಯನ್ನು ಒಡಗೊಂಡು ಶಂಭು ಭಟ್ಟರು ಘುಸೃಣೇಶ್ವರ ಜ್ಯೋತಿರ್ಲಿಂಗವಿರುವ ಪುಣ್ಯಕ್ಷೇತ್ರವನ್ನು ಸಮೀಪಿಸಿದ್ದರು.

ನೂರಾರು ಜನ ಯಾತ್ರಿಕರು ಘುಸೃಣೇಶ್ವರದಲ್ಲಿ ನೆರೆದಿದ್ದರು. ಸದಾಶಿವಶಾಸ್ತ್ರಿಗಳು ಪತ್ನೀಪುತ್ರಸಮೇತರಾಗಿ ಘುಸೃಣೇಶ್ವರನ ಸೇವೆಗಾಗಿ ಮಡಿಯುಟ್ಟು ಸಿದ್ಧರಾಗಿ ಶಂಭುಭಟ್ಟರ ಆಗಮನಕ್ಕಾಗಿ ಕಾಯ್ದಿದ್ದರು. ಶಂಭುಭಟ್ಟರನ್ನು ಬಿಟ್ಟು ಶಾಸ್ತ್ರಿಗಳ ಪರಿವಾರ ಯಾವ ಕೆಲಸವನ್ನೂ ಆರಂಭಿಸುವ ಗೊಡವೆಗೆ ಹೋಗುತ್ತಿರಲಿಲ್ಲ.

ರುದ್ರಾಭಿಷೇಕ-ಸಹಸ್ರನಾಮ ಪೂಜಾದಿಗಳಿಂದ ದೇವತಾಸೇವೆ ಸಾಂಗವಾದದ್ದು ಆ ದಂಪತಿಗಳಿಗೆ ಅಮಿತಾನಂದವನ್ನುಂಟುಮಾಡಿತ್ತು. ದಾರಿಯಲ್ಲಿ ತಮ್ಮ ಸುಪುತ್ರನಿಗೆ ಪ್ರಾಣದಾನ ಮಾಡಿದ ಶಂಭು ಭಟ್ಟರನ್ನು ಆ ದಂಪತಿಗಳು ಶಿವನ ಸ್ವರೂಪವೆಂದರಿತು ಭಕ್ತಿಯಿಂದ ಕಾಣುತ್ತಿದ್ದರು. ಪೂಜೆ ಮುಗಿಯುತ್ತಿದ್ದಂತೆ ಸಾವಿತ್ರಿಯು ಮಡಿಯಿಂದ ಮಾಡಿದ ನೈವೇದ

ವನ್ನು ಕನಕಳ ಜೊತೆ ತಂದಿದ್ದಳು. ಸ್ವಾಮಿಗೆ ಸಮರ್ಪಿಸಿದ ಶೇಷ ಪ್ರಸಾದವನ್ನು ಎಲ್ಲರೂ ಭಕ್ತಿಯಿಂದ ಸೇವಿಸಿ ಕೃತಾರ್ಥರಾದೆವೆಂದು ಭಾವಿಸಿದರು.

ಎಲ್ಲರೂ ದೇವರಿಗೆ ಪ್ರಣಾಮ ಮಾಡಿ, ಹೊರಬರುತ್ತಿರುವಾಗ ದುರ್ಗವ್ವ ಕಾಣಿಸಿಕೊಂಡಳು.

೫೦

## ಎಲ್ಲೋರದ ಮೂರ್ತಿಶಿಲ್ಪ

ದುರ್ಗವ್ವೆಯ ಪುನರ್ದರ್ಶನದಿಂದ ಶಂಭು ಭಟ್ಟರು ಪುಳಕಿತರಾಗಿದ್ದರು. ಶ್ರೀಪತಿ–ಕನಕಲತೆಯರಲ್ಲಿ ನವಚೇತನ ಸಂಚರಿಸಿದಂತಾಗಿತ್ತು. ಚಿರಂಜೀವಿಗಳು ಹಸನ್ಮುಖರಾಗಿ ದುರ್ಗವ್ವೆಯ ಪಾದಗಳಿಗೆ ವಂದಿಸಿದರು.

ಶ್ರೀಪತಿ "ಅಜ್ಜಿ, ನಿಮ್ಮನ್ನು ಮತ್ತೆ ಇಲ್ಲಿ ನೋಡಿದ್ದು ನಮಗೆ ಇದ್ದ ಒಂದು ಕೊರತೆ ತುಂಬಿದಂತಾಗಿದೆ. ನಾವೀಗ ಘುಸೃಣೇಶ್ವರದ ಜ್ಯೋತಿರ್ಲಿಂಗವನ್ನು ಆರಾಧಿಸಿ, ಎಲ್ಲೋರ ಮತ್ತು ಅಜಂತೆಯ ಗುಹಾಂತರ್ದೇವಾಲಯಗಳನ್ನು ಕುರಿತು ಹೊರಟಿರುವುದಾಗಿ ಮಾವ ಹೇಳಿದರು. ಮಹತ್ವಪೂರ್ಣವಾದ ಈ ಗುಹೆಗಳ ಮಾರ್ಗದರ್ಶಕರು ಯಾರು ಎಂಬ ಯೋಚನೆಯಾಗಿ ನಿಮ್ಮ ನೆನಪಾಯಿತು. 'ನೆನೆದವರ ಮನದಲ್ಲಿ' ಎಂಬಂತೆ ನೀವು ಕಾಣಿಸಿಕೊಂಡಿರಿ. ಈ ಎರಡು ಪ್ರೇಕ್ಷಣೀಯ ಸ್ಥಳಗಳ ಮಾಹಿತಿಯನ್ನು ಸಂಪೂರ್ಣವಾಗಿ ಮಾಡಿಕೊಡಬೇಕು" ಎಂದು ಮತ್ತೊಮ್ಮೆ ಅಜ್ಜಿಗೆ ವಂದಿಸಿದ.

"ಹೌದು ಮರಿ, ನಾನು ನಿನ್ನ ಮನದಲ್ಲಿರುವುದು ನಿಜ! ಇಲ್ಲದಿದ್ದರೆ ನಿನ್ನ ತಾಯಿ ಬಿಡಬೇಕಲ್ಲ"! ಎಂದು ಅಜ್ಜಿ ಇಬ್ಬರು ಚಿರಂಜೀವಿಗಳನ್ನೆತ್ತಿಕೊಂಡು ರಮಿಸತೊಡಗಿದಳು.

ಸದಾಶಿವಶಾಸ್ತ್ರಿಗಳು-ಸಾವಿತ್ರಿಯರಿಗೆ ಅಪರಿಚಿತಳಾದ ಅಜ್ಜಿಯನ್ನು ಕಂಡು ಭಕ್ತಿ ಮೂಡಿತ್ತು. ಅವರೂ ಅಜ್ಜಿಗೆ ನಮಸ್ಕರಿಸಿದರು. ಶಂಭು ಭಟ್ಟರು ಅವರ ಪರಿಚಯವನ್ನು ಸೂಕ್ಷ್ಮವಾಗಿ ಮಾಡಿಕೊಟ್ಟರು. ಎಲ್ಲರನ್ನು ಹಿಂದಿಟ್ಟುಕೊಂಡು ದುಗ್ಗವ್ವ ಎಲ್ಲೋರ ಮೂರ್ತಿ ಕಲೆಯ ಬಗೆಗೆ ವಿವರಿಸತೊಡಗಿದಳು.

"ಮರಿ, ಈ ಗುಹೆಗಳು ವಿಂಧ್ಯ ಪರ್ವತದ ಪಶ್ಚಿಮ ಘಟ್ಟಗಳಿಗೆ ಸೇರಿವೆ. ಗೋದಾವರೀ ನದಿಯ ಉಪನದಿಯೊಂದರ ದಂಡೆಯ ಮೇಲೆ ಈ ಗುಹೆಗಳಿವೆ. ಒಂದೇ ಶಿಲೆಯಲ್ಲಿ ಕೊರೆದಿರುವ ಮೂವತ್ತುನಾಲ್ಕು ಗುಹಾಂತರ್ದೇವಾಲಯಗಳಿಂದ ಈ ಪ್ರದೇಶವು ಕಂಗೊಳಿಸುತ್ತಿದೆ.

ಈ ಮೂವತ್ತುನಾಲ್ಕು ಗುಹೆಗಳಲ್ಲಿ ದಕ್ಷಿಣಕ್ಕಿರುವ ೧೨ ಗುಹೆಗಳು ಬೌದ್ಧ ಧರ್ಮವನ್ನು ಕುರಿತು ನಿರ್ಮಿತವಾಗಿದೆ. ಉಳಿದವುಗಳಲ್ಲಿ ೧೭ ಹಿಂದೂ ಸಂಸ್ಕೃತಿಗೆ ಸಂಬಂಧಿಸಿದವು. ಉತ್ತರದ ಅಂಚಿನಲ್ಲಿರುವ ಕಡೆಯ ಐದು ಗುಹೆಗಳು ಜೈನಧರ್ಮಕ್ಕೆ ಸೇರಿವೆ."

"ಅಜ್ಜಿ, ಇವಿಷ್ಟೂ ಗುಹೆಗಳನ್ನು ನಿರ್ಮಿಸಿದವರು ಯಾರು ? ಬೌದ್ಧ, ಜೈನ ಮತ್ತು ಹಿಂದೂ ಧರ್ಮಗಳ ನೆನಪಿನ ಈ ಗುಹೆಗಳು ನಿರ್ಮಿತವಾದ ಕಾಲವು ಯಾವುದು ?"

"ಮರಿ, ಈ ಗುಹೆಗಳ ನಿರ್ಮಾಣ ಏಕಕಾಲದಲ್ಲಿ ಆದದ್ದಲ್ಲ. ಜೈನ-ಬೌದ್ಧ ಸಂಸ್ಕೃತಿಗೆ ಸೇರಿದ ಗುಹೆಗಳು ಇಂದಿಗೆ ಸುಮಾರು ಏಳೆಂಟು ನೂರು ವರ್ಷಗಳ ಹಿಂದೆ ನಿರ್ಮಿತವಾಗಿರಬಹುದು ಎಂದು ಊಹಿಸಲಾಗಿದೆ. ಇವುಗಳಲ್ಲಿ ೧೨ನೇ ಗುಹೆಯೊಂದನ್ನು ಬಿಟ್ಟು ಉಳಿದವು ಒಂದೊಂದೇ ಅಂತಸ್ತನ್ನು ಹೊಂದಿವೆ."

"ಅಜ್ಜಿ, ನೀವು ಅಮರಾವತಿ ಮತ್ತು ನಾಗಾರ್ಜುನಕೊಂಡ ಸ್ಥಳಗಳನ್ನು ಪರಿಚಯಿಸಿ ದೊಡ್ಡ ಉಪಕಾರ ಮಾಡಿದ್ದೀರಿ. ಅಲ್ಲಿ ನಾವು

ತಿಳಿದುಕೊಂಡ ವಿಷಯಗಳನ್ನು ಎಷ್ಟು ವರ್ಷ ಓದಿದ್ದರೂ ತಿಳಿಯುವುದು ಕಷ್ಟವಾಗಿತ್ತು. ಆದರಂತೆ ಇಲ್ಲಿಯೂ ಈ ಶಿಲ್ಪಗಳ ಬಗ್ಗೆ ವಿವರಿಸಿ ಹೇಳಬೇಕು!" ಎಂದ ಶ್ರೀಪತಿ ಕೃತಜ್ಞತೆಯಿಂದ.

ಕನಕಾ ಶ್ರೀಪತಿಯ ಮಾತಿಗೆ ದನಿಗೂಡಿಸಿ ವಂದಿಸಿದಳು.

"ಆಗಲಿ, ತುಂಬಾ ಸಂತೋಷ! ಸಾವಧಾನವಾಗಿ ಕೇಳಿ, ಈ ಗುಹೆಗಳು ಬೌದ್ಧ ಭಿಕ್ಷುಗಳ ವಿಹಾರಕ್ಕಾಗಿ ಕಟ್ಟಿಸಿದವು.

ಈ ಗುಹೆಗಳಲ್ಲಿ ಗರ್ಭಗುಡಿಗಳು, ಕೈಸಾಲೆಗಳು, ಕಂಭಗಳಿಂದ ಕೂಡಿದ ಹಜಾರಗಳೂ ಇವೆ. ಹತ್ತನೆಯ ಗುಹೆ ಅಜಂತೆಯ ಚೈತ್ಯವಿಹಾರವನ್ನು ಹೋಲುತ್ತದೆ. ಎಂಟು ಎಂಟು ಅಂಕಣಗಳು, ಅದರ ಹಿಂದೆ ಗರ್ಭಗುಡಿ. ಅಲ್ಲಿ ಮುಕುಳಿತ ಹಸ್ತನಾದ ಗೌತಮ ಬುದ್ಧನ ಸುಂದರ ಮೂರ್ತಿ. ಮೂರ್ತಿಯ ಸೌಮ್ಯ ಮುಖಮುದ್ರೆ ಎಷ್ಟು ಮನೋಹರವಾಗಿದೆ ನೋಡಿರಿ! ಗರ್ಭಗುಡಿಯ ಬಾಗಿಲಿನ ಅಕ್ಕ-ಪಕ್ಕಗಳಲ್ಲಿ ದ್ವಾರಪಾಲಕರಿದ್ದಾರೆ. ಬಂಡೆಗಳಲ್ಲಿ ಕೊರೆದಿರುವ ಪ್ರತಿಮೆಗಳು ಬೌದ್ಧ ಧರ್ಮಕ್ಕೆ ಸಂಬಂಧಿಸಿದ ವಿವಿಧ ಜಾತಕ ಕತೆಗಳನ್ನು ನೆನಪಿಸುತ್ತವೆ."

ಅದರಲ್ಲಿಯೂ ಗೌತಮ ಬುದ್ಧನ ಆ ಸೌಮ್ಯ ವ್ಯಕ್ತಿತ್ವ ಮತ್ತು ಅವನ ಮುಖದ ಮೇಲಿನ ದಿವ್ಯ ಕಳೆಗೆ ಶ್ರೀಪತಿ ಮುಗ್ಧನಾದ.

ಅಷ್ಟರಲ್ಲಿ ಅವರು ಮುನ್ನಡೆದು ಹಿಂದೂ ಸಂಸ್ಕೃತಿಯ ಶಿಲ್ಪದ ಕಡೆ ನಡೆದಿದ್ದರು. ಅವುಗಳಲ್ಲಿ ಹದಿನಾಲ್ಕನೆಯ ಗುಹೆ ಶಿವತಾಂಡವಕ್ಕೆ ಸಂಬಂಧಿಸಿದ್ದು.

ಅಜ್ಜಿ ಹೇಳಿದಳು "ತಾಂಡವಕ್ಕೆ ಸಂಬಂಧಿಸಿದ ಪಾದವಿನ್ಯಾಸ, ಹಸ್ತಾಭಿನಯದ ವಿವಿಧ ಭಂಗಿಗಳು, ಗಗನತಲದಲ್ಲಿ ಈ ದೃಶ್ಯವನ್ನು ಕಂಡು ಹರ್ಷಿತರಾದ ದೇವತೆಗಳ ಪುಷ್ಪವೃಷ್ಟಿ, ಪಾದ ಪ್ರದೇಶದಲ್ಲಿನ ಸ್ತ್ರೀ ನರ್ತಕಿಯರ ವಿವಿಧ ಭಂಗಿಗಳು ನಮ್ಮ ದೃಷ್ಟಿಯನ್ನು ಶಿಲ್ಪದಲ್ಲಿ ಕೀಲಿಸು

ತ್ತವೆ. ಅದೇ ಗುಹೆಯ ಮತ್ತೊಂದು ಕಡೆ ರಾವಣನು ಕೈಲಾಸ ಪರ್ವತ ವನ್ನೇ ತನ್ನ ರಾಜಧಾನಿ ಲಂಕೆಗೆ ಕೊಂಡೊಯ್ಯಲು ಪರ್ವತದ ಕೆಳಗೆ ತನ್ನ ಇಪ್ಪತ್ತು ಕೈಗಳನ್ನು ತೂರಿಸಿದಾಗ ಪರ್ವತವು ಕದಲಿತು. ಆದಕ್ಕೆ ಗಾಬರಿ ಗೊಂಡ ಪಾರ್ವತಿ ತಾನಾಗಿಯೇ ಓಡಿ ಬಂದು ಶಿವನನ್ನು ಆಲಂಗಿಸಿ ಶಿವನಿಗೆ "ಸ್ವಯಂಗ್ರಹಾಶ್ಲೇಷ ಸುಖ"ವನ್ನುಂಟು ಮಾಡಿದ ರಮ್ಯ ದೃಶ್ಯ! ಅದೆಷ್ಟು ಮನೋಹರ! ನೋಡನೋಡುತ್ತಿದ್ದಂತೆ ಪ್ರೇಕ್ಷಕರು ತಮ್ಮನ್ನು ತಾವೇ ಮರೆಯುವ ರುದ್ರಮನೋಹರ ದೃಶ್ಯ!"

"ಇವುಗಳಲ್ಲಿ ೧೬ನೆಯ ಗುಹೆ ಜಗತ್‌ಪ್ರಸಿದ್ಧವಾದ ಕೈಲಾಸ ಮಂದಿರ! ನಿಜವಾಗಿಯೂ ಈ ಕೈಲಾಸದೃಶ್ಯವು ಜಗತ್ತಿನ ಶಿಲ್ಪಕಲಾಕಾರ ರಿಗಾಗಿ ರಚಿಸಿವ ಒಂದು ಕೇಂದ್ರವೋ ಎಂಬಂತಿದೆ. ಮಾನವನು ತನ್ನ ಭಾವನೆಗಳನ್ನು ಹೇಗೆ ಶಿಲೆಯ ಮಾಧ್ಯಮದಲ್ಲಿ ಪ್ರಕಟಿಸಬಲ್ಲ ಎಂಬುದಕ್ಕೆ ನಿದರ್ಶನ! ಇಲ್ಲಿನ ಮೂರ್ತಿಗಳು ಮಾತನಾಡತೊಡಗಿವೆ; ನರ್ತಿಸತೊಡ ಗಿವೆ ಎಂಬುದಕ್ಕೆ ಇದು ಜ್ವಲಂತಸಾಕ್ಷಿ! ಏಳನೇ ಗುಹೆಯು ನರ್ತಕಿಯರ ಮೇಳ. ಇದು ಪ್ರೇಕ್ಷಕರನ್ನು ಭಾವನಾ ಲೋಕಕ್ಕೆ ಒಯ್ಯುತ್ತದೆ!

"ಈ ಗುಹೆಯು ೧೬೪ ಅಡಿ ಉದ್ದ, ೧೦೬ ಅಡಿ ಅಗಲ ಮತ್ತು ಇದರ ಎತ್ತರ ೯೬ ಅಡಿಗಳು. ಯಾತ್ರಿಕರು ಕೈಲಾಸವನ್ನು ಹೊಕ್ಕಮೇಲೆ ಇಲ್ಲಿ ಆಲ್ಲಿ ಸಂಚರಿಸತೊಡಗುತ್ತಾರೆ. ಪ್ರವೇಶದ್ವಾರದ ಎದುರಿಗೆ ಕಾಣುವ ದೇವಿಯು "ಧನದೇವಿ!" ಅವಳ ಕೃಪೆಯಿಲ್ಲದೆ ಇಂತಹ ಕಲಾಕೃತಿಯು ನಿರ್ಮಾಣವಾಗುವುದಾದರೂ ಹೇಗೆ? ಧನದೇವಿಯ ಎಡಗಡೆ ಗಂಗಾ ಮತ್ತು ಯಮುನೆಯರು ಕಣ್ಣಿಗೆ ಬೀಳುತ್ತಾರೆ. ದೃಷ್ಟಿಮಾತ್ರದಿಂದ ಈ ನದಿದೇವತೆಗಳು ಪ್ರೇಕ್ಷಕರ ಪಾಪ ಪಂಕವನ್ನು ತೊಳೆಯುತ್ತಾರೆ! ಶಿವ ಮತ್ತು ವಿಷ್ಣುಗಳು ಪುರಾಣಗಳ ಎಷ್ಟೋ ಘಟನೆಗಳಲ್ಲಿ ಶಿಲೆಯ ಮಾಧ್ಯ ಮದಲ್ಲಿ ಈ ಶಿಲ್ಪಕಲೆಗೆ ಆಮರರೂಪವನ್ನು ಕೊಟ್ಟಿದ್ದಾರೆ.

ಈಗ ಮೇಲಿನ ಅಂತಸ್ತಿಗೆ ಹೋಗೋಣ! ಶಿವಪುರಾಣ ಮತು ವಿಷ್ಣು ಪುರಾಣಗಳ ಎಷ್ಟು ಕಥೆಗಳು ಇಲ್ಲಿ ಕಾಣಸಿಗುತ್ತವೆ ನೋಡಿ! ಈ

ಶಿಲ್ಪ ಶೀರ್ಷನಾಗ ಮತ್ತು ನಾರಾಯಣರದು. ಇದು ಶಿವಲಿಂಗ. ಇದು ರಾವಣನು ಶಿವಕೃಪೆ ಪಡೆಯಲು ತನ್ನ ಒಂದೊಂದೂ ಶಿರಸ್ಸನ್ನೂ ಕತ್ತರಿಸಿ ಶಿವನಿಗೆ ಮಾಲೆಯಾಗಿ ಅರ್ಪಿಸಿದ ರುದ್ರ ರಮಣೀಯ ದೃಶ್ಯ! ಆ ಶಿವನು ರಾಕ್ಷಸನೊಬ್ಬನನ್ನು ತನ್ನ ಕಾಲ ಕೆಳಗೆ ಅದುಮಿಕೊಂಡಿದ್ದಾನೆ! ರಾವಣನು ಸಾವಿರಾರು ವರ್ಷ ಶಿವನ ಪೂಜೆ ಮಾಡಿದ. ಇದರಿಂದ ಪ್ರಸನ್ನನಾದ ಶಿವ ಅವನಿಗೆ "ಯಾರೂ ಅವನನ್ನು ಜಯಿಸದ ವರ" ನೀಡಿದ.

"ಇದು ರಾವಣನು ಸೀತೆಯನ್ನು ಅಪಹರಿಸಿ ಅವಳನ್ನು ತನ್ನ ವಿಮಾನ (ರಥ) ದಲ್ಲಿ ಕೂಡಿಸಿಕೊಂಡು ಹೋಗುವ ದೃಶ್ಯ! ೨೧ನೇ ಗುಹೆಯು ಶಿವನ ನೃತ್ಯಭಂಗಿಯ ಮತ್ತೊಂದು ಪ್ರಕಾರವನ್ನು ಪ್ರದರ್ಶಿಸಿದೆ. ಅದರ ಮಧ್ಯಭಾಗದಲ್ಲಿ ಗಿರಿಜಾಕಲ್ಯಾಣ ದೃಶ್ಯವು ಏರ್ಪಟ್ಟಿದೆ. ೨೯ರಲ್ಲಿ ಭೈರವ ಮೂರ್ತಿ ಮನಸಂಬುಗುವಂತೆ ಮೂರ್ತಗೊಂಡಿದೆ.

ಈ ಶಿಲ್ಪ ಕಲಾಕೃತಿಗಳಲ್ಲಿ ಕಡೆಯ ಐದು ಗುಹೆಗಳು ಜೈನ ಸಂಸ್ಕೃತಿಯ ತೀರ್ಥಂಕರರ ಪ್ರಶಾಂತ ಮುಖಮುದ್ರೆಯಿಂದ ಮಾನವ್ಯದ ಭವ್ಯ ಗ ೦ರಿಯ ಕಡೆಗೆ ನಮ್ಮನ್ನು ಎಳೆದೊಯ್ಯುತ್ತವೆ."

೬

## ಅಜಂತೆಯ ವರ್ಣಕಲೆ

ಮರುದಿನ ಪ್ರಾತಃ ಕಾಲಕ್ಕೆ ಎದ್ದ ಆ ಬ್ರಾಹ್ಮಣ ದಂಪತಿಗಳು ನಿತ್ಯಾಹ್ನಿಕಗಳನ್ನು ಮುಗಿಸಿದ್ದರು, ಸಾವಿತ್ರಿಯು ಪಾಕವನ್ನು ಸಿದ್ಧ ಪಡಿಸಿದಳು. ಕನಕಾ ಸಾವಿತ್ರಿಯ ಕೆಲಸಗಳನ್ನು ಹಗುರ ಮಾಡುವ ಸಲುವಾಗಿ ಆಕೆಗೆ ಸಹಕರಿಸುತ್ತಿದ್ದಳು. ಶಂಭು ಶ್ರೀಪತಿಯರು ತಮ್ಮ ನಿತ್ಯ ಕ್ರಿಯೆಗಳನ್ನು ಮುಗಿಸಿ ಪ್ರಸಾದಕ್ಕೆ ಅಣಿಯಾಗುವ ಹೊತ್ತಿಗೆ ದುಗ್ಗವ್ವೆ ಹಾಜರು

ಬಂದವಳೇ "ಶ್ರೀಪತಿ ನಿನ್ನೆ ನೀನು ನೋಡಿದ ಎಲ್ಲೋರ ಶಿಲ್ಪಕಲೆಯ ಬಗೆಗೆ ನಿನ್ನ ಅಭಿಪ್ರಾಯವೇನು ?" ಎಂದು ಪ್ರಶ್ನಿಸಿದಳು.

ಶ್ರೀಪತಿ ಅವಳಿಗೆ ಅಭಿನಂದಿಸಿ, "ಅಮ್ಮ ! ನಿಮ್ಮ ಅಕಾರಣ ವಾತ್ಸಲ್ಯಕ್ಕಾಗಿ ಕೃತಜ್ಞರಾಗಿದ್ದೇವೆ. ನಮ್ಮೊಡನೆ ಅನ್ನಾಹಾರಗಳನ್ನೂ ಕೊಳ್ಳದೆ, ನಮ್ಮೊಡನಿದ್ದು ಕಣ್ಣಿಗೆ ರೆಪ್ಪೆಯಂತೆ ನಮ್ಮನ್ನು ರಕ್ಷಿಸುತ್ತಿರುವೆ. ನಾವು ಎಷ್ಟು ಗ್ರಂಥಗಳನ್ನು ಓದಿದರೂ ತಿಳಿಯದಿರುವಷ್ಟು ಅಮೂಲ್ಯ ವಿಷಯಗಳನ್ನು ಬೋಧಿಸುವ ನಿನ್ನ ಈ ಋಣವನ್ನು ತೀರಿಸುವುದೆಂತು !" ಎಂದು ನಮ್ರತೆಯಿಂದ ಅಜ್ಜಿಗೆ ಅಭಿವಾದಿಸಿದ.

ಅಜ್ಜಿ, ಶ್ರೀಪತಿಯ ಪ್ರಶಂಸೆಯನ್ನು ಕೇಳಿಸಿಕೊಳ್ಳದವಳಂತೆ ಹೇಳಿದಳು "ಈ ದಿನ ನಿಮ್ಮ ಜೊತೆ ಪ್ರಸಾದ ಸ್ವೀಕರಿಸುತ್ತೇನೆ !" ಎಂದು ಭರವಸೆ ಕೊಟ್ಟಳು. ಅದರಂತೆ ಎಲ್ಲರೂ ಪ್ರಸಾದ ಸೇವಿಸಿ ಪ್ರಯಾಣಕ್ಕೆ ಸಿದ್ಧರಾದರು.

ಎರಡು ಕುದುರೆ ಗಾಡಿಗಳು ಮುನ್ನಡೆಯತೊಡಗಿದವು. ಅಜಂತಾ ಎಂಬ ಗ್ರಾಮದಿಂದ ಗುಹೆಗಳು ಎರಡು ಹರಿದಾರಿ ದೂರದಲ್ಲಿವೆ. ಅಷ್ಟರಲ್ಲಿ ಶ್ರೀಪತಿ "ಅಜ್ಜಿ, ಎಲ್ಲೋರ ಗುಹೆಗಳ ಬಗ್ಗೆ ನೀನು ಹೇಳಿದ ವಿಚಾರಗಳು ಎಂದೆಂದಿಗೂ ಮರೆಯದಂತಹವು. ಅವುಗಳ ಬಗೆಗೆ ಮತ್ತೊಮ್ಮೆ ನನ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತೇನೆ. ಈಗ ಅಜಂತ ಗುಹೆಗಳ ಬಗೆಗೆ ಸ್ಥೂಲಪರಿಚಯ ಮಾಡಿಕೊಡಿ" ಎಂದ. ದುರ್ಗವ್ವೆ ಮೊದಲು ಅಜಂತೆಯ ಪರಿಸರವನ್ನು ಕುರಿತು ನಾಲ್ಕು ಮಾತು ಹೇಳುತ್ತಾ "ಈ ಗುಹೆಗಳು ಮಲೆ ಸೀಮೆಯ ಸಹ್ಯಾದ್ರಿ, ವಿಂಧ್ಯಾದ್ರಿ, ಮತ್ತು ಶತಮಾಲಾ ಎಂಬ ಪಶ್ಚಿಮ ಘಟ್ಟಗಳ ಸುತ್ತಲೂ ಇವೆ. ಎತ್ತರ ಸುಮಾರು ೪,೦೦೦ ಅಡಿಗಳು. ಇದು ಕಣಿವೆ ಪ್ರದೇಶ. ಈ ಗುಹೆಗಳಲ್ಲಿ ಶಿಲ್ಪದ ಕೆತ್ತನೆ ಮತ್ತು ವರ್ಣ ವಿನ್ಯಾಸ ಅದ್ಭುತವಾಗಿದೆ. ಈ ಗುಹೆಗಳ ನಿರ್ಮಾಣ ಕಾರ್ಯ ಇಂದಿಗೆ ಸುಮಾರು ಒಂದು ಸಾವಿರ ವರ್ಷಗಳ ಹಿಂದೆ ಆರಂಭವಾಗಿ ಒಂಭತ್ತು ಶತಕಗಳವರೆಗೆ ಮುನ್ನಡೆದಿದೆ.

ಶಾತವಾಹನ, ವಾಕಾಟಕ ಮತ್ತು ಬಾದಾಮಿ ಚಾಲುಕ್ಯರು ಇವುಗಳ ನಿರ್ಮಾಪಕರು. ಶಾತವಾಹನರು ಬೌದ್ಧಭಿಕ್ಷುಗಳ ವಾಸಕ್ಕಾಗಿ ಮೊದಲು ಇವುಗಳನ್ನು ಕಟ್ಟಿಸಿದರು. ಇಲ್ಲಿಯ ಶಿಲ್ಪಿಗಳು ಮತ್ತು ಚಿತ್ರ ಕಲಾಕಾರರು ತಮ್ಮ ಕಲಾಕೌಶಲವನ್ನು ಅತ್ಯುನ್ನತವಾಗಿ ಪ್ರದರ್ಶಿಸಿದ್ದಾರೆ. ಇಂದಿಗೆ ಸುಮಾರು ಮುನ್ನೂರು ವರ್ಷಗಳಿಗೆ ಹಿಂದೆ ಈ ಅಜಂತಾಗುಹೆಗಳಿಗೆ ಭೇಟಿಕೊಟ್ಟಿದ್ದ ಚೀನಾಯಾತ್ರಿಕ ಹ್ಯೂಯನ್‌ತ್ಸಾಂಗನು ಈ ಗುಹಾಂತರ್ಗತ ದೇವಾಲಯಗಳ ಬಗ್ಗೆ ಹೀಗೆ ಬರೆದಿದ್ದಾನೆ.

"ಇಲ್ಲಿ ಬಹು ಸಂಖ್ಯೆಯಲ್ಲಿ ಬೌದ್ಧಭಿಕ್ಷುಗಳು ವಾಸಿಸುತ್ತಿದ್ದರು. ಅವರು ಹತ್ತಿರದಲ್ಲಿದ್ದ "ಇಂದ್ರಕಾಂತ" ಎಂಬ ಪಟ್ಟಣಕ್ಕೆ ಆಗಾಗ್ಗೆ ಭಿಕ್ಷೆಗಾಗಿ ಹೋಗುತ್ತಿದ್ದರು" ಎಂದಿರುವುದಲ್ಲದೆ ಆತ ಇಲ್ಲಿಯ ಪ್ರಕೃತಿ ಸೌಂದರ್ಯವನ್ನು ಬಹುವಾಗಿ ಪ್ರಶಂಸಿಸಿದ್ದಾನೆ." ಎಂದು ಹೇಳುತ್ತಿದ್ದಂತೆ ಅವರ ಗಾಡಿಗಳು ಅಜಂತೆಯ ಗುಹೆಯ ಮುಂದೆ ನಿಂತಿದ್ದವು. ಅವರು ಗಾಡಿಗಳಿಂದ ಇಳಿದು ಗುಹೆಗಳತ್ತ ನಡೆದರು.

ದುಗ್ಗವ್ವೆ ಹೇಳಿದಳು "ಶ್ರೀಪತಿ, ನಾವಿಲ್ಲಿ ಶಿಲ್ಪಕಲೆಯನ್ನು ಮೊದಲು ಗುರ್ತಿಸಿ ಅನಂತರ ವರ್ಣಕಲೆಯನ್ನು ಕುರಿತು ವಿಚಾರ ಮಾಡೋಣ! ಇಲ್ಲಿ ಒಟ್ಟು ೨೯ ಗುಹೆಗಳಿವೆ. ಇವುಗಳಲ್ಲಿ ಐದು ಚೈತ್ಯಗಳು. ಉಳಿದವು ೨೪ ಗುಹೆಗಳು ವಿಹಾರಕ್ಕಾಗಿ ರಚಿತವಾಗಿದೆ. ಗುಹೆ ಸಂಖ್ಯೆ ೮,೯,೧೦,೧೨, ಮತ್ತು ೧೩ನೇ ಗುಹೆಗಳು ಹೀನಯಾನಕ್ಕೂ ಉಳಿದವು ಮಹಾಯಾನಕ್ಕೂ ಸೇರಿವೆ.

ಇಲ್ಲಿ ಮೊದಲ ಗುಹೆಯಲ್ಲಿ ಧರ್ಮಬೋಧೆ ಮಾಡುತ್ತಿರುವ ಬುದ್ಧನ ಮೂರ್ತಿಯು ಅಭಯಮುದ್ರೆಯನ್ನು ಪ್ರದರ್ಶಿಸಿ ಪ್ರಸನ್ನ ಮುಖ ಭಾವವನ್ನು ಹೊಂದಿದೆ. ಈ ಪ್ರತಿಮೆಯ ಕೆಳಗೆ ವೈರ ವರ್ಗಕ್ಕೆ ಸೇರಿದ ಪ್ರಾಣಿಗಳು ಪರಸ್ಪರ ಸ್ನೇಹದಿಂದ ಇರುವ ದೃಶ್ಯ ಗೌತಮಬುದ್ಧನ ತಪಸ್ಸಿದ್ಧಿಗೆ ಸಾಕ್ಷಿ ಎನಿಸಿದೆ. ಅದೇ ಗವಿಯ ಮತ್ತೊಂದುಭಾಗದಲ್ಲಿ ಶಿಲ್ಪಿಯು ನಾಲ್ಕು ಜಿಂಕೆಗಳ ಶರೀರಕ್ಕೆ ಒಂದೇ ಮುಖವನ್ನು ಕಡೆದಿರುವುದು ಕಲಾ

ಕಾರನ ಗಹನವಾದ ದೃಷ್ಟಿಕೋನವನ್ನು ಪ್ರದರ್ಶಿಸುತ್ತದೆ. ಇದು ಮಾನವ ಶರೀರಗಳು ಅನೇಕವಾದರೂ ಅವರು ನೋಡುವ ದೃಷ್ಟಿ ಒಂದಾಗಿರಬೇಕು ಎಂಬ ಮಹತ್ತತ್ತ್ವವನ್ನು ಪ್ರಕಟಿಸಿದೆ. ಈ ಗುಹೆಗಳಲ್ಲಿ ೧೬ನೇ ಗುಹೆ ತುಂಬಾ ಮುಖ್ಯವಾದದ್ದು. ಇಲ್ಲಿ ಬಂಡೆಯನ್ನು ೬೫ ಅಡಿ ಒಳಕ್ಕೆ ಕೊರೆಯಲಾಗಿದೆ. ಅದರಲ್ಲಿ ಎಲ್ಲ ಕಂಭಗಳನ್ನೂ ಬಿಡಿಸಲಾಗಿದೆ ಮುಖ ಮಂಟಪದಲ್ಲಿ ೫ ಕಂಭಗಳಿವೆ. ರಂಗಮಂಟಪದಲ್ಲಿ ಒಂದೊಂದು ಪಕ್ಕದಲ್ಲಿಯೂ ಏಳು ಏಳು ಸಣ್ಣ ಸಣ್ಣ ಕೋಣೆಗಳಿವೆ. ಗರ್ಭಗುಡಿಯಲ್ಲಿ ಪದ್ಮಾಸನಾಸೀನ ಬುದ್ಧನ ಮೂರ್ತಿ ಇದೆ. ೧ ಮತ್ತು ೨ನೇ ಗುಹಾಲಯಗಳು ಮನೋಜ್ಞ ಶಿಲ್ಪಕ್ಕೆ ನಿದರ್ಶನ. ಅದರಂತೆ ೧೬ ಮತ್ತು ೨೬ ನೆಯ ಗುಹಾಲಯಗಳಲ್ಲಿಯೂ ಶ್ರೇಷ್ಠ ಶಿಲ್ಪದ ಕೆಲಸ ನಡೆದಿದೆ.

ಅಜಂತೆಯ ಗುಹೆಗಳಲ್ಲಿರುವ ವರ್ಣಚಿತ್ರಗಳ ಮುಖ್ಯ ಗುರಿ ಧರ್ಮಬೋಧೆ. ಇಲ್ಲಿಯ ಭಿತ್ತಿಚಿತ್ರಗಳಲ್ಲಿನ ವಿವಿಧ ವರ್ಣ ವಿನ್ಯಾಸ ಎಂದೂ ಮರೆಯದಂತಹುದು. ಕಲಾಕಾರರು ತಮ್ಮ ಪ್ರತಿಭೆ ಮತ್ತು ಸ್ವಾತಂತ್ರ್ಯವನ್ನು ತೋರ್ಪಡಿಸಿಕೊಂಡಿದ್ದಾರೆ. ಇಲ್ಲಿ ಬೋಧಿಸತ್ವ ಗೌತಮಬುದ್ಧನ ಜೀವನದ ಪ್ರಮುಖ ಘಟನೆಗಳು ಸಜೀವವಾಗಿ ಮೂಡಿ ಬಂದಿವೆ. ಹೂ ಬಳ್ಳಿಗಳು, ಗೂಳಿ, ಕಪಿ, ನವಿಲು ಮುಂತಾದ ಪ್ರಾಣಿಗಳು ವಿವಿಧ ಪಕ್ಷಿಗಳ ಚಿತ್ರಗಳು ಸಹಜವಾಗಿ ಪೈವೆತ್ತು ನಿಂತಿವೆ.

ಒಂದನೇ ಗುಹೆಯಲ್ಲಿ ಕುಳಿತಿರುವ ಮಹಿಳೆಯ ಹಿಂಬದಿಯ ದೃಶ್ಯ ಅದೆಷ್ಟು ಮೋಹಕವಾಗಿದೆ! ಅದೇ ಗುಹೆಯಲ್ಲಿ ಮತ್ತೊಬ್ಬ ಸುಂದರಿ ಕಂಬಕ್ಕೆ ಒರಗಿ ನಿಂತು, ಎಡಗಾಲನ್ನು ಕಂಬಕ್ಕೆ ಆನಿಸಿಕೊಂಡು ತನ್ನ ಸಹಚರನನ್ನು ನಿರೀಕ್ಷಿಸುತ್ತಿರುವ ದೃಶ್ಯ ಅನ್ಯಾದೃಶ! ಇವಳು ಶಿರಸ್ಸಿನಿಂದ ಪಾದದವರೆಗೆ ಅಮೂಲ್ಯವಾದ ಆಭರಣಗಳನ್ನು ಧರಿಸಿ, ವಿವಸ್ತ್ರಳಾಗಿರುವಂತಿದೆ. ಇದರಿಂದ ಅವಳ ಸಹಜ ಶರೀರ ಸೌಂದರ್ಯ ಇಮ್ಮಡಿಸಿದೆ. ೧೭ನೇ ಗುಹೆಯಲ್ಲಿ ಸಿಂಗರಿಸಿಕೊಂಡಿರುವ ನರ್ತನಭಂಗಿಯಲ್ಲಿ ನಿಂತಿರುವ ಅಪ್ಸರೆಯ ದೃಶ್ಯವೂ ಅದೆಷ್ಟು ಮೋಹಕ!

ಇನ್ನು ಪದ್ಮಪಾಣಿ ಬುದ್ಧ (ಸಂ. ೧)ನ ಅನಿಂದ್ಯವಾದ ಮೋಹಕ ಮುಖಭಾವ, ಎಡಗೈಲಿ ಖರ್ಪರ ಹಿಡಿದು ನಿಂತಿರುವ ಆಕರ್ಷಕ ಮುಖ ಭಂಗಿಗಳು, ಅದೆಷ್ಟು ವರ್ಣಿಸಿದರೂ ಕಡಿಮೆಯೇ. ೧೭ನೇ ಗುಹೆ ಯಲ್ಲಿ ನಿರ್ವಾಣವು ಆಳವಟ್ಟ ಮೇಲೆ ಬುದ್ಧನು ಭಿಕ್ಷುವಿನ ರೂಪದಲ್ಲಿ ತನ್ನ ಅರಮನೆಯ ಬಾಗಿಲಿಗೆ ಬಂದು ನಿಂತು ತನ್ನ ಪತ್ನೀ-ಪುತ್ರರಿಂದ ಭಿಕ್ಷೆ ಯಾಚಿಸುವ ದೃಶ್ಯ ಅದೆಷ್ಟು ಜೀವಂತವಾಗಿದೆ! ಹೆಪ್ಪುಗಟ್ಟಿರುವ ಆ ವೈರಾಗ್ಯ, ದೃಶ್ಯವನ್ನು ಕಂಡ ಮಗ ರಾಹುಲನೇ ಮುಂದೆ ತಂದೆಯ ಹಾದಿ ಹಿಡಿದದ್ದು ಅದೆಂತಹ ಪರಿಣಾಮಕಾರಿಯಾಗಿದೆ ?"

ದುಗ್ಗವ್ವೆ ಕತೆಯನ್ನು ಹೇಳ ಹೇಳುತ್ತಾ ತನ್ಮಯಳಾಗಿರುವಾಗ ಶ್ರೀಪತಿ ಮತ್ತು ಕನಕಾ ಮುಂತಾದವರು ಆ ಗುಹೆಗಳನ್ನೆಲ್ಲ ಮತ್ತೆ ಮತ್ತೆ ಕುತೂಹಲದಿಂದ ನೋಡಿ ಸಂತಸಗೊಂಡರು. ಕಡೆಯಲ್ಲಿ ಶ್ರೀಪತಿ ಕೇಳಿದ—

"ಅಜ್ಜಿ, ಈ ಶಿಲ್ಪಗಳ ಮತ್ತು ಕಲಾಕಾರರ ಪ್ರತಿಭೆಯ ವೈಭವವನ್ನು ಎಷ್ಟು ಬಣ್ಣಿಸಿದರೂ ಕಡಮೆಯೆ. ಆದರೆ ಇವೆಲ್ಲವುಗಳಿಂದ ವ್ಯಕ್ತವಾ ಗುವ ಗೌತಮ ಬುದ್ಧನ ಆ ಪವಿತ್ರ ವ್ಯಕ್ತಿತ್ವವು ಅದೆಷ್ಟು ದೊಡ್ಡದು! ಅಂತಹ ಮಹಾ ವಿಭೂತಿ ಪುರುಷನು ಹಾಕಿಕೊಟ್ಟ ಮತತತ್ತ್ವಗಳಾಗಲಿ, ಆ ಮತಾವಲಂಬಿಗಳಾಗಲಿ ಇಂದು ಭಾರತದಿಂದ ದೂರವಾದುದಕ್ಕೆ ಕಾರಣ ವೇನು ?"

ದುಗ್ಗವ್ವೆ ಹೇಳಿದಳು, "ಅಪ್ಪ, ಎಲ್ಲಕ್ಕಿಂತ ಪ್ರಬಲವಾದದ್ದು ಕಾಲ! ಅದು ಎಲ್ಲವನ್ನು ತನ್ನ ಗರ್ಭದಲ್ಲಿ ಅಡಗಿಸಿಕೊಂಡು ಜೀರ್ಣಿಸಿಕೊಳ್ಳು ತ್ತದೆ. ಇತ್ತೀಚಿಗೆ ಭಾರತದಲ್ಲಿ ಅವತರಿಸಿದ ಆಚಾರ್ಯರು ವೇದ-ಆಗಮ ಧರ್ಮಗಳನ್ನು ಎತ್ತಿಹಿಡಿದದ್ದು. ಅಲ್ಲದೆ, ಬೌದ್ಧ ಧರ್ಮದಲ್ಲಿ ಈಚಿಗೆ ಬೇರೂರಿದ ನಾಸ್ತಿಕ ತತ್ವಗಳಿಂದ ಅದು ಕ್ಷೀಣಿಸಲು ಕಾರಣವಾಯಿತು."

ಶ್ರೀಪತಿ ಕೇಳಿದ, "ಅಜ್ಜಿ, ನಾನು ಕೇಳಿದ್ದಶಲ್ಲಿ ಬುದ್ಧನು ತನ್ನ ಉಪದೇಶಗಳಲ್ಲಿ ಎಲ್ಲಿಯೂ ದೇವರಿಲ್ಲ ಎಂದು ಹೇಳಿಲ್ಲ. ಅವನ ಶಿಷ್ಯರು ದೇವರ ಬಗ್ಗೆ ಪ್ರಶ್ನಿಸಿದಾಗ ಗೌತಮನು ಮೌನವಾಗಿದ್ದ ಅಷ್ಟೆ! ಆದರೆ

ಕಣ್ಣಿಗೆ ಕಾಣದ ದೇವರ ಬಗೆಗೆ ನಮ್ಮ ಕಲ್ಪನೆಗಳ ಸೌಧಗಳನ್ನು ಕಟ್ಟು ವುದಕ್ಕಿಂತ ಮೊದಲು ನಮ್ಮಲ್ಲಿರುವ ಅವಗುಣಗಳನ್ನು ವರ್ಜಿಸಿ, ನೀತಿ ಯನ್ನು ನಡೆಯಲ್ಲಿ ತರುವುದೇ ನಾವು ಮಾಡುವ ದೇವತಾರಾಧನೆ ಎಂಬುದು ಬುದ್ಧನ ಉದ್ದೇಶವಾಗಿತ್ತು. ಆದ್ದರಿಂದಲೇ ಗೌತಮ ಬುದ್ಧನು ತನ್ನ ಉಪದೇಶದಲ್ಲಿ 'ಮಾನವರು ದುಃಖಕ್ಕೆ ಕಾರಣವಾದ ದುರಾಶೆಯನ್ನು ಬಿಟ್ಟು ಸನ್ಮಾರ್ಗದಲ್ಲಿ ನಡೆಯಬೇಕು' ಎಂದದ್ದು" ಎಂದು ಹೇಳಿ ಶ್ರೀಪತಿ ಅಜ್ಜಿಯ ಮುಖ ನೋಡಿದ.

ಅಜ್ಜಿ ಶ್ರೀಪತಿಯನ್ನು ಬರಸೆಳೆದು ತಲೆ ಮೂಸಿನೋಡಿ, "ಚೆನ್ನಾಗಿ ಗ್ರಹಿಸಿದ್ದೀಯೆ! ಇದಕ್ಕೇ ನಿನ್ನನ್ನು 'ದಿವ್ಯಜ್ಞಾನಿ' ಎಂದು ಹೇಳುತ್ತಾರೆ. ನೀನು ಭವ್ಯಾತ್ಮನಾಗಿ ಬಾಳು ನನ್ನಪ್ಪ!"ಎಂದು ಅವನ ತಲೆ ನೇವರಿಸಿ ಕನಕಳನ್ನು ಬಿಗಿದಪ್ಪಿ ರಮಿಸಿದಳು.

೭

## ಉಜ್ಜಯಿನಿ

ಮರುದಿನ ಸಹಯಾತ್ರಿಕರೊಂದಿಗೆ ಶಂಭು ಭಟ್ಟರು ಉಜ್ಜಯಿನಿ ದಾರಿ ಹಿಡಿದರು. ದಾರಿಯ ಮಧ್ಯದಲ್ಲಿ ದಟ್ಟವಾದ ವಿಂಧ್ಯಾಟವಿ. ದುರ್ಗಮ ಮಾರ್ಗ. ಕುದುರೆಗಾಡಿಗಳು ನಾಲ್ಕೈದುದಿನಗಳಿಂದ ಪ್ರಯಾಣ ವಿಲ್ಲದ ಪ್ರಯುಕ್ತ ದಣಿವಾರಿಸಿಕೊಂಡಿದ್ದವು. ಕಾಡಿನ ಮಧ್ಯೆ ಪ್ರಯಾ ಣಿಕರಿಗಾಗಿ ಅಲ್ಲಲ್ಲಿ ವಾಸ್ತವ್ಯಗಳಿಗೆ ವ್ಯವಸ್ಥೆ ಇರುತ್ತಿತ್ತು. ದಾರಿಯಲ್ಲಿ ನಾಲ್ಕು ರಾತ್ರಿಗಳನ್ನು ಕಳೆದು, ಐದನೆಯ ದಿನಕ್ಕೆ ಉಜ್ಜಯಿನಿ ಸೇರಿದರು.

ಅಲ್ಲಿ ಮೊದಲ ಸಂದರ್ಶನ ದುಗ್ಗವ್ವೆಯದು. ಅವಳನ್ನು ಕಂಡ ಒಡನೆಯೇ ಎಲ್ಲರಲ್ಲಿಯೂ ಪುನಶ್ಚೇತನ ಚಿಮ್ಮಿತು!

"ನಾವು ಎಷ್ಟು ಪುಣ್ಯಶಾಲಿಗಳು ಅಜ್ಜಿ. ನೀನು ನಮ್ಮಲ್ಲಿಟ್ಟಿರುವ ಮಮತೆಗೆ ನಾವು ಕೃತಜ್ಞತೆಯಲ್ಲದೆ ಮತ್ತೇನನ್ನು ಕೊಡಬಲ್ಲೆವು?"

ಎಂದು ಸದಾಶಿವಶಾಸ್ತ್ರಿಗಳು ಮತ್ತು ಸಾವಿತ್ರಿಯರು ದುಗ್ಗವ್ವೆಗೆ ವಂದಿಸಿದರು. ಚಿರಂಜೀವಿಗಳು ಪಾದಮುಟ್ಟಿ ಪ್ರಣಾಮ ಮಾಡಿದರು. ಶಂಭು ಭಟ್ಟರು ಅವಳನ್ನು ಹಿಂಬಾಲಿಸಿದರು. ಶ್ರೀಪತಿ ಉಜ್ಜಯಿನಿಯ ಬಗ್ಗೆ ಪ್ರಶ್ನಿಸಿದ. ಅಜ್ಜಿ ಹೇಳತೊಡಗಿದಳು—

"ಅಪ್ಪ, ಉಜ್ಜಯಿನಿ ಪುರಾತನವಾದ ಪಟ್ಟಣ. ಕಾಳಿದಾಸನೇ ಮುಂತಾದ ಕವಿಗಳು ಉಜ್ಜಯಿನಿಯ ವೈಭವವನ್ನು ವರ್ಣಿಸಿದ್ದಾರೆ. ಎರಡನೇ ಚಂದ್ರಗುಪ್ತ ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದ ಒಂಬತ್ತು ಜನ ಕವಿರತ್ನರಲ್ಲಿ ಆತ ಒಂದು ಚಿಂತಾರತ್ನವಾಗಿದ್ದ.

ವಿಕ್ರಮಶಕೆ ಆ ಮಹಾರಾಜನ ಹೆಸರಿನಿಂದಲೇ ಪ್ರಖ್ಯಾತವಾಗಿದೆ.

ಶಿವಪುರಾಣಗಳಲ್ಲಿ ದೇವತೆಗಳ ಪ್ರಾರ್ಥನೆಯಂತೆ ರಾಕ್ಷಸರನ್ನು ಸಂಹರಿಸಲು ಪರಶಿವನು ಇಲ್ಲಿ ಮಹಾಕಾಲನೆಂಬ ಹೆಸರಿನಿಂದ ಅವತರಿಸಿದ. ಅದರ ಕುರುಹಾಗಿ ಈ ಮಹಾಕಾಲೇಶ್ವರ ಜ್ಯೋತಿರ್ಲಿಂಗವು ಇಲ್ಲಿ ವಿರಾಜಮಾನವಾಗಿದೆ. ಸ್ಕಾಂದ (ಅವಂತಿಕಾ ಕಾಂಡ), ಅಗ್ನಿ, ಬ್ರಾಹ್ಮ, ಗರುಡ, ಸೌರಪುರಾಣಗಳೂ, ಜೈನ-ಬೌದ್ಧ ಇತಿಹಾಸಗಳೂ, ಚೀನಾ ದೇಶದ ಫಾಹಿಯಾನ್, ಹ್ಯೂಯೆನ್‌ತ್ಸಾಂಗ್ ಮುಂತಾದವರ ಬರವಣಿಗೆಗಳೂ ಉಜ್ಜಯಿನಿಯನ್ನು ಪ್ರಶಂಸಿಸಿವೆ.

ಈ ನಗರವನ್ನು ಬಳಸಿ ಹರಿಯುತ್ತಿರುವ ಸಿಪ್ರಾ ನದಿಯ ದಡದಲ್ಲಿ ನೆಲೆಸಿರುವ ವಟ ಸಿದ್ಧೇಶ್ವರ ಮಹಾಕ್ಷೇತ್ರವು ವೀರಶೈವ ಮತಾಚಾರ್ಯರಲ್ಲಿ ಒಬ್ಬರಾದ ದಾರುಕಾಚಾರ್ಯರ ಅವತಾರ ಭೂಮಿ, ಮೇಲಾಗಿ ಈ ಅವಂತೀ (ಉಜ್ಜಯಿನಿ) ನಗರವು ನವಗ್ರಹಗಳಲ್ಲಿ ಒಬ್ಬನಾದ ಕುಜನ ಹುಟ್ಟೂರು. ಎಲ್ಲಕ್ಕಿಂತ ಹೆಚ್ಚಾಗಿ ದ್ವಾಪರಗುರುವೆನಿಸಿದ ಶ್ರೀಕೃಷ್ಣನು ಇಲ್ಲಿದ್ದ ಸಾಂದೀಪನೀ ಮಹರ್ಷಿಯ ಆಶ್ರಮದಲ್ಲಿ ಕುಚೇಲನೆಂಬ ಬಡ ಬ್ರಾಹ್ಮಣನ ಜೊತೆ ವಿದ್ಯಾರ್ಜನೆ ಮಾಡಿದನೆಂದೂ ಹೇಳಲಾಗಿದೆ.

ಚಾರಿತ್ರಿಕ ಯುಗ ಪ್ರಸಿದ್ಧರಾದ ಬಿಂದುಸಾರ, ಕಾನಿಷ್ಕ, ಮಾಳವರೂ, ಸಾತವಾಹನ, ಶೂದ್ರಕ ಮುಂತಾದವರೂ ಈ ನಗರವನ್ನು ಆಳಿದರೆಂದು ತಿಳಿದುಬಂದಿದೆ."

ಎಂದು ದುಗ್ಗವ್ವೆ ಹೇಳುತ್ತಿರುವಾಗ ಶ್ರೀಪತಿ ಮಧ್ಯೆ ಬಾಯಿಹಾಕಿ "ಅಜ್ಜಿ, ನೀನು ಯಾವ ವಿದ್ಯಾಪೀಠದಲ್ಲಿ ಈ ಚರಿತ್ರೆಯನ್ನು ಓದಿದ್ದೆ ಹೇಳು!" ಎಂದು ಪ್ರಶ್ನಿಸಿದ.

ಅಜ್ಜಿ, ತನ್ನ ವಿಷಯವನ್ನು ಮುಂದುವರೆಸುತ್ತಾ ಹೇಳಿದಳು.

"ನೋಡಪ್ಪಾ, ನೀನು 'ಓದು ಒಕ್ಕಾಲು, ಬುದ್ಧಿ ಮುಕ್ಕಾಲು' ಎಂಬ ಗಾದೆಯನ್ನು ಕೇಳಿಬಲ್ಲೆಯಾ? ಎಲ್ಲವನ್ನೂ ತರಗತಿಗಳಲ್ಲೇ ಓದಬೇಕೆಂಬ ನಿಯಮವಿಲ್ಲ. ವೇದಕಾಲದಲ್ಲಿ ಋಷಿಪುತ್ರರು ಕಾಡಿನಲ್ಲಿ ದನಗಾಹಿಗಳಾಗಿದ್ದುಕೊಂಡೇ ಭೂಗೋಳದಿಂದ ಖಗೋಳದವರೆಗೆ, ಪರಮಾಣುವಿನಿಂದ ಪರಮಾತ್ಮನವರೆಗೆ ಇರುವ ಜಗತ್ತಿನ ರಹಸ್ಯಗಳೆಲ್ಲವನ್ನೂ ಅರಿತವರಾಗಿದ್ದರು. ಇಲ್ಲದಿದ್ದರೆ ಗಗನತಲದಲ್ಲಿರುವ ನಕ್ಷತ್ರಗತಿಗಳನ್ನೆಲ್ಲ ಲೆಕ್ಕ ಹಾಕಿ ಚಂದ್ರ ಸೂರ್ಯರ ಗ್ರಹಣಕಾಲಗಳನ್ನೆಲ್ಲ ಇಷ್ಟು ಕರಾರುವಾಕ್ಕಾಗಿ ಹೇಳಬಲ್ಲವರಾಗುತ್ತಿದ್ದರೆ?" ಎಂದು ಮರುಪ್ರಶ್ನೆ ಹಾಕಿದಳು.

ಶ್ರೀಪತಿ ಅಜ್ಜಿಗೆ ಕೈಮುಗಿದು, "ಹೇಳು ತಾಯಿ, ನಿನ್ನನ್ನು ಅರ್ಥ ಮಾಡಿಕೊಳ್ಳುವ ಶಕ್ತಿಯಾದರೂ ನಮಗಿದೆಯೆ" ಎಂದ.

ಅಷ್ಟು ಹೊತ್ತಿಗೆ ಈ ಸಹ ಯಾತ್ರಿಕರ ತಂಡ ದಾರುಕಾಚಾರ್ಯ ಪೀಠದ ಹತ್ತಿರ ಬಂದಿತ್ತು. ಎಲ್ಲರೂ ಮಠವನ್ನು ಪ್ರವೇಶಿಸಿ ಜಗದ್ಗುರುಗಳನ್ನು ಸಂದರ್ಶಿಸಿ ಸಾಷ್ಟಾಂಗ ಪ್ರಣಾಮ ಮಾಡಿದರು. ಪೀಠಾಧಿಪತಿಗಳಾದ ಜಗದ್ಗುರು ಸಿದ್ಧೇಶ್ವರ ಶಿವಾಚಾರ್ಯರು ಎಲ್ಲರ ಕುಶಲ ಪ್ರಶ್ನೆ ಮಾಡಿ ಅವರಿಗೆ ಪ್ರಸಾದದ ವ್ಯವಸ್ಥೆ ಮಾಡಿಸಿದರು.

ಪತ್ನೀ ಸಮೇತರಾದ ಸದಾಶಿವಶಾಸ್ತ್ರಿಗಳು ಮತ್ತು ಭಟ್ಟರ ಪರಿವಾರ ಸಿದ್ಧೇಶ್ವರ ಮತ್ತು ಮಹಾಕಾಲೇಶ್ವರ ಲಿಂಗಗಳಿಗೆ ಮಹಾರುದ್ರಾಭಿಷೇಕ-ಪೂಜಾದಿಗಳನ್ನು ಸಾಂಗವಾಗಿ ನೆರವೇರಿಸಿದರು.

ಪುರಾತನ ಕಾಲದಿಂದಲೂ ಈ ನಗರ ಮಧ್ಯದಲ್ಲಿ ಸ್ಥಾಪಿತವಾಗಿರುವ ವೇಧಶ್ಯಾಲೆಗೆ ಎಲ್ಲರೂ ತೆರಳಿ ಕಾಲಗಣನೆಯ ವೈಶಿಷ್ಟ್ಯವನ್ನು ಪರಿಶೀಲಿಸಿ ಬಂದರು.

ಶ್ರೀಪತಿ ಜಗದ್ಗುರುಗಳ ಸನ್ನಿಧಿಗೆ ಹೋದಾಗ, "ಬುದ್ಧಿ, ನನಗೆ ಒಂದು ಸಂದೇಹ ಬಂದಿದೆ ಪರಿಹರಿಸಬೇಕು" ಎಂದು ಬಿನ್ನೈಸಿದ.

"ಏನದು, ಅಗತ್ಯವಾಗಿ ಹೇಳು" ಎಂದರು ಜಗದ್ಗುರುಗಳು.

"ಬುದ್ಧಿ, ನಿನ್ನೆ ಮಹಾಕಾಳೇಶ್ವರನಿಗೆ ರುದ್ರಾಭಿಷೇಕ ಮಾಡ ಬೇಕೆಂದು ನಮ್ಮ ಸದಾಶಿವ ಶಾಸ್ತ್ರಿಗಳು ಅಪೇಕ್ಷಿಸಿದರು !"

"ಹೌದು, ಮಾಡಬಹುದಲ್ಲ! ಆ ಜ್ಯೋತಿರ್ಲಿಂಗಕ್ಕೆ ಯಾರು ಬೇಕಾದರೂ ಅದನ್ನು ಮುಟ್ಟಿ ಪೂಜಿಸಬಹುದಲ್ಲವೆ ?" ಎಂದರು ಜಗದ್ಗುರುಗಳು.

ಎಲ್ಲರೂ ಶ್ರೀಪತಿಯ ಮುಖ ನೋಡಿದರು. ಶ್ರೀಪತಿ ಹೇಳಿದ—

"ನಿಜ ಬುದ್ಧಿ, ಪೂಜೆ ಸಾಂಗವಾಗಿ ನೆರವೇರಿತು. ಆದರೆ ಅಲ್ಲಿ ಪೂಜೆ ಮಾಡಿಸಿದವರ ವೇಷ ಭೂಷಣಗಳನ್ನು ಕಂಡು ನನಗೆ ಈ ಸಂದೇಹ ವುಂಟಾಯಿತು. ಏಕೆಂದರೆ ಅವರು ಮುಖಕ್ಕೆ ಕಪ್ಪು ಬಣ್ಣದ ವಿಭೂತಿ ಧರಿಸಿದ್ದರು. ಶಿವನಂತೆ ತ್ರಿಶೂಲ, ಕಪ್ಪು ಕಪಿನಿ ಧರಿಸಿದ್ದರು. ಈ ಪದ್ಧತಿ ನನಗೆ ಹೊಸದಾಗಿತ್ತು" ಎಂದ ಶ್ರೀಪತಿ ಕುತೂಹಲದಿಂದ.

ಜಗದ್ಗುರುಗಳು ಅಪ್ಪಣೆ ಮಾಡಿದರು, "ನೀನು ಎಲ್ಲಿಯುವರೆಗೆ ಅಭ್ಯಾಸ ಮಾಡಿರುವೆ ?" ಎಂದರು ಮುಗುಳ್ನಗೆ ಬೀರಿ.

ಶಂಭುಭಟ್ಟರು ಕೈಮುಗಿದು ಹೇಳಿದರು, "ಬುದ್ಧಿ, ಶ್ರೀಪತಿ ವಿಜಯವಾಡದಲ್ಲಿ ಪ್ರಾಥಮಿಕ ದರ್ಜೆಯುವರೆಗೆ ಓದಿದ್ದಾನೆ. ಆತನನ್ನು ಪ್ರೌಢ ವಿದ್ಯಾರ್ಜನೆಗಾಗಿ ವಾರಾಣಸಿಗೆ ಕರೆದೊಯ್ಯುತ್ತಿದ್ದೇನೆ" ಎಂದರು.

ಜಗದ್ಗುರುಗಳು ಶ್ರೀಪತಿಯ ಮುಖಲಕ್ಷಣಗಳನ್ನು ಕಂಡು, ತುಂಬಾ ವಾತ್ಸಲ್ಯದಿಂದ ಬಳಿಗೆ ಕರೆದು ಅವನ ಮೈ ದಡವಿ ಹರಸಿದರು.

"ಅಪ್ಪ, ಇದು ಬಹು ದೊಡ್ಡ ವಿಷಯ. ಇದರ ಕೂಲಂಕಷ ವಿಮರ್ಶೆ ನಿನಗೆ ಪ್ರೌಢ ವಿದ್ಯಾಭ್ಯಾಸ ಕಾಲದಲ್ಲಿ ವೇದ್ಯವಾಗುತ್ತದೆ. ನೀನು ಇಷ್ಟು ಸೂಕ್ಷ್ಮಮತಿಯಾಗಿ ಧರ್ಮಸೂಕ್ಷ್ಮಗಳನ್ನು ತಿಳಿಯಲು ಬಯಸಿರುವುದು ಶುಭಚಿಹ್ನೆ. ನಿನ್ನ ಸಂದೇಹ ಶೈವ ಧರ್ಮದಲ್ಲಿನ ವಿವಿಧ ಪ್ರಭೇದಗಳಿಗೆ ಸಂಬಂಧಿಸಿದ್ದು. ಮಹಾಕಾಲ ದೇವಾಲಯದಲ್ಲಿ ಸ್ಥಾನ ಪತಿಗಳಾಗಿರುವವರು ಕಾಲಾಮುಖ ಶೈವರು. ಆರ್ಷಿಯಿಂದ ಅವರು ಪುರಾಣೋಕ್ತವಾದ ಪರಶಿವನು ಮಹಾಕಾಲಾವತಾರ ಕಾಲದಲ್ಲಿ ಧರಿಸಿದ್ದ ವೇಷ-ಭೂಷಣಗಳನ್ನೇ ಇಂದಿಗೂ ಈ ಅರ್ಚಕರು ಧರಿಸಿಕೊಂಡು ಅವನ ತಾದ್ರೂಪ್ಯ ಪಡೆದವರಂತೆ ಮಹಾಕಾಲ ಲಿಂಗಕ್ಕೆ ಅರ್ಚನಾದಿ ಸೇವೆಗಳನ್ನು ನಡೆಸುತ್ತಿದ್ದಾರೆ" ಎಂದರು.

"ಹಾಗಾದರೆ ಗುರುದೇವಾ, ಪರಶಿವನ ಮಹಾಕಾಲ ಸ್ವರೂಪವನ್ನು ಕುರಿತು ನಮಗೆ ಪರಿಚಯಿಸಬೇಕು" ಎಂದ ಶ್ರೀಪತಿ ಭಕ್ತಿ ಶ್ರದ್ಧೆ ವಹಿಸಿ ವಿನಯದಿಂದ

ಜಗದ್ಗುರುಗಳು ಅಪ್ಪಣೆ ಮಾಡಿದರು—

"ಕಾಲಾಮುಖ ಎಂಬುದು ಲಕುಲೀಶ ಪಾಶುಪತದ ಒಂದು ಪ್ರಭೇದ."

"ಲಕುಲೀಶನೆಂದರೆ ಯಾರು ? ಆತನ ಸಿದ್ಧಾಂತವು ಯಾವುದು ?"

"ಪಾಶುಪತ ಎಂಬುದು ಪಶು-ಪತಿ ಮತ್ತು ಪಾಶಗಳ ಸ್ವರೂಪವನ್ನು ನಿರೂಪಿಸುವ ಸಿದ್ಧಾಂತ. ತ್ರಿಕ ಸಿದ್ಧಾಂತವೆಂದರೂ ಇದೇ. ವಾಯು ಪುರಾಣದಲ್ಲಿ ಲಕುಲೀಶನು ಪರಮೇಶ್ವರನ ಕಡೆಯ ಅವತಾರ ಎಂದು ಹೇಳಿದೆ. ಆತ ಕಾಯಾರೋಹಣ ಅಥವಾ ಕಾಯಾವತಾರ ಎಂಬ ಸ್ಥಳ ದಲ್ಲಿ ಹುಟ್ಟಿದ. ಅದು ಬರೋಡಾ ಪ್ರಾಂತದಲ್ಲಿ ಕಾರ್ವಾನ್ ಎಂದು ಕರೆಯಲ್ಪಡುತ್ತದೆ.

ಲಕುಲೀಶನಿಗೆ ನಾಲ್ವರು ಶಿಷ್ಯರು. ಅವರು ಕೌಶಿಕ, ಗರ್ಗ, ಮಿತ್ರ ಮತ್ತು ಕೌರುಷ್ಯ ಎಂದು. ಲಕುಲೀಶ ಇಂದಿಗೆ ಒಂದು ಸಾವಿರ ವರ್ಷ ಗಳಿಗೆ ಹಿಂದೆ ಇದ್ದವನು.

ಲಕುಲೀಶ ಪಾಶುಪತ ಪ್ರತಿಪಾದಕವಾದ ಶಿವಾಗಮಗಳು, ಪಾಶುಪತ ಸೂತ್ರ ಮುಂತಾದ ಗ್ರಂಥಗಳು ಈ ದರ್ಶನವನ್ನು ಪ್ರತಿಪಾದಿಸಿವೆ. ಆದರೆ ಬಾದರಾಯಣರು 'ಪತ್ಯುರಸಾಮಂಜಸ್ಯಾತ್' ಎಂಬ ಬ್ರಹ್ಮಸೂತ್ರದಲ್ಲಿ ಪರಮೇಶ್ವರನಿಗೆ ನಿಮಿತ್ತ ಕಾರಣತ್ವವನ್ನು ಹೇಳುವ ಪಾಶುಪತವನ್ನು ನಿರಾಕರಿಸಿದ್ದಾರೆ.

ಪಾಶುಪತ ದರ್ಶನದ ಪರಿಚಯು ನಿನಗೆ ಮುಂದಿನ ಅಭ್ಯಾಸ ಕಾಲದಲ್ಲಿ ಆಗುತ್ತದೆಯಾದ್ದರಿಂದ ಅದರ ವಿವರಣೆ ಇಲ್ಲಿ ಅನಾವಶ್ಯಕ. ಪ್ರಕೃತ ಈ ಶಾಖೆಗೆ ಸೇರಿದ ಕಾಲಾಮುಖ ಶೈವದ ವಿಚಾರವಾಗಿ ನಾಲ್ಕು ಮಾತುಗಳನ್ನು ಹೇಳುತ್ತೇವೆ. ಭಾರತದ ದಕ್ಷಿಣ ಭಾಗದಲ್ಲಿ ಪ್ರಭಾವಶಾಲಿಯಾಗಿದ್ದ ಕಾಳಾಮುಖ ಶೈವಪಂಥದ ಪರಿಚಯು ಹೀಗಿದೆ.

ಸ್ಥಾವರ ಲಿಂಗಗಳನ್ನು ಸ್ಥಾಪಿಸುವುದು, ಗುಡಿಗೋಪುರಗಳನ್ನು ಕಟ್ಟಿಸುವುದು, ಸಮಯಾಚಾರ್ಯರನ್ನು ನೆಲೆಗೊಳಿಸುವುದು, ಮುಂತಾದುವು ಅವರ ಕಾರ್ಯಕ್ರಮಗಳಲ್ಲಿ ಮುಖ್ಯವಾದುವು. ಕಾಳಾಮುಖರ ಮುಖ್ಯಕೇಂದ್ರಗಳಲ್ಲಿ ಉಜ್ಜಯಿನಿ, ಶ್ರೀಶೈಲ, ಹೂಲಿ, ಬಳ್ಳಿಗಾವೆ, ಹಂಪೆಗಳು ಮುಖ್ಯವಾದುವು. ಬಳ್ಳಿಗಾವೆಯಲ್ಲಿದ್ದ ಕೇದಾರೇಶ್ವರ ದೇವಾಲಯ ಮತ್ತು ಅದಕ್ಕೆ ಹೊಂದಿಕೊಂಡಿರುವ 'ಕೋಡಿಮಠ'ವು ಒಂದು ಪ್ರಸಿದ್ಧ ವಿದ್ಯಾಪೀಠವಾಗಿದ್ದಂತೆ ತಿಳಿದುಬರುತ್ತದೆ. ಉಜ್ಜಯಿನಿಯ ಮಹಾಕಾಳ ಪಾಶುಪತರ ಶಾಖೆಗಳು ದಕ್ಷಿಣ ಭಾರತದಲ್ಲಿ ಜನೋಪಯೋಗಿಯಾದ ವಿದ್ಯಾಪೀಠಗಳನ್ನು ಸ್ಥಾಪಿಸಿ, ವಿದ್ಯಾರ್ಥಿಗಳಿಗೆ ಧಾರ್ಮಿಕ ಮತ್ತು ವೈದ್ಯಕೀಯ ಸೇವಾ ವ್ಯವಸ್ಥೆಗಳನ್ನು ಮಾಡುತ್ತಿದ್ದಂತೆ ಕಂಡುಬರುತ್ತದೆ. ಒಂದು ದೃಷ್ಟಿಯಿಂದ ಕಾಳಾಮುಖವು ಶ್ರೌತ ಪಾಶುಪತ ಎನ್ನಬಹುದು. ಪಾಶುಪತರ ಹೆಸರಿನ ಕಡೆಗೆ ಮುನಿ, ದೇವ, ಶಕ್ತಿ, ಪಂಡಿತ ಮುಂತಾದ ಪದಗಳು ಕಂಡುಬರುತ್ತವೆ. ಮುಖ್ಯವಾದ ವಿಷಯವೆಂದರೆ ಕಾಳಾಮುಖ ಮುನಿಗಳು ಲಿಂಗಧಾರಿಗಳು. ಇವರು ಶಿವನಲ್ಲಿ ಅವ್ಯಭಿಚರಿತ ಭಕ್ತಿಯನ್ನಿಟ್ಟು ಪೂಜಿಸಿ, ಶಿವಯೋಗದಿಂದ ಮೋಕ್ಷವನ್ನು ಪಡೆಯುವ ಧರ್ಮದ ಮತಾನುಯಾಯಿಗಳು, ಇವರನ್ನು ಕುರಿತು ಆನಂದಗಿರಿಯು

ತನ್ನ ಶಂಕರ ವಿಜಯದಲ್ಲಿ 'ಭುಜಗಳಲ್ಲಿ ಲಿಂಗ ಧರಿಸಿದವರು, ಶಿರಸ್ಸಿನಲ್ಲಿ ಪಾಷಾಣ ಲಿಂಗವನ್ನು ಧರಿಸಿದ್ದ ಜಂಗಮರು, ಲಲಾಟ–ಭುಜದ್ವಯ, ಹೃದಯ-ನಾಭಿಗಳಲ್ಲಿ ಲಿಂಗಧಾರಣ ಮಾಡಿದ್ದ ಪಾಶುಪತರು' ಎಂದು ವರ್ಣಿಸಿದ್ದಾನೆ.

ಒಟ್ಟಿನಲ್ಲಿ ಕಾಲಾಮುಖರು ಶಾಂತರು, ದೈವಭಕ್ತಿಯುಳ್ಳವರು, ವೇದವಿದರು, ಆಚಾರ-ವಿಚಾರಶೀಲರು. ಅಷ್ಟೇ ಅಲ್ಲ, ಅವರು ವೀರ ಶೈವಕ್ಕೆ ಹತ್ತಿರದ ಶೈವಮಿತ್ರ ಪಂಥಕ್ಕೆ ಸೇರಿದವರು. ಮಹಾಕಾಲ ಲಿಂಗದ ಸ್ಥಾನಪತಿಗಳು ನಮ್ಮಲ್ಲಿ ಬಂದು ಸೌಹಾರ್ದದಿಂದ ವ್ಯವಹರಿಸುತ್ತಾರೆ. ಮುಂತಾದ ವಿಚಾರಗಳನ್ನು ಶ್ರೀಪತಿಯು ಜಗದ್ಗುರುಗಳವರ ಮುಖದಿಂದ ಕೇಳಿ ತನಗಿದ್ದ ಸಂದೇಹಗಳನ್ನು ಪರಿಹರಿಸಿಕೊಂಡನು.

ಜಗದ್ಗುರುಗಳನ್ನು ಬೀಳ್ಕೊಂಡು ಶಂಭುಭಟ್ಟರು ಮುಂದಿನ ಪ್ರಯಾಣಕ್ಕೆ ಸಿದ್ಧರಾದರು. ದುಗ್ಗವ್ವೆ ಶ್ರೀಪತಿ–ಕನಕೆಯರನ್ನು ಹರಸಿ ಯಾತ್ರಿಕ ತಂಡಕ್ಕೆ ವಿದಾಯ ಹೇಳಿ ಹೊರಬಿದ್ದಳು.

೬

## ಪ್ರಯಾಗ ಮತ್ತು ವಾರಾಣಸಿ

ಪ್ರಯಾಗವು ಗಂಗಾ ಯಮುನಾ ನದಿಗಳ ಸಂಗಮದಲ್ಲಿದೆ. ಬ್ರಹ್ಮನು ಈ ಪ್ರದೇಶದಲ್ಲಿ ಅನೇಕ ಯಾಗಗಳನ್ನು ಮಾಡಿದ್ದರಿಂದ ಇದಕ್ಕೆ 'ಪ್ರಯಾಗ'ವೆಂಬ ಹೆಸರು ಬಂದಿದೆ.

ಯಮುನೆಗೆ ಕಾಳಿಂದೀ ಎಂಬ ಹೆಸರಿದೆ. ಅದರ ನೀರು ಕಪ್ಪು. ಗಂಗೆಯ ನೀರು ಬಿಳುಪು. ಇವೆರಡರ ಸಂಗಮವನ್ನು ಕಾಳಿದಾಸನು ಸುಂದರವಾಗಿ ವರ್ಣಿಸಿದ್ದಾನೆ.

ಗಂಗೆ-ಯಮುನೆಯರ ಸಂಗಮವು ಪೃಥಿವಿಯ ಜಘವಂತೆ! ಪ್ರಯಾಗವು ಅಂತರ್ಘೋರ್ನಿಯಂತೆ! ಈ ಸ್ಥಳದಲ್ಲಿ ಸ್ವಲ್ಪ ಪುಣ್ಯ ಮಾಡಿದರೂ ಮಹತ್ಫಲವೆಂದು ಪುರೋಹಿತರು ಯಾತ್ರಿಕರನ್ನು ರಂಜಿಸುತ್ತಾರೆ. !

ಸದಾಶಿವಶಾಸ್ತ್ರಿಗಳು ಪ್ರಯಾಗದಲ್ಲಿ ತಮ್ಮ ಪಿತೃಶ್ರಾದ್ಧ ಮುಂತಾದ ಕರ್ಮಗಳನ್ನು ಪೂರೈಸಿಕೊಂಡು ವಾರಾಣಸಿಯಲ್ಲಿ ಭೇಟಿ ಕೊಡುವುದಾಗಿ ಹೇಳಿ ಭಟ್ಟರನ್ನು ಬೀಳ್ಕೊಂಡರು. ಕಾರ್ಯಗೌರವವಿದ್ದ ಶಂಭುಭಟ್ಟರು ಚಿರಂಜೀವಿಗಳೊಡನೆ ಕಾಶಿಯ ಕಡೆ ಪ್ರಯಾಣ ಬೆಳೆಸಿದರು.

ದಾರಿಯಲ್ಲಿ ಶಂಭುಭಟ್ಟರು ಶ್ರೀಪತಿಯ ಇಷ್ಟದಂತೆ ಕಾಶಿಯ ಸೂಕ್ಷ್ಮ ಪರಿಚಯ ಮಾಡಿಸುತ್ತಿದ್ದರು.

**ಕಾಶಿ**

ಕಾಶಿ ನಗರಕ್ಕೆ ಸಹಸ್ರಾರು ವರ್ಷಗಳ ಇತಿಹಾಸವಿದೆ. 'ವಾರಾಣಸಿ' ಎಂಬುದು ಇದಕ್ಕಿರುವ ಮತ್ತೊಂದು ಹೆಸರು. ವರಣ ಮತ್ತು ಅಸಿ ಎಂಬ ನದಿಗಳ ಸಂಗಮದಲ್ಲಿರುವ ಈ ಕ್ಷೇತ್ರಕ್ಕೆ ವಾರಾಣಸಿ ಎಂಬುದು ಅನ್ವರ್ಥಕ.

ವೇದಾಂತಾರ್ಥದಲ್ಲಿ 'ಅಸಿ' ಎಂದರೆ ಇಡಾನಾಡಿ, 'ವರುಣ' ಎಂದರೆ ಪಿಂಗಳನಾಡಿ. ಈ ಎರಡೂ ನಾಡಿಗಳ ಮಧ್ಯೆ ನೆಲೆಸಿರುವ ಈ ಕ್ಷೇತ್ರ ಅವಿಮುಕ್ತಕ್ಷೇತ್ರ. ಇದೇ ಅತ್ಯುತ್ತಮ ಸುಷುಮ್ನಾ ನಾಡಿ ಎಂದು ಮಹರ್ಷಿ ಜಾಬಾಲಿ ತನ್ನ ನೆಚ್ಚಿನ ಶಿಷ್ಯ ಆರುಣಿಗೆ ಉಪದೇಶಿಸಿದನಂತೆ.

ಇಲ್ಲಿ ದೇಹತ್ಯಾಗ ಮಾಡಿದವರಿಗೆ ಪುನಃ ಜನ್ಮವಿಲ್ಲ. 'ಕಾಶೀ ಮರಣಾನ್ಮುಕ್ತಿಃ' ಎಂದು ಹೇಳಲಾಗಿದೆ.

"ಐತಿಹಾಸಿಕ ದೃಷ್ಟಿಯಿಂದ ಕಾಶೀ ಎಂಬುದು ಈ ನಗರದ ಹೆಸರಲ್ಲ. ಅದು ಒಂದು ಜನಾಂಗದ ಹೆಸರು" ಎಂದು ಹೇಳುತ್ತಿರುವಾಗ ಶ್ರೀಪತಿ ಪ್ರಶ್ನಿಸಿದ—

"ಮಾವ, ನೀವು ಕಾಶಿ ಎಂಬುದು ನಗರದ ಹೆಸರಲ್ಲ, ಅದು ಒಂದು ಜನಾಂಗದ ಹೆಸರು' ಎಂದಿರಿ. ಆ ಜನಾಂಗ ಯಾವುದು ? ಅದಕೆ ಕಾಶೀ ಎಂಬ ಹೆಸರು ಬರಲು ಕಾರಣವೇನು ?" ಎಂದು.

ಶಂಭು ಭಟ್ಟರು ವಿವರಿಸತೊಡಗಿದರು—"ಇದು ಸುಮಾರು ಐದು ಸಾವಿರ ವರ್ಷಗಳಷ್ಟು ಹಿಂದಿನ ವಿಚಾರ. ಐತಿಹಾಸಿಕರು ಹೇಳುವಂತೆ ವೇದಕಾಲದಲ್ಲಿ ಹಿಮಾಲಯ ಪರ್ವತಡ ಪ್ರಸ್ಥ ಭೂಮಿಯನ್ನು 'ತ್ರಿವಿಷ್ಟಪ' ಎಂದು ಕರೆಯುತ್ತಿದ್ದರು. ಅದೇ ಇಂದು 'ಟಿಬೆಟ್' ಎಂದು ಕರೆಯಲ್ಪಡುತ್ತಿದೆ.

ಎತ್ತರವಾದ ಈ ಭೂಭಾಗದಲ್ಲಿ ಮೊದಲು ವಾಸಿಸುತ್ತಿದ್ದ 'ಆರ್ಯ' ಎಂಬ ಜನಾಂಗವು ವಾಸಯೋಗ್ಯವಾದ ಪ್ರದೇಶವನ್ನು ಹುಡುಕುತ್ತಾ ಅಲ್ಲಿಂದ ಪೂರ್ವಕ್ಕೆ ಹೊರಟು ಸಿಂಧೂ ನದಿಯ ಉಪನದಿಗಳ ನಡುಗಡ್ಡೆಗಳನ್ನು ದಾಟುತ್ತಾ ಫಲವತ್ತಾದ ಆ ಪ್ರದೇಶವನ್ನು 'ಬ್ರಹ್ಮಾವರ್ತ' ಎಂದು ಕರೆದು ಅಲ್ಲಿಯೇ ನೆಲೆಸಿದರು.

ಪ್ರಕೃತಿ ಸೌಂದರ್ಯದ ನೆಲೆಮನೆಯಂತಿದ್ದ ಆ ಸಿಂಧೂ ಪ್ರಾಂತದಲ್ಲಿ ಅಲ್ಲಲ್ಲಿ ಆಶ್ರಮಗಳನ್ನು ಕಟ್ಟಿಕೊಂಡಿದ್ದ ಮಹರ್ಷಿಗಳು ತಪೋಮಗ್ನರಾಗಿ ನೈಸರ್ಗಿಕವಾದ ಬಿಸಿಲು-ಬೆಳದಿಂಗಳು, ಮಳೆ, ನೆಲ–ನೀರು, ಸೂರ್ಯ-ಚಂದ್ರ ಮುಂತಾದವುಗಳಲ್ಲಿ ದೇವತಾಚೈತನ್ಯವನ್ನು ಆರೋಪಿಸಿ ಸ್ತೋತ್ರರೂಪವಾಗಿ ವರ್ಣಿಸಿದ ಉದ್ಗಾರಗಳೇ ಋಕ್ಕುಗಳಾಗಿ ಮುಂದೆ ವೇದವೆನಿಸಿದವು' ಎಂಬುದು ವಿಮರ್ಶಕರ ಆಶಯ.

ಆರ್ಯರು ಇಲ್ಲಿಗೆ ಬರುವ ಮುನ್ನ ಇಲ್ಲಿ ನೆಲೆಸಿದ್ದ ನಿವಾಸಿಗಳನ್ನು ದ್ರಾವಿಡರೆಂದು ಕರೆಯುತ್ತಿದ್ದರು. ಅವರಲ್ಲಿ ವ್ರಾತ್ಯ ಮುಂತಾದ ಅನೇಕ ಪ್ರಭೇದಗಳಿದ್ದವು. ಆರ್ಯರು ತಮ್ಮನ್ನು, ತಮ್ಮ ದೇವತೆಗಳನ್ನು ಸುರ (ದೇವ)ರೆಂದು ಕರೆದುಕೊಳ್ಳುತ್ತಿದ್ದರು. ಅಂಥ ಸುರರ ಗುಂಪಿಗೆ ಸೇರದ ಮೂಲ ನಿವಾಸಿಗಳನ್ನು ಅಸುರ (ಅ-ರ, ದಸ್ಯು, ದೈತ್ಯ) ಮುಂತಾಗಿ

ಕರೆಯುತ್ತಿದ್ದರು. ಮೊದಮೊದಲು ಈ ಮೂಲನಿವಾಸಿಗಳಿಗೂ ಆರ್ಯ ರಿಗೂ ನಡೆದ ಹೋರಾಟಗಳನ್ನು ದೇವಾಸುರಸ್ರಂಗ್ರಾಮ ಎಂದು ಪುರಾಣ ಗಳು ಬಣ್ಣಿಸಿವೆ.

ಬರಬರುತ್ತಾ ಆರ್ಯರು ಅನೇಕ ಗುಂಪುಗಳಾಗಿ ಭಾರತದ ಬೇರೆ ಬೇರೆ ಭಾಗಗಳಿಗೆ ವಲಸೆ ಹೋದರು. ಬ್ರಹ್ಮಾವರ್ತವನ್ನು ಬಿಟ್ಟು ಮುನ್ನಡೆದ ಈ ವಲಸಿಗರು ವಿಂಧ್ಯ ಮತ್ತು ಹಿಮಾಲಯಗಳ ವಿಶಾಲವಾದ ಮಧ್ಯಭಾಗದಲ್ಲಿ ನೆಲೆಸಿ, ಅದನ್ನು 'ಆರ್ಯಾವರ್ತ' ಎಂದು ಕರೆದು ಅಲ್ಲಿ ನೆಲೆಸಿದರು.

ಆರ್ಯರ ಬುಡಕಟ್ಟುಗಳಲ್ಲಿ ಭರತ, ಕುರು, ಪಾಂಚಾಲ, ಪುರು, ಇಕ್ಷ್ವಾಕು ಮತ್ತು ಕಾಶಿ ಮುಂತಾದ ಬುಡಕಟ್ಟುಗಳಿದ್ದವು.

ಕಾಶಿಗಳು ಸಿಂಧು ಪ್ರಾಂತದಿಂದ ಮುನ್ನಡೆದು ಈಗಿನ ವರಣ ಮತ್ತು ಅಸಿ ಎಂಬ ನದಿಗಳ ಸಂಗಮದ ಈ ಪ್ರದೇಶದಲ್ಲಿ ನೆಲೆಸಿದ್ದರಿಂದ ಈ ಪ್ರದೇಶಕ್ಕೆ 'ಕಾಶಿ' ಅಥವಾ 'ವಾರಾಣಾಸಿ' ಎಂಬ ಹೆಸರಾಯಿತು.

ಆಗ್ಗೆ ಈ ಭೂಭಾಗವು ಇಲ್ಲಿನ ಮೂಲನಿವಾಸಿಗಳಾಗಿದ್ದ ವ್ರಾತ್ಯ ರಾಜನ್ಯರ ಆಧಿಪತ್ಯದಲ್ಲಿತ್ತು. ವ್ರಾತ್ಯರು ದ್ರಾವಿಡ ಪ್ರಭೇದಕ್ಕೆ ಸೇರಿದ ವರು. ವ್ರಾತ್ಯರಾಜರ ರಾಜ್ಯಭಾರಕ್ರಮವು ಆರ್ಯರ ರಾಜ್ಯಭಾರ ಕ್ರಮ ಕ್ಕಿಂತ ಉತ್ತಮವಾಗಿತ್ತು.

ವ್ರಾತ್ಯರಾಜರ ಗುರುಗಳು ಶೈವ ಪಾಶುಪತ ಪಂಥಕ್ಕೆ ಸೇರಿದ ಮುನಿ ಗಳು. ಈ ಶೈವರಲ್ಲಿ 'ಪಾಶುಪತ' ಮತ್ತು 'ಮಹಾಪಾಶುಪತ' ಎಂಬ ಪ್ರಭೇದಗಳಿದ್ದವು. ಪಾಶುಪತರು ಸ್ಥಾವರಲಿಂಗ ಮತ್ತು ಜ್ಯೋತಿರ್ಲಿಂಗ ಮುಂತಾದ ಮೂರ್ತಿಗಳ ಪೂಜಕರು. ಮಹಾಪಾಶುಪತರು ಅಂತಃಜ್ಯೋತಿ ರ್ಲಿಂಗಾನುಸಂಧಾನ ಸಾಧಕರಾಗಿ ಅಮಾನುಷ ಸಿದ್ಧಿಗಳನ್ನು ಸಾಧಿಸಿ, ಲೋಕಪೂಜ್ಯರಾಗಿದ್ದರು. ಋಗ್ವೇದದ ಮುನಿಸೂಕ್ತವು ಇವರನ್ನು 'ವಾತ ರಶನ' (ವಾತಃ + ಅಶನಂ) ರೆಂದು ವರ್ಣಿಸಿದೆ. ವಾಯುವನ್ನೇ ಮುಖ್ಯ ಆಹಾರ ಮಾಡಿಕೊಂಡಿದ್ದ ಇವರು ಗಗನದಲ್ಲಿ ಸಂಚರಿಸುವ ಮಹಾಸಿದ್ಧಿ ಯನ್ನು ಪಡೆದಿದ್ದರು. ಮಹಾಪಾಶುಪತರಿಗೆ 'ಜಂಗಮ' ಎಂಬ ಹೆಸರಿತ್ತು.

"ಮಾವ, ನೀವು ಕಾಶಿ ಎಂಬುದು ನಗರದ ಹೆಸರಲ್ಲ, ಅದು ಒಂದು ಜನಾಂಗದ ಹೆಸರು' ಎಂದಿರಿ. ಆ ಜನಾಂಗ ಯಾವುದು? ಅದಕೆ ಕಾಶೀ ಎಂಬ ಹೆಸರು ಬರಲು ಕಾರಣವೇನು?" ಎಂದು.

ಶಂಭು ಭಟ್ಟರು ವಿವರಿಸತೊಡಗಿದರು—"ಇದು ಸುಮಾರು ಐದು ಸಾವಿರ ವರ್ಷಗಳಷ್ಟು ಹಿಂದಿನ ವಿಚಾರ. ಐತಿಹಾಸಿಕರು ಹೇಳುವಂತೆ ವೇದಕಾಲದಲ್ಲಿ ಹಿಮಾಲಯ ಪರ್ವತದ ಪ್ರಸ್ಥ ಭೂಮಿಯನ್ನು 'ತ್ರಿವಿಷ್ಟಪ' ಎಂದು ಕರೆಯುತ್ತಿದ್ದರು. ಅದೇ ಇಂದು 'ಟಿಬೆಟ್' ಎಂದು ಕರೆಯಲ್ಪಡುತ್ತಿದೆ.

ಎತ್ತರವಾದ ಈ ಭೂಭಾಗದಲ್ಲಿ ಮೊದಲು ವಾಸಿಸುತ್ತಿದ್ದ 'ಆರ್ಯ' ಎಂಬ ಜನಾಂಗವು ವಾಸಯೋಗ್ಯವಾದ ಪ್ರದೇಶವನ್ನು ಹುಡುಕುತ್ತಾ ಅಲ್ಲಿಂದ ಪೂರ್ವಕ್ಕೆ ಹೊರಟು ಸಿಂಧೂ ನದಿಯ ಉಪನದಿಗಳ ನಡುಗಡ್ಡೆಗಳನ್ನು ದಾಟುತ್ತಾ ಫಲವತ್ತಾದ ಆ ಪ್ರದೇಶವನ್ನು 'ಬ್ರಹ್ಮಾವರ್ತ' ಎಂದು ಕರೆದು ಅಲ್ಲಿಯೇ ನೆಲೆಸಿದರು.

ಪ್ರಕೃತಿ ಸೌಂದರ್ಯದ ನೆಲೆಮನೆಯಂತಿದ್ದ ಆ ಸಿಂಧೂ ಪ್ರಾಂತದಲ್ಲಿ ಅಲ್ಲಲ್ಲಿ ಆಶ್ರಮಗಳನ್ನು ಕಟ್ಟಿಕೊಂಡಿದ್ದ ಮಹರ್ಷಿಗಳು ತಪೋಮಗ್ನರಾಗಿ ನೈಸರ್ಗಿಕವಾದ ಬಿಸಿಲು-ಬೆಳದಿಂಗಳು, ಮಳೆ, ನೆಲ–ನೀರು, ಸೂರ್ಯ-ಚಂದ್ರ ಮುಂತಾದವುಗಳಲ್ಲಿ ದೇವತಾಚೈತನ್ಯವನ್ನು ಆರೋಪಿಸಿ ಸ್ತೋತ್ರರೂಪವಾಗಿ ವರ್ಣಿಸಿದ ಉದ್ಗಾರಗಳೇ ಋಕ್ಕುಗಳಾಗಿ ಮುಂದೆ ವೇದವೆನಿಸಿದವು' ಎಂಬುದು ವಿಮರ್ಶಕರ ಆಶಯ.

ಆರ್ಯರು ಇಲ್ಲಿಗೆ ಬರುವ ಮುನ್ನ ಇಲ್ಲಿ ನೆಲೆಸಿದ್ದ ನಿವಾಸಿಗಳನ್ನು ದ್ರಾವಿಡರೆಂದು ಕರೆಯುತ್ತಿದ್ದರು. ಅವರಲ್ಲಿ ವ್ರಾತ್ಯ ಮುಂತಾದ ಅನೇಕ ಪ್ರಭೇದಗಳಿದ್ದವು. ಆರ್ಯರು ತಮ್ಮನ್ನು, ತಮ್ಮ ದೇವತೆಗಳನ್ನು ಸುರ (ದೇವ)ರೆಂದು ಕರೆದುಕೊಳ್ಳುತ್ತಿದ್ದರು. ಅಂಥ ಸುರರ ಗುಂಪಿಗೆ ಸೇರದ ಮೂಲ ನಿವಾಸಿಗಳನ್ನು ಅಸುರ (ಅ-ರ, ದಸ್ಯು, ದೈತ್ಯ) ಮುಂತಾಗಿ

ಕರೆಯುತ್ತಿದ್ದರು. ಮೊದಮೊದಲು ಈ ಮೂಲನಿವಾಸಿಗಳಿಗೂ ಆರ್ಯ ರಿಗೂ ನಡೆದ ಹೋರಾಟಗಳನ್ನು ದೇವಾಸುರಸ್ರಂಗ್ರಾಮ ಎಂದು ಪುರಾಣ ಗಳು ಬಣ್ಣಿಸಿವೆ.

ಬರಬರುತ್ತಾ ಆರ್ಯರು ಅನೇಕ ಗುಂಪುಗಳಾಗಿ ಭಾರತದ ಬೇರೆ ಬೇರೆ ಭಾಗಗಳಿಗೆ ವಲಸೆ ಹೋದರು. ಬ್ರಹ್ಮಾವರ್ತವನ್ನು ಬಿಟ್ಟು ಮುನ್ನಡೆದ ಈ ವಲಸಿಗರು ವಿಂಧ್ಯ ಮತ್ತು ಹಿಮಾಲಯಗಳ ವಿಶಾಲವಾದ ಮಧ್ಯಭಾಗದಲ್ಲಿ ನೆಲೆಸಿ, ಅದನ್ನು 'ಆರ್ಯಾವರ್ತ' ಎಂದು ಕರೆದು ಅಲ್ಲಿ ನೆಲೆಸಿದರು.

ಆರ್ಯರ ಬುಡಕಟ್ಟುಗಳಲ್ಲಿ ಭರತ, ಕುರು, ಪಾಂಚಾಲ, ಪುರು, ಇಕ್ಷ್ವಾಕು ಮತ್ತು ಕಾಶಿ ಮುಂತಾದ ಬುಡಕಟ್ಟುಗಳಿದ್ದವು.

ಕಾಶಿಗಳು ಸಿಂಧು ಪ್ರಾಂತದಿಂದ ಮುನ್ನಡೆದು ಈಗಿನ ವರಣ ಮತ್ತು ಅಸಿ ಎಂಬ ನದಿಗಳ ಸಂಗಮದ ಈ ಪ್ರದೇಶದಲ್ಲಿ ನೆಲೆಸಿದ್ದರಿಂದ ಈ ಪ್ರದೇಶಕ್ಕೆ 'ಕಾಶಿ' ಅಥವಾ 'ವಾರಾಣಾಸಿ' ಎಂಬ ಹೆಸರಾಯಿತು.

ಆಗ್ಗೆ ಈ ಭೂಭಾಗವು ಇಲ್ಲಿನ ಮೂಲನಿವಾಸಿಗಳಾಗಿದ್ದ ವ್ರಾತ್ಯ ರಾಜನ್ಯರ ಆಧಿಪತ್ಯದಲ್ಲಿತ್ತು. ವ್ರಾತ್ಯರು ದ್ರಾವಿಡ ಪ್ರಭೇದಕ್ಕೆ ಸೇರಿದ ವರು. ವ್ರಾತ್ಯರಾಜರ ರಾಜ್ಯಭಾರಕ್ರಮವು ಆರ್ಯರ ರಾಜ್ಯಭಾರ ಕ್ರಮ ಕ್ಕಿಂತ ಉತ್ತಮವಾಗಿತ್ತು.

ವ್ರಾತ್ಯರಾಜರ ಗುರುಗಳು ಶೈವ ಪಾಶುಪತ ಪಂಥಕ್ಕೆ ಸೇರಿದ ಮುನಿ ಗಳು. ಈ ಶೈವರಲ್ಲಿ 'ಪಾಶುಪತ' ಮತ್ತು 'ಮಹಾಪಾಶುಪತ' ಎಂಬ ಪ್ರಭೇದಗಳಿದ್ದವು. ಪಾಶುಪತರು ಸ್ಥಾವರಲಿಂಗ ಮತ್ತು ಜ್ಯೋತಿರ್ಲಿಂಗ ಮುಂತಾದ ಮೂರ್ತಿಗಳ ಪೂಜಕರು. ಮಹಾಪಾಶುಪತರು ಅಂತಃಜ್ಯೋತಿ ರ್ಲಿಂಗಾನುಸಂಧಾನ ಸಾಧಕರಾಗಿ ಅಮಾನುಷ ಸಿದ್ಧಿಗಳನ್ನು ಸಾಧಿಸಿ, ಲೋಕಪೂಜ್ಯರಾಗಿದ್ದರು. ಋಗ್ವೇದದ ಮುನಿಸೂಕ್ತವು ಇವರನ್ನು 'ವಾತ ರಶನ' (ವಾತಃ + ಅಶನಂ) ರೆಂದು ವರ್ಣಿಸಿದೆ. ವಾಯುವನ್ನೇ ಮುಖ್ಯ ಆಹಾರ ಮಾಡಿಕೊಂಡಿದ್ದ ಇವರು ಗಗನದಲ್ಲಿ ಸಂಚರಿಸುವ ಮಹಾಸಿದ್ಧಿ ಯನ್ನು ಪಡೆದಿದ್ದರು. ಮಹಾಪಾಶುಪತರಿಗೆ 'ಜಂಗಮ' ಎಂಬ ಹೆಸರಿತ್ತು.

ರಾಜಗುರುಗಳೆನಿಸಿದ್ದ ಈ ಜಂಗಮ ಮುನಿಗಳನ್ನು ಕಾಶಿಗಳು ತಮ್ಮ ಯಜ್ಞ ಯಾಗಾದಿಗಳಿಗೆ ಬರಮಾಡಿಕೊಂಡು ಅಗ್ರಾಸನವಿತ್ತು ಗೌರವಿಸುತ್ತಿದ್ದರು. ಒಬ್ಬ ಆರ್ಯ ಗೃಹಸ್ಥನ ಮನೆಗೆ ಜಂಗಮ ಮುನಿ ಬಂದರೆ ಆತ ಯಜ್ಞ ಮಾಡುತ್ತಿದ್ದರೂ ಎದ್ದು ನಿಂತು, ಆ ಮುನಿಯನ್ನು ಆಹ್ವಾನಿಸಿ ಅಗ್ರಾಸನವನ್ನು ವಹಿಸುವಂತೆ ಪ್ರಾರ್ಥಿಸಬೇಕು. ಅವನು ಅದಕ್ಕೆ ಒಪ್ಪದಿದ್ದರೆ ಅವನ ಅನುಮತಿ ಪಡೆದು ತಾನೇ ಯಜ್ಞವನ್ನು ಪೂರೈಸಬೇಕು.

ವ್ರಾತ್ಯರಾಜರ ಆಶ್ರಯದಲ್ಲಿದ್ದ ಕಾಶಿಗಳಿಗೆ ವ್ರಾತ್ಯರ ಆಚಾರ-ವಿಚಾರಗಳು ಮಾನ್ಯವೆನಿಸಿದ್ದವು. ವ್ರಾತ್ಯರ ದೇವತೆಗಳು ಕಾಶಿಗಳಿಗೂ ಮಾನ್ಯವಾದವು.

ಆರ್ಯರು ಸ್ವತಃ ಅಗ್ನಿಪೂಜಕರು. ಆರ್ಯರು ತಮ್ಮ ಯಜ್ಞ-ಯಾಗಾದಿಗಳಲ್ಲಿ ಅಗ್ನಿಯಲ್ಲಿ ಹವಿಸ್ಸನ್ನು ಅರ್ಪಿಸಿ, ದೇವತೆಗಳನ್ನು ತೃಪ್ತಿಪಡಿಸುತ್ತಿದ್ದರು. ವ್ರಾತ್ಯರು ತಮ್ಮ ಆರಾಧ್ಯ ಮೂರ್ತಿಗಳೆನಿಸಿ ಲಿಂಗರೂಪದಲ್ಲಿದ್ದ ವಿಶ್ವನಾಥ ಮತ್ತು ಅನ್ನಪೂರ್ಣೆಯರ ಮೂರ್ತಿಗಳನ್ನು ಅಭಿಷೇಕ, ಧೂಪ-ದೀಪಾದಿಗಳಿಂದ ಪೂಜಿಸುತ್ತಿದ್ದರು.

ವ್ರಾತ್ಯರ ಪೂಜಾವಿಧಾನವನ್ನು ಬೋಧಿಸುವ ಆಗಮ ಮಂತ್ರಗಳ ಜೊತೆಗೆ ತಮ್ಮ ವೇದ ಮಂತ್ರಗಳನ್ನು ಸೇರಿಸಿ ಈ ಕಾಶಿಗಳು ವೇದಾಗಮೋಕ್ತವಾದ ಆರಾಧನ ಪದ್ಧತಿಯನ್ನು ಅನುಸರಿಸತೊಡಗಿದರು. ಇದು ಆರ್ಯ ಮತ್ತು ವ್ರಾತ್ಯ(ದ್ರಾವಿಡ)ರ ಮಧುರ ಮೈತ್ರಿಗೆ ನಾಂದಿಯಾಯಿತು. ಅಲ್ಲಿಂದ ಮುಂದೆ ವೇದ ಮತ್ತು ಆಗಮ ಸಂಸ್ಕೃತಿಗಳು ಗಂಗೆ-ಯಮುನೆಯರಂತೆ ಒಂದಾಗಿ ಭಾರತ ಸಂಸ್ಕೃತಿಯೆನಿಸಿ ಮಾನ್ಯವೆನಿದವು. ಇದರಿಂದ ಕಾಶಿಯು ವೇದಾಗಮ ಸಂಸ್ಕೃತಿಗಳ ಸಂಗಮ ಕೇಂದ್ರವೆನಿಸಿತು."

ಶ್ರೀಪತಿ "ಮಾವಾ, ನೀವು ವ್ರಾತ್ಯರ ಪೂಜಾವಿಧಾನವನ್ನು ಬೋಧಿಸುವ ಆಗಮ ಮಂತ್ರಗಳ ಜೊತೆಗೆ ಕಾಶಿಗಳು ತಮ್ಮ ವೇದಮಂತ್ರಗಳನ

ಸೇರಿಸಿಕೊಂಡು ವೇದಾಗಮೋಕ್ತವಾದ ಪೂಜಾವಿಧಿಯನ್ನು ಅನುಸರಿಸ ತೊಡಗಿದರು." ಎಂದು ಹೇಳಿದಿರಿ. ಆದರೆ ಈ ವೇದ ಮತ್ತು ಆಗಮ ಮಂತ್ರಗಳೆರಡೂ ಸಂಸ್ಕೃತ ಭಾಷೆಯಲ್ಲಿಯೇ ಇವೆ. ಹಾಗಾದರೆ ಆರ್ಯರ ಮತ್ತು ಮೂಲನಿವಾಸಿಗಳ ಭಾಷೆಗಳೆರಡೂ ಒಂದೇ ಆಗಿದ್ದವೆ?" ಎಂದು ಪ್ರಶ್ನಿಸಿದ.

ಅದಕ್ಕೆ ಭಟ್ಟರು "ಬೇಷ್ ಒಳ್ಳೆಯ ಪ್ರಶ್ನೆಯನ್ನೇ ಕೇಳಿದೆ! ನೀನು ಭಾವಿಸಿರುವಂತೆ ಆರ್ಯ ಮತ್ತು ದ್ರಾವಿಡರ ಭಾಷೆಗಳು ಒಂದೇ ಆಗಿರಲಿಲ್ಲ. ಆರ್ಯರದು ಸಂಸ್ಕೃತ. ಮೂಲನಿವಾಸಿಗಳದು ದ್ರಾವಿಡಭಾಷೆ. ಅವರ ಪೂಜಾವಿಧಾನ ಮೊದಲು ದ್ರಾವಿಡದಲ್ಲೇ ಇದ್ದು ಮುನ್ಮುಂದೆ ಎರಡೂ ಜನಾಂಗಗಳ ಮೈತ್ರಿ ಮುಂದುವರಿದ ಮೇಲೆ ದ್ರಾವಿಡರ ಮತ್ತು ಆರ್ಯರ ಸಂಸ್ಕೃತಿಗಳಲ್ಲಿ ವಿನಿಮಯವು ಆಗತೊಡಗಿತು. ದ್ರಾವಿಡ ಸಂಸ್ಕೃತಿಯಲ್ಲಿದ್ದ ಉತ್ತಮ ನಡೆನುಡಿಗಳನ್ನು ಗುಣಗ್ರಾಹಿಗಳಾದ ಆರ್ಯರು ಸ್ವೀಕರಿಸಿದರು. ಅದರಂತೆ ದ್ರಾವಿಡರೂ ಸಹ ಆರ್ಯರ ಉತ್ತಮ ಪದ್ಧತಿಗಳನ್ನು ಅನುಸರಿಸ ತೊಡಗಿದರು. ಉದಾಹರಣೆಗೆ ಮುನಿ, ಕೋಗಿಲೆ, ನೀರು ಮುಂತಾದ ದ್ರಾವಿಡಪದಗಳು ಸಂಸ್ಕೃತದಲ್ಲಿ ಇಂದಿಗೂ ಬಳಕೆಯಲ್ಲಿ ಬಂದಿವೆ. ಅದರಂತೆ ಮೊದಲು ದ್ರಾವಿಡ ಭಾಷೆಯಲ್ಲಿದ್ದ ಪೂಜಾವಿಧಾನಗಳು ಸಂಸ್ಕೃತದಲ್ಲಿ ಪುನರ್ಘಟಿತವಾದವು. ಆಗಮಗಳಲ್ಲಿ ಕೆಲವು ಎರಡೆರಡು ಸಲವೂ ಮತ್ತೆ ಕೆಲವು ಮೂರು ಮೂರು ಸಲವೂ ಪುನರ್ಘಟಿತವಾಗಿರುವುದು ಈ ಕಲ್ಪನೆಗೆ ಇಂಬು ಗೊಡುತ್ತದೆ. ಈ ಬಗೆಯ ಎರಡೂ ಜನಾಂಗಗಳಲ್ಲಿ ಏರ್ಪಡುವುದಕ್ಕೆ ಹಲವಾರು ಶತಕಗಳೇ ಕಳೆದಿರಬೇಕೆಂದು ವಿಚಾರಪರರು ಭಾವಿಸಿದ್ದಾರೆ.

ಎಂಬ ಶಂಭುಭಟ್ಟರ ವಿವರಣೆ ಕೇಳಿ ಶ್ರೀಪತಿ ಪ್ರಭಾವಿತನಾಗಿದ್ದ. ಕನಕಲತೆಗಂತೂ ಅಪ್ಪಾಜಿಯವರ ಈ ಲೋಕ-ಶಾಸ್ತ್ರ ಪರಿಣತಿಯನ್ನು ತಿಳಿಯುವ ಅವಕಾಶವೇ ಒದಗಿರಲಿಲ್ಲ. ಶ್ರೀಪತಿಯು ಅವರನ್ನು ಪ್ರಶ್ನಿಸಿ ಮಾಡಿದ ಉಪಕಾರಕ್ಕೆ ಶ್ರೀಪತಿಯನ್ನು ನೋಟದಿಂದಲೇ ಅಭಿನಂದಿಸಿ ಮುಗುಳ್ನಗೆ ಬೀರಿದಳು.

ಅಷ್ಟು ಹೊತ್ತಿಗೆ ಭಟ್ಟರ ಪರಿವಾರ ಗಂಗಾತಟವನ್ನು ತಲುಪಿತ್ತು. ಗಂಗೆಯ ದಡದಲ್ಲಿ ಯಾತ್ರಿಕರನ್ನು ಕರೆದೊಯ್ಯುವ ನೂರಾರು ದೋಣಿಗಳು ಸಿದ್ಧವಾಗಿದ್ದವು. ಗಂಗಾಮಾತೆ ತನ್ನ ತೆರೆಗೈಗಳಿಂದ ಶ್ರೀಪತಿಯನ್ನು ಆಹ್ವಾನಿಸುತ್ತಿದ್ದಳು. ಎಳೆಗಾಳಿಗೆ ಮೇಲೆದ್ದ ತೆರೆಗಳಿಂದ ಸಿಡಿಯುತ್ತಿದ್ದ ತಣ್ಣನೆಯ ತುಂತುರು ಹನಿಗಳು ಕೃಷ್ಣೆಯ ಕಂದನಾದ ಶ್ರೀಪತಿಯ ಮಾರ್ಗಾಯಾಸವನ್ನು ತಣಿಸುವಂತಿತ್ತು.

ದೋಣಿಯನ್ನಿಳಿದ ಈ ತ್ರಿಮೂರ್ತಿಗಳು ಜಂಗಮವಾಟಿಕೆಯ ಕಡೆ ಮುನ್ನಡೆದಾಗ ಪರಿಚಿತ ವಿದ್ವಾಂಸರು ಮತ್ತು ವಿದ್ಯಾರ್ಥಿಗಳು ಶಂಭುಭಟ್ಟರನ್ನು ಹರ್ಷದಿಂದ ಎದುರ್ಗೊಂಡರಲ್ಲದೆ ಜೊತೆಗಿದ್ದ ಓಜಸ್ವಿ ತರುಣ ಶ್ರೀಪತಿಯನ್ನು ಅಪರಿಚಿತನಾದರೂ ಆತ್ಮೀಯ ಭಾವದಿಂದ ಕೈಕುಲುಕಿ ಕರೆ ನೀಡಿದರು.



೧೨

# ವಿದ್ಯೆಯ ಗಣಿ ವಾರಾಣಸಿ

## ೧

ಶ್ರೀಪತಿಗೆ ಕಾಶಿ ಹೊಸದು. ಮನೆಗೆ ಬಂದೊಡನೆಯೇ ಮನೆಯೊಡತಿ ಶ್ರೀದೇವಿ ಮೂವರಿಗೂ ಕಾಲಿಗೆ ನೀರು ಕೊಟ್ಟಳು. ಶ್ರೀಪತಿ ನೀರಿನಿಂದ ಕೈ ಕಾಲು ತೊಳೆದು ಒಳಗೆ ಅಡಿ ಇಟ್ಟಾಗ ಕನಕಾ ಮಡಿ ಕರವಸ್ತ್ರ ತಂದು ಕೊಟ್ಟಳು. ಶ್ರೀಪತಿ ಅದರಿಂದ ಕೈಕಾಲು ಒರೆಸಿಕೊಂಡು ಬಾಗಿಲ ಬಳಿ ಇದ್ದ ಒಂದು ಆಸನದಲ್ಲಿ ಕುಳಿತ. ಆ ವೇಳೆಗಾಗಲೇ ಶಂಭುಭಟ್ಟರು ಬಚ್ಚಲನ್ನುಪ್ರವೇಶಿಸಿ ಸ್ನಾನ ಮಾಡುತ್ತಿದ್ದರು.

ಶ್ರೀಪತಿ ಪುಸ್ತಕ ಕಪಾಟುವಿನ ಹತ್ತಿರ ಹೋಗಿ ಅಲ್ಲಿ ಓರಣವಾಗಿ ಜೋಡಿಸಿದ್ದ ಗ್ರಂಥಗಳನ್ನು ನೋಡತೊಡಗಿದ್ದ. ಅದು ಮಂಚಣ್ಣನ ಓದುವ ಕೊಠಡಿ. ಅಷ್ಟರಲ್ಲಿ ಕನಕಾ ಹತ್ತಿರ ಬಂದು ಶ್ರೀಪತಿಗೆ "ಅಪ್ಪಾಜಿ ಸ್ನಾನ ಮಾಡಿ ಪೂಜಾಗೃಹದಲ್ಲಿದ್ದಾರೆ. ಸ್ನಾನಕ್ಕೆ ಮಡಿವಸ್ತ್ರ ಪಂಚೆ ಸಿದ್ಧಪಡಿಸಿದೆ" ಎಂದಳು.

ಶ್ರೀಪತಿ ಸ್ನಾನದ ಕೊಠಡಿಗೆ ಹೋದಾಗ ಕನಕಾ ಕೈಗೆ ನೀರು ಕೊಟ್ಟು ಹೊರಬಂದಳು. ಶ್ರೀಪತಿಯೂ ಸ್ನಾನ ಮುಗಿಸಿ ದೇವರ ಮನೆ ಸೇರಿದಾಗ ಮಂಚಣ್ಣ ಸಂಧ್ಯೆಯನ್ನು ಮುಗಿಸಿ ಶಿವಾರ್ಚನೆಗೆ ತೊಡಗಿದ್ದ. ಎಲ್ಲರೂ ಅಗ್ನಿಕಾರ್ಯವನ್ನು ಸೂಕ್ಷ್ಮವಾಗಿ ಮುಗಿಸಿದರು.

ದೇವರ ಮನೆಯಿಂದ ಹೊರಬಿದ್ದ ಶ್ರೀಪತಿ ಮನೆಯ ಅಚ್ಚುಕಟ್ಟನ್ನು ಕಂಡು ವಿಸ್ಮಿತನಾದ. ವಾಟಿಕೆಯಲ್ಲಿದ್ದ ಉಪಾಧ್ಯಾಯರ ನಿವಾಸಗಳು ಒಂದೇ ಮಾದರಿಯಲ್ಲಿ ಸಾಲಾಗಿದ್ದವು.

ಪ್ರತಿಮನೆಯ ಮುಂದೆಯೂ ಒಂದು ಅಂಗಳ, ಕೈಸಾಲೆ. ಅದಕ್ಕೆ ಎರಡೂ ಕಡೆ ಒಂದೊಂದು ಕೊಠಡಿಗಳು. ಒಳ ಹೊಕ್ಕರೆ ಒಂದು ಅಂಗಳ ಬಲಗಡೆ ಬಚ್ಚಲು ಮನೆ. ಅದಕ್ಕೆ ಹೊಂದಿಕೊಂಡಂತೆ ದೇವರ ಮನೆ, ಊಟದ ಮನೆ, ಉಗ್ರಾಣ, ಅಡಿಗೆ ಮನೆಗಳು ; ಎಡಕ್ಕೆ ಓದುವ ಮತ್ತು ಮಲಗುವ ಕೊಠಡಿಗಳು. ಹೊರಗಿನ ಕೊಠಡಿಗಳು ಬಹುಮಟ್ಟಿಗೆ ಅತಿಥಿಗಳಿಗೆ ಮೀಸಲು.

ಶ್ರೀದೇವಿಯ ಪರಿಚಯ ಶ್ರೀಪತಿಗಿಲ್ಲ. ಆದರೂ ಶ್ರೀಪತಿ ಅವಳನ್ನು ಅತ್ತೆ ಎಂದು ಸಂಬೋಧಿಸಿ, ತಮ್ಮ ಊರಿನ ತಂದೆ-ತಾಯಿಗಳ ಪರಿಚಯವನ್ನು ಮಾಡಲು ಪ್ರಾರಂಭಿಸಿದ್ದ. ಅವನ ಜಾಣ್ಮೆಯನ್ನು ಕಂಡು ಶ್ರೀದೇವಿ ನಸುನಕ್ಕು ಬೆಜವಾಡ ಮತ್ತು ಮುದಿಗೊಂಡದವರ ಕ್ಷೇಮ ಸಮಾಚಾರವನ್ನೆಲ್ಲ ಕೇಳಿ—

"ಮರಿ, ನೀವೀಗ ಹಸಿದು ಬಂದಿದ್ದೀರಿ. ಉಪಾಹಾರ ಸಿದ್ಧವಾಗಿದೆ" ಎಂದಳು. ಆದರೆ ಮಂಚಣ್ಣ ವಿಶ್ವನಾಥಾಲಯ ಪೂಜೆಗೆ ಬೇಕಾದ ಪೂಜಾಸಾಮಗ್ರಿಗಳೊಂದಿಗೆ ಹೊರಟು ನಿಂತಿದ್ದ. ಶಂಭುಭಟ್ಟರು ಉಪಾಹಾರಕ್ಕಾಗಿ ಶ್ರೀಪತಿಗೆ ನಿರೀಕ್ಷಿಸುತ್ತಿದ್ದರು. ಆದರೂ ಶ್ರೀಪತಿ ಮಂಚಣ್ಣನ ಜೊತೆ ದೇವರ ದರ್ಶನ ಮಾಡಿ ಬರುವೆನೆಂದು ಮಂಚಣ್ಣನನ್ನು ಹಿಂಬಾಲಿಸಿದ.

ಶ್ರೀಪತಿಗೆ ಮಂಚಣ್ಣನ ಪೂಜಾವಿಧಾನವನ್ನು ಕಂಡು ಆಶ್ಚರ್ಯವೋ ಆಶ್ಚರ್ಯ ! ಆ ಬಗೆಯ ಪೂಜಾವಿಧಾನ, ಆ ಬಗೆಯ ಉತ್ಕಟ ಭಕ್ತಿ, ಸಾಮಾನ್ಯರಿಗೆ ಅಳವಡುವುದಲ್ಲ. ಪರಶಿವನಿಗೆ ಎಲ್ಲ ಉಪಚಾರಗಳೂ ಮುಗಿದ ಮೇಲೆ ತನ್ನ ಬೆರಳುಗಳನ್ನೇ ಆರತಿ ಮಾಡಿ ಬೆಳಗುವ, ಕುರುಳು ಚಾಮರ ಬೀಸಿ ಪ್ರಸನ್ನನಾದ ಶಿವನಿಂದ ಅಭಿನಂದಿಸಲ್ಪಡುವ ಪವಾಡ ಅದ್ಭುತ ವೆನಿಸಿತ್ತು.

ಭಕ್ತರು ಮಂಚಣ್ಣನ ಈ ವಿಚಿತ್ರ ಭಕ್ತಿಗೆ ಪರವಶರಾಗಿ ಅವನನ್ನು ಪ್ರತ್ಯಕ್ಷ ವಿಶ್ವನಾಥನೆಂದೇ ಭಾವಿಸಿ, ಅವನ ಬಗ್ಗೆ ಭಯ-ಭಕ್ತಿಯಿಂದ ನಡೆದುಕೊಳ್ಳುವ ಬಗೆಯನ್ನು ಕಣ್ಣಾರೆ ಕಂಡ ಶ್ರೀಪತಿ ಮಂಚಣ್ಣನ ಬಗೆಗೆ ತಾನೂ ಶ್ರದ್ಧಾಸಕ್ತಿಯಿಂದ ನಡೆಯಬೇಕು ಎಂದುಕೊಂಡ.

ದೇವಾಲಯದಿಂದ ಬಂದಮೇಲೆ ಇಬ್ಬರೂ ಉಪಾಹಾರ ಮುಗಿಸಿದರು. ತುಸುಹೊತ್ತು ವಿಶ್ರಾಂತಿ ಪಡೆದು ಶಂಭುಭಟ್ಟರು ಅಳಿಯನೊಡನೆ ಜಂಗಮವಾಟಿಕೆ, ವಿದ್ಯಾಪೀಠಗಳ ಕಡೆ ಕಾಲುಹಾಕಿದರು.

ಕಾಶಿಯಲ್ಲಿ ವ್ಯಾಸ, ಮಣಿಕರ್ಣಿಕಾ, ಹನೂಮಾನ್, ಹರಿಶ್ಚಂದ್ರ ಮತ್ತು ದಶಾಶ್ವಮೇಧ ಮುಂತಾದ ಅನೇಕ ಸ್ನಾನಘಟ್ಟಗಳಿವೆ. ಅವುಗಳಲ್ಲಿ ಹರಿಶ್ಚಂದ್ರ ಸ್ನಾನಘಟ್ಟ ವಿಶ್ವನಾಥಾಲಯಕ್ಕೆ ಹತ್ತಿರದಲ್ಲಿದೆ. ದೇವಾಲಯ ಪ್ರವೇಶದ್ವಾರದಲ್ಲಿರುವುದು ವೇದವ್ಯಾಸರ ಮೂರ್ತಿ. ಅದರ ಪಕ್ಕದಲ್ಲಿ ವಿಷ್ಣುವೇ ಸರ್ವಶ್ರೇಷ್ಠನೆಂದು ಮೇಲೆ ಎತ್ತಿದ ವೇದವ್ಯಾಸರ ತೋಳನ್ನು ನಂದೀಶ್ವರನು ತಡೆದುದನ್ನು ಸೂಚಿಸುವ ಧ್ವಜಸ್ತಂಭ.

ದೇವಾಲಯದ ಪರಿಸರ ಸುಮಾರು ೧೦-೧೫ ಎಕರೆಗಳಷ್ಟು ವಿಸ್ತಾರವಾಗಿದೆ. ಈ ಆವರಣದಲ್ಲಿ ವಿದ್ಯಾಪೀಠ; ಅದಕ್ಕೆ ಹೊಂದಿಕೊಂಡಿರುವ ವಿವಿಧ ಶಾಸ್ತ್ರಶಾಖೆಗಳಿಗೆ ಸಂಬಂಧಿಸಿದ ವಿಭಾಗಗಳು, ಪುಸ್ತಕ ಭಂಡಾರ, ಉದ್ಯಾನ; ಆದರಿಂದಾಚೆಗೆ ವಿದ್ವಾಂಸರ ನಿವಾಸಗಳು ವಿನ್ಯಸ್ತವಾಗಿವೆ. ಪುಸ್ತಕ ಭಂಡಾರಕ್ಕೆ ಹಿಂದುಗಡೆ ವಿದ್ಯಾರ್ಥಿಗಳಿಗಾಗಿ ನಿರ್ಮಿತವಾದ ಕೊಠಡಿಗಳಿವೆ.

ಉದ್ಯಾನದಲ್ಲಿ ಹುಲುಸಾಗಿ ಬೆಳೆದಿರುವ ಫಲಭರಿತ ಪುಣ್ಯವೃಕ್ಷಗಳು. ಪುಷ್ಪವಾಟಿಕೆ. ಅಲ್ಲಲ್ಲಿ ಕುಳಿತು ಓದಲು ಅನುಕೂಲವಾದ ಶಿಲಾವೇದಿಕೆಗಳು. ಲತಾಮಂಟಪಗಳು ವಿದ್ಯಾಲಯದ ಸೊಬಗನ್ನು ಇಮ್ಮಡಿಸಿವೆ.

ವಿಶ್ವನಾಥಾಲಯ ಪ್ರಾಂಗಣವು ತುಂಬಾ ವಿಶಾಲವಾಗಿದೆ. ಅದರಲ್ಲಿ ವಿದ್ವಾಂಸರು, ವಿದ್ಯಾರ್ಥಿಗಳು ಬೇರೆಬೇರೆ ಕುಳಿತು ವೇದಾಧ್ಯಯನ, ಚಿಂತನ, ವಾಕ್ಯಾರ್ಥಗಳನ್ನು ನಡೆಸುವ ಬೇರೆಬೇರೆ ವೇದಿಕೆಗಳುಂಟು.

ಸಂಧ್ಯಾಕಾಲದಲ್ಲಿ ವಿಶ್ವನಾಥನಿಗೆ ರಾಜೋಪಚಾರಾದಿಗಳು ಮುಗಿದ ಮೇಲೆ ಸಂಗೀತ, ನೃತ್ಯ ಪುರಾಣ ಪ್ರವಚನ ಅಥವಾ ಶಿವಕೀರ್ತನಗಳು ಮುಂತಾದ ಕಾರ್ಯಕ್ರಮಗಳು ಏರ್ಪಟ್ಟಿರುತ್ತವೆ.

ವಿಶ್ವನಾಥ–ಅನ್ನಪೂರ್ಣೆಯರ ದರ್ಶನ-ಅರ್ಚನಾದಿಗಳಿಗೆ ಬರುವ ಭಕ್ತಸ್ತೋಮ ಗಂಟೆ ಜಾಗಟೆಗಳ ಗದ್ದಲದಿಂದ ಶ್ರೋತೃಗಳಿಗೆ ತೊಂದರೆಯಾಗದಷ್ಟು ದೂರದಲ್ಲಿ ನೀರವ ಪರಿಸರದಲ್ಲಿ ಈ ಸಭಾ ಭವನ ಏರ್ಪಟ್ಟಿದೆ.

ಸಾಧಕರಿಗೆ, ಅನುಷ್ಠಾನಪರರಿಗೆ ಮೀಸಲಾಗಿರುವ ಈ ಯಜ್ಞ ಮಂಟಪದಲ್ಲಿ ಭಕ್ತರಿಂದ ರುದ್ರಹವನವು ನಿರಂತರವೂ ನಡೆಯುತ್ತಿರುವುದರಿಂದ ಆ ಸುತ್ತುಮುತ್ತು ಬಹುದೂರದವರಿಗೆ ವಾತಾವರಣವು ಪರಿಶುದ್ಧವಾಗಿ ಘಮಘಮಿಸುತ್ತಿರುತ್ತದೆ.

ಮುಂದೆ ಬಂದರೆ ಮಹಾವಿದ್ಯಾಪೀಠಕ್ಕೆ ಹೊಂದಿಕೊಂಡಿರುವ ಸಹಸ್ರಾರು ಜನ ಕುಳಿತುಕೊಳ್ಳುವಷ್ಟು ವಿಸ್ತಾರವಾದಪ್ರಾಂಗಣ, ಉಪನ್ಯಾಸ ವೇದಿಕೆ ರೂಪುಗೊಂಡಿವೆ.

ವಿಶ್ವನಾಥಾಲಯಕ್ಕೆ ಅನತಿ ದೂರದಲ್ಲಿ ಬಿಂದುಮಾಧವ, ಕಾಲ ಭೈರವ ಮುಂತಾದ ದೇವಾಲಯಗಳು ವಿನ್ಯಸ್ತವಾಗಿವೆ.

ವಿದ್ಯಾಪೀಠಕ್ಕೆ ಈಶಾನ್ಯದಲ್ಲಿ ಜಂಗಮವಾಟಿಕೆ ಎಂಬ ಪುರಾತನ ಮಠ ಅಧ್ಯಾತ್ಮ ವಿದ್ಯೆಯ ಔನ್ನತ್ಯವನ್ನು ಸಾರುವಂತೆ ಮಠದ ಮಹಾ ದ್ವಾರದ ಮೇಲೆ ಸಪ್ತಭೂಮಿಕೆಗಳ ಎತ್ತರವಿರುವ ಶಿಖರ; ಪಂಚಸುವರ್ಣ ಕಲಶಗಳ ಮಧ್ಯದಲ್ಲಿ ಹಾರಾಡುವ ಷಟ್‌ಸ್ಥಲಾಂಕಿತ ಕಾವಿಯ ಬಾವುಟವು ಮೈವೆತ್ತ ವೈರಾಗ್ಯದಂತೆ ತಲೆ ಎತ್ತಿ ನಿಂತಿದೆ.

ಮುನ್ನಡೆದರೆ ಎಂಟು ಆವರಣಗಳು, ಅದರ ಸುತ್ತು ಪಂಚಾಚಾರ ಪರಿಧಿಗಳಿಂದ ಭಕ್ತರ, ಭಾವುಕರ ಅಧ್ಯಾತ್ಮ ಜಿಜ್ಞಾಸುಗಳನ್ನು ಆಕರ್ಷಿಸುವ 'ಜ್ಞಾನ ಸಿಂಹಾಸನ'ದಿಂದ ಪರಿಶೋಭಿತವಾಗಿದೆ ಜಗದ್ಗುರು ಶ್ರೀಮಠ.

ಜ್ಞಾನಪೀಠದ ಬಲಗಡೆಗೆ ಯಾತ್ರಿಕರ ನಿವಾಸಗಳು. ಅವುಗಳ ಮಧ್ಯದಲ್ಲಿ ವಿಶಾಲವಾದ ಸಭಾಭವನ, ಪ್ರತಿದಿನವೂ ಸಂಜೆ ಜಗದ್ಗುರುಗಳು

ಜ್ಞಾನಪೀಠದಲ್ಲಿ ಮಂಡಿಸಿ ಭಕ್ತರಿಗೆ ತತ್ತ್ವೋಪದೇಶ ಮಾಡುತ್ತಾರೆ. ಈ ಸಂದರ್ಭದಲ್ಲಿ ವಿದ್ವಾಂಸರು, ಕಲಾವಿದರು, ಕವಿ, ವಾದಿ, ವಾಗ್ಮಿಗಳು ಜಗದ್ಗುರುಗಳಿಂದ ಸನ್ಮಾನಿತರಾಗಿ ಅನರ್ಘ್ಯವಾದ ವಸ್ತ್ರಭೂಷಣಗಳಿಂದ ಅಮೂಲ್ಯ ಖಿಲ್ಲತ್ತುಗಳಿಂದ ಸನ್ಮಾನಿತರಾಗುತ್ತಾರೆ.

ಸಭಾಭವನದ ಒಂದು ಭಾಗದಲ್ಲಿ ಐದಾರು ಅಂತಸ್ತುಗಳ ಕಪಾಟುಗಳಲ್ಲಿ ಓರಣವಾಗಿ ಜೋಡಿಸಿರುವ ವಿವಿಧ ಭಾಷೆಯ ವೇದ-ಆಗಮ, ಶಾಸ್ತ್ರಗಳು, ಸಾಹಿತ್ಯ. ಸಂಗೀತ ಮತ್ತು ಕಲೆಗಳಿಗೆ ಸಂಬಂಧಿಸಿದ ಗ್ರಂಥರಾಶಿ, ಗ್ರಂಥಪರಿಷ್ಕಾರ, ಗ್ರಂಥ ಸಂಪಾದನೆ, ಪ್ರತಿಮಾಡುವ ವಿದ್ವಾಂಸರಿಂದ ಏರ್ಪಟ್ಟ ಸಮಿತಿಗಳು ಶಿಸ್ತಿನಿಂದ ನಡೆಯುತ್ತಿವೆ.

ಮಠದ ಹಿಂಭಾಗದಲ್ಲಿ ಅನುಷ್ಠಾನಪರರಾದ ಸಾಧಕರು, ಗುರು-ವಿರಕ್ತ ಮಠಾಧಿಪತಿಗಳು, ಸಾಧು-ಸಂತರು. ಪೂಜಾದಿಗಳಲ್ಲಿ ತೊಡಗಿರುತ್ತಾರೆ. ಪ್ರಸಾದಮಂದಿರದಲ್ಲಿ ಇಂಥವರಿಗಾಗಿ ಸತ್ಕಾರವು ಸದಾ ಏರ್ಪಟ್ಟಿರುತ್ತದೆ. ಮಠದ ಎಡಭಾಗದಲ್ಲಿ ಗೋಶಾಲೆ, ಸಾರ್ವಜನಿಕ ದಾಸೋಹ ಭವನಗಳಿವೆ.

೨

## ಕನ್ಯಾ ಗುರುಕುಲ

ಪೀಠಕ್ಕೆ ಎರಡು ಹರಿದಾರಿ ಅಂತರದಲ್ಲಿ ನಿರ್ಜನ ಪ್ರದೇಶದಲ್ಲಿ ಕನ್ಯಾ ಗುರುಕುಲವು ಏರ್ಪಟ್ಟಿದೆ. ಗಂಗಾತಟದ ಮೇಲೆ ನಿರ್ಮಿತವಾಗಿರುವ ಈ ಗುರುಕುಲದ ದೃಶ್ಯ ಮನನೀಯವಾಗಿದೆ. ಗುರುಕುಲದ ಉತ್ತರದಲ್ಲಿ ನಿತ್ಯವೂ ಪ್ರವಹಿಸುವ ಪವಿತ್ರ ಗಂಗಾಪ್ರವಾಹ. ಉಳಿದ ಮೂರೂ ಕಡೆ ದಟ್ಟವಾದ ರಾಜ ರಕ್ಷಿತವಾದ ಕಾಡು. ಆದರಾಚೆ ರಾಜೋದ್ಯಾನ. ಮಧ್ಯದಲ್ಲಿರುವ ಈ ಗುರುಕುಲದ ಸನ್ನಿವೇಶ ಪ್ರಶಾಂತವಾಗಿದೆ. ವನ್ಯಮೃಗ ಅಥವಾ ದುರ್ಜನ ಸಂಪರ್ಕಕ್ಕೆ ದೂರವಾದ ನಿಶಾಂತ ನೀರವ ಸನ್ನಿವೇಶ ಅದು.

ಅಧ್ಯಯನ ಮಗ್ನರಾದ ಗುರುಕುಲದ ಈ ತಪಸ್ವಿನಿಯರು ಅಲ್ಲಲ್ಲಿ ರಚಿತವಾಗಿರುವ ವೇದಿಕೆಗಳಲ್ಲಿ ಲತಾಮಂಟಪಗಳಲ್ಲಿ ಕುಳಿತು ಪಾಠಪ್ರವಚನ ಗಳಲ್ಲಿ ತೊಡಗಿರುತ್ತಾರೆ.

ಗುರುಕುಲದ ವಿಶಾಲವಾದ ಸಭಾಭವನ, ಅದಕ್ಕೆ ಹೊಂದಿಕೊಂಡಿ ರುವ ಶಾಸ್ತ್ರಪ್ರವಚನ ಕೊಠಡಿಗಳು ಬೇರೆಬೇರೆ ವಿಂಗಡಿಸಲ್ಪಟ್ಟಿವೆ. ಸಂಗೀತ ನೃತ್ಯ, ಲಲಿತಕಲೆಗಳ ವಿಭಾಗಗಳಲ್ಲಿ ಪರಿಣತೆಯರಾದ ವಿದುಷಿಯರು, ಅವ ರಿಗಾಗಿ ಕಟ್ಟಿಸಿರುವ ನಿವಾಸಗಳಲ್ಲಿ ವಾಸವಾಗಿದ್ದು ಗುರುಕುಲದಲ್ಲಿ ವಸತಿ ಸೌಕರ್ಯ ಪಡೆದಿರುವ ಕನ್ಯಾಮಣಿಯರಿಗೆ ಶಿಕ್ಷಣ ಕೊಡುತ್ತಾರೆ. ಕನ್ಯೆ ಯರು ವಯಸ್ಸು ಎಂಟರಿಂದ ಹದಿನೆಂಟು ವಯಸ್ಸಿನವರೆಗೆ ಹತ್ತುವರ್ಷ ಗಳ ಕಾಲ ಇಲ್ಲಿ ಶಿಕ್ಷಣ ಪಡೆದು ಹಿಂದಿರುಗುತ್ತಾರೆ. ವಿದ್ಯಾಪೀಠದಲ್ಲಿ ಓದುವವರಿಗೆ ಅನುಕೂಲವಾದ ಆಸ್ಯಂದಿಕೆ, (ಕುರ್ಚಿ) ಚತುಷ್ಪಾದ ಪೀಠ (ಟೇಬಲ್) ಲೇಖನಸಾಮಗ್ರಿಗಳು ಒದಗಿಸಲ್ಪಡುತ್ತವೆ.

ಗುರುಕುಲಕ್ಕೆ ಅನತಿದೂರದಲ್ಲಿ ಅಧ್ಯಾಪಿಕೆಯರ ನಿವಾಸಗಳಿವೆ. ಕನ್ಯೆಯರಿಂದಲೇ ಅಭ್ಯಸಿಸಲ್ಪಟ್ಟು ಪ್ರದರ್ಶಿಸುವ ನೃತ್ತ-ನೃತ್ಯ ಸಂಗೀತ ಗಳ ರಂಗಮಂದಿರವೂ ಸಭಾಭವನಕ್ಕೆ ಹೊಂದಿಕೊಂಡಿದೆ.

ಗಂಗಾತಟದ ಮೇಲೆ ಸಾಲುಸಾಲಾಗಿ ನಿರ್ಮಿತವಾಗಿರುವ ಕನ್ಯೆಯರ ಸ್ನಾನಘಟ್ಟ ನೋಡತಕ್ಕದ್ದು. ಬಚ್ಚಲುಗಳು ಬೇರೆಬೇರೆ. ಶೌಚಾಲಯ ಬೇರೆಬೇರೆ. ಮಿಾಯಲು ಯೋಗ್ಯವಾದ ಸ್ನಾನದ ಬಂಧೂರ ಕೊಠಡಿಗಳು ಸಜ್ಜಿತವಾಗಿವೆ. ಅದಕ್ಕೆ ಹೊಂದಿಕೊಂಡಂತೆ ಕನ್ಯೆಯರೇ ಬೀಜನೆಟ್ಟು ನೀರೆರೆದು ಬೆಳೆಸಿದ ಫಲ-ಪುಷ್ಪವಾಟಿಕೆ ಮನೋಹರವಾಗಿದೆ. ಬಣ್ಣ-ಬಣ್ಣದ ಮೊಲ್ಲೆ, ಮಲ್ಲಿಗೆ, ಜಾಜಿ ಸಂಪಿಗೆ, ಸೇವಂತಿಗೆ ಹೂಗಿಡಗಳು ಮಾವು, ಕಿತ್ತಳೆ, ಸೇಬು, ಹಲಸು ಮುಂತಾದ ಫಲವೃಕ್ಷಗಳು ಫಲಭರಿತವಾಗಿ ನಯನ ಮನೋಹರವಾಗಿವೆ.

ಕಾವ್ಯ, ನಾಟಕಗಳ ಪ್ರದರ್ಶನ, ಚಿತ್ರಕಲೆಗಳ ವಿನ್ಯಾಸಗಳಲ್ಲಿ ನುರಿತ ಚಿತ್ರಕಲಾ ನಿಪುಣೆಯರು ರಚಿಸಿದ ವಿವಿಧ-ಚಿತ್ರಪಟಗಳು ಗುರುಕುಲದ ಭಿತ್ತಿಗಳನ್ನು ಅಲಂಕರಿಸಿವೆ.

ವಿದ್ಯಾಪೀಠದಲ್ಲಿ ತರ್ಕ, ವ್ಯಾಕರಣ, ಛಂದಸ್ಸು ಅಲಂಕಾರವಿಭಾಗಗಳು, ಚಾರ್ವಾಕ, ಜೈನ, ಬೌದ್ಧ, ಸಾಂಖ್ಯ ಯೋಗ (ಪಾತಂಜಲ), ಗೌತಮ ದರ್ಶನಗಳು, ಆನ್ವೀಕ್ಷಕೀ, ದಂಡನೀತಿ, ಧನುರ್ವೇದ, ಆಯುರ್ವೇದ, ಅಶ್ವಹೃದಯ, ಗಜಹೃದಯ, ಪಾಕಶಾಸ್ತ್ರ ಮುಂತಾದ ಶಿಕ್ಷಣ ವಿಭಾಗಗಳಿವೆ.

ವೇದಾಂತ ದರ್ಶನದಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿ ವಿಶಿಷ್ಟಾದ್ವೈತ ವಿಭಾಗಗಳಿವೆಯಲ್ಲದೆ ತಂತ್ರಶಾಸ್ತ್ರದ ವಿವಿಧ ಪ್ರಭೇದಗಳು ಶಿಕ್ಷಿಸಲ್ಪಡುತ್ತವೆ.

ವಿದ್ಯಾಪೀಠಕ್ಕೆ ಅನತಿದೂರದಲ್ಲಿ ವಿದ್ವಾಂಸರ ನಿವಾಸಗಳಿವೆ. ವಾಟಿಕೆಯ ಬಲಗಡೆಯ ಸಾಲಿನಲ್ಲಿ ಮೊದಲ ನಿವಾಸ ವ್ಯಾಕರಣದ ಸಹಾಯೋಪಾಧ್ಯಾಯರಾದ ವೇ॥ ಶಿವಶಂಕರಾಧ್ಯರದು. ಎರಡನೆಯದು ಪದವಾಕ್ಯ ಪ್ರಮಾಣ ಪ್ರವೀಣರಾದ ವಾಮನಚರಣಭಟ್ಟಾಚಾರ್ಯರದು. ಅದರ ಎಡಗಡೆಗಿರುವುದು ವ್ಯಾಕರಣ ಪ್ರಾಚಾರ್ಯರಾದ ವಿದ್ಯಾವಿಭೂಷಣ ಶರಭಾರಾಧ್ಯರದು. ಅದರ ಮುಂದಿನದೇ ದರ್ಶನ ವಿಭಾಗದ ಪ್ರಾಚಾರ್ಯರಾದ ಚನ್ನಕೇಶವ ಭಟ್ಟರದು. ಮುನ್ಮುಂದಿನವು ವಿದ್ಯಾಪೀಠದಲ್ಲಿ ಬೇರೆ ಬೇರೆ ಶಾಸ್ತ್ರವಿಭಾಗಗಳ ಪ್ರಾಚಾರ್ಯರಾದ ದ್ರಾಕ್ಷಾರಾಮದ ಭೀಮನ ಪಂಡಿತ, ವೇದಾಂತ ಪ್ರಾಚಾರ್ಯ ಸೂರ್ಯಪ್ರಕಾಶ ಶಾಸ್ತ್ರಿ, ಉದ್ಭಟಾರಾಧ್ಯ, ಕೋಟಿಪಲ್ಲಾರಾಧ್ಯ, ಭೈರವಾರಾಧ್ಯ ಮುಂತಾದ ಮಹಾ ವಿದ್ವಾಂಸರು ಉಳಿದ ನಿವಾಸಗಳಲ್ಲಿ ನೆಲೆಸಿದ್ದಾರೆ.



## ೧೩

# ಶಿಕ್ಷಣ ಸೋಪಾನ

## ೧

ವಿದ್ಯಾಪೀಠದ ಎಲ್ಲ ಶಾಖೆಗಳ ಶಿಕ್ಷಣವೂ ವೈಶಾಖ ಶು॥ ಬಿದಿಗೆ ಸೋಮವಾರ ಬೆಳಿಗ್ಗೆ ಹತ್ತು ಗಂಟೆಗೆ ಪ್ರಾರಂಭವಾಗಬೇಕೆಂದು ಮೊದಲೇ ನಿರ್ಧರವಾಗಿತ್ತು.

ಶಾಸ್ತ್ರಕಕ್ಷ್ಯೆಗೆ ಸೇರುವ ಮುನ್ನ ಶಂಭುಭಟ್ಟರು ಶ್ರೀಪತಿಯನ್ನು ಯಾವ ಶಾಸ್ತ್ರಕ್ಕೆ ಸೇರಿಸಬೇಕೆಂದು ಮಂಚಣ್ಣನೊಡನೆ ಸಮಾಲೋಚಿಸಿದ್ದರು. ಮಂಚಣ್ಣ ಹೇಳಿದ, "ಅಪ್ಪಾಜಿ, ಶ್ರೀಪತಿಯು ಈಗಾಗಲೇ ಅಲಂಕಾರ ಶಾಸ್ತ್ರದ ಕಾವ್ಯ, ನಾಟಕ ಮತ್ತು ಅದಕ್ಕೆ ಸಂಬಂಧಿಸಿದ ಛಂದಸ್ಸು, ಅಲಂಕಾರಗಳನ್ನಲ್ಲದೆ ರಸ-ಭಾವಾದಿಗಳನ್ನೆಲ್ಲ ಕರಗತ ಮಾಡಿಕೊಂಡಿದ್ದಾನೆ. ಮುಂದೆ ಅವನು ಪ್ರವೇಶಿಸಬೇಕಾದದ್ದು ದರ್ಶನವಿಭಾಗ. ಅದಕ್ಕೆ ಮುಖ್ಯವಾಗಿ ಬೇಕಾದದ್ದು ಪ್ರಾಚೀನ ಮತ್ತು ನವೀನ ನ್ಯಾಯ ಶಾಸ್ತ್ರ. ಇವೆರಡೂ ಸೇರಿ ತರ್ಕವೆನಿಸಿವೆ. ಆದರೆ ವ್ಯಾಕರಣ ಪರಿಜ್ಞಾನವಿಲ್ಲದೆ ತರ್ಕವು ಕೈವಶವಾಗದು. ಯಾವುದನ್ನು ನಿರ್ಧರಿಸಬೇಕಾದರೂ ಪದ ಪರಿಷ್ಕಾರ ಅತ್ಯಗತ್ಯ. ಆದ್ದರಿಂದಲೇ ದಾರ್ಶನಿಕರ 'ಕಾಣಾದಂ ಪಾಣಿನೀಯಂ ಚ ಸರ್ವಶಾಸ್ತ್ರೋಪಕಾರಕಂ' ಎಂಬ ಮಾತು ಜನಜನಿತವಾಗಿಯೇ ಇದೆ. ಆಲಂಕಾರಿಕರಂತೂ 'ಬುಧರೆಂದರೆ ವೈಯ್ಯಾಕರಣರೆ' ಎಂದು ಅರ್ಥವಿಸಿದ್ದಾರೆ. ಈ ಎಲ್ಲ ಕಾರಣಗಳಿಂದ ಶ್ರೀಪತಿ ಮೊದಲು ವ್ಯಾಕರಣ ಕಕ್ಷ್ಯೆಗೆ ಸೇರಲಿ. ಮೇಲಾಗಿ ಅವನು ಈಗಾಗಲೇ ಅಷ್ಟಾಧ್ಯಾಯ ಸೂತ್ರಪಾಠವನ್ನು ಕಂಠಸ್ಥವಾಗಿ ಮಾಡಿಕೊಂಡಿದ್ದಾನೆ" ಎಂದ.

ಆದರಂತೆ ಶಂಭುಭಟ್ಟರು ಶ್ರೀಪತಿಯನ್ನು ವ್ಯಾಕರಣಶಾಸ್ತ್ರ ಪ್ರಾಚಾರ್ಯರಾದ ಶರಭಾರಾಧ್ಯರ ತರಗತಿಗೆ ಸೇರಿಸಿದರು.

ಶ್ರೀಪತಿ ವೈದಿಕ ಪದ್ಧತಿಯಂತೆ ತನ್ನ ಪ್ರವರವನ್ನು ಹೇಳಿ ಗುರುವಿನ ಚರಣಗಳಿಗೆ ವಿಧ್ಯುಕ್ತವಾಗಿ ಪ್ರಣಾಮ ಮಾಡಿದ. ಶರಭಾರಾಧ್ಯರು ಶ್ರೀಪತಿಯ ಗುರುಭಕ್ತಿ, ವಿನಯ ಮುಂತಾದ ಸದ್ಗುಣಗಳಿಗೆ ಬೆರಗಾದರು. ಅವರು ಪ್ರಸನ್ನರಾಗಿ ಶ್ರೀಪತಿಯನ್ನು ಶಿಷ್ಯನನ್ನಾಗಿ ಪರಿಗ್ರಹಿಸಿ ; ಶಾಸ್ತ್ರವನ್ನು ಆರಂಭಿಸಿದರು. ಶಂಭುಭಟ್ಟರು ಮನೆಗೆ ಹಿಂದಿರುಗಿದರು.

ಪಾಣಿನಿಯ ಅಷ್ಟಾಧ್ಯಾಯ ಸೂತ್ರಗಳ ಮೇಲೆ ಪತಂಜಲಿ ಮಹರ್ಷಿಗಳು ಬರೆದಿರುವ ಮಹಾಭಾಷ್ಯವೇ ಶ್ರೀಪತಿಯ ಶಾಸ್ತ್ರಾರಂಭದ ನಾಂದಿಯಾಯಿತು.

"ಓಂ ನಮಃ ಪಾಣಿನಿ ಕಾತ್ಯಾಯನ ಪತಂಜಲಿಭ್ಯೋ ವಿದ್ಯಾ ಸಂಪ್ರದಾಯಕರ್ತೃಭ್ಯೋ ಮಹದ್ಭ್ಯೋ ನಮೋ ಗುರುಭ್ಯಃ" ಎಂದು ಗುರುಗಳು ಉಚ್ಚರಿಸಿದೊಡನೆಯೇ ಶ್ರೀಪತಿಯು ಎದ್ದು ನಿಂತು ಕೈಜೋಡಿಸಿ, ಮುನಿತ್ರಯಕ್ಕೆ ವಂದಿಸಿ, ಮತ್ತೆ ವಿದ್ಯಾಗುರುವರ್ಯರ ಅಡಿದಾವರೆಗೆ ಎರಗಿ ಏಕಾಗ್ರತೆಯಿಂದ ಪದ್ಮಾಸನದಲ್ಲಿ 'ಸಮಶರೀರಿ' (ನೇರವಾಗಿ)ಯಾಗಿ ಕುಳಿತು ನಾಸಾಗ್ರದಲ್ಲಿ ದೃಷ್ಟಿಯಿಟ್ಟು—

1 ಯೇನಾಕ್ಷರಸಮಾಮ್ನಾಯಮಧಿಗಮ್ಯ ಮಹೇಶ್ವರಾತ್ ।
ಕೃತ್ಸ್ನಂ ವ್ಯಾಕರಣಂ ಪ್ರೋಕ್ತಂ ತಸ್ಮೈ ಪಾಣಿನಯೇ ನಮಃ ॥
2 ಯೇನ ಧೌತಾ ಗಿರಃ ಪುಂಸಾಂ ವಿಮಲೈಃ ಶಬ್ದವಾರಿಭಿಃ ।
ತಮಶ್ಚಾಜ್ಞಾನಜಂ ಭಿನ್ನಂ ತಸ್ಮೈ ಪಾಣಿನಯೇ ನಮಃ ॥

---

1 "ಅಕ್ಷರ ಸಮಾಮ್ನಾಯವನ್ನು ಮಹೇಶ್ವರನಿಂದ ಅರಿತು ಸಮಸ್ತ ವ್ಯಾಕರಣವನ್ನು ನಿರೂಪಿಸಿದ ಪಾಣಿನಿಗೆ ನಮಸ್ಕಾರ !"

2 "ನಿರ್ಮಲವಾದ ಶಬ್ದ ಜಲದಿಂದ ಮಾನವರ ಮಾತು ಯಾರಿಂದ ತೊಳೆಯಲ್ಪಟ್ಟು ಅಜ್ಞಾನದಿಂದ ಉದಿಸಿದ ತಮಸ್ಸು ನಾಶವಾಯಿತೋ ಆ ಪಾಣಿನಿಗೆ ನಮಸ್ಕಾರ !"

3 ವಾಕ್ಯಕಾರಂ ವರರುಚಿಂ ಭಾಷ್ಯಕಾರಂ ಪತಂಜಲಿಂ
ಪಾಣಿನಿಂ ಸೂತ್ರಕಾರಂ ಚ ಪ್ರಣತೋಽಸ್ಮಿ ಮುನಿತ್ರಯಂ ॥

ಎಂಬ ಮುನಿತ್ರಯಕ್ಕೆ ವಂದಿಸಿ—

೧) ಅ ಇ ಉ ಣ್
೨) ಋ ಲೃ ಕ್
೩) ಏ ಓ ಙ್
೪) ಐ ಔ ಚ್
೫) ಹ ಯ ವ ರ ಟ್
೬) ಲ ಣ್
೭) ಞ ಮ ಙ ಣ ನ ಮ್
೮) ಝ ಭ ಞ್
೯) ಘ ಢ ಧ ಷ್
೧೦) ಜ ಬ ಗ ಡ ದ ಶ್
೧೧) ಖ ಫ ಛ ಠ ಥ ಚ ಟ ತ ವ್
೧೨) ಕ ಪ ಯ್
೧೩) ಶ ಷ ಸ ರ್
೧೪) ಹ ಲ್

ಇತಿ ಮಾಹೇಶ್ವರಾಣಿ ಪ್ರತ್ಯಾಹಾರ ಸೂತ್ರಾಣಿ ಅಣಾದಿ ಸಂಜ್ಞಾರ್ಥಾನಿ"* ಎಂದು ಹೇಳಿ ಕಣ್ಣು ತೆರೆದ.

ಆಚಾರ್ಯರಿಗೆ ಶ್ರೀಪತಿಯ ಸಂಪ್ರದಾಯಶೀಲತೆ ಮತ್ತು ಸಮಯ ಪ್ರಜ್ಞೆಗಳನ್ನು ಕಂಡು ತುಂಬಾ ಸಂತೋಷವಾಯಿತು. ಪ್ರಾಚಾರ್ಯರು ಮಹಾಭಾಷ್ಯದ ಮೊದಲಲ್ಲಿ ಬರುವ—

---

3 ವಾಕ್ಯಕಾರ ವರರುಚಿ, ಭಾಷ್ಯಕಾರ ಪತಂಜಲಿ ಮತ್ತು ಸೂತ್ರಕಾರ ಪಾಣಿನಿ; ಈ ಮುನಿತ್ರಯಕ್ಕೆ ನಮಸ್ಕರಿಸುತ್ತೇನೆ.

* ಇವು ಅಣ್ ಮೊದಲಾದ ಸಂಜ್ಞಾರ್ಥವುಳ್ಳ ಮಹೇಶ್ವರನ ಪ್ರತ್ಯಾಹಾರ ಸೂತ್ರಗಳು,

"ಮಂಗಳಾದೀನಿ ಮಂಗಳ ಮಧ್ಯಾನಿ ಮಂಗಳಾಂತಾನಿ ಶಾಸ್ತ್ರಾಣಿ ಪ್ರಥಂತೇ ವೀರಪುತ್ರಾಣಿ ಆಯುಷ್ಮತ್ಪುರುಷಾಣಿ ಚ ಭವಂತಿ ಅಧ್ಯೇತಾರಶ್ಚ ಬುದ್ಧಿ ಯುಕ್ತಾಯಥಾ ಸ್ಯುಃ"

—ಎಂದು ಉಚ್ಚರಿಸಿ, ಅಲ್ಲಿ ಬರುವ ಮಂಗಳವಾದವನ್ನು ಕುರಿತು ಭಾಷ್ಯಾರ್ಥವನ್ನು ವಿವರಿಸಿದರು. ಶ್ರೀಪತಿ ಗುರುಗಳನ್ನು ಕುರಿತು—

"ಗುರುಗಳೇ, ಮಾಹೇಶ್ವರ ಸೂತ್ರಗಳಿಗೆ ಮಹರ್ಷಿ ಪಾಣಿನಿಯು ಶಬ್ದ ಶಾಸ್ತ್ರದ ಪರವಾಗಿ ತನ್ನ ಅಷ್ಟಾಧ್ಯಾಯ ಸೂತ್ರಪಾಠವನ್ನು ಆರಂಭಿಸಿ ದನಲ್ಲವೆ ?" ಎಂಡು ಪ್ರಶ್ನಿಸಿದ. ಗುರುಗಳು—

"ಹೌದು, ಯಾವುದೇ ಶಾಸ್ತ್ರಕ್ಕೂ ಮೊದಲು ಶಬ್ದಶುದ್ಧಿ ಅಗತ್ಯ. ಆದ್ದರಿಂದಲೇ ಪಾಣಿನಿಯು ಮಾಹೇಶ್ವರಸೂತ್ರಗಳಿಗೆ ಶಬ್ದಶಾಸ್ತ್ರದ ಪರವಾಗಿ ವ್ಯಾಖ್ಯಾನ ಮಾಡಿದ್ದು."

"ಆದರೆ ಗುರುಗಳೆ, ಪಾಣಿನಿಯು ಶಬ್ದ ಶಾಸ್ತ್ರದ ಪರವಾಗಿ ವ್ಯಾಖ್ಯಾನಿಸುವ ಮೊದಲು ಅದೇ ಮಾಹೇಶ್ವರ ಸೂತ್ರಗಳಿಗೆ ಮತ್ತೆ ಯಾರಾದರೂ ವ್ಯಾಖ್ಯಾನ ಮಾಡಿರುವರೆ ?"

"ಪಾಣಿನಿಯಲ್ಲದೆ ಬೇರೆಯವರಾರೂ ಆ ಸೂತ್ರಗಳಿಗೆ ವ್ಯಾಖ್ಯಾನ ಬರೆದಂತೆ ನನಗೆ ಕಂಡುಬಂದಿಲ್ಲ."

"ಹಾಗಾದರೆ ಮಹೇಶ್ವರನ ಈ ಸೂತ್ರಗಳ ಉಗಮಕ್ಕೆ ಕಾರಣ ಏನು ?"

"ಆ ವಿಷಯ ಮಹಾ ಭಾಷ್ಯದ ವಿಷಯವಲ್ಲ!"

"ಗುರುಗಳು ಅನ್ಯಥಾ ಭಾವಿಸಬಾರದು ! ಮಹಾಭಾಷ್ಯವು ಪಾಣಿನಿಯ ಅಷ್ಟಾಧ್ಯಾಯ ಸೂತ್ರಪಾಠದ ಮೇಲೆ ರಚಿತವಾದದ್ದು. ಆದರೆ ಅಷ್ಟಾಧ್ಯಾಯದ ಮೂಲ ಮಾಹೇಶ್ವರ ಸೂತ್ರಗಳಲ್ಲವೆ ? ಅದರಿಂದ ತಮ್ಮನ್ನು ಪ್ರಶ್ನಿಸಬೇಕಾಯಿತು. ಪ್ರಕೃತ ಮಾಹೇಶ್ವರ ಸೂತ್ರಗಳಿಗೆ ಪಾಣಿನಿಯ ಗುರು ಆಚಾರ್ಯ ನಂದಿಕೇಶ್ವರನು ಅಧ್ಯಾತ್ಮ ತತ್ತ್ವಶಾಸ್ತ್ರದ

ಪರವಾಗಿ ಕಾರಿಕಾರೂಪವಾಗಿ ವ್ಯಾಖ್ಯಾನಿಸಿರುವನೆಂದೂ ಅವೇ ನಂದಿಕೇಶ್ವರಕಾರಿಕೆಗಳೆಂದೂ ನಮ್ಮ ತಂದೆಯವರಿಂದ ಕೇಳಿದ್ದೆ" ಎಂದ ಶ್ರೀಪತಿ ವಿನಯದಿಂದ.

"ಅವುಗಳ ಆನುಪೂರ್ವಿ ಗೊತ್ತಿದ್ದರೆ ಹೇಳು!" ಎಂದರು ಆರಾಧ್ಯರು. ಶ್ರೀಪತಿಯು

ನೃತ್ತಾವಸಾನೇ ನಟರಾಜರಾಜೋ ನನಾದ ಢಕ್ಕಾಂ ನವಪಂಚವಾರಂ ।
ಉದ್ಧರ್ತುಕಾಮಃ ಸನಕಾದಿಸಿದ್ಧಾನ್ ಏತದ್ವಿಮರ್ಶೇ
ಶಿವಸೂತ್ರಜಾಲಮ್ ॥೧॥

ಎಂದು ಆರಂಭಿಸಿ.... ........................

ತತ್ತ್ವಾತೀತಃ ಪರಃ ಸಾಕ್ಷೀ ಸರ್ವಾನುಗ್ರಹವಿಗ್ರಹಃ ।
ಅಹಮಾತ್ಮಾ ಪರೋ ಹಲ್ ಸ್ಯಾಮಿತಿ ಶಂಭುಃ ತಿರೋದಧೇ ॥೨೭॥

ಎಂದು ೨೭ ಕಾರಿಕೆಗಳನ್ನು ಗಂಭೀರವಾಗಿ ಉಚ್ಚರಿಸಿದ ಶ್ರೀಪತಿ. ಶ್ರೀಪತಿಯ ಸ್ಮರಣ ಶಕ್ತಿ, ಗುರುಹಿರಿಯರಲ್ಲಿ ಅವನಿಗಿರುವ ಸಹಜ ಭಕ್ತಿ ಶ್ರದ್ಧೆಗಳಿಗೆ ಬೆರಗಾದರು ಗುರು.

"ಇದಲ್ಲದೆ ವ್ಯಾಕರಣದ ಬಗೆಗೆ ಮತ್ತೆ ಯಾವುದಾದರೂ ಪಾಠ ಆಗಿದೆಯೆ ?"

"ಪಾಣಿನೀಯ ಧಾತುಪಾಠ, ಪಾಣಿನೀಯ ಶಿಕ್ಷಾ ಮತ್ತು ಸ್ವರ ವೈದಿಕ ಪ್ರಕ್ರಿಯೆಗಳು ಪಾಠವಾಗಿವೆ ?"

"ಓಹೋ ಹಾಗಾದರೆ ನಿನಗೆ ವೇದ ಮಂತ್ರಾರ್ಥಗಳ ಬಗೆಗೆ ಪಾಠವಾಗಿರುವುದು ವೈದಿಕ ವ್ಯಾಕರಣಕ್ಕೆ ಉಪಯುಕ್ತವೆ !" ಎಂದು ಪ್ರಾಧ್ಯಾಪಕರು ಅದೆಲ್ಲವನ್ನು ಶ್ರೀಪತಿಯಿಂದ ಹೇಳಿಸಿ ಅವನನ್ನು ಪ್ರಶಂಸಿಸಿದರು.

ಮನೆಗೆ ಬಂದ ಶ್ರೀಪತಿಯಿಂದ ತರಗತಿಯಲ್ಲಿ ನಡೆದ ಪ್ರಸಂಗವನ್ನು ಕೇಳಿ ಎಲ್ಲರೂ ಅವನನ್ನು ಅಭಿನಂದಿಸಿದರು. ಶ್ರೀಪತಿಯ ಬಗೆಗೆ ಶ್ರೀದೇವಿ ಮತ್ತು

ಕನಕಲತೆಯರಿಗೆ ಆದ ಆನಂದ ಅವನಲ್ಲಿದ್ದ ಅವರ ಪ್ರೀತಿಯನ್ನು ಇಮ್ಮಡಿಸಿತ್ತು.

೨

ಅದೇ ದಿನ ಸಂಜೆ ಆಚಾರ್ಯ ಶರಭಾರಾಧ್ಯರ ಮನೆಯಲ್ಲಿ ಚಿ|| ಗಳಾದ ಮಂಚಣ್ಣ ಮತ್ತು ವಿಶಾಲಾಕ್ಷಿಯರ ವಿವಾಹ ನಿಶ್ಚಯಕಾರ್ಯ ಏರ್ಪಟ್ಟಿತ್ತು.

ಮುದಿಗೊಂಡ ಮತ್ತು ಬೆಜವಾಡಗಳಿಂದ ದೇಶಿಕ ದಂಪತಿಗಳು ಮತ್ತು ಗುರುಲಿಂಗಾರಾಧ್ಯ ದಂಪತಿಗಳಲ್ಲದೆ ವಿದ್ಯಾಪೀಠದ ಎಲ್ಲ ವಿದ್ವಾಂಸರು ಬಂಧುಗಳು ಶರಭಾರಾಧ್ಯರ ಮನೆಯಲ್ಲಿ ಕಿಕ್ಕಿರಿದು ನೆರೆದಿದ್ದರು.

ಶರಭಾರಾಧ್ಯರು ಈ ದಿನ ಶ್ರೀಪತಿಗೆ ವ್ಯಾಕರಣ ಪಾಠವನ್ನು ಆರಂಭಿಸಿದುದನ್ನು ಪ್ರಸ್ತಾಪಿಸಿ ಅವನ ವಿನಯಾದಿ ಗುಣಗಳನ್ನು, ಸೂಕ್ಷ್ಮ ಬುದ್ಧಿವೈಭವವನ್ನು ಬಹುವಾಗಿ ಪ್ರಶಂಸಿಸಿದರು.

"ಗುರುಗಳೇ, ತಮ್ಮ ಶಿಷ್ಯನನ್ನು ಹೀಗೆ ಹೊಗಳುವುದು ಬೇಡ!" ಎಂದು ದೇಶಿಕರು ಮೊಮ್ಮಗನ ಪ್ರಗತಿಯ ದೃಷ್ಟಿಯಿಂದ ನಿವೇದಿಸಿದರು. ನೆರೆದಿದ್ದ ವಿದ್ವಾಂಸರೆಲ್ಲರೂ ಶ್ರೀಪತಿಯನ್ನು ಅಭಿನಂದಿಸಿದರು.

"ಮಹಾ ವಿದ್ಯಾಪೀಠದ ವ್ಯಾಕರಣ ಪ್ರಾಧ್ಯಾಪಕ ಭಾರದ್ವಾಜ ಗೋತ್ರದ ಶರಭಾರಾಧ್ಯರ ಪುತ್ರಿ ಚಿ|| ಸೌ|| ವಿಶಾಲಾಕ್ಷಿ ಎಂಬ ಕನ್ಯಾರತ್ನ ವನ್ನು ಅತ್ರಿಗೋತ್ರದ ಸೋಮಶಂಭುದೇಶಿಕರ ಪೌತ್ರ ಪ್ರಾ||ಶಂಭುಭಟ್ಟರ ಪುತ್ರ ಚಿ|| ರಾ|| ಮಂಚಣ್ಣ ಪಂಡಿತನಿಗೆ ಕೊಟ್ಟು ಈ ವಿವಾಹ ಮಹೋ ತ್ಸವವನ್ನು ಭಗವಾನ್ ವಿಶ್ವನಾಥನಆಲಯದ ಕಲ್ಯಾಣಮಂದಿರದಲ್ಲಿ ಇದೇ ವೈಶಾಖ ಶುದ್ಧ ದಶಮಿ ಬುಧವಾರ ತುಲಾಲಗ್ನದಲ್ಲಿ ನೆರವೇರಿಸತಕ್ಕದ್ದೆಂದು ಗುರು ಹಿರಿಯರು ನಿಶ್ಚಯಿಸಿದರು."

ಕೇವಲ ಎಂಟು ಹತ್ತು ದಿನಗಳ ಅಂತರದಲ್ಲಿ ಏರ್ಪಟ್ಟ ಮೊಮ್ಮಗನ ಲಗ್ನಕ್ಕೆ ಮತ್ತೆ ದೂರದ ಊರುಗಳಿಗೆ ಹೋಗಿ ಬರುವುದು ದುಸ್ತರವಾದುದರಿಂದ ಮುದಿಗೊಂಡ ಮತ್ತು ಬೆಜವಾಡಗಳ ಬಾಂಧವರು ಅಲ್ಲಿಯವರೆಗೆ ಕಾಶಿಯಲ್ಲಿ ಉಳಿಯಬೇಕು. ಸುತ್ತಮುತ್ತ ಪ್ರೇಕ್ಷಣೀಯ ಸ್ಥಳಗಳಿಗೆ ಹೋಗಿಬರುವ ವ್ಯವಸ್ಥೆ ಮಾಡಲಾಗುತ್ತದೆ. ಮಂಗಳ ಕಾರ್ಯ ಪೂರೈಸಿಕೊಂಡು ಹಿಂದಿರುಗಬೇಕೆಂದು ಶಂಭುಭಟ್ಟರು ಪ್ರಾರ್ಥಿಸಿದರು.

೩

ಮದುವೆ ಮುಗಿದ ಮಾರನೇ ದಿನ ಶಂಭು ಭಟ್ಟರ ಮನೆಯಲ್ಲಿ ಸಂಭ್ರಮದ ಸಮಾರಂಭ. ಮದುವೆಗೆ ಬಂದಿದ್ದ ಎಲ್ಲ ಬಂಧು-ಬಾಂಧವರೂ ಪ್ರಾಯಃ ಅಲ್ಲಿ ನೆರೆದಿದ್ದರು. ಅದೊಂದು ಸಂತೋಷ ಕೂಟ! ಅಥವಾ ಸಾಂಪ್ರದಾಯಿಕವಾಗಿ ಬೀಗರೂಟದ ಮಹಾ ಸಂಭ್ರಮ ಕೂಟ!

ಶರಭಾರಾಧ್ಯದಂಪತಿಗಳು ಸಾಲಂಕೃತಳಾದ ನವವಧು ವಿಶಾಲಾಕ್ಷಿಯನ್ನು ಖಾಸಾ ಬೀಗರಾಗಿರುವ ಶಂಭುಭಟ್ಟದಂಪತಿಗಳಿಗೆ ವಿಧ್ಯುಕ್ತವಾಗಿ ಹೆಣ್ಣೊಪ್ಪಿಸುವ ವಿಶೇಷ ಸಮಾರಂಭ!

ಆ ಸಂದರ್ಭದಲ್ಲಿ ಹೆಂಗೊರಳೊಂದು—

"ನಮ್ಮ ಮನೆಯಂಗಳದಿ ಅರಳಿದೀ ಹೂವನ್ನು
ನಿಮ್ಮ ಮಡಿಲೊಳಗಿಟ್ಟು ಮರಳುತಿಹೆವು;
ಸುಮ್ಮಾನದಿಂದಿದರ ಪರಿಮಳವ ತಣಿದೀಂಟಿ
ಕಮ್ಮನೆಯ ಮಕರಂದ ಸವಿಯಬನ್ನಿ ॥

ನಮ್ಮ ಮನೆಯೊಳು ಹುಟ್ಟಿ ಬೆಳೆದಿರುವ ಧೇನುವಿದು
ನೆಮ್ಮದಿಯ ಸುಧೆಯೀಂಟಿ ತಣಿಯಬನ್ನಿ;

ನಂದಿಕೇಶ್ವರನನುಲ ಕೃಪೆಯಾಂತು ನಿಮ್ಮ ಮನೆ
ನಂದಗೋಕುಲವಾಗಿ ನಲಿಯುತಿರಲಿ ||
ಸಂತಸದ ಕಡಲಿನಲಿ ತೇಲುತಿರುವೀ ನೌಕೆ
ದಂಪತಿಗಳಾಟದ ತೋಟವಾಗಿ ;
ಸಂಸಾರ ಸುಧೆಯಿಂಟಿ ಸಗ್ಗಿಗರು ಕರುಬುವೊಲು
ಬುವಿ ಸಗ್ಗವೆನೆ ಬಾಳಿ ಬೆಳಗುತಿರಲಿ ||"

ಎಂದು ಮಧುರವಾಗಿ ಹಾಡಿತು.

ವಿಶಾಲಾಕ್ಷಿ ಗುರು–ಹಿರಿಯರು ಅತ್ತೆ-ಮಾವ, ತಾಯಿ-ತಂದೆ ಮತ್ತು ಪತಿದೇವರಿಗೆ ವಂದಿಸಿದಳು. ಎಲ್ಲರೂ 'ಪುತ್ರವತೀ ಭವ' ಎಂದು ಹರಸಿದರು.

* * * *

ಸಿಹಿ ಕಹಿಗಳು ಬಾಳಿಗೊಂದು ಸೊಗಸು ! ಬೀಗರೂಟದ ತರುವಾಯ ನೆಂಟರಿಷ್ಟರು ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿದ್ದರು.

ದೇಶಿಕರು ಮತ್ತು ಆರಾಧ್ಯರು ವಿಶ್ರಾಂತಿಗಾಗಿ ಹೊರಟು ನಿಂತಿದ್ದರು. ಶ್ರೀಪತಿ ಅತ್ತೆ-ಮಾವಂದಿರ ಪಾದಗಳಿಗೆ ವಂದಿಸಿ, ಇಂದಿನಿಂದ ತಾನು ವಿದ್ಯಾಪೀಠದ ವಿದ್ಯಾರ್ಥಿನಿಲಯದಲ್ಲಿ ವಾಸ್ತವ್ಯ ಮಾಡಿ, ಓದು ಮುಗಿಸುವ ತನ್ನ ನಿರ್ಧಾರವನ್ನು ನಿವೇದಿಸಿದ.

ಒಲೆಯ ಮೇಲೆ ಕಾಯ್ದು ಉಕ್ಕೇರಿದ್ದ ಹಾಲು ಒಂದು ಹನಿ ಜಲ ಬಿಂದುವಿನಿಂದ ಒಮ್ಮಿಂಗೊಮ್ಮೆ ಸಪ್ಪನೆ ಇಳಿದಂತೆ ಭಟ್ಟರ ಮನೆ ನೀರವವಾಯಿತು ! ಶ್ರೀದೇವಿಯ ಕಣ್ಣು ತೇವವಾಯಿತು ! ಕನಕಾ ಒಂದು ಕ್ಷಣ ತಲೆ ತಗ್ಗಿಸಿದಳು. ಕಾಲ ಬೆರಳು ವಿರಹಗೀತೆ ಬರೆಯುತ್ತಿತ್ತು !

ಶಂಭು "ಅಪ್ಪ, ನಿನ್ನ ನಿರ್ಧಾರವನ್ನು ನಾವು ಬದಲಿಸಲು ಬಯಸುವುದಿಲ್ಲ. ಒಟ್ಟಿನಲ್ಲಿ ನಿನ್ನ ಗುರಿ ಸಾಧನೆಗೆ ಯಾವುದು ಹಿತವೋ ಅದನ್ನು ಮಾಡು!" ಎಂದರು. ಶ್ರೀಪತಿ ಎಲ್ಲರಿಂದ ಬೀಳ್ಕೊಂಡು ಅದೇ ದಿನ ವಿದ್ಯಾರ್ಥಿನಿಲಯ ಸೇರಿದ.

೪

ವ್ಯಾಕರಣ ಶಾಸ್ತ್ರ ಪ್ರಾಧ್ಯಾಪಕರು ಮದುವೆಯ ಗಡಿಬಿಡಿ ಮುಗಿದ ಮೇಲೆ ಶ್ರೀಪತಿಗೆ ಮಹಾಭಾಷ್ಯ ಪಾಠ ಪ್ರವಚನವನ್ನು ಆರಂಭಿಸಿದರು. 'ಎಳೆ ಸಿಕ್ಕರೆ ಹಚ್ಚಡವನ್ನೇ ಸೆಳೆದುಕೊಳ್ಳುವ' ಎಂಬ ಗಾದೆ ಶ್ರೀಪತಿಗೆ ಅನ್ವಯವಾಗುತ್ತಿತ್ತು. ಪಾಠ-ಪ್ರವಚನ ಕಾಲದಲ್ಲಿ ಶ್ರೀಪತಿ ಕೇಳುತ್ತಿದ್ದ ಅನೇಕ ಪ್ರಶ್ನೆಗಳಿಗೆ ಸಮಾಧಾನ ಹೇಳುವುದು ಪ್ರಾಧ್ಯಾಪಕರಿಗೂ ಕಷ್ಟ ವಾಗುತ್ತಿತ್ತು. ಅಂಥಸಮಯದಲ್ಲಿ ಶಿಷ್ಯ ಗುರುಗಳು ಹೇಳಬೇಕಾದ ಉತ್ತರ ವನ್ನು ಒಂದು ಸಲಹೆಯ ರೂಪದಲ್ಲಿ ತಾನೇ ಹೇಳಿ ಗುರುಗಳ ಪೇಚಾಟ ವನ್ನುಪರಿಹರಿಸುತ್ತಿದ್ದ. ಆಗ ಸಹೃದಯರಾದ ಪ್ರಾಚಾರ್ಯರು 'ಶಿಷ್ಯಾದಿಚ್ಛೇತ್ ಪರಾಜಯಂ' ಎಂಬುದನ್ನು ಉಲ್ಲೇಖಿಸಿ ಶಿಷ್ಯನ ಬೆನ್ನು ತಟ್ಟುತ್ತಿದ್ದರು. ಮೊದಲ ವರ್ಷದ ಕಡೆಯಲ್ಲಿ ಒಂದು ದಿನ ಪ್ರಾಚಾರ್ಯರು–

"ಅಪ್ಪಾ, ಶ್ರೀಪತಿ ನೀನು ಒಂದು ವರ್ಷದಿಂದ ನಮ್ಮಲ್ಲಿ ಗಳಿಸಿರುವ ಪಾಂಡಿತ್ಯಗಣನೀಯ. ನೀನಿನ್ನು ವ್ಯಾಕರಣದಲ್ಲಿ ಚಿಂತನವನ್ನು ಮುಂದು ವರಿಸಬೇಕಲ್ಲದೆ ಪಾಠವು ಅನಗತ್ಯ. ಆದರೆ ನೀನು ಬೇರೆ ಶಾಸ್ತ್ರಗಳಿಗೆ ಸೇರಿ ದರೂ ಕೂಡ ವ್ಯಾಕರಣದ ಪ್ರವಚನವನ್ನು ಬಿಡಬಾರದು ; ಏಕೆಂದರೆ 'ಮಾಸಾದೂರ್ಧ್ವಮವೈಯಾಕರಣಃ ಕ್ಷಣಾದೂರ್ಧ್ವಮತಾರ್ಕಿಕಃ' (ವ್ಯಾಕರಣಕ್ಕೆ ಒಂದು ತಿಂಗಳು, ತರ್ಕಕ್ಕೆ ಒಂದುಕ್ಷಣ) ಎಂಬ ನುಡಿಯಂತೆ ಶಾಸ್ತ್ರವು ಆಲೋಡನವಿಲ್ಲದಿದ್ದರೆ ಮಲಿನವಾಗುತ್ತದೆ" ಎಂದು ಎಚ್ಚರಿಸಿ ಶ್ರೀಪತಿಯನ್ನು ಬೀಳ್ಕೊಟ್ಟರು.

ಮರುವರ್ಷ ಶಂಭು ಭಟ್ಟರು ಶ್ರೀಪತಿಯನ್ನು ಮಹಾವಿದ್ಯಾಪೀಠದ ಪ್ರಾಂಶುಪಾಲರೂ, ನ್ಯಾಯ ವೈಶೇಷಿಕ ಪ್ರಾಚಾರ್ಯರೂ ಆದ ವಾಮನ ಚರಣ ಭಟ್ಟಾಚಾರ್ಯರ ತರಗತಿಗೆ ಕರೆದೊಯ್ದು ನ್ಯಾಯ ವೈಶೇಷಿಕ ತರಗತಿಗೆ ಸೇರಿಸಿದರು.

ವಿದ್ಯಾವಾಚಸ್ಪತಿ ವಾಮನ ಚರಣ ಭಟ್ಟಾಚಾರ್ಯರಿಗೆ ಪದವಾಕ್ಯ ಪ್ರಮಾಣಜ್ಞ ಎಂಬ ಬಿರುದಿತ್ತು. ಎಂದರೆ ಅವರು ವ್ಯಾಕರಣ

ಮೀಮಾಂಸ ಮತ್ತು ತರ್ಕ ಶಾಸ್ತ್ರಗಳಲ್ಲಿ ಪಾರಂಗತರು. ಶ್ರೀಪತಿಯು ಅವರಲ್ಲಿ ಶಿಷ್ಯನಾಗಿ ಸೇರಿದುದಕ್ಕೆ ಹೆಮ್ಮೆ ಪಡುತ್ತಿದ್ದ. ಆತ ಅಲ್ಲಿ ಅಭ್ಯಾಸ ಮಾಡಿದ ಗ್ರಂಥಗಳ ಪಟ್ಟಿ ಹೀಗಿತ್ತು—

೧ ಪೂರ್ವ ಮೀಮಾಂಸಾ-ವ್ಯಾಸಮುನಿಕೃತ ವ್ಯಾಖ್ಯಾಸಹಿತ

೨ ವೈಶೇಷಿಕದರ್ಶನ- ಗೌತಮ ಮುನಿಕೃತ ಭಾಷ್ಯಸಹಿತ

೩ ನ್ಯಾಯಶಾಸ್ತ್ರ ವಾತ್ಸ್ಯಾಯನ ಮುನಿಕೃತ ಭಾಷ್ಯಸಹಿತ

೪ ಪಾತಂಜಲ ಯೋಗಸೂತ್ರ ವ್ಯಾಸಮುನಿಕೃತ ಭಾಷ್ಯಸಹಿತ

೫ ಕಪಿಲಮುನಿ ಕೃತ ಸಾಂಖ್ಯ ದರ್ಶನ ಭಾಗುರಿ ವಿರಚಿತ ಭಾಷ್ಯ ಸಹಿತ

ಸುಮಾರು ಮೂರು ವರ್ಷಗಳ ಕಾಲ ತಮ್ಮಲ್ಲಿ ಶಿಷ್ಯವೃತ್ತಿಯನ್ನು ಸಾಂಗಗೊಳಿಸಿದ್ದ ಶ್ರೀಪತಿಯ ವಾದಕೌಶಲ, ವಾಕ್ಪಟುತ್ವ ಮತ್ತು ಸಮಯ ಪ್ರಜ್ಞೆಗಳನ್ನು ಮನಗಂಡಿದ್ದ ಪ್ರಾಚಾರ್ಯರು ಶಂಭುಭಟ್ಟರಿಗೆ- "ಸ್ವಾಮಿ, ಶ್ರೀಪತಿ ನಮ್ಮ ವಿದ್ಯಾಪೀಠದ ಒಂದು 'ವಿದ್ವತ್ ರತ್ನ'" ಎಂದು ಸೂಚಿಸಿದರು.

ನಾಲ್ಕನೇ ವರ್ಷ ಶ್ರೀಪತಿ ಮಹಾ ವಿದ್ಯಾಪೀಠದ ಉಪ ಪ್ರಾಂಶು ಪಾಲರೂ 'ವಿದ್ವತ್‌ಭಾಸ್ಕರ' ಎಂಬ ಬಿರುದಾಂಕಿತರೂ, ಜ್ಞಾನ-ವಯೋ ವೃದ್ಧರೂ ಆದ ಸೂರ್ಯಪ್ರಕಾಶ ಶಾಸ್ತ್ರಿಗಳ ಸನ್ನಿಧಿಯಲ್ಲಿ ವೇದಾಂತವನ್ನು ಅಭ್ಯಾಸಮಾಡಿದ. ಈ ಅವಧಿಯಲ್ಲಿ ಪ್ರಾಚಾರ್ಯರು ವೇದಾಂತಸೂತ್ರಗಳ ಮೇಲೆ ಶಂಕರ, ನೀಲಕಂಠ, ಶ್ರೀಕಂಠ, ಹರದತ್ತ ಮುಂತಾದ ಆಚಾರ್ಯರು ಬರೆದಿರುವ ಭಾಷ್ಯಗಳನ್ನು ತುಲನಾತ್ಮಕ ದೃಷ್ಟಿಯಿಂದ ವಿಮರ್ಶಿಸಿ ಬ್ರಹ್ಮ ಸೂತ್ರಗಳ ಭಾವವೈಭವವನ್ನು ಬೋಧಿಸುತ್ತಿದ್ದರು. ಇದರಿಂದ ಪ್ರಭಾವಿತನಾದ ಶ್ರೀಪತಿ ಈ ಭಾಷ್ಯಕಾರರ ಆಶಯಗಳನ್ನು ವಿಶ್ಲೇಷಿಸಿ ಬ್ರಹ್ಮಸೂತ್ರಗಳ ಮೇಲೆ ತಾನೇ ಒಂದು ಪ್ರಬಂಧವನ್ನು ಏಕೆ ಬರೆಯ

ಬಾರದು ? ಎಂದು ಪ್ರಶ್ನಿಸುತ್ತಿದ್ದ. ಅದನ್ನು ಅನುಮೋದಿಸಿ ಶಾಸ್ತ್ರಗಳು —

"ಶ್ರೀಪತಿ, ನಿನ್ನ ಆಶಯ ಸ್ತುತ್ಯವಾದದ್ದು. ಆದರೆ ಆ ಕೆಲಸಕ್ಕೆ ತೊಡಗುವ ಮುನ್ನ ವೇದಾಂತವೆನಿಸಿದ ಎಲ್ಲ ಉಪನಿಷತ್ತುಗಳನ್ನು ವಿಮರ್ಶಾತ್ಮಕ ದೃಷ್ಟಿಯಿಂದ ಅಭ್ಯಾಸ ಮಾಡಬೇಕು. ಅಲ್ಲದೆ ನೀನು ಬ್ರಹ್ಮಸೂತ್ರಗಳಿಗೆ ಬರೆಯುವ ಪ್ರಬಂಧದಲ್ಲಿ ನಾಲ್ಕೂ ವೇದಗಳ ಮಂತ್ರಗಳನ್ನು ಉದಾಹರಿಸಬೇಕಾಗುತ್ತದೆ. ಮಾತ್ರವಲ್ಲದೆ ಆ ಮಂತ್ರಗಳಿಗೆ ನೀನು ಹೇಳುವ ಅರ್ಥವನ್ನು ಸಮರ್ಥಿಸಲು ಪುರಾಣಗಳ ಸಮ್ಮತಿಯನ್ನು ಕೊಡಬೇಕು. ವೇದ ಮಂತ್ರಗಳನ್ನು ನಮ್ಮ ಮನಸ್ಸಿಗೆ ಬಂದಂತೆ ಅರ್ಥವಿಸುವ ಹಾಗಿಲ್ಲ. ಈ ದಿಶೆಯಲ್ಲಿ ಮಾರ್ಗದರ್ಶಕವಾದ ನುಡಿಯೊಂದು ಉಂಟು.

ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರತರೇದಿತಿ ।
ಇತಿಹಾಸ ಪುರಾಣಾಭ್ಯಾಂ ವೇದಾರ್ಥಮುಪಬೃಂಹಯೇತ್ ॥
ಯಶ್ಚತುರ್ವೇದವಿದ್ವಿದ್ವಾನ್ ಪುರಾಣಂ ವೇತ್ತಿ॥ ನಾರ್ಥತಃ ।
ತಂ ದೃಷ್ಟ್ವಾ ಭಯಮಾಪ್ನೋತಿ ಮಾಮಯಂ ಪ್ರತರೇದಿತಿ ॥

ಎಂದರೆ—"ಕೇವಲ ಪಾಂಡಿತ್ಯಬಲದಿಂದ ವೈದಿಕ ಪದಗಳಿಗೆ ಅರ್ಥವನ್ನು ಬರೆಯುವಾಗ ಪದಗಳನ್ನು ಹಿಂಜಿ ಹಿಂಜಿ ಹಿಂಸಿಸಿ ಅರ್ಥ ತೆಗೆವವನನ್ನು ಕಂಡರೆ ವೇದಮಾತೆ ಹೆದರುತ್ತಾಳೆ ! ಏಕೆಂದರೆ ಅಲ್ಪಶ್ರುತನಾದ ಇವನು ನನಗೆ ಅಪಚಾರ ಮಾಡುತ್ತಿರುವನಲ್ಲಾ !' ಎಂದು. ಆದ್ದರಿಂದ ಅಂಥವನು ಚತುರ್ವೇದ ವಿದ್ವಾಂಸನಾದರೂ ಪುರಾಣವನ್ನು ಅರ್ಥವತ್ತಾಗಿ ತಿಳಿದಿರಬೇಕು.

ಈ ಕಾರಣದಿಂದ ವೇದಾಂತ ಸೂತ್ರಗಳಿಗೆ ಭಾಷ್ಯವನ್ನು ಬರೆಯಬೇಕಾದರೆ ಇತಿಹಾಸ ಪುರಾಣಗಳು ಮಾತ್ರವಲ್ಲದೆ 'ನಿಗಮಾಗಮ'ಗಳೆಂದು ಪ್ರಸಿದ್ಧವಾದ ವೇದ ಮತ್ತು ಆಗಮಗಳನ್ನು ಆಮೂಲಾಗ್ರವಾಗಿ ಅಭ್ಯಾಸ ಮಾಡಬೇಕು. 'ಯಸ್ಯ ನಿಃಶ್ವಸಿತಂ ವೇದಾಃ' ಎಂಬಂತೆ ವೇದಗಳು

ಪರಶಿವನ ನಿಶ್ವಸಿತ ಎಂದರೆ ಉಸಿರು ಅದು ಅಸ್ಪಷ್ಟವಾಣಿ; ಆಗಮಗಳು ಶಿವನ ಸ್ಪಷ್ಟವಾಣಿ. ಪರಶಿವನ ವಿಮರ್ಶಶಕ್ತಿಯೇ ನಿಗಮಾಗಮ ರೂಪವಾಗಿ ಅಭಿವ್ಯಕ್ತವಾಗಿದೆ. ಆದ್ದರಿಂದ ನೀನು ತಂತ್ರಶಾಸ್ತ್ರವನ್ನು ಗುರುಮುಖ ದಿಂದ ಚೆನ್ನಾಗಿ ಓದು. ಆಗ ನಿನಗೆ ವೇದಾಂತ ಸೂತ್ರಗಳಿಗೆ ಭಾಷ್ಯ ಬರೆ ಯುವ ಸಾಮರ್ಥ್ಯವುಂಟಾಗುತ್ತದೆ” ಎಂಬ ಸೂರ್ಯಪ್ರಕಾಶ ಶಾಸ್ತ್ರಿಗಳ ಸೂಚನೆ ತನ್ನ ಹಂಬಲದ ಮೇಲೆ ನಿಚ್ಚಳವಾದ ಸೂರ್ಯನ ಪ್ರಕಾಶವನ್ನೇ ಬೀರಿದಂತಾಗಿತ್ತು. ಇದರಿಂದ ಶ್ರೀಪತಿ ಯೋಚಿಸತೊಡಗಿದ. ಆಗ ಅವನಿಗೆ ಜ್ಞಾನೋದಯವಾಯಿತು.

ನನ್ನ ತಾತನವರು ಸೋಮಶಂಭು ದೇಶಿಕರು. ಅವರು ‘ಸಕಲಾ ಗಮಾಚಾರ್ಯ’ ಎಂಬ ಬಿರುದಾಂಕಿತರು. ಅವರ ಪುತ್ರರೂ ‘ಕಾಮಿ ಕಾದಿ ವಾತೂಲಾಂತವಾದ ತಂತ್ರಾವಳಿಗೆ ಸಂಸ್ಕೃತದಲ್ಲಿ ವೃತ್ತಿ-ದೀಪಿಕೆ ಗಳನ್ನು ಬರೆದು, ಮಹಾ ವಿದ್ಯಾಪೀಠದಿಂದ ಪ್ರಶಸ್ತಿ ಪಡೆದವರೂ ಆದ ಶಂಭುಭಟ್ಟರು ಖಾಸಾ ಮಾವಂದಿರು. ಇನ್ನು ಅವರ ಸತ್ಪುತ್ರರಾದ ಮಂಚಣ್ಣ ಪಂಡಿತರು ಸಂಸ್ಕೃತದಲ್ಲಿ ಮಹಾಪ್ರಬಂಧವೊಂದನ್ನು ಬರೆದಿರು ವರಲ್ಲದೆ ಅವರು ತಮ್ಮ ಉತ್ಕಟ ಭಕ್ತಿಯ ಪ್ರಭಾವದಿಂದ ಶಿವನನ್ನು ಒಲಿಸಿಕೊಂಡವರು. ಅಂದ ಮೇಲೆ ನಾನು ಅವರನ್ನು ಆಶ್ರಯಿಸಿ ತಂತ್ರಶಾಸ್ತ್ರವನ್ನು ಆಮೂಲಾಗ್ರವಾಗಿ ಅವರಲ್ಲಿ ಅಭ್ಯಾಸಮಾಡ ಬೇಕಿತ್ತು. ಈಗಲೂ ಕಾಲ ಮೀರಿಲ್ಲ. ತಂತ್ರಶಾಸ್ತ್ರಪಾರಂಗತರಾದ ಅವರ ಕೃಪೆಗೆ ಪಾತ್ರನಾಗಬೇಕು ಎಂದು ಯೋಚಿಸಿದ ಶ್ರೀಪತಿ ಶಂಭು ಭಟ್ಟರ ಮನೆಯ ಕಡೆ ಕಾಲು ಹಾಕಿದ.

೫

ಅಂದು ಶಂಭುಭಟ್ಟರ ಮನೆಯಲ್ಲಿ ಸಂಭ್ರಮದ ಸಂತೋಷ ಕೂಟ ಏರ್ಪಟ್ಟಿತ್ತು. ಮಂಚಣ್ಣ-ವಿಶಾಲಾಕ್ಷಿಯರ ಚೊಚ್ಚಲ ಮಗು ‘ಉರಿ ಲಿಂಗದೇವ’ನ ಮೊದಲ ಹುಟ್ಟು ಹಬ್ಬ. ಶಂಭುಭಟ್ಟರ ಕರೆಯನ್ನು

ಮನ್ನಿಸಿ ನಗರದ ಬಂಧು-ಬಾಂಧವರು, ಇಷ್ಟಮಿತ್ರರು ಉತ್ಸವದಲ್ಲಿ ಭಾಗ ವಹಿಸಿದ್ದರು. ಶ್ರೀಪತಿ ಈ ಉತ್ಸವಕ್ಕೆ ಬರಬೇಕೆಂದು ಮುದ್ದಾಂ ಹೇಳಿ ಕಳಿಸಿದ್ದರೂ ಗ್ರಂಥಾಭ್ಯಾಸದಲ್ಲಿ ಮಗ್ನನಾದ ಆತ ತನ್ನನ್ನೇ ಮರೆತಿದ್ದುದ ರಿಂದ ಅವನಿಗೆ ಉತ್ಸವದ ಪರಿವೆಯೇ ಇರಲಿಲ್ಲ. ಶ್ರೀಪತಿ ಬರದಿದ್ದುದು ಮನೆ ಮಂದಿಗೆ ಬೇಸರವನ್ನುಂಟುಮಾಡಿತ್ತು.

ಆದರೆ ಈ ದಿನ ತರಗತಿಯಲ್ಲಿ ಸೂರ್ಯಪ್ರಕಾಶ ಶಾಸ್ತ್ರಿಗಳು ಎಚ್ಚರಿ ಸಿದ್ದರಿಂದ ಶ್ರೀಪತಿಗೆ ಭಟ್ಟರ ನೆನಪಾಗಿ ಅಂದಿನ ಸಂಜೆಗೆ ಅವನು ಅವರ ಮನೆಯ ಕಡೆ ಬರಬೇಕಾಯಿತು. ಅವನು ಬಂದ ವಿಷಯವನ್ನು ಕೇಳಿ ಎಲ್ಲರಿಗೂ ಮಹದಾನಂದವಾಯಿತು.

ಎಲ್ಲರಿಗೂ ಉಪಾಹಾರವಾದ ಮೇಲೆ ಶ್ರೀಪತಿ ಎದ್ದು ನಿಂತು ಮಾವ ಮತ್ತು ಭಾವಂದಿರಿಗೆ ವಂದಿಸಿ ಹೇಳತೊಡಗಿದ—

"ಮಾವ, ಈ ದಿನ ಸೂರ್ಯಪ್ರಕಾಶ ಶಾಸ್ತ್ರಿಗಳು ನನ್ನ ಕಣ್ಣು ತೆರೆಸಿದರು. ಈ ವರ್ಷ ನಾನು ಅವರಲ್ಲಿ ಶಿಷ್ಯವೃತ್ತಿ ಮಾಡಿದ್ದು ಸಾರ್ಥಕ ವಾಯಿತು" ಎಂದ.

ಅದನ್ನು ಕೇಳಿ ಮನೆಯವರೆಲ್ಲ ಆಶ್ಚರ್ಯಚಕಿತರಾದರು. ಮಂಚಣ್ಣ ಕೇಳಿದ, "ಶ್ರೀಪತಿ, ನೀನು ಹೇಳಿದ್ದು ಯಾರಿಗೂ ಅರ್ಥವಾಗ ಲಿಲ್ಲ. ಅದು ಒಗಟಿನಂತಿದೆ. ಸ್ವಲ್ಪ ಬಿಡಿಸಿ ಹೇಳು" ಎಂದ. ಭಟ್ಟರು ನಮ್ಮಿಂದ ಏನು ಅಪಚಾರವಾಯಿತೋ ಎಂದು ಮುಗ್ಧರಾಗಿದ್ದರು. ಶ್ರೀದೇವಿ, ವಿಶಾಲಾಕ್ಷಿಯರು ಸಂದೇಹ ಕೂಪದಲ್ಲಿ ಮುಳುಗಿದ್ದರು. ಅಷ್ಟರಲ್ಲಿ ವಿಶಾಲಾಕ್ಷಿ ಅಳುತ್ತಿದ್ದ ತನ್ನ ಒಂದು ವರ್ಷದ ಕೂಸು 'ಉರು ಲಿಂಗದೇವ'ನನ್ನು ಎದೆಗವಚಿಕೊಂಡು ಸುಮ್ಮನಿರಿಸುತ್ತಾ ಕಣ್ಣನ್ನು ಕಿವಿ ಮಾಡಿ ಆಲಿಸತೊಡಗಿದ್ದಳು.

ಅಷ್ಟರಲ್ಲಿ ಮಂಚಣ್ಣ, "ಪುಣ್ಯಾತ್ಮಾ, ಅದೇನು ಬಿಡಿಸಿ ಹೇಳಪ್ಪಾ! ನಿನ್ನ ಒಗಟನ್ನು ಅರ್ಥ ಮಾಡಿಕೊಳ್ಳುವ ಸಾಮರ್ಥ್ಯ ಎಷ್ಟು ಜನಕ್ಕಿದೆ ಹೇಳು!?" ಎಂದ.

ಶ್ರೀಪತಿ ಹೇಳಿದ "ಭಾವ, ಒಗಟಿನ ಮಾತಲ್ಲ. ಇದು ನನ್ನ ದಡ್ಡತನಕ್ಕೆ ಸಂಬಂಧಿಸಿದ್ದು!" ಎಂದಾಗ ಎಲ್ಲರ ಕಣ್ಣು ನೀರಾಡಿತು. ಶ್ರೀಪತಿಗೂ ಕಂಠ ಗದ್ಗದಿತವಾಗಿತ್ತು. ಅವನು ಹೇಳಿದ, "ಭಾವ, ಉಣ್ಣೆ ಕೆಚ್ಚಲಲ್ಲೇ ಇದ್ದರೂ, ಅದು ಕೆಚ್ಚಲಿನಲ್ಲಿರುವ ಹಾಲಿನ ಸವಿಯನ್ನು ಅರಿಯದಿರುವಂತೆ ನನ್ನ ಐದು ವರ್ಷದ ಅಭ್ಯಾಸ ಸಾಗಿದೆಯಲ್ಲಾ ಎಂಬ ವ್ಯಥೆ ನನ್ನನ್ನು ಬಾಧಿಸುತ್ತಿದೆ, ಈ ಐದು ವರ್ಷಗಳಲ್ಲಿ ಅತ್ತೆಯವರು ನನ್ನಲ್ಲಿ ತೋರಿದ ಅಕ್ಕರೆ ಎಷ್ಟು! ಕನಕಾ ನನ್ನಲ್ಲಿ ಅಪರಿಮಿತ ಆತ್ಮೀಯತೆ ಬೆಳೆಸಿಕೊಂಡಿದ್ದಾಳೆ! ಇನ್ನು ಮಾವ-ಭಾವರ ವಿಷಯವನ್ನು ಹೇಳುವಂತೆಯೇ ಇಲ್ಲ. ಅವರನ್ನು ನಾನು ಬಂಧುಗಳೆಂದು ಬಗೆದೆನಲ್ಲದೆ, ಅವರಲ್ಲಿರುವ ಜ್ಞಾನಸುಧೆಯನ್ನು ಸವಿಯದೆ ಹೋದೆನಲ್ಲಾ! ಎಂಬುದೆ ನನಗಾಗಿರುವ ವ್ಯಥೆಗೆ ಕಾರಣ. ಆ ಪರಿಜ್ಞಾನವನ್ನು ಇಂದು ಸೂರ್ಯಪ್ರಕಾಶಶಾಸ್ತ್ರಿಗಳು ನನಗೆ ಮಾಡಿಸಿಕೊಟ್ಟು, ನನ್ನ ಕುರುಡುತನಕ್ಕೆ ಅಂಜನ ಸವರಿ ಕಣ್ಣು ತೆರೆಸಿದ್ದಾರೆ!"

"ಅದೇನನ್ನು ಅವರು ಹೇಳಿದರು? ಹೇಳು ಮಹಾರಾಯಾ! ನೀನು ಅದನ್ನು ಬಿಚ್ಚಿ ಹೇಳುವವರೆಗೆ ನಮ್ಮ ಸಂದೇಹ ದೂರವಾಗುವುದಿಲ್ಲ!" ಎಂದ ಮಂಜಣ್ಣ ಮತ್ತೆ ಒತ್ತಾಯಿಸಿದ.

ಶ್ರೀಪತಿ ಹೇಳಿದ, "ಭಾವಾ, ಈ ದಿನ ಪಾಠದಲ್ಲಿ ವೇದಾಂತಸೂತ್ರಗಳನ್ನು ತುಲನಾತ್ಮಕ ದೃಷ್ಟಿಯಿಂದ ವಿವೇಚಿಸುವಾಗ ಅಲ್ಲಿ ಬರುವ ಸಂದೇಹಗಳನ್ನು ಉಲ್ಲೇಖಿಸುತ್ತಾ ನಾನೆಂದೆ, 'ಗುರುಗಳೆ, ಇದನ್ನೆಲ್ಲಾ ನೋಡಿದರೆ ನಾನೇ ಏಕೆ ವೇದಾಂತಸೂತ್ರಗಳಿಗೆ ಬೇರೆ ಭಾಷ್ಯವನ್ನು ಬರೆಯಬಾರದು ಎನಿಸುತ್ತದೆ' ಎಂದೆ. ಆಗ ಆ ನಮ್ಮ ಗುರುಗಳು 'ಅಪ್ಪ, ವೇದಾಂತ ಸೂತ್ರಗಳಿಗೆ ಭಾಷ್ಯವನ್ನು ಬರೆಯುವುದು ಸುಲಭವಲ್ಲ' ಎಂದು ಆರಂಭಿಸಿ 'ಬಿಭೇತ್ಯಲ್ಪಶ್ರುತಾದ್ವೇದಃ' ಮುಂತಾದ ವಾಕ್ಯಗಳನ್ನು ಉದ್ಧರಿಸಿ ಅವರು, 'ನೋಡು, ಸೂತ್ರಭಾಷ್ಯ ಬರೆಯಬೇಕಾದರೆ ಕೇವಲ ಪಾಂಡಿತ್ಯ ಮಾತ್ರದಿಂದ ಸಾಧ್ಯವಿಲ್ಲ. ವೇದ-ಮಂತ್ರಗಳಿಗೆ ಅರ್ಥ ಬರೆಯಬೇಕಾದರೆ ಇತಿಹಾಸ-ಪುರಾಣ ಮತ್ತು ಎಲ್ಲ ಶಿವಾಗಮಗಳ ಆಳವಾದ ಪರಿಜ್ಞಾನವು

ಅಗತ್ಯ' ಎಂದರು. ಆಗ ನನಗೆ ನಿಮ್ಮ ನೆನಪಾಯಿತು. ನಮ್ಮ ತಾತ ಸಕಲಾಗಮಾಚಾರ್ಯ. ಮಾವ, ಆಗಮ ವಿಭಾಗದಲ್ಲಿ ಕಾಮಿಕಾದಿ ವಾತೂಲಾಂತವಾದ ಆಗಮಗಳಿಗೆ ಸಂಸ್ಕೃತದಲ್ಲಿ ವೃತ್ತಿದೀಪಿಗಳನ್ನು ಬರೆದು ಪ್ರಾಚಾರ್ಯರಾಗಿದ್ದಾರೆ. ಭಾವನಂತೂ 'ಮಂಚಣ ಪಂಡಿತೀಯ' ಮಹಾ ಪ್ರಬಂಧವನ್ನು ಬರೆದು, ಮಹೋಪಾಧ್ಯಾಯನಾಗಿದ್ದರೂ ನಾನು ಅವರನ್ನು ಆಶ್ರಯಿಸಿ ತಂತ್ರಶಾಸ್ತ್ರರಹಸ್ಯಗಳನ್ನು ಅರಿಯಲಿಲ್ಲವಲ್ಲಾ' ಎಂದು ಮರುಗುತ್ತಿದ್ದೇನೆ!" ಎಂದಾಗ ಮನೆಯವರೆಲ್ಲರೂ ಗೊಳ್ಳೆಂದು ನಕ್ಕರು.!

ಅವರ ನೇತ್ರಪ್ರಾಂತಗಳಲ್ಲಿ ಮಿಡಿದಿದ್ದ ಆನಂದಬಾಷ್ಪಗಳನ್ನು ಸೆರಗಿನಿಂದ ಒರೆಸಿಕೊಳ್ಳುತ್ತಾ ಶ್ರೀದೇವಿ ಹೇಳಿದಳು—

"ಅಬ್ಬಾ! ಎಷ್ಟು ಸತಾಯಿಸಿದೆಯಪ್ಪಾ ನಮ್ಮನ್ನು! ನಮ್ಮಿಂದ ಏನು ಅಪರಾಧವಾಯಿತೋ ಎಂದು ಹೆದರಿದ್ದೆವು!" ಎಂದ. ವಿಶಾಲಾಕ್ಷಿ ಮಗುವನ್ನೆತ್ತಿಕೊಂಡು ಶ್ರೀಪತಿಯನ್ನು ಕಂಡು ನಸುನಗುತ್ತಿದ್ದಳು.

ಶಂಭು ಹೇಳಿದ, "ಅಪ್ಪಾ, ನಾನು ನಿನಗೆ ನಮ್ಮ ಶಾಸ್ತ್ರ ಮತ್ತು ಅನುಭವಗಳನ್ನು ಹೇಳಬಾರದೆಂದಿರಲಿಲ್ಲ. ನಾವು ಹೇಗಿದ್ದರೂ ಮನೆಯವರು. ನಮ್ಮಲ್ಲಿರುವ ವಿದ್ಯೆಯನ್ನು ಯಾವಾಗ ಬೇಕಾದರೂ ಪಡೆಯಲು ಬರುತ್ತದೆ. ಮೇಲಾಗಿ ತಂತ್ರಶಾಸ್ತ್ರರಹಸ್ಯಗಳನ್ನು ತಿಳಿಯ ಬೇಕಾದರೆ ತರ್ಕ-ವ್ಯಾಕರಣ ಮತ್ತು ದರ್ಶನಗಳ ಪರಿಜ್ಞಾನ ಅಗತ್ಯ. ಈಗ ನೀನು ತಂತ್ರಾವಳಿಯ ರಹಸ್ಯಾನುಭವಗಳನ್ನು ಕೂಲಂಕಷವಾಗಿ ತಿಳಿಯಲು ಸಕಾಲ!

ಜ್ಞಾನಕ್ಕೆ ನಿಲುಗಡೆಯುಂಟೆ? ಬೆಳಕು ಯಾವ ಕಡೆಯಿಂದ ಬಂದರೂ ಸ್ವಾಗತಿಸಬೇಕು. 'ಬಾಲಾದಪಿ ಸುಭಾಷಿತಂ' ಎಂಬ ಸುಭಾಷಿತ ಇದಕ್ಕಾಗಿಯೇ ಹೊರಟಿದೆ. ವೇದ-ವೇದಾಂತ-ದರ್ಶನ ಶಾಸ್ತ್ರವಿಶಾರದನಾದ ನಿನಗೆ ನಾನೀಗ ತಂತ್ರಶಾಸ್ತ್ರಗಳನ್ನು ಕುರಿತು ಬರೆದಿರುವ ವ್ಯಾಖ್ಯೆಗಳನ್ನು ಕೊಡುತ್ತೇನೆ. ಸಾವಧಾನವಾಗಿ ಓದು! ಸಂದೇಹ ಬಂದಾಗ ತಿಳಿಸಿದರೆ ಪರಿಹರಿಸಬಹುದು. ಅನಂತರ ಮಂಚಣ್ಣನ 'ಮಂಚಣ

ಪಂಡಿತೀಯ' ಪ್ರಬಂಧವನ್ನೂ ಓದು. ಅದಷ್ಟರಿಂದಲೇ ನಿನ್ನ ಜ್ಞಾನದಾಹ ಅಡಗುವುದೆಂದು ನಂಬಲಾರೆ. ವಿದ್ಯಾಪೀಠದ ಪುಸ್ತಕ ಭಂಡಾರದಲ್ಲಿ ಜೈನ-ಬೌದ್ಧ-ಚಾರ್ವಾಕ ದರ್ಶನಗಳಿವೆ. ಜೈನ ದರ್ಶನವನ್ನು ನಿರ್ಗ್ರಂಥಿ ಪಂಡಿತರಲ್ಲಿಯೂ, ಬೌದ್ಧ ದರ್ಶನವನ್ನು ಶಾಂತಭಿಕ್ಷು ಪಂಡಿತರಲ್ಲಿಯೂ, ಚಾರ್ವಾಕ ದರ್ಶನವನ್ನು ವಿಜ್ಞಾನಸಿದ್ಧರಲ್ಲಿಯೂ ನೀನು ಅಭ್ಯಾಸ ಮಾಡಿದರೆ ಅವರು ಆಯಾ ದರ್ಶನದ ರಹಸ್ಯಗಳೆಲ್ಲವನ್ನು ವಿಮರ್ಶಿಸಿ ಬೋಧಿಸುತ್ತಾರೆ" ಎಂದು ಸಮಾಧಾನ ಮಾಡಿದ.

ಮರುದಿನದಿಂದಲೇ ಶಂಭುಭಟ್ಟರು ಶ್ರೀಪತಿಗೆ ಕಾಮಿಕಾದಿವಾತೂಲಾಂತವಾದ ಶಿವಾಗಮಗಳು ಮತ್ತು ವೈಖಾನಸ, ಪಾಂಚರಾತ್ರ ಹಾಗೂ ತಂತ್ರಸಾರ ಎಂಬ ಆಗಮಗಳನ್ನಲ್ಲದೆ, ಶೈವದಲ್ಲಿ ಕಾಶ್ಮೀರ ಶೈವ, ಶಾಕ್ತ, ಕಾಪಾಲಿಕ, ಕೌಲ ವಿಭಾಗಗಳಿಗೆ ಸಂಬಂಧಿಸಿದ ಗ್ರಂಥಗಳನ್ನು ಕುರಿತು ತೌಲನಿಕವಾಗಿ ಶ್ರೀಪತಿಗೆ ಪಾಠಮಾಡತೊಡಗಿದರು. ಶ್ರೀಪತಿಯು ಮಂಚಣ್ಣನನ್ನು ಆಶ್ರಯಿಸಿ ಆತನ ಶಾಸ್ತ್ರ ಮತ್ತು ಅನುಭವಗಳನ್ನಲ್ಲದೆ ಆತನಿಂದ ಭಕ್ತಿಮಾರ್ಗದ ಉಪಾಸನಾಕ್ರಮವನ್ನು ತಿಳಿದುಕೊಂಡ.

ಶ್ರೀಪತಿ ಈಚೆಗೆ ಮನೆಗೆ ಬರುವುದನ್ನು ಕಡಮೆ ಮಾಡಿದ್ದ. ತನಗೆ ಸಂದೇಹ ಬಂದಾಗ ಅವನು ಉಪಾಧ್ಯಾಯರಿಗೆ ತರಗತಿಗಳ ವಿರಾಮವಿರುವಾಗ ಅಲ್ಲಲ್ಲಿಗೆ ಹೋಗಿ ಪ್ರಶ್ನಿಸಿ ತನ್ನ ಸಂದೇಹಗಳನ್ನು ಪರಿಹರಿಸಿಕೊಳ್ಳುತ್ತಿದ್ದ. ಇದಲ್ಲದೆ ಸ್ಮೃತಿ, ಪುರಾಣ, ಧರ್ಮಶಾಸ್ತ್ರಗಳನ್ನು ಓದುವಾಗ ಕೆಲವು ಪ್ರಕ್ಷಿಪ್ತಗಳನ್ನು ಕೈಬಿಟ್ಟು ವಿಮರ್ಶೆಯ ಒರೆಗಲ್ಲಿಗೆ ನಿಲ್ಲುವವುಗಳನ್ನು ಮಾತ್ರ ಗ್ರಹಿಸಬೇಕಾಗುತ್ತಿತ್ತು. ಭಾಷ್ಯಗಳಲ್ಲಿ ಕೆಲವರು ತಮ್ಮ ತಮ್ಮ ಅನಿಸಿಕೆಗಳನ್ನು ಮೂಲಗ್ರಂಥಗಳಲ್ಲಿ ಸೇರಿಸಿ, ಅಪಾರ್ಥಮಾಡಿ ಜನರನ್ನು ವಂಚಿಸುತ್ತಿದ್ದುದನ್ನು ಶ್ರೀಪತಿ ಮನಗಂಡಿದ್ದ. ಹಿಂದೆ ಹೇಳಿದಂತೆ ವರ್ಣಾಶ್ರಮದ ಬಗ್ಗೆ, ಯಜ್ಞಗಳಲ್ಲಿ ಪಶುಹಿಂಸೆ ಮಾಡುವ ಬಗ್ಗೆ ಈ ಪ್ರಕ್ಷಿಪ್ತ ಶ್ಲೋಕಗಳಿಂದ ವಂಚಿತರಾದ ಜನ ಬ್ರಾಹ್ಮಣಾದಿ ವರ್ಣಗಳನ್ನು ಗುಣಕರ್ಮದಿಂದ ಗಣಿಸಬೇಕೆಂಬುದನ್ನು ಬಿಟ್ಟು, ಅವು ಹುಟ್ಟನಿಂದಲೇ ಬಂದವೆಂದು ಭಾವಿಸುವಂತಾಗಿತ್ತು. ಅದರಂತೆ ಹಿಂಸೆ ಇಲ್ಲದುದೇ

'ಅಧ್ವರ' (ಯಜ್ಞ) ಎಂದಿದ್ದರೂ ಜನ ಇತ್ತೀಚೆಗೆ ತಮ್ಮ ಬಾಯಿಚಾಪಲ್ಯ ತೀರಿಸಿಕೊಳ್ಳಲು ಅಜಮೇಧ, ಅಶ್ವಮೇಧ ಮುಂತಾದವುಗಳಲ್ಲಿ ಆಯಾ ಪ್ರಾಣಿಗಳನ್ನು ಕೊಂದು ಯಜ್ಞ ಮಾಡುವುದನ್ನು ಜಾರಿಯಲ್ಲಿ ತಂದಿದ್ದರು. ಇದನ್ನೆಲ್ಲ ಶ್ರೀಪತಿ ಸ್ವಂತ ವಿವೇಚನೆಯಿಂದ ತಿಳಿಯತೊಡಗಿದ್ದ.

ಒಟ್ಟಿನಲ್ಲಿ ಶ್ರೀಪತಿಯ ಗ್ರಂಥಾಭ್ಯಾಸ 'ಎಲ್ಲರೊಳಗೊಂದೊಂದು ನುಡಿಗಲಿತು ತಿಳುವಿನ ಪರ್ವತವೆ ಆಗಿ ಸರ್ವಜ್ಞನಪ್ಪಂತೆ' ಎಂಬಂತೆ ಆಗಿತ್ತು. ಅಕಲಂಕವಾದ ಅಪರಂಜಿಯಂತೆ ಶ್ರೀಪತಿಯ ಪಾಂಡಿತ್ಯ ಶುದ್ಧ ಸ್ಫಟಿಕದಂತೆ ಸ್ವಚ್ಛವಾಗಿತ್ತು.



೧೪

# ತತ್ತ್ವಾನ್ವೇಷಣೆಯ ತಕ್ಕಡಿಯಲ್ಲಿ

## ೧

ಶ್ರೀಪತಿ ತಾನು ಅಭ್ಯಾಸ ಮಾಡುತ್ತಿದ್ದಾಗಲೇ ವೇದಾಂತ ದರ್ಶನದ ಮೇಲೆ ತನ್ನದೇ ಆದ ಪ್ರಬಂಧವನ್ನು ಬರೆಯಲು ಬಯಸಿದ್ದನೆಂಬ ವಿಷಯ ಈ ಮೊದಲೇ ಪ್ರಕಟವಾಗಿತ್ತು.

ಈ ದಿಸೆಯಲ್ಲಿ ವಿಶೇಷ ಪ್ರಬಂಧಕ್ಕಾಗಿ ವಿದ್ವಾಂಸರೊಬ್ಬರ ಮಾರ್ಗದರ್ಶನದಲ್ಲಿ ವಿದ್ಯಾಪೀಠಕ್ಕೆ ನೊಂದಾಯಿಸಿಕೊಳ್ಳಬೇಕು. ಶ್ರೀಪತಿ ಸೂರ್ಯಪ್ರಕಾಶ ಶಾಸ್ತ್ರಿಗಳ ಮಾರ್ಗದರ್ಶಿತ್ವವನ್ನು ಸೂಚಿಸಿ ನೊಂದಾಯಿಸಿಕೊಂಡದ್ದೂ ಆಗಿತ್ತು.

ಗ್ರಂಥಗಳನ್ನು ಅಭ್ಯಾಸ ಮಾಡಿ ಪ್ರಬಂಧವನ್ನು ಕಳುಹಿಸಲು ವಿದ್ಯಾಪೀಠವು ಎರಡು ವರ್ಷಗಳ ಅವಧಿಯನ್ನು ಕೊಟ್ಟಿತ್ತು.

ಈ ಅವಧಿಯಲ್ಲಿ ಅಂಥವರು ತರಗತಿಗಳಲ್ಲಿ ನಿಯತಕಾಲದಲ್ಲಿ ಹಾಜರಿರಬೇಕಾದ ಅಗತ್ಯವಿರುವುದಿಲ್ಲ. ಮತ್ತು ಅವರು ವಿದ್ಯಾಪೀಠ ಅಥವಾ ಗುರುಮಠದ ವಿದ್ಯಾರ್ಥಿನಿಲಯದಲ್ಲಿ ಇರಲೇಬೇಕೆಂಬ ನಿಯಮವೂ ಇರಲಿಲ್ಲ. ಕಾರಣ ಈ ಅವಧಿಯಲ್ಲಿ ಶ್ರೀಪತಿ ಮನೆಯಲ್ಲಿದ್ದು ತನ್ನ ಪ್ರಬಂಧವನ್ನು ಸಿದ್ಧಗೊಳಿಸಬಹುದೆಂದು ಮಾವ-ಭಾವಂದಿರು ಮತ್ತು ಅತ್ತೆಯವರು ಒತ್ತಾಯ ತಂದಿದ್ದರಾದರೂ ಶ್ರೀಪತಿ ಅದಕ್ಕೊಪ್ಪದೆ ವಿದ್ಯಾರ್ಥಿನಿಲಯದಲ್ಲಿಯೇ ಇರಲು ನಿರ್ಧರಿಸಿದ್ದ.

ಆ ವೇಳೆಯಲ್ಲಿ ವಿದ್ಯಾಪೀಠದ ಪುಸ್ತಕ ಭಂಡಾರದಲ್ಲಿದ್ದ ಅಪೂರ್ವ ಗ್ರಂಥಗಳನ್ನು ಓದಿ ವಿಮರ್ಶಿಸಿ ತನ್ನ ಪ್ರಬಂಧಕ್ಕೆ ತನ್ನದೇ ಆದ ವೈಶಿಷ್ಟ್ಯ ವನ್ನು ದೊರಕಿಸಿಕೊಡುವ ಮನೀಷೆ ಅವನದಾಗಿತ್ತು.

ಬೆಳಗಿನ ನಿತ್ಯಕ್ರಿಯೆಗಳಾದ ಮೇಲೆ ಯೋಗಾಸನಾಭ್ಯಾಸ, ಉಪಾ ಹಾರದ ತಗುವಾಯ ಅವನ ಸಮಯವೆಲ್ಲ ಗ್ರಂಥಾಭ್ಯಾಸಕ್ಕೇ ಸಾಲುತ್ತಿರ ಲಿಲ್ಲ. ಹೀಗೆ ತತ್ವನಿಷ್ಠವೂ ವಸ್ತುನಿಷ್ಠವೂ ಆದ ಶ್ರೀಪತಿಯ ಮನಸ್ಸು ಹಗಲಿರುಳೂ ತನ್ನದೇ ಆದ ನೂತನ ವಿಚಾರ ಸರಣಿಯನ್ನು ಹೊಂದಿತ್ತು.

ಶಂಕರರ ಅದ್ವೈತ, ಶ್ರೀಕಂಠರ ಶಿವಾದ್ವೈತ ಮತ್ತು ನೀಲಕಂಠರ ಶಕ್ತಿ ವಿಶಿಷ್ಟಾದ್ವೈತಗಳಲ್ಲಿನ ಸೂಕ್ಷ್ಮವಾದ ಅಂತರಗಳನ್ನು ಶ್ರೀಪತಿ ಗುರುತಿಸಿಕೊಂಡಿದ್ದ. ಶಂಕರರು ತಮ್ಮ ಕೇವಲಾದ್ವೈತಕ್ಕೆ ಪೂರ್ವ ಪಕ್ಷವಾಗಿ ದ್ವೈತವನ್ನು ಉಲ್ಲೇಖಿಸಿದ್ದರು. ಆದರೆ ದ್ವೈತವನ್ನು ಸಮರ್ಥಿ ಸುವ ಯಾವುದೇ ಭಾಷ್ಯವು ಆಗ್ಗೆ ರಚಿತವಾಗಿರಲಿಲ್ಲ. ಆದರೂ ಶಂಕರರು ಶ್ರುತಿ ವಾಕ್ಯಗಳಲ್ಲಿ ಆಪಾತತಃ ದ್ವೈತವನ್ನು ಸೂಚಿಸುವವುಗಳನ್ನು ಪೂರ್ವಪಕ್ಷಮಾಡಿಕೊಂಡು ತಮ್ಮ ಭಾಷ್ಯದಲ್ಲಿ ಅವನ್ನು ನಿರಾಕರಿಸಿದ್ದರು. ಶ್ರೀಪತಿ ಆ ಎರಡು ಬಗೆಯ ಶ್ರುತಿಗಳನ್ನು ವಿಮರ್ಶಿಸಿ ಸರ್ವಶ್ರುತಿಗಳಿಗೆ ಪ್ರಾಮಾಣ್ಯವನ್ನು ಕೊಡುವುದು ಅಗತ್ಯವೆಂದು ಸಮರ್ಥಿಸುವ ನೀಲಕಂಠ ಭಾಷ್ಯವನ್ನು ಶ್ರೀಪತಿ ಸಮ್ಮತಿಸಿದ್ದ. ಆದರೆ ಅದಕ್ಕೆ ಮಹರ್ಷಿ ಅಗಸ್ತ್ಯ ಪ್ರಣೀತವಾದ ಸೂತ್ರವೃತ್ತಿಯೊಂದು 'ದ್ವೈತಾದ್ವೈತ'ವನ್ನು ಸಮರ್ಥಿಸಿದೆ ಎಂದು ಸೂರ್ಯಪ್ರಕಾಶ ಶಾಸ್ತ್ರಿಗಳಿಂದ ತಿಳಿದಿದ್ದನಾದರೂ ಶ್ರೀಪತಿ ಅದನ್ನು ಕಣ್ಣಿನಿಂದ ನೋಡದೆ ತನ್ನ ಭಾಷ್ಯದಲ್ಲಿ ಉದಾಹರಿಸಲು ಸಾಧ್ಯವೆ? ಅದಕ್ಕಾಗಿ ಶ್ರೀಪತಿಗೆ ಅಗಸ್ತ್ಯಸೂತ್ರವೃತ್ತಿಯನ್ನು ಹುಡುಕಿ ಸಂಪಾದಿಸ ಬೇಕೆಂಬ ಹಂಬಲ ಬಾಧಿಸುತ್ತಿತ್ತು.

* * *

೨

ಇದೇ ಯೋಚನೆಯಲ್ಲಿ ಮುಂಜಾನೆ ಗಂಗಾತೀರವನ್ನು ಸೇರಿದ್ದ ಶ್ರೀಪತಿ ತನ್ನ ಸ್ನಾನ, ಸಂಧ್ಯೆ, ಶಿವಾರ್ಚನೆಗಳನ್ನು ಮಾಡುವಾಗಲೂ ಇದನ್ನೇ ಯೋಚಿಸುತ್ತಿದ್ದ. ಪ್ರಸಾದದ ವೇಳೆಗೆ ವಿದ್ಯಾರ್ಥಿನಿಲಯಕ್ಕೆಹೋಗು ವುದನ್ನೂ ಮರೆತು ನದಿಯ ದಡದಲ್ಲಿ ಒಂದು ಮರದ ಕೆಳಗೆ ಯೋಚನೆ ಯಲ್ಲಿ ಮುಳುಗಿದ್ದ. ಅದೇ ಸಮಯಕ್ಕೆ ಗಂಗಾಸ್ನಾನಕ್ಕಾಗಿ ಬಂದಿದ್ದ ಯಾತ್ರಿಕರ ಮಗುವೊಂದು ಆಡುತ್ತಾಡುತ್ತಾ ಕಾಲು ಜಾರಿ ನೀರಿಗೆ ಬಿದ್ದು ಕಿರುಚಿಕೊಂಡಿತು. ನದಿಯ ಮೆಟ್ಟಿಲ ಮೇಲೆ ವಸ್ತ್ರಗಳನ್ನು ತೊಳೆ ಯುತ್ತಿದ್ದ ಅದರ ತಾಯಿ ನೀರಿನಲ್ಲಿ ಮುಳುಗಿ ನೀರು ಕುಡಿಯುತ್ತಿದ್ದ ಮಗುವನ್ನು ನೋಡಿ ದಿಕ್ಕುಗಾಣದೆ "ಹೋ !"ಎಂದು ಚೀರಿದಳು.

ಯೋಚನೆಯಲ್ಲಿ ಮುಳುಗಿದ್ದ ಶ್ರೀಪತಿಗೆ ತಟ್ಟನೆ ಎಚ್ಚರವಾಯಿತು. ಆರ್ತಧ್ವನಿ ಕೇಳಿ ಶ್ರೀಪತಿ ಅಲ್ಲಿಗೆ ಬರುವ ವೇಳೆಗೆ ಮಗು ನೀರು ಕುಡಿದು ಪ್ರವಾಹದ ಸೆಳೆತಕ್ಕೆ ಸಿಕ್ಕಿ ಕೊಚ್ಚಿಹೋಗುತ್ತಿತ್ತು. ಕೂಡಲೇ ಶ್ರೀಪತಿ ಉಟ್ಟ ಬಟ್ಟೆಯಲ್ಲೇ ಪ್ರವಾಹಕ್ಕೆ ಹಾರಿ ಈಜಿಕೊಂಡು ಹೋಗಿ ಮಗುವನ್ನು ಒಂದು ಕೈಲಿ ಎತ್ತಿಕೊಂಡು ದಡಸೇರಿದ. ಆ ವೇಳೆಗೆ ಸುತ್ತುಮುತ್ತಿನವರೂ ತಾಯಿ ಇದ್ದಲ್ಲಿಗೆ ಬಂದರು. ಆ ತಾಯಿ ಶ್ರೀಪತಿಯ ಕೈಯಿಂದ ಮಗುವನ್ನು ಪಡೆದು, ಅದು ಕುಡಿದ ನೀರನ್ನು ಒಮನ ಮಾಡಿಸಿದಳು. ಸ್ವಲ್ಪಹೊತ್ತಿನ ಮೇಲೆ ಮಗು ಚೇತರಿಸಿಕೊಂಡು ಅಳತೊಡಗಿತು. ಮಗುವಿನ ತಾಯಿ ಶ್ರೀಪತಿಯನ್ನು—

"ಅಪ್ಪಾ, ದೇವರು ಬಂದ ಹಾಗೆ ಬಂದು ನನ್ನ ಮಗುವನ್ನು ರಕ್ಷಿಸಿದೆ ! ನೀನು ದಿಕ್ಕು ತಪ್ಪಿದ ನಮಗೆ ದಿಕ್ಕಾದೆ!" ಮುಂತಾಗಿ ಹೇಳತೊಡಗಿದ್ದಳು.

ಅಷ್ಟರಲ್ಲಿ "ದಿಕ್ಕು ತಪ್ಪಿದವರಿಗೆ ಅಷ್ಟೇ ಅಲ್ಲ ; ಅನಾಥರಿಗೆ, ಅಶಕ್ತ ರಿಗೆಲ್ಲ ದಿಕ್ಕಾದವನು ಈ ಮಹಾನುಭಾವ!" ಎಂಬ ಧ್ವನಿ ಕೇಳಿಸಿತು! ಕೋಲೂರಿ ಬರುತ್ತಿದ್ದ ಮುದುಕಿಯೊಬ್ಬಳು ಹತ್ತಿರ ಬಂದು "ನನಗೂ

ದಿಕ್ಕಾದವನು ನೀನೇ ಅಲ್ಲವೇ ನನ್ನಪ್ಪಾ!" ಎಂದಳು. ಮಗುವಿನ ತಾಯಿಯ ಕಡೆ ತಿರುಗಿ ಮುದುಕಿ "ನದಿಯಲ್ಲಿ ಕೊಚ್ಚಿಹೋಗುತ್ತಿದ್ದ ನನ್ನನ್ನು ಕಾಪಾಡಿದವನು ಈ ಪುಣ್ಯಾತ್ಮನಮ್ಮ !" ಎಂದು ಶ್ರೀಪತಿಯನ್ನು ಸಮೀಪಿಸಿ ಅವನ ತಲೆ ನೇವರಿಸುತ್ತಿದ್ದಳು.

ಮಗುವಿನ ತಾಯಿಗೆ ಇದೊಂದೂ ಅರ್ಥವಾಗಲಿಲ್ಲ! ಶ್ರೀಪತಿ ಮುದುಕಿಯನ್ನು ದೃಷ್ಟಿಸಿ, "ದುಗ್ಗವ್ವಾ ! ಇದೇನು ಇಷ್ಟು ದಿವಸಕ್ಕೆ ದರ್ಶನ ಕೊಟ್ಟೆ !" ಎಂದು ಅವಳಿಗೆ ವಂದಿಸಿದ.

ಮುದುಕಿಗೆ ತನ್ನ ಅಭ್ಯಾಸದ ಅನುಭವವನ್ನೆಲ್ಲ ಸೂಕ್ಷ್ಮವಾಗಿ ಪರಿಚಯಿಸಿದ ಶ್ರೀಪತಿ "ನೀರಿನಲ್ಲಿ ಕೊಚ್ಚಿ ಹೋಗುತಿದ್ದ ಮಗುವೊಂದನ್ನು ತಂದು ಕೊಟ್ಟ ನಾನು, ಯೋಚನೆಗಳ ಲಹರಿಗಳಲ್ಲಿ ಸಿಕ್ಕು ದಿಕ್ಕು ಕಾಣದೆ ಕೊಚ್ಚಿಹೋಗುತ್ತಿದ್ದೇನೆ! ನನ್ನನ್ನು ಕೈ ಹಿಡಿದು ದಡ ಸೇರಿಸುವರಾರು!" ಎಂದು ಹಲುಬಿದ.

ಅಷ್ಟರಲ್ಲಿ "ಅದಕ್ಕಾಗಿಯೇ ದೇವರು ನನ್ನನ್ನು ಕಳುಹಿಸಿದ್ದಾನೆ ! ಹೆದರಬೇಡ !" ಎಂದ ಅಪರಿಚಿತ ಕಂಠವೊಂದು ದೂರದಿಂದ ಉತ್ತರಿಸಿತು. ಹಿಂದಿರುಗಿ ನೋಡಿದಾಗ ಸೌಮ್ಯವಾದ ಮುಖಮುದ್ರೆಯ ಜಟಾಧಾರಿಯೊಬ್ಬ ಹತ್ತಿರ ಬರುತ್ತಿದ್ದ. ಮುದುಕಿ ಮೌನವಾಗಿದ್ದಳು.

"ಸ್ವಾಮಿ, ನಾನು ಕಪಾಲಭೈರವ. ವಿಂಧ್ಯಾರಣ್ಯದಲ್ಲಿ ಈ ಮುದುಕಿಯ ಕೋರೆ ದವಡೆಗೆ ಸಿಲುಕಿ ಪರಿತಪಿಸುತ್ತಿದ್ದವನನ್ನು ಪಾರು ಮಾಡಿದ ಮಹಾನುಭಾವ ನೀನೇ ಅಲ್ಲವೆ ?" ಎಂದ ಕಪಾಲಭೈರವ ದುಗ್ಗವ್ವನಿಗೆ ಮತ್ತು ಶ್ರೀಪತಿಗೆ ಅಡ್ಡಬಿದ್ದ. ಶ್ರೀಪತಿಗೆ ಆಶ್ಚರ್ಯದ ಮೇಲೆ ಆಶ್ಚರ್ಯ ! ತನ್ನ ಕಣ್ಣು-ಕಿವಿಗಳನ್ನು ತಾನೇ ನಂಬಲಾಗದ ಸೋಜಿಗ ಅವನಿಗೆ !

ಕಪಾಲಭೈರವ ತಾನು ವಿಂಧ್ಯಾಟವಿಯ ಭೈರವಾಲಯವನ್ನು ಬಿಟ್ಟ ಮೇಲೆ ತಾನು ತಾಮಸ ಪೂಜೆಯಲ್ಲಿ ಮಾಡಿದ್ದ ಬಗೆಬಗೆಯ ಪಾಪ

ಪಂಕವನ್ನು ತೊಳೆಯಲು, ಅಲ್ಲಲ್ಲಿ ಋಷ್ಯಾಶ್ರಮಗಳನ್ನು, ಸಾಧು ಸಂತರ ಸೇವೆಯನ್ನು ಮಾಡುತ್ತಾ ಶ್ರೀಗಿರಿಯನ್ನು ಸೇರಿದೆ" ಎಂದ.

ಶ್ರೀಪತಿ "ನೀನು ಇಲ್ಲಿಗೆ ಬಂದದ್ದು ಹೇಗೆ ?" ಎಂದು ಪ್ರಶ್ನಿಸಿದ.

"ಎಲ್ಲವೂ ಆ ಪರಮ ಗುರುವಿನ ಆಶೀರ್ವಾದ ! ಅವನ ಆದೇಶ ದಂತೆಯೇ ನಿನ್ನನ್ನು ಹುಡುಕಿಕೊಂಡು ಬಂದೆ !" ಎಂದ ಕಪಾಲಭೈರವ.

ಶ್ರೀಪತಿಯ ಕುತೂಹಲ ಮತ್ತಷ್ಟು ಹೆಚ್ಚಾಯಿತು. ಅವನು ಕೇಳಿದ, "ಭೈರಣ್ಣ, ಯಾರಪ್ಪ ಆ ಗುರು. ನನ್ನ ಪರಿಚಯ ಆವರಿಗೆ ಹೇಗೆ ಗೊತ್ತಾಯಿತು ? ನಿನ್ನನ್ನು ಅವರು ನನ್ನ ಬಳಿಗೆ ಏಕೆ ಕಳುಹಿಸಿ ದರು ? ಎಲ್ಲವನ್ನೂ ವಿಸ್ತಾರವಾಗಿ ಹೇಳು" ಎಂದ ! ಅಷ್ಟರಲ್ಲಿ ಮಧ್ಯೆ ಬಾಯಿ ಹಾಕಿ ದುಗ್ಗವ್ವೆ ಹೇಳಿದಳು—

"ಶ್ರೀಪತಿ, ಈಗಾಗಲೇ ಬಹಳ ಹೊತ್ತಾಗಿದೆ. ನೀನು ಮೊದಲು ವಿದ್ಯಾರ್ಥಿನಿಲಯಕ್ಕೆ ಹೋಗಿ ಪ್ರಸಾದ ಸ್ವೀಕರಿಸಿ ಬಾ ! ಆಮೇಲೆ ನಿಧಾನವಾಗಿ ಮಾತನಾಡೋಣ ! ಏಳು !" ಎಂದು ಶ್ರೀಪತಿಯನ್ನು ಎಬ್ಬಿಸಿದಳು.

ಶ್ರೀಪತಿ "ಹಾಗಾದರೆ ನೀವೂ ಬನ್ನಿ, ಮೂವರೂ ಪ್ರಸಾದ ಸ್ವೀಕರಿ ಸೋಣ" ಎಂದ !

"ನಾವಿಬ್ಬರೂ, ಪ್ರಸಾದವನ್ನು ಸ್ವೀಕರಿಸಿಯೇ ನಿನ್ನೆಡೆಗೆ ಬಂದೆವು. ನೀನು ನಿರ್ವಿಣ್ಣನಾಗಿದ್ದೆ. ನಿನ್ನ ಪರಿತಾಪವನ್ನುಪರಿಹರಿಸಲೆಂದೇ ನಾನು ಈ ಅದ್ಭುತ ಘಟನೆಯನ್ನು ಕಲ್ಪಿಸಿದೆ!" ಎಂದಾಗ ಶ್ರೀಪತಿ ಅಜ್ಜಿಯ ಮುಖ ಮಿಕ ಮಿಕ ನೋಡಿದ.!

ಎಲ್ಲ ವಿದ್ಯಾರ್ಥಿಗಳ ಪ್ರಸಾದದ ವೇಳೆಗೆ ಬಂದಿದ್ದರೂ ಅಡಿಗೆಯವನು ಶ್ರೀಪತಿಯ ಪ್ರಸಾದವನ್ನು ಎತ್ತಿ ಇಟ್ಟಿದ್ದ. ಶ್ರೀಪತಿ ಅಲ್ಲಿಗೆ ಹೋಗಿ ಪ್ರಸಾದವನ್ನು ಸೇವಿಸಿ ಬರುವವರೆಗೆ ಭೈರಣ್ಣ ಮತ್ತು ದುಗ್ಗವ್ವೆಯರು ಶ್ರೀಪತಿಯ ಕೊಠಡಿಯಲ್ಲಿ ವಿಶ್ರಮಿಸುತ್ತಿದ್ದರು.

ಶ್ರೀಪತಿ ಬಂದ ಮೇಲೆ ಭೈರಣ್ಣ ತನ್ನ ಕತೆಯನ್ನು ಮುಂದು ವರಿಸಿದ.

೧೫

# ಕದಳೀವನ ಕಾರಣಿಕ !

## ೧

ನೋಡಪ್ಪ ಶ್ರೀಪತಿ, ಶ್ರೀಗಿರಿಯ ಮಹಾಮಹಿಮರಾದ ದೇಶಿಕೇಂದ್ರರು ನಮ್ಮ ಗುರುಗಳು. ಅವರು ಶ್ರೀಗಿರಿಯ ಕದಳೀವನದಲ್ಲಿ ಸಿದ್ಧಿ ಪಡೆದ ಕಾರಣಿಕರು. ಅಕಾರಣ ಬಂಧುಗಳು ಮತ್ತು ತ್ರಿಕಾಲಜ್ಞರು. ನೀನು ಚಿಕ್ಕಂದಿನಿಂದಲೂ ಪ್ರಗತಿ ಹೊಂದುತ್ತಿರುವುದನ್ನು ತಮ್ಮ ದಿವ್ಯ ದೃಷ್ಟಿಯಿಂದ ಅವರು ಅರಿತಿದ್ದಾರೆ. ಶಿಷ್ಯಾರ್ಜನೆಗಾಗಿ ದೇಶಸಂಚಾರ ಹೊರಡಲು ಸಂಕಲ್ಪ ಮಾಡಿದಾಗ ಕ್ಷೇತ್ರಪಾಲಕ ವೀರಣ್ಣ ಅವರ ಸೇವೆಗೆ ನಡುಕಟ್ಟಿ ನಿಂತ. ಆ ವೇಳೆಗೆ ಸರಿಯಾಗಿ ನಾನೂ ಗುರುವಿನ ಕೃಪೆಗೆ ಪಾತ್ರನಾಗಿದ್ದೆ. ದೇಶಿಕೇಂದ್ರರು ದೇಶಸಂಚಾರವನ್ನು ಕೈಗೊಂಡದ್ದರಿಂದ ನಾವು ಅವರ ಸೇವೆಯಲ್ಲಿ ನಿರತರಾಗಿದ್ದೇವೆ.

ಶ್ರೀಗಿರಿಗೆ ಪ್ರದಕ್ಷಿಣೆಯಾಗಿ ನಮ್ಮ ದೇಶಾಟನವು ನಡೆಯಬೇಕೆಂಬ ಗುರುವಿನ ಸಂಕಲ್ಪದಂತೆ ಗುರುವರ್ಯರು ಹೇಮಕೂಟ, ಗೋಕರ್ಣ, ಪಂಡರಾಪುರ, ಉಜ್ಜಯನಿಗಳ ಮಾರ್ಗವಾಗಿ ಕಾಶ್ಮೀರ ಪ್ರಾಂತಕ್ಕೆ ಅಡಿಯಿಟ್ಟರು. ಅಲ್ಲಿ ವೈಷ್ಣವೀದೇವಿಯ ಪರ್ವತವನ್ನು ಹತ್ತಿ ಮನೋಹರವಾದ ಗುಹೆಯೊಂದರಲ್ಲಿ ಅನುಷ್ಠಾನಕ್ಕೆ ಕುಳಿತಾಗ ಅವರಿಗೆ ನಿನ್ನ ನೆನಪಾಯಿತು. ಅವರು ನನ್ನನ್ನು ಇಲ್ಲಿಗೆ ಕಳುಹಿಸಿದರು."

ಶ್ರೀಪತಿ ಕೇಳಿದ, "ಭೈರಣ್ಣ, ನನ್ನ ಮೇಲೆ ಅಕಾರಣ ವಾತ್ಸಲ್ಯವನ್ನು ಇಟ್ಟಿರುವ ಆ ಮಹಾ ಗುರುವನ್ನು ಸಂದರ್ಶಿಸಲು ಸಾಧ್ಯವೆ !" ಎಂದ.

"ಅಪ್ಪಾ, ಅದಕ್ಕಾಗಿಯೇ ನಾನು ಬಂದಿರುವುದು. ನೀನು ಹೊರಡುವುದನ್ನು ಮೊದಲು ನಿರ್ಧರಿಸು. ನಾನು ನಿನ್ನನ್ನು ಸುರಕ್ಷಿತವಾಗಿ ಕರೆದೊಯ್ದು ಗುರುದರ್ಶನ ಮಾಡಿಸುತ್ತೇನೆ" ಎಂದ ಭೈರಣ್ಣ ಆತ್ಮೀಯತೆಯಿಂದ

ದುಗ್ಗವ್ವೆಗೆ ಶಂಭುಭಟ್ಟರು ಮತ್ತು ಕನಕಲತೆಯರ ನೆನಪಾಯಿತು. ಆ ಸಂಜೆ ಮೂವರೂ ಶಂಭು ಭಟ್ಟರ ಮನೆಗೆ ಆಗಮಿಸಿದರು.

ಸುಪರಿಚಿತರಾದ ದುಗ್ಗವ್ವೆ ಮತ್ತು ಭೈರಣ್ಣರನ್ನು ಶಂಭುಭಟ್ಟರು ಆದರದಿಂದ ಸ್ವಾಗತಿಸಿದರು. ಮಂಚಣ್ಣನ ದೈವಭಕ್ತಿಯನ್ನು ಕೇಳಿದ್ದ ದುಗ್ಗವ್ವೆ "ಶಿವಲೆಂಕಾ, ಎಂಥ ಬಿರುದಪ್ಪಾ, ನೀನು ಹೊಂದಿರುವುದು! ನಿನ್ನ ಪೂಜಾವೈಭವ ನಾಡಿನಲ್ಲೆಲ್ಲಾ ಹಬ್ಬಿದೆ!" ಎಂದು ಅವನನ್ನು ಆಲಿಂಗಿಸಿ ಹರಸಿದಳು. ಭೈರಣ್ಣನೂ ಮಂಚಣ್ಣನಿಗೆ ವಂದಿಸಿ "ಭಕ್ತ ಕಾಯೋ ಮಮ ಕಾಯಃ" ಎಂಬುದಲ್ಲವೆ ಶಿವನ ಪ್ರತಿಜ್ಞೆ! ಶಿವಭಕ್ತರಿಗೆ ಯಾವುದು ತಾನೆ ಅಸಾಧ್ಯ! ಎಂದ. ಅಷ್ಟುಹೊತ್ತಿಗೆ ಕನ್ಯಾ ಗುರುಕುಲದಿಂದ ಕನಕಲತೆಯೂ ಬಂದಳು.

ಶಂಭುಭಟ್ಟರ ಮನೆಯಲ್ಲಿ ಒಂದು ಔತಣಕೂಟವೇ ನಡೆಯಿತು. ಶಂಭುಭಟ್ಟರು "ಬೆಜವಾಡದಿಂದ ಉಜ್ಜಯಿನಿವರೆಗೆ ತಮ್ಮೊಡನಿದ್ದು ದುಗ್ಗವ್ವೆ ಪರಿಚಯಿಸಿದ ಪುಣ್ಯಕ್ಷೇತ್ರಗಳ ವಿಚಾರಗಳನ್ನು ಎಲ್ಲರಿಗೂ ವಿವರಿಸಿದರು.

ಶ್ರೀಪತಿ ತಾನು ಬರೆಯಲಿರುವ ಪ್ರಬಂಧಕ್ಕೆ ಆಧಾರವಾಗಿ ಮಾಡಿಕೊಳ್ಳಲಿರುವ "ಅಗಸ್ತ್ಯಸೂತ್ರವೃತ್ತಿ"ಯನ್ನು ಕಾಶ್ಮೀರದ ಪುಸ್ತಕ ಭಂಡಾರದಲ್ಲಿ ಹಿಂದೆ ನೋಡಿದ್ದುದಾಗಿ ಸೂರ್ಯಪ್ರಕಾಶ ಶಾಸ್ತ್ರಿಗಳು ಹೇಳಿದ್ದನ್ನು ನಾನು ಕೇಳಿದ್ದೆ. ನನಗೆ ಅಕಾರಣ ಬಂಧುವಾಗಿರುವ ಶ್ರೀಗಿರಿಯ ಮಹಾಚಾರ್ಯರು ತಮ್ಮ ಶಿಷ್ಯರಾದ ವೀರಣ್ಣನ ಪರಿಚರ್ಯೆಯಲ್ಲಿ ಈಗ ಕಾಶ್ಮೀರಕ್ಕೆ ಆಗಮಿಸಿದ್ದಾರೆ. ಅವರ ಸಂದರ್ಶನ ಮಾಡಿ, ಆಶೀರ್ವಾದ ಪಡೆದು, ಅಲ್ಲಿಯ ಪುಸ್ತಕ ಭಂಡಾರದಲ್ಲಿರುವ

ಆ ಹೊತ್ತಿಗೆಯನ್ನು ಹುಡುಕಿ, ಪ್ರತಿ ಮಾಡಿಕೊಂಡು ಬರುವ ಸಂಕಲ್ಪ ಮಾಡಿದ್ದೇನೆ. ಅದಕ್ಕೆ ನಿಮ್ಮೆಲ್ಲರ ಅನುಮತಿ ಬೇಕು" ಎಂದು ನಿವೇದಿಸಿದ ಶ್ರೀಪತಿ.

"ಶ್ರೀಪತಿ ವಿದ್ಯಾಪೀಠಕ್ಕೆ ಕೊಡಲು ಒಪ್ಪಿಕೊಂಡಿರುವ ಪ್ರಬಂಧವು ಪೂರ್ಣವಾಗಲು, ಅವನು ಬಯಸಿದ ಗ್ರಂಥವನ್ನು ಹುಡುಕಿ ತರುವುದು ಅನಿವಾರ್ಯ. ಆದ್ದರಿಂದ ಅವನಿಗೆ ಮಾರ್ಗದರ್ಶನ ಮತ್ತು ರಕ್ಷಣೆಗಾಗಿ ಭೈರಣ್ಣ ಕಂಕಣಕಟ್ಟಿ ನಿಂತಿದ್ದಾನೆ. ಅಂದಮೇಲೆ ಶ್ರೀಪತಿಗೆ ಒಳ್ಳೆ ಭವಿಷ್ಯವನ್ನು ಬಯಸುವ ನಾವು ಸಮ್ಮತಿಸದಿದ್ದರಾದೀತೆ?" ಎಂದರು ಶಂಭುಭಟ್ಟರು ತಲೆತಗ್ಗಿಸಿ ಯೋಚಿಸುತ್ತಿದ್ದ ಕನಕಲತೆಯ ಮುಖ ನೋಡಿ!

"ಶ್ರೀಪತಿಯ ಮೇಲೆ ಅಕಾರಣ ವಾತ್ಸಲ್ಯವನ್ನಿಟ್ಟಿರುವ ಆ ಗುರುವರ್ಯರ ಪುಣ್ಯದರ್ಶನವನ್ನು ಮಾಡಿ ಪಾವನಳಾಗಬೇಕೆಂದು ನನಗೂ ಅನ್ನಿಸಿದೆ. ಮೇಲಾಗಿ ಕಾಶ್ಮೀರ ಮತ್ತು ಹಿಮಗಿರಿಧಾಮಗಳನ್ನು ನೋಡುವ ಕುತೂಹಲವೂ ಬಲವಾಗಿದೆ. ಹಿಂದೆ ನಾವು ಬೆಜವಾಡದಿಂದ ಇಲ್ಲಿಗೆ ಬರುವಾಗ ಪ್ರೇಕ್ಷಣೀಯ ಸ್ಥಳಗಳನ್ನು ತೋರಿಸಿದ ಈ ಪುಣ್ಯಾತ್ಮಳ ನೆರವಿರುವಾಗ ಈ ಅವಕಾಶವನ್ನು ನಾವು ಕಳೆದುಕೊಳ್ಳುವುದು ವಿವೇಕವಲ್ಲ!"

ಎಂದಳು ಕನಕಾ ದುಗ್ಗವ್ವೆಯ ಕಡೆ ಕೃತಜ್ಞತೆ ಬೀರುತ್ತಾ.

ದುಗ್ಗವ್ವೆ ಹೇಳಿದಳು —"ಕನಕಾ, ಈಗ ಶ್ರೀಪತಿ ಭೈರಣ್ಣನ ಜೊತೆ ಕಾಶ್ಮೀರಕ್ಕೆ ಹೊರಡಲಿ. ಗುರುದೇವನು ಕಾಶ್ಮೀರವನ್ನು ಬಿಡುವುದರೊಳಗೆ ನಾನು ನಿನ್ನನ್ನು ಅಲ್ಲಿಗೆ ಕರೆದೊಯ್ದು ಗುರುದರ್ಶನ ಮಾಡಿಸುತ್ತೇನೆ" ಎಂದು.

"ಆಗಬಹುದು. ಆಗ ನಾನೂ ದುಗ್ಗವ್ವೆಯ ಜೊತೆ ಅಲ್ಲಿಗೆ ಹೋಗಿ ಗುರು ದರ್ಶನ ಮಾಡಿ ಬರುತ್ತೇನೆ" ಎಂದರು ಮಗಳ ಇಷ್ಟವನ್ನು ನಿರಾಕರಿಸಲಾಗದೆ ಶಂಭುಭಟ್ಟರು.

ಒಟ್ಟಿನಲ್ಲಿ ಶ್ರೀಪತಿಯ ಪ್ರಯಾಣಕ್ಕೆ ಎಲ್ಲರ ಅನುಮತಿ ದೊರೆತಂತಾಗಿತ್ತು.

೨

## ಕಾಶ್ಮೀರದ ಕಣಿವೆಯಲ್ಲಿ

ಭೈರಣ್ಣ ಶ್ರೀಪತಿಗೆ ಕಾಶ್ಮೀರದ ಪ್ರಕೃತಿ ವೈಭವವನ್ನು ಪರಿಚಯಿಸುತ್ತಿದ್ದ. "ಕಾಶ್ಮೀರವು ಭಾರತದ ಉದ್ಯಾನ. ಕಾಶ್ಮೀರದ ರಾಜಧಾನಿ ಶ್ರೀನಗರ. ವೇದಕಾಲದಲ್ಲಿ ಇದು ಒಂದು ಸರೋವರವಾಗಿದ್ದಿತೆಂದೂ, ಮಹರ್ಷಿ ಕಸ್ಯಪರು ಅದರ ನೀರನ್ನು ತಮ್ಮ ತಪಸ್ತೇಜದಿಂದ ಒಣಗಿಸಿ ಅದನ್ನು ವಾಸಿಸುವ ತಾಣವಾಗಿ ಪರಿವರ್ತಿಸಿದ್ದರಿಂದ ಇದಕ್ಕೆ 'ಕಶ್ಯಪಪುರಿ' 'ಕಾಶ್ಮೀರ' ಎಂದು ಹೆಸರಾಯಿತೆಂದೂ, ನಗರ ಮಧ್ಯದಲ್ಲಿರುವ ಸಾರಿಣಿ ಪರ್ವತದಲ್ಲಿ ಶ್ರೀ ಚಕ್ರವು ಆರ್ಷಿಯಿಂದ ಪೂಜಿಸಲ್ಪಡುತ್ತಿರುವುದರಿಂದ ಈ ನಗರಕ್ಕೆ 'ಶ್ರೀನಗರ'ವೆಂಬ ಹೆಸರು ಬಂದಿತೆಂದೂ ಹೇಳುತ್ತಾರೆ.

ನಗರ ಮಧ್ಯದಲ್ಲಿ ಹರಿಯುತ್ತಿರುವ ನದಿಯು ವೇದ ಕಾಲದಲ್ಲಿ 'ವಿತಸ್ತಾ' ಎಂದು ಕರೆಯಲ್ಪಡುತ್ತಿತ್ತು. ಈ ನದಿ ಶ್ರೀನಗರವನ್ನು ಎರಡಾಗಿ ಸೀಳಿದೆ. ಈ ಎರಡೂ ವಿಭಾಗಗಳಿಗೆ ಹೋಗಿಬರಲು ಅಲ್ಲಲ್ಲಿ ಮರದಿಂದ ಮಾಡಿದ ಅನೇಕ ಸೇತುವೆಗಳಿವೆ. ನಗರದ ಸುತ್ತಲೂ ಸುಂದರವಾದ ಹಲವಾರು ಸರೋವರಗಳಿವೆ. ಹರಿ ಪರ್ವತದಿಂದ ಮಹಾ ದೇವ ಗಿರಿಯವರೆಗೆ ಸುಮಾರು ಹತ್ತು ಮೈಲಿಗಳವರೆಗೆ ಈ ನಗರವು ಹಬ್ಬಿದೆ. ನಗರ ಮಧ್ಯದಲ್ಲಿರುವ ಶಂಕರಪರ್ವತ ಮತ್ತು ಸಾರಿಣೀ ಪರ್ವತಗಳು ನಗರ ವೈಭವವನ್ನು ಎತ್ತಿತೋರುವ ಸಾಂಸ್ಕೃತಿಕ ಶಿಖರ ಗಳೆಂದರೆ ತಪ್ಪಲ್ಲ.

ಶಂಕರಪರ್ವತದ ತಪ್ಪಲಿನಲ್ಲಿ ಶಾರದಾ ಮಂದಿರವಿದೆ. ಆದಿಶಂಕರಾಚಾರ್ಯರು ಸ್ಥಾಪಿಸಿದರೆನ್ನಲಾದ ಶಾರದಾಪೀಠದ ಸೌಂದರ್ಯ ದರ್ಶನೀಯ. ಅಲ್ಲಿ ಶಾರದಾಪೀಠಕ್ಕೆ ಹೊಂದಿಕೊಂಡಿರುವಂತೆ ದೊಡ್ಡ ಪುಸ್ತಕಭಂಡಾರ, ವಿದ್ಯಾರ್ಥಿನಿಲಯಗಳಿವೆ. ಒಬ್ಬ ಮಹಂತರು ಅಲ್ಲಿ ವಾಸವಾಗಿರುತ್ತಾರೆ.

ಶಂಕರಗಿರಿಯ ಮೇಲಿರುವ ಶಿವದೇವಾಲಯಕ್ಕೆ ಸುಮಾರು ಎರಡೂವರೆ ಮೈಲಿ ಹತ್ತಿ ಹೋಗಲು ಕಲ್ಲಿನ ಮೆಟ್ಟಿಲುಗಳಿವೆ. ಅಲ್ಲಿಂದ ಕಾಣುವ ಶ್ರೀನಗರದ ದೃಶ್ಯ ಅವರ್ಣನೀಯ.

ನಗರಸರೋವರದ ನಡುಗಡ್ಡೆಗಳಲ್ಲಿ ಉದ್ಯಾನಗಳು ಏರ್ಪಟ್ಟಿವೆ. ಬಣ್ಣ ಬಣ್ಣದ ಹೂವಿನ ಗಿಡಗಳು, ಲತಾ ಕುಂಜಗಳು, ಹಣ್ಣಿನಮರಗಳು, ಬಿದಿರು ಮೆಳೆಗಳು, ರತ್ನಗಂಬಳಿ ಹಾಸಿದಂತೆ ಕಾಣುವ ಹುಲ್ಲುಗಾವಲುಗಳು ಮನೋಹರವಾಗಿವೆ.

ಶ್ರೀನಗರ ಪರಿಸರಕ್ಕೆ ಸೇರಿದ ಕೆಲವು ಗಿರಿಧಾಮಗಳು ಪ್ರೇಕ್ಷಕರನ್ನು ಹೆಚ್ಚಾಗಿ ಆಕರ್ಷಿಸುತ್ತವೆ. ಅವುಗಳಲ್ಲಿ ಗೌರೀಮಾರ್ಗ ( ಗುಲ್ಮಾರ್ಗ ) ಪ್ರಥಮಗ್ರಾಮ ( ಪಹಲ್‌ಗಾಂವ್ ) ಮುಂತಾದವು ಮುಖ್ಯವಾದುವು.

"ಗೌರೀಮಾರ್ಗವು" ಶ್ರೀನಗರದಿಂದ ಪಶ್ಚಿಮಕ್ಕೆ ಮೂವತ್ತು ಮೈಲಿಗಳ ಅಂತರದಲ್ಲಿದೆ. ಇದರ ಎತ್ತರ ಸಮುದ್ರ ಮಟ್ಟದಿಂದ ೮೭೦೦ ಅಡಿಗಳು. ಇದನ್ನು 'ಭಾರತ ಪರ್ವತಪ್ರದೇಶಗಳ ರಾಣಿ' ಎಂದು ಮುಂತಾಗಿ ಕರೆಯುತ್ತಾರೆ. ವರ್ಷದಲ್ಲಿ ಮೂರು ನಾಲ್ಕು ತಿಂಗಳು ಅಲ್ಲಿ ಹೆಚ್ಚು ಹಿಮಪಾತವಿರುವುದಿಲ್ಲ. ಆಗ ಅಲ್ಲಲ್ಲಿ ಚಿಗುರಿದ ಹುಲ್ಲಿನಮೇಲೆ ಬಣ್ಣ ಬಣ್ಣದ ಹೂಗಳು ಹರಡಿರುವುದರಿಂದ ಆ ಮೈದಾನವು ಕಸೂತಿ ಸೆರಗಿನ ರೇಶ್ಮೆ ಸೀರೆಹಾಸಿದಂತೆ ಕಂಗೊಳಿಸುತ್ತದೆ. ಪ್ರಥಮಗ್ರಾಮ 'ಪಹಲ್‌ಗಾಂವ್' ಎಂಬ ಗಿರಿಧಾಮ ಶ್ರೀನಗರದಿಂದ ಪೂರ್ವಕ್ಕೆ ಅರವತ್ತು ಮೈಲಿ ದೂರದಲ್ಲಿದೆ. ಅದರ ಎತ್ತರ ೭೦೦೦ ಅಡಿಗಳು. ಅಲ್ಲಿಂದ ಮುಂದೆ ಅಮರನಾಥ ಗುಹೆ ಮೂವತ್ತು ಮೈಲಿ ಅಂತರದಲ್ಲಿದೆ. ಮೇಲೆ ಹೇಳಿದ ಈ ಗಿರಿಧಾಮಕ್ಕೆ ಹೋಗುವ ಹಾದಿಯಲ್ಲಿ "ಅನಂತನಾಗ" ಎಂಬ ಸ್ಥಳವಿದೆ. ನೆಲದಿಂದ ಚಿಮ್ಮಿಹರಿಯುವ ಝರಿಗಳಿಗೆ 'ನಾಗಝರಿ' ಎಂದು ಹೆಸರು. ಇಂಥ ಝರಿಗಳು ಇಲ್ಲಿ ಅನಂತವಾಗಿರುವುದರಿಂದ ಇದಕ್ಕೆ 'ಅನಂತನಾಗ' ಎಂಬ ಹೆಸರು ಅನ್ವರ್ಥಕವಾಗಿದೆ. ಅನಂತನಾಗಕ್ಕೆ ಆರು ಮೈಲಿ ಅಂತರದಲ್ಲಿ "ಮಾರ್ತಾಂಡ" ಎಂಬ ಪುರಾತನ ದೇವಾಲಯವಿದೆ. ಇದು ಸುಮಾರು

೫೦೦೦ ವರ್ಷಗಳಷ್ಟು ಹಳೆಯದು. ಇದು ಸೂರ್ಯನ ಉಪಾಸಕರಾದ ಆರ್ಯರು ತಮ್ಮ ಇಷ್ಟದೇವತೆ ಮಾರ್ತಾಂಡನ ಉಪಾಸನೆಗಾಗಿ ಕಟ್ಟಿಸಿದ್ದು ಎಂದು ಹೇಳಲಾಗಿದೆ.

ಸಿಕಿಂದರನಿಂದ ಹಾಳುಗೆಡವಿದ ಈ ದೇವಾಲಯವನ್ನು 'ಅನಂತ ವರ್ಮ'ನು ಎರಡು ಶತಮಾನಗಳ ಹಿಂದೆ ಜೀರ್ಣೋದ್ಧಾರ ಮಾಡಿದ ನೆಂದು ಹೇಳುತ್ತಾರೆ.

ರಾಜಧಾನಿಗೆ ಪಶ್ಚಿಮದಲ್ಲಿರುವ ಮಹಾದೇವಗಿರಿಯ ತಪ್ಪಲಿನಲ್ಲಿ "ಗುಪ್ತಗಂಗಾ" ಎಂಬ ಕ್ಷೇತ್ರವಿದೆ. ಇದು ವಿತಸ್ತಾ ನದಿಯು ಹುಟ್ಟುವ ಸ್ಥಳ. ಇಲ್ಲಿನ ಆಶ್ರಮದಲ್ಲಿ ಶೈವಾಚಾರ್ಯರಾದ ವಸುಗುಪ್ತ, ಸೋಮಾನಂದ, ಅಭಿನವಗುಪ್ತ, ನಾಥಾನಂದ ಮುಂತಾದವರು ಅನುಷ್ಠಾನ ಮಾಡಿದ ಪವಿತ್ರ ಸ್ಥಳವಿದು. ಕಾಶ್ಮೀರದ ದಕ್ಷಿಣಗಡಿಯಲ್ಲಿರುವ 'ಜಯಮಾಲಾ' (ಜಮ್ಮು) ನಗರವು ಪುರಾತನವಾದದ್ದು. ಶಂಕರಾಚಾರ್ಯರು ಈ ನಗರದ ಮಧ್ಯದಲ್ಲಿರುವ ರಘುನಾಥ ದೇವಾಲಯದಲ್ಲಿ ಶ್ರೀಚಕ್ರವನ್ನು ಸ್ಥಾಪಿಸಿ, ಅಲ್ಲಿ ನೂರೊಂದು ಶಿವಲಿಂಗಗಳನ್ನು ಪ್ರತಿಷ್ಠೆ ಮಾಡಿಸಿದರೆಂದು ಹೇಳಲಾಗಿದೆ.

೩

## ವೈಷ್ಣವೋದೇವೀ ಕ್ಷೇತ್ರ

ಈ ನಗರಕ್ಕೆ ಹತ್ತಿರದಲ್ಲಿ ಸುಮಾರು ೫೦೦೦ ಅಡಿ ಎತ್ತರವಿರುವ ವೈಷ್ಣವೋದೇವಿಯ ಪರ್ವತವು ತಪೋಯೋಗ್ಯವಾದ ಗುಹೆಗಳಿಂದಕೂಡಿದೆ. ಪರ್ವತದ ನಡುನೆತ್ತಿಯ ಮೇಲೆ ಭೈರವ ಪ್ರತಿಷ್ಠೆಯಿದೆ. ಅದು ಕಾಪಾಲಿಕರ ಮುಖ್ಯ ಕೇಂದ್ರಗಳಲ್ಲಿ ಒಂದು. ಅಲ್ಲಿಂದ ತುಸು ಕೆಳಗೆ ಇಳಿದರೆ ನಿಸರ್ಗ ಸಿದ್ಧವಾದ ಗುಹೆಯೊಂದರಲ್ಲಿ ನೀರಿನ ಝರಿಯೊಂದು ಚಿಮ್ಮಿ ಹರಿಯು ತ್ತಿದೆ. ತಲೆತಗ್ಗಿಸಿ ಆ ನೀರಿನಲ್ಲಿ ಇಕ್ಕಟ್ಟಾದ ಬಂಡೆಗಳ ನಡುವೆ ಈ ಗುಹೆ ಯಲ್ಲಿ ನಡೆದರೆ ಮುಂದೆ ಒಂದು ಬಂಡೆಯ ಮೇಲೆ ಮೂರು ಶಿಲಾಪಿಂಡಿಕೆ ಗಳಿವೆ. ಕ್ರಮವಾಗಿ ಮಹಾಲಕ್ಷ್ಮಿ, ಮಹಾಕಾಳಿ ಮತ್ತು ಮಹಾಸರಸ್ವತಿಗ ಳೆಂದೂ, ಅವುಗಳ ಮುಂದಿರುವ ಮತ್ತೊಂದು ಶಿಲಾಪಿಂಡಿಕೆ ಯನ್ನು ಶಿವಲಿಂಗವೆಂದೂ ಕರೆಯುತ್ತಾರೆ. ಈ ಕ್ಷೇತ್ರವು ಉತ್ತರ ಭಾರತದ

ಕಾಮಾ, ಪೂರ್ಣಗಿರಿ, ಜಾಲಂಧರ ಮತ್ತು ಓಡಿಯಾನಾ ಎಂಬ ನಾಲ್ಕು ಶಕ್ತಿ ಪೀಠಗಳಲ್ಲಿ ಇದೂ ಒಂದು. ಕಾಶ್ಮೀರ ಪರಿಸರದಲ್ಲಿರುವ ಇದನ್ನು "ಮೇಧಾಪೀಠ"ವೆಂದು ಕರೆಯಲಾಗಿದೆ. ಕಾಶ್ಮೀರ ಶಾರದೆಯೂ ಇವರಲ್ಲಿಯೇ ಸೇರಿದವಳು.

ವೈಷ್ಣವೀ ಎಂದರೆ ಸಾಕ್ಷಾತ್ ವಿಷ್ಣುವೇ ; ವಿಷ್ಣುಮಾಯೆ ಎಂಬುದು ಸುಪ್ರಸಿದ್ಧ ; ಶಕ್ತಿರೂಪನಾದ ಈ ವಿಷ್ಣು ಪರಶಿವನ ಭೋಗದಲ್ಲಿ ಭವಾನಿಯಾಗಿಯೂ, ಪುರುಷರಲ್ಲಿ ವಿಷ್ಣುವಾಗಿಯೂ, ಸಮರದಲ್ಲಿ ದುರ್ಗಿಯಾಗಿಯೂ, ಪ್ರಳಯದಲ್ಲಿ ಕಾಳಿಯಾಗಿಯೂ, ರೂಪು ತಳೆದು ಜಗತ್ತಿನ ಸೃಷ್ಠಿ, ಸ್ಥಿತಿ ; ಲಯಗಳಲ್ಲಿ ಪರಶಿವನಿಗೆ ಸಹಚಾರಿಣಿಯಾಗಿರುವ ಳೆಂಬ ಮಾತು ಇದಕ್ಕೆ ಇಂಬು. ಉಮಾಮಹೇಶ್ವರ, ಶಂಕರನಾರಯಣ, ಹರಿಹರ, ಅರ್ಧನಾರೀಶ್ವರ ರೂಪದಲ್ಲಿರುವ ಶಕ್ತಿ–ಶಿವರ ರಹಸ್ಯವು ಇಲ್ಲಿ ಅಭಿವ್ಯಕ್ತವಾಗಿದೆ.

ನಾನು ಗುರುವಿನ ಆಜ್ಞೆಯಂತೆ ನಿನ್ನನ್ನು ಅರಸಿ ವಾರಾಣಸಿಗೆ ಬಂದಾಗ ಅವರು ಇಲ್ಲಿ ಅನುಷ್ಠಾನದಲ್ಲಿದ್ದರು.

ಕಾಶ್ಮೀರ ರಾಜಮನೆತನವು ಶೈವ ವತ್ತು ವೀರಶೈವ ಸಂಸ್ಕೃತಿಗಳೆರಡಕ್ಕೂ ಪ್ರೋತ್ಸಾಹವಿತ್ತಿದೆ. ಈಗ್ಗೆ ಒಂದು ಶತಮಾನದ ಹಿಂದೆ ಈ ರಾಜವಂಶದಲ್ಲಿ 'ದಿದ್ಧ' ಎಂಬುವನು ರಾಜ್ಯವಾಳುತ್ತಿದ್ದ. ಅವನ ತರುವಾಯ ಬಂದ 'ಸಂಗ್ರಾಮಸಿಂಹನು' ೨೫ ವರ್ಷಗಳ ಕಾಲ ರಾಜ್ಯವಾಳಿದ. ಇವನ ಕಾಲದಲ್ಲಿ ಮಹತ್ತರವಾದ ರಾಜಕೀಯ ಸುಧಾರಣೆಗಳಾದವು. ಇವನ ಮಗ "ಹರಿರಾಜ" ಕೇವಲ ಒಂದು ವರ್ಷ ಆಳಿದ. ಈಗ ಅವನ ತಮ್ಮ "ಅನಂತವರ್ಮ"ನು ರಾಜ್ಯಾಡಳಿತ ನಡೆಸುತ್ತಿದ್ದಾನೆ. ೩೫ ವರ್ಷಗಳ ಈತನ ರಾಜ್ಯಭಾರಕಾಲದಲ್ಲಿ ದೇಶವು ಸಂವೃದ್ಧವಾಗಿದೆ. ಇದನ್ನು ಕಾಶ್ಮೀರದ ಸುವರ್ಣಯುಗ ಎಂದು ಕರೆಯುತ್ತಾರೆ. ಅವನ ಧರ್ಮಪತ್ನಿ "ಸೂರ್ಯಮತಿ"; ಇವಳು ಮಹಾಸಾಧ್ವಿ, ದೈವಭಕ್ತಳು, ಅವಳು ಅನೇಕ ದೇವಾಲಯಗಳನ್ನು

ಕಟ್ಟಿಸಿದ್ದಾಳೆ. ಗುರು-ಜಂಗಮರಿಗೆ, ಕವಿ-ಕಲಾವಿದರಿಗೆ, ಸಾಧುಸಂತರಿಗೆ ನಡೆಯುವ ವಿಶೇಷ ಪುರಸ್ಕಾರಗಳು, ಮುಂತಾದ ಸತ್ಕಾರಗಳಿಗೆಲ್ಲಕ್ಕೂ ಸೂರ್ಯಮತೀದೇವಿಯವರದೇ ಪ್ರೋತ್ಸಾಹ. ನಾನು ಮಹಾರಾಣಿಯವರನ್ನು ಮತ್ತು ಮಹಾರಾಜರನ್ನು ಸಂದರ್ಶಿಸಿ ಶ್ರೀಗಿರಿಯ ಮಹಾಮಹಿಮರಾದ ಜಗದ್ಗುರು ವಿರೂಪಾಕ್ಷದೇಶಿಕೇಂದ್ರರು ಕಾಶ್ಮೀರದ ಪರಿಸರದಲ್ಲಿರುವ ವೈಷ್ಣವೀ ದೇವಿಯ ಪರ್ವತದಲ್ಲಿರುವುದನ್ನು ಸೂಚಿಸಿ ಬಂದಿದ್ದೆ. ಆ ಮಹಾಗುರುವಿನ ಅನುಷ್ಠಾನವು ಮುಗಿದ ಮೇಲೆ ಅವರನ್ನು ರಾಜಧಾನಿಗೆ ಬರಮಾಡಿಕೊಳ್ಳುವುದಾಗಿ ರಾಜದಂಪತಿಗಳು ಹೇಳಿದ್ದರು." ಎಂದು ಭೈರಣ್ಣ ವಿವರಿಸುತ್ತಿದ್ದ.

ಅಷ್ಟು ಹೊತ್ತಿಗೆ ಇಬ್ಬರೂ ಶ್ರೀನಗರವನ್ನು ಸಮೀಪಿಸಿದ್ದರು. ದಾರಿಯಲ್ಲಿ ಬರುತ್ತಿರುವಾಗಲೇ ಸಂಭ್ರಮದ ಮೆರವಣಿಗೆಯೊಂದು ನಗರದಲ್ಲಿ ಏರ್ಪಟ್ಟಿತ್ತು. ಭೇರೀಭಾಂಕಾರಗಳು, ಮಂಗಳವಾದ್ಯಗಳು ಮೊಳಗುತ್ತಿದ್ದವು. ವಿಚಾರಿಸಿದಾಗ ಯಾರೋ ಮಹಾತ್ಮರೊಬ್ಬರನ್ನು ಮಹಾರಾಜರು ಉತ್ಸವದಿಂದ ಬರಮಾಡಿಕೊಳ್ಳುತ್ತಿರುವರೆಂಬ ಸುದ್ದಿ ತಿಳಿದು, ಇಬ್ಬರೂ ಆ ಕಡೆಗೆ ಅಭಿಮುಖರಾದೆವು."

ೞ

## ಶಿವಾಚಾರ್ಯ ಸಂದರ್ಶನ

ಆ ವೇಳೆಗಾಗಲೇ ಮೆರವಣಿಗೆಯು ಅರಮನೆಯ ಪ್ರಾಂಗಣವನ್ನು ಪ್ರವೇಶಿಸಿತ್ತು. ಎಲ್ಲ ರಾಜ ಮರ್ಯಾದೆಗಳೊಡನೆ ಉತ್ಸವ ಅರಮನೆಯ ಮುಂದೆ ಬಂದಾಗ ವೈದಿಕರು ಪೂರ್ಣಕುಂಭ ಹಿಡಿದು ವೇದಘೋಷ ಮಾಡುತ್ತಿದ್ದರು. ಮಹಾರಾಜನು ಧರ್ಮಪತ್ನೀ ಸಮೇತನಾಗಿ ಪಲ್ಲಕ್ಕಿಯ ಹತ್ತಿರ ಬಂದು ಜಗದ್ಗುರುಗಳಿಗೆ ದೊಡ್ಡ ಕುಸುಮಮಾಲಿಕೆಯನ್ನು ಒಪ್ಪಿಸಿ ಫಲಪುಷ್ಪಗಳನ್ನು ಸಮರ್ಪಿಸಿ ಸ್ವಾಗತ ಬಯಸುತ್ತಿದ್ದ.

ಅರಮನೆಯ ಮುಂಭಾಗದ ಸಭಾಮಂಟಪದಲ್ಲಿ ಜಗದ್ಗುರುಗಳಿಗೆ ಸಿಂಹಾಸನವು ಸಿದ್ಧಗೊಳಿಸಿತ್ತು. ಮಹಾರಾಜನು ಜಗದ್ಗುರುಗಳಿಗೆ ಸಾಷ್ಟಾಂಗಪ್ರಣಾಮ ಮಾಡಿ ಅವರನ್ನು ಸಿಂಹಾಸನದ ಕಡೆ ಕರೆತರುತ್ತಿದ್ದ. ಜಗದ್ಗುರುಗಳು ಗಂಭೀರವಾಗಿ ನಡೆದು ಬಂದು ಸಿಂಹಾಸನವನ್ನು ಅಲಂಕರಿಸಿದರು. ಮಹಾರಾಜನು ಪಾದ್ಯಾರ್ಘ್ಯಗಳಿಂದ ಪಾದಪೂಜೆ ಮಾಡಿ ಫಲ ಪುಷ್ಪಗಳನ್ನು ಸಮರ್ಪಿಸಿ ನಮಸ್ಕರಿಸಿದ. ಪ್ರಧಾನಿಯು ಸಭಾಸದರಿಗೆ ಸ್ವಾಗತ ಬಯಸಿ ಎಲ್ಲರನ್ನು ಕುಳಿತುಕೊಳ್ಳುವಂತೆ ವಿನಂತಿಸಿದ. ಪ್ರಧಾನ ಸಚಿವರ ಆದೇಶದಂತೆ ಸಚಿವ ಸಂಪುಟದ ಇತರ ಸದಸ್ಯರು, ಅಧಿಕಾರಿಗಳು ಒಬ್ಬೊಬ್ಬರಾಗಿ ಮುಂದೆ ಬಂದು ಜಗದ್ಗುರುಗಳಿಗೆ ವಂದಿಸಿ, ತಮ್ಮ ತಮ್ಮ ಪೀಠಗಳನ್ನು ಅಲಂಕರಿಸುತ್ತಿದ್ದರು.

ಜಗದ್ಗುರುಗಳು ಅಭಯಹಸ್ತವನ್ನು ಪ್ರದರ್ಶಿಸಿ ಎಲ್ಲರಿಗೂ ಆಶೀರ್ವಾದ ಮಾಡಿದರು. ಸಭೆಯ ವ್ಯವಸ್ಥಾಪಕರು ಎದ್ದುನಿಂತು "ಇಂದು ಸಂಜೆಯಿಂದ ಒಂದು ತಿಂಗಳವರೆಗೆ ಜಗದ್ಗುರುಗಳ ಅಧ್ಯಕ್ಷತೆಯಲ್ಲಿ ಮಹಾಸಭೆಯು "ಸರ್ವಜ್ಞಪೀಠದ ಸಭಾಂಗಣದಲ್ಲಿ" ಏರ್ಪಡುತ್ತದೆ. ಪ್ರತಿದಿನ ಸಂಜೆ ಅನೇಕ ವಿಧ್ವನ್ಮಣಿಗಳಿಂದ ವಿವಿಧ ವಿಷಯಗಳನ್ನು ಕುರಿತು ಭಾಷಣ, ಕಲಾವಿದರಿಂದ ಸಂಗೀತ, ಕೀರ್ತನೆ, ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯುತ್ತವೆ. ಕಾರ್ಯಕ್ರಮದ ಕಡೆಯಲ್ಲಿ ಪ್ರತಿದಿನ ಜಗದ್ಗುರುಗಳ ಪ್ರಸಾದವಾಣಿಯಿಂದ ಧರ್ಮೋಪದೇಶವು ನಡೆಯುತ್ತದೆ. ಸರ್ವರಿಗೂ ಆಹ್ವಾನವುಂಟು. ಸಭಾಸದರು ಕಾರ್ಯಕ್ರಮಕ್ಕೆ ಮೊದಲೇ ಆಗಮಿಸಿ ಪೀಠಗಳಲ್ಲಿ ಆಸೀನರಾಗಿರಬೇಕು" ಎಂದು ವಿನಂತಿಸಿದರು.

ಜಗದ್ಗುರುಗಳ ಅನುಷ್ಠಾನವನ್ನು "ಗುಪ್ತಗಂಗಾಶ್ರಮ"ದಲ್ಲಿ ಏರ್ಪಡಿಸಲಾಗಿತ್ತು. ಆಶ್ರಮದಲ್ಲಿ ಜಗದ್ಗುರುಗಳ ಖಾಸಗಿವ್ಯವಸ್ಥೆಯನ್ನು ವೀರಣ್ಣ ವಹಿಸಿದ್ದ. ಜಗದ್ಗುರುಗಳ ಅನುಷ್ಠಾನ ಮುಗಿದಾಗ ಭೈರಣ್ಣನೊಡನೆ ಶ್ರೀಪತಿ ಜಗದ್ಗುರುಗಳನ್ನು ಸಂದರ್ಶಿಸಿದ. ಭೈರಣ್ಣ ಶ್ರೀಪತಿಯ ಪರಿಚಯ ಮಾಡಹೊರಟಾಗ ಜಗದ್ಗುರುಗಳು ಅಂಗೈಯಲ್ಲಿಟ್ಟ ನೆಲ್ಲಿ ಕಾಯಿಯಂತೆ

ಶ್ರೀಪತಿಯು ಪೂರ್ವೋತ್ತರಗಳನ್ನೆಲ್ಲ ತಿಳಿದಿದ್ದುದರಿಂದ ಅವರು ಶ್ರೀಪತಿಯನ್ನು ಬಳಿಗೆ ಕರೆದು ಪ್ರಸನ್ನವದರಾಗಿ ಮೈದಡವಿ, ತಲೆ ನೇವರಿಸಿ ಹರಸಿದರು.

೫

## ವಿದ್ವತ್ ಸಭೆ

ಸಭೆಯು ವ್ಯವಸ್ಥೆಯನ್ನು ಭೈರಣ್ಣನೇ ವಹಿಸಿಕೊಂಡಿದ್ದ. ಒಂದು ತಿಂಗಳಕಾಲ ನಡೆಯುವ ಆ ಸಭಾದಲ್ಲಿ ನಗರದ ಉದ್ದಾಮ ಸಾಹಿತಿಗಳು ದಾರ್ಶನಿಕರು ಕಲಾವಿದರು ಮತ್ತು ದೂರದ ನಗರಗಳಿಂದ ಆಹ್ವಾನಿತರಾಗಿದ್ದ ಮಹನೀಯರು ಭಾಗವಹಿಸುತ್ತಿದ್ದರು.

ಅರಮನೆಯ ಬಲಗಡೆ ಇರುವ ಮಹಾಸೌಧವೇ 'ಸರ್ವಜ್ಞಪೀಠ.' ಅಲ್ಲಿ ವಿಶಾಲವಾದ ಸಭಾಂಗಣವಿದೆ. ಅಶೋಕ ಚಕ್ರವರ್ತಿಯ ಕಾಲಕ್ಕೆ ಬೌದ್ಧ ವಿದ್ವಾಂಸರನ್ನು ಗೌರವಿಸಲು ಇದು ಏರ್ಪಟ್ಟದ್ದು. 'ಸರ್ವಜ್ಞ' ಎಂಬುದು ಗೌತಮಬುದ್ಧನ ಹೆಸರುಗಳಲ್ಲಿ ಒಂದು. ಅನಂತರ ಬಂದ ಕಾನಿಷ್ಕ, ಜುಷ್ಕ ಮುಂತಾದವರು ಈ ಪರಂಪರೆಯನ್ನು ಬೆಳೆಸಿದರು.

ಆಚಾರ್ಯ ಶಂಕರರು ಕಾಶ್ಮೀರಕ್ಕೆ ಬಂದು ಅಲ್ಲಿಯ 'ಶಂಕರ ಪರ್ವತ'ದ ತಪ್ಪಲಿನಲ್ಲಿ ಶ್ರೀ ಶಾರದೆಯನ್ನು ಪ್ರತಿಷ್ಠಿಸಿದ ಮೇಲೆ ಅಲ್ಲಿ 'ಶಾರದಾಪೀಠ'ವು ಏರ್ಪಟ್ಟಿತು. ಈ ಎರಡೂ ಕಡೆ ದೊಡ್ಡದೊಡ್ಡ ಪುಸ್ತಕ ಭಂಡಾರಗಳಿವೆ. ಮೊದಮೊದಲು ಬೌದ್ಧವಿದ್ವಾಂಸರ ಮತ್ತು ವೈದಿಕ ಪಂಡಿತರ ನಡುವೆ ಏರ್ಪಡುತ್ತಿದ್ದ ವಾಕ್ಯಾರ್ಥಗಳು ಮುಂದೆ ಕಲೆ, ವಿಜ್ಞಾನ, ಸಾಹಿತ್ಯಗಳಲ್ಲಿ ಪಾರಂಗತರಾದ ವಿದ್ವಾಂಸರನ್ನು ಸನ್ಮಾನಿಸುವುದಕ್ಕೆ ಈ ಪೀಠಗಳು ಮೀಸಲಾದುವು.

೬

## ಕಾಶ್ಮೀರ ಶೈವದರ್ಶನ ಸ್ವರೂಪ

"ಬೌದ್ಧಯುಗದ ತರುವಾಯ ಮಹಾಮಾಹೇಶ್ವರಾಚಾರ್ಯನೆನಿಸಿದ್ದ ವಸುಗುಪ್ತನಿಗೆ ಸಿದ್ಧನೊಬ್ಬನ ಆದೇಶದಂತೆ ಮಹಾದೇವಗಿರಿಯ "ಶಂಕರೋಪಲ" ಎಂಬ ಬಂಡೆಯಮೇಲೆ ಮೂರು ಉನ್ಮೇಷಗಳಲ್ಲಿ ಮೂಡಿದ್ದ "ಶಿವಸೂತ್ರಗಳು" ಕಾಶ್ಮೀರ ಶೈವಸಿದ್ಧಾಂತಕ್ಕೆ ತಳಹದಿಯಾದವು. ಶಾಂಭವೋಪಾಯ, ಶಾಕ್ತೋಪಾಯ ಮತ್ತು ಆಣವೋಪಾಯ ಎಂದು ಕರೆಯಲ್ಪಡುವ ಈ ಮೂರು ಮಾರ್ಗಗಳು ಸಾಧಕರ ಅರ್ಹತೆಯನ್ನು ಅನುಸರಿಸಿ ಮುಕ್ತಿಮಾರ್ಗವನ್ನು ಬೋಧಿಸಿದವು.

ವಸುಗುಪ್ತನ ಶಿಷ್ಯ ಕಲ್ಲಟ. ಇವನು ಶಿವಸೂತ್ರಗಳಿಗೆ 'ಕಾರಿಕೆ' ಎಂಬ ಟೀಕೆ ಬರೆದ. ವಸುಗುಪ್ತನ ತರುವಾಯ ಬಂದ ಸೋಮಾನಂದನು 'ಶಿವದೃಷ್ಟಿ' ಎಂಬ ತನ್ನ ಗ್ರಂಥದಲ್ಲಿ ತೀವ್ರಾಧಿಕಾರಿಗಳಿಗಾಗಿ 'ಅನುಪಾಯ' ಎಂಬ ನೂತನ ಮಾರ್ಗವನ್ನು ಕಂಡುಹಿಡಿದು ಅದನ್ನು 'ಪ್ರತ್ಯಭಿಜ್ಞೆ' ಎಂದು ಕರೆದ.

ಸೋಮಾನಂದನ ಈ 'ಪ್ರತ್ಯಭಿಜ್ಞೆ' ಎಂಬ ಮೋಕ್ಷೋಪಾಯವು ಕಾಶ್ಮೀರ ವಿದ್ವಾಂಸರ ಮೆಚ್ಚುಗೆ ಪಡೆಯಿತು.

ಸೋಮಾನಂದನ ಶಿಷ್ಯ ಉತ್ಪಲಾಚಾರ್ಯ. ಅವನು ಈ 'ಶಿವದೃಷ್ಟಿ'ಗೆ ಪ್ರತಿಬಿಂಬದಂತಿರುವ 'ಈಶ್ವರ ಪ್ರತ್ಯಭಿಜ್ಞಾಕಾರಿಕೆ'ಯನ್ನೂ ಅದರ ಮೇಲೆ 'ವೃತ್ತಿ' ಎಂಬ ಟೀಕೆಯನ್ನೂ ಬರೆದು ಮತ್ತೆ ಅದರ ಮೇಲೆ 'ವಿವೃತಿ' ಎಂಬ ಮತ್ತೊಂದು ಟೀಕೆಯನ್ನೂ ಬರೆದ.

ಅಭಿನವಗುಪ್ತನು ಉತ್ಪಲಾಚಾರ್ಯನ ಮೇಲೆ ಹೇಳಿದ 'ಈಶ್ವರ ಪ್ರತ್ಯಭಿಜ್ಞಾಕಾರಿಕೆ, ವೃತ್ತಿ ಮತ್ತು ವಿವೃತಿಗಳಿಗೆ 'ವಿಮರ್ಶಿನೀ' ಮತ್ತು 'ವಿವೃತಿವಿಮರ್ಶಿನೀ' ಎಂಬ ಪ್ರಸಿದ್ಧವಾದ ಎರಡು ಟೀಕೆಗಳನ್ನು ಬರೆದ. ಮೇಲೆ ಹೇಳಿದ ಕಾರಿಕೆ, ವೃತ್ತಿ, ವಿವೃತಿ, ವಿಮರ್ಶಿನೀ ಮತ್ತು ವಿವೃತಿ

ವಿಮರ್ಶಿನೀ ಎಂಬ ಐದು ಗ್ರಂಥಗಳು ಪ್ರತ್ಯಭಿಜ್ಞಾದರ್ಶನದ "ಪ್ರಕರಣ ವಿವರಣ ಪಂಚಕ" ಎಂದು ಹೇಳಲ್ಪಟ್ಟವೆ.

ಅಭಿನವಗುಪ್ತನ "ತಂತ್ರಾಲೋಕ"ವು ಅದ್ವೈತ ಶೈವದರ್ಶನಗಳೆನಿಸಿದ ಕ್ರಮ-ಕುಲ-ಪ್ರತ್ಯಭಿಜ್ಞೆ ಎಂದು ಕರೆಯುವ ಮೂರೂ ದರ್ಶನಗಳನ್ನು ಪ್ರತಿಪಾದಿಸಿದೆ.

ಪ್ರತ್ಯಭಿಜ್ಞೆ ಎಂದರೇನು? ಅದಕ್ಕೆ ಕಾಳಿದಾಸನ "ಅಭಿಜ್ಞಾನ ಶಾಕುಂತಲ"ದಲ್ಲಿ ಬರುವ ಒಂದು ಪ್ರಸಂಗವನ್ನು ಉದಾಹರಿಸಬಹುದು. ದುಷ್ಯಂತನು ಕಣ್ವಾಶ್ರಮದಲ್ಲಿ ಗಿಡಗಳಿಗೆ ಸಖಿಯರಜೊತೆ ನೀರೆರೆಯುತ್ತಿದ್ದ ಶಕುಂತಲೆಯನ್ನು ನೋಡಿ ಮೋಹಿತನಾದ. ಋಷಿ ಪರಸ್ಥಳಕ್ಕೆ ಹೋಗಿದ್ದ. ಆದರೂ ದುಷ್ಯಂತ-ಶಕುಂತಲೆಯರಲ್ಲಿ ಪ್ರೇಮ ಅಂಕುರಿಸಿ ಬೆಳೆಯಿತು. ರಾಜನು ಶಕುಂತಲೆಯನ್ನು ಗಾಂಧರ್ವವಿಧಿಯಂತೆ ಮದುವೆಯಾದ. ರಾಜನು ರಾಜಧಾನಿಗೆ ಹಿಂದಿರುಗುವಾಗ "ದುಷ್ಯಂತ" ಎಂಬ ಮೂರು ಅಕ್ಷರಾಂಕಿತ ಮುದ್ರೆ ಉಂಗುರವನ್ನು ಅವಳಿಗೆ ಕೊಟ್ಟು ಮೂರು ದಿನಗಳೊಳಗೆ ತನ್ನಲ್ಲಿಗೆ ಕರೆಯಿಸಿಕೊಳ್ಳುವುದಾಗಿ ಮಡದಿಗೆ ಭರವಸೆ ಇತ್ತಿದ್ದ.

ಆದರೆ ಈ ಮಧ್ಯೆ ದೂರ್ವಾಸ ಶಾಪವು ತಟಸ್ಥವಾಯಿತು. ಆದರಿಂದ ಅವನು ಶಕುಂತಲೆಯನ್ನು ಕರಯಿಸಿಕೊಳ್ಳುವುದನ್ನು ಮರೆತ. ಕಣ್ವರು ಬಂದ ಮೇಲೆ ಗರ್ಭಿಣಿಯಾದ ಶಕುಂತಲೆಯನ್ನು ರಾಜಧಾನಿಗೆ ಕಳುಹಿಸಿದನಾದರೂ ಶಾಪಗ್ರಸ್ತನಾದ ರಾಜ ಅವಳನ್ನು ತಿರಸ್ಕರಿಸಿದ.

ಆಶ್ರಮವನ್ನು ಬಿಟ್ಟು ಬರುವಾಗ ಶಕುಂತಲೆ ಸರಸ್ಸಿನಲ್ಲಿ ಗಂಗೆಗೆ ಅರ್ಘ್ಯಕೊಡುವಾಗ ರಾಜನು ಕೊಟ್ಟಿದ್ದ ಮುದ್ರೆಉಂಗುರ ಕೈ ಬೆರಳಿನಿಂದ ಜಾರಿ ಕೊಳದಲ್ಲಿ ಬಿದ್ದಿತ್ತು. ಅದನ್ನರಿಯದೆ ಶಕುಂತಲೆ ರಾಜಧಾನಿಗೆ ಹೊರಟಿದ್ದಳು. ಆದರೆ ಉಂಗುರವನ್ನು ನುಂಗಿದ ಮೀನು ಬೆಸ್ತನ ಬಲೆಗೆ ಬಿದ್ದು ಅವನ ಮೂಲಕ ಉಂಗುರ ರಾಜನ ಕೈ ಸೇರಿತು. ಆಗ ಶಕುಂತಲೆಯು ನೆನಪಾಗಿ ರಾಜ ಪರಿತಪಿಸಿದ. ಇದೇ ಪ್ರತ್ಯಭಿಜ್ಞೆ; ಎಂದರೆ ಮರೆತದ್ದು ಮತ್ತೆ ನೆನಪಾಗುವುದು.

ಇದರಂತೆ ಜೀವಾತ್ಮನು ಅಜ್ಞಾನದಿಂದ ತಾನು ಯಾರು ಎಂಬುದನ್ನು ಮರೆತು ಪ್ರಪಂಚದ ಸುಖ ದುಃಖಗಳಿಗೆ ಸಿಕ್ಕಿ ತೊಳಲಾಡುತ್ತಾನೆ. ಆಗ ಆತ್ಮನಿಗೆ ಸಂಸ್ಕಾರವಿಶೇಷ, ಗುರು, ಇಲ್ಲವೆ ಗ್ರಂಥಾವಲೋಕನದಿಂದ ತನ್ನ ನಿಜಸ್ವರೂಪವು ವೇದ್ಯವಾಗುತ್ತದೆ. ಹೀಗೆ ಮರೆತದ್ದನ್ನು ನೆನಪಿಗೆ ತಂದುಕೊಳ್ಳುವುದು ಪ್ರತ್ಯಭಿಜ್ಞೆ. ಆದ್ದರಿಂದಲೇ ಕವಿ ತನ್ನ 'ಶಾಕುಂತಲಕೆ 'ಅಭಿಜ್ಞಾನ' ಎಂಬ ವಿಶೇಷಣ ಕೊಟ್ಟದ್ದು. ಈ ಬಗೆಯ ಪ್ರತ್ಯಭಿಜ್ಞೆ ಪ್ರತ್ಯಕ್ಷ, ಅನುಮಾನ್ ಮತ್ತು ಶಾಬ್ದ ಎಂಬ ಮೂರು ಪ್ರಮಾಣಗಳಿಂದಲೂ ವೇದ್ಯವಾಗುತ್ತದೆ ಎಂಬ ವಿಚಾರಸರಣಿ ಕಾಶ್ಮೀರಶೈವದರ್ಶನದಲ್ಲಿ ವಿಸ್ತಾರವಾಗಿ ವಿವೇಚಿಸಲ್ಪಟ್ಟಿದೆ."

—ಸಭೆಯಲ್ಲಿ ವಿದ್ವಾಂಸರೊಬ್ಬರು ಪ್ರತ್ಯಭಿಜ್ಞೆಯ ಸ್ವರೂಪವನ್ನು ನಿರೂಪಿಸಿದರು.

ಜಗದ್ಗುರುಗಳು ಕಾಶ್ಮೀರಶೈವದ "ಪ್ರತ್ಯಭಿಜ್ಞೆ"ಯನ್ನು ವಿಶ್ಲೇಷಿಸುತ್ತಾ ಅಪ್ಪಣೆ ಕೊಡಿಸಿದರು. "ಪ್ರತ್ಯಭಿಜ್ಞೆ"ಯಲ್ಲಿ ಬರುವ ಮರೆವು (ಅಜ್ಞಾನ) ಎಂದರೆ ತಪ್ಪು ತಿಳುವಳಿಕೆ. ಹಾಗೂ ಆಚಾರ್ಯ ಶಂಕರರ ಮಾಯಾವಾದವು ಸಹ ಒಂದು ಬಗೆಯಲ್ಲಿ ಈ ಅಜ್ಞಾನವನ್ನೇ ಎತ್ತಿ ಹಿಡಿದಿದೆ. ಅಲ್ಲಿ ಅಜ್ಞಾನವನ್ನು 'ಮಾಯೆ' ಎಂದು ಕರೆದು, ಕಡೆಗೆ ಆ ಮಾಯೆ 'ಮಿಥ್ಯೆ' ಎಂದು ಸಾಧಿಸಲಾಗಿದೆ.

ಆದರೆ ಕೇವಲಾದ್ವೈತದ ಮಾಯೆ ಮತ್ತು ಪ್ರತ್ಯಭಿಜ್ಞೆಯ ಅಜ್ಞಾನ (ಮರೆವು) ಒಂದಲ್ಲ, ಕೇವಲಾದ್ವೈತದಲ್ಲಿ ಮಾಯೆ ಮಿಥ್ಯೆ. "ಯಾ-ಮಾ-ಸಾ-ಮಾಯಾ" ಎಂಬ ನಿರ್ವಚನದಂತೆ ಯಾವುದು ಹಿಂದೆ ಇದ್ದಿಲ್ಲ, ಈಗ ಇಲ್ಲ; ಮುಂದೆಯೂ ಇರುವುದಿಲ್ಲವೊ ಅದು ಮಾಯೆ ಉದಾಹರಣೆಗೆ "ಶಶಶೃಂಗ (ಮೊಲದ ಕೊಂಬು)" "ಗಗನಕುಸುಮ (ಆಕಾಶಕುಸುಮ)" ಮುಂತಾದವು. ಕೇವಲಾದ್ವೈತದಲ್ಲಿ ರಜ್ಜುವಿನಲ್ಲಿ ಅಧ್ಯಸ್ಥವಾದ ಸರ್ಪತ್ವವು ಮಿಥ್ಯೆ. ಅದರಂತೆ ಬ್ರಹ್ಮದಲ್ಲಿ ಜಗತ್ತು ಅಧ್ಯಸ್ಥ, ಆದ್ದರಿಂದ ಜಗತ್ತು ಮಿಥ್ಯೆ ಎನಿಸುತ್ತದೆ.

ಆದರೆ ಪ್ರತ್ಯಭಿಜ್ಞೆಯಲ್ಲಿನ ಮರೆವು ಶಕ್ತಿರೂಪ ಮತ್ತು ಸತ್ಯ. ಶಕ್ತಿಯ ಪರಿಣಾಮವೆನಿಸಿದ ಮೂವತ್ತಾರು ತತ್ವಗಳು ಮಿಥ್ಯೆಯಲ್ಲ. ಸತ್ಯವೆನ್ನಲಾಗಿದೆ.

ಆಚಾರ್ಯ ಶಂಕರರು "ಅರವತ್ತು ನಾಲ್ಕು ಆಗಮಗಳನ್ನು ಪ್ರಮಾಣೀಕರಿಸಿ ಮಾಯೆಯನ್ನು ಮಿಥ್ಯಾಪರ್ಯಾಯ ಎಂದದ್ದು ಹೇಗೆ?" ಎಂದು ಒಬ್ಬರು ಪ್ರಶ್ನಿಸಿದರು.

ಮುಂದುವರೆದು ಜಗದ್ಗುರುಗಳು "ಶಂಕರರು ಮೊದಲು ಕಾಶ್ಮೀರಕ್ಕೆ ಬಂದಾಗ ಇಲ್ಲಿ ಬೌದ್ಧಮತ ಬೇರೂರಿತ್ತು. ಬೌದ್ಧರು "ಸರ್ವಂ ಕ್ಷಣಿಕಂ" ಎಂದರೆ 'ಎಲ್ಲವೂ ಮಿಥ್ಯೆ'. ಎಂದು ಜಗತ್ತನ್ನು "ಕ್ಷಣಿಕ" ( ಸುಳ್ಳು ) ಎನ್ನುತ್ತಿದ್ದರು. ಶಂಕರರು ಅವರ ವಾದವನ್ನು ಖಂಡಿಸಿ "ಜಗತ್ತು ಮಿಥ್ಯೆಯಾದರೂ ಬ್ರಹ್ಮವು ಮಾತ್ರ ಸತ್ಯ" "ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ" ಎಂದು ಜಗತ್ತಿಗೆ ಮಿಥ್ಯಾತ್ವವನ್ನು ಒಪ್ಪಿಕೊಂಡು "ಮಾಯಾ"ವಾದವನ್ನು ವಿವರಿಸತೊಡಗಿದರು. ಆದ್ದರಿಂದಲೇ ಎದುರಾಳಿಗಳು ಶಂಕರರನ್ನು "ಪ್ರಚ್ಛನ್ನಬೌದ್ಧ" ಎಂದು ಆಕ್ಷೇಪಿಸಿದ್ದುಂಟು. ಇನ್ನು ಕಾಶ್ಮೀರದಲ್ಲಿದ್ದ ಅರವತ್ತು ನಾಲ್ಕು ಆಗಮಗಳನ್ನು ಪರಿಶೀಲಿಸಿದ ಮೇಲೆ ಶಂಕರರು ಮಾಯೆಯನ್ನು ಶಕ್ತಿಯ ಪರ್ಯಾಯವೆಂದು ನಿರ್ಧರಿಸಿಕೊಂಡು ತಮ್ಮ ಹಿಂದಿನ ನಿಲುವನ್ನು ಬದಲಿಸಿದರು. ಆದ್ದರಿಂದಲೇ ಅವರು ಸೌಂದರ್ಯಲಹರಿಯ ಪ್ರಾರಂಭದಲ್ಲಿ—

"ಶಿವಃ ಶಕ್ತ್ಯಾಯುಕ್ತೋ ಯದಿ ಭವತಿ ಶಕ್ತಃ ಪ್ರಭವಿತುಂ"

ಎಂದು ಪರಶಿವಾಭಿನ್ನವಾದ ಮಾಯೆಗೆ ಸತ್ಯತ್ವವನ್ನು ಅಂಗೀಕರಿಸಿದರು.

ವೀರಶೈವವು ಮಾಯಾಪದನಿರ್ವಚನವನ್ನು ಬಹು ಸುಂದರವಾಗಿ ಬಣ್ಣಿಸಿದೆ.

ಮಂ ಶಿವಂ ಪರಮಂ ಬ್ರಹ್ಮ ಪ್ರಾಪ್ನೋತೀತಿ ಸ್ವಭಾವತಃ।
ಮಾಯೇತಿ ಪ್ರೋಚ್ಯತೇ ಲೋಕೇ ಬ್ರಹ್ಮನಿಷ್ಠಾ ಸನಾತನೀ॥

ಎಂದರೆ "ಮಂ ಯಾತೀತಿ ಮಾಯಾ ; ಮಂ ಶಿವ ; ಆ ಶಿವನಲ್ಲಿ 'ಆಯತಿ' ಎಂದರೆ ಸ್ವಾಭಾವಿಕವಾಗಿ ಅಡಗಿರುವುದರಿಂದ ಮಾಯೆ" ಎಂದು ಹೇಳಿ

ಅದನ್ನು ಸಾಕಷ್ಟು ಶ್ರುತಿಸ್ಮೃತಿ ಪ್ರಮಾಣಗಳನ್ನಿತ್ತು ಸಮರ್ಥಿಸಿದೆ. ಈ ದೃಷ್ಟಿಯಿಂದ ಕಾಶ್ಮೀರ ಶೈವದ ಪ್ರತ್ಯಭಿಜ್ಞೆ ವೀರಶೈವದ ಮಾರ್ಗ ಎಂಬುದನ್ನು ಸಮರ್ಥಿಸಿದೆ ಎಂಬುದರಲ್ಲಿ ಸಂದೇಹವಿಲ್ಲ. ಈ ದೃಷ್ಟಿಯಿಂದ ಕಾಶ್ಮೀರ ಶೈವದ ನಿಲುವು ವೀರಶೈವಕ್ಕೆ ಪೋಷಕವಾಗಿಯೇ ಇದೆ

ಕಾಶ್ಮೀರ ಶೈವವು ಶ್ರುತಿಗಳನ್ನು ಪ್ರಮಾಣೀಕರಿಸಿರುವುದಿಲ್ಲ. ವೀರಶೈವವಾದರೆ "ನಿಗಮಾಗಮ ಸಮ್ಮತ". ಮೇಲಾಗಿ ಕಾಶ್ಮೀರ ಶೈವದಲ್ಲಿ ಆಣವೋಪಾಯ, ಶಾಕ್ತೋಪಾಯ, ಮತ್ತು ಶಾಂಭವೋಪಾಯಗಳಾಗಲಿ ಸೋಮಾನಂದನ ಅನುಪಾಯ ಎಂಬ ಪ್ರತ್ಯಭಿಜ್ಞೆಯಾಗಲಿ ಸಾಧಕರ ಅರ್ಹತೆಯಮೇಲೆ ಏರ್ಪಟ್ಟಿದ್ದರೂ, ಅವುಗಳ ಸಾಧನಕ್ರಮ ಕ್ಲಿಷ್ಟಸಾಧ್ಯ.

ವೀರಶೈವದಲ್ಲಾದರೆ ಶಿವನ ಅಂಶವಾಗಿ ಹುಟ್ಟಿದ ಜೀವನು ಅನೇಕ ಜನ್ಮಗಳಲ್ಲಿ ಗಳಿಸಿದ ಸತ್ಕರ್ಮಗಳ ಫಲವಾಗಿ ಶಿವನ ಅನುಗ್ರಹ(ಶಕ್ತಿಪಾತ) ಪಡೆದು ಗುರುವಿನ ಕೃಪೆಗೆ ಪಾತ್ರನಾಗುತ್ತಾನೆ.

ಸದ್ಗುರುವಿನಿಂದ ಶಿವದೀಕ್ಷೆಯನ್ನು ಪಡೆದ ಸಾಧಕನು ಶ್ರದ್ಧಾ, ನಿಷ್ಠಾ, ಅವಧಾನ, ಅನುಭವ, ಆನಂದ ಮತ್ತು ಸಮರಸ ಎಂಬ ಭಕ್ತಿಯ ಪ್ರಭೇದಗಳನ್ನು ಅನುಷ್ಠಾನ ಮಾಡುತ್ತಾ ಕ್ರಮವಾಗಿ ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯನೆನಿಸಿ, ಪರಶಿವನಲ್ಲಿ ಸಾಮರಸ್ಯವನ್ನು ಪಡೆಯುತ್ತಾನೆ.

ಈ ಸಿದ್ಧಾಂತವು ಸಾಧಕರಿಗೆ ಸುಲಭವಾದ ಉಪಾಯ. ಇದಕ್ಕೆ ರಕ್ಷಕವಾಗಿ ಸಾಮಾಜಿಕವೆನಿಸುವ ಅಷ್ಟಾವರಣಗಳು, ನೀತಿಪ್ರಧಾನವಾದ ಪಂಚಾಚಾರಗಳು, ದಾರ್ಶನಿಕವಾದ ಷಟ್‌ಸ್ಥಳಗಳು ಸಿದ್ಧಾಂತದ ಹಿರಿಮೆಯನ್ನು ಸಾರುತ್ತವೆ. ಅಷ್ಟಾವರಣವೇ ಅಂಗವಾಗಿ, ಪಂಚಾಚಾರವೇ ಪ್ರಾಣವಾಗಿ, ಷಟ್‌ಸ್ಥಲವೇ ಆತ್ಮವಾಗಿ ಉಳ್ಳದ್ದು ವೀರಶೈವ.

ಈ ಮತದಲ್ಲಿ ಅಂಗೀಕೃತವಾಗಿರುವ ಜ್ಞಾನ-ಕರ್ಮಗಳ ಸಮಸಮುಚ್ಚಯತ್ವ, ಸ್ತ್ರೀ ಪುರುಷ ಸಮಾನತೆ, ಪತಿತಪಾವನತ್ವ ಮತ್ತು ಕಾಯಕ ಪ್ರಾಧಾನ್ಯಗಳು ವೀರಶೈವ ಧರ್ಮವು ವಿಶ್ವಧರ್ಮವೆಂಬುದನ್ನು

ಸಾರುತ್ತವೆ. ಎಲ್ಲ ದೃಷ್ಟಿಯಿಂದಲೂ ವೀರಶೈವವು ಕಾಶ್ಮೀರ ಶೈವ ಸಿದ್ಧಾಂತಕ್ಕಿಂತ ಪ್ರಶಸ್ತ ಎಂಬುದನ್ನು ನೀವು ಪ್ರಾಂಜಲ ಮನಸ್ಸಿನಿಂದ ಪರ್ಯಾಲೋಚಿಸಿದಲ್ಲಿ ನಿಮಗೇ ವೇದ್ಯವಾದೀತು!"

ಎಂದು ಆಚಾರ್ಯರು ವೀರಶೈವ ಸಿದ್ಧಾಂತದ ಹೃದಯವನ್ನು ವಿವರಿಸಿದರು. ಶಿವಾಚಾರ್ಯರ ಪ್ರತಿಪಾದನವು ಸಭೆಯನ್ನು ಮುಗ್ಧ ಗೊಳಿಸಿತ್ತು. ಸ್ವಪ್ರಭಾನಂದ ಮುಂತಾದವರು ಶ್ರೀಯವರಿಗೆ ಶರಣಾಗಿ ಅವರಿಂದ ಶಿವದೀಕ್ಷೆ ಸ್ವೀಕರಿಸಿದರು. ಅರಮನೆಯ ರಾಜಕುಟುಂಬವರ್ಗ, ಅವರ ಬಂಧುವರ್ಗದವರೆಲ್ಲ ಶಿವದೀಕ್ಷೆಯನ್ನು ಅನುಗ್ರಹಿಸಬೇಕೆಂದು ಗುರು ವಿನಲ್ಲಿ ಮೊರೆಯಿಟ್ಟರು. ಈ ಸಂದರ್ಭದಲ್ಲಿ ಸ್ವಪ್ರಭಾನಂದರು ಜಗದ್ಗುರುಗಳ ಪ್ರವಚನ ಮತ್ತು ಧರ್ಮಬೋಧೆ ಮುಂತಾದವುಗಳಿಂದ ಪ್ರಭಾವಿತರಾಗಿ ಪ್ರವಚನ ಮುಗಿಯುವುದರ ಒಳಗಾಗಿ 'ಶಿವಾದ್ವೈತ ಮಂಜರಿ' ಎಂಬ ವೀರ ಶೈವ ಪ್ರಕರಣ ಗ್ರಂಥವೊಂದನ್ನು ರಚಿಸಿ, ಶ್ರೀಯವರಿಗೆ ಒಪ್ಪಿಸಿದರು. ಅದ ರಲ್ಲಿ ಕೇವಲಾದ್ವೈತ ಪ್ರತಿಪಾದನ, ಕೇಪಲಾದ್ವೈತ ನಿರಸನ, ಮತ್ತು ವೀರಶೈವ ಸಿದ್ಧಾಂತ ಸಮರ್ಥನವಲ್ಲದೆ ೩೬ ತತ್ತ್ವಗಳ ನಿರೂಪಣೆ ಹಾಗೂ ಅಂಗ–ಲಿಂಗಸ್ಥಲ ಕ್ರಮದಿಂದ ಲಿಂಗಾಂಗಸಾಮರಸ್ಯ (ಮೋಕ್ಷ) ವನ್ನು ಪಡೆವ ವಿಧಾನಗಳನ್ನು ಹೃದಯಂಗಮವಾಗಿ ನಿರೂಪಿಸಲ್ಪಟ್ಟದೆ. ಮೇಲಾಗಿ ಸ್ವಪ್ರಭಾನಂದರು ಶಿವಸೂತ್ರಗಳು, ಸೋಮಾನಂದನ ಶಿವದೃಷ್ಟಿ, ಕಾಳಿ ದಾಸನ ಚಿದ್‌ಗಗನ ಚಂದ್ರಿಕಾ ಮುಂತಾದ ಗ್ರಂಥಗಳನ್ನು ಆಧರಿಸಿ ತನ್ನದೇ ಆದ ರೀತಿಯಲ್ಲಿ ಸಿದ್ಧಾಂತ ಪ್ರತಿಪಾದನೆ ಮಾಡಿದ್ದಾರೆ.

ಜಗದ್ಗುರುಗಳವರಿಂದ ಶಿವದೀಕ್ಷೆ ಪಡೆದ ರಾಜನು ಅಂದಿನಿಂದ ತನ್ನ ಹೆಸರನ್ನು 'ಶಿವದೇವ'ನೆಂದೂ, ಮಹಾರಾಣಿಯವರು 'ಚಿತ್ಸೂರ್ಯಮತಿ' ಎಂದೂ ತಮ್ಮ ಹೆಸರನ್ನು ಬದಲಿಸಿಕೊಂಡರು.

'ಜ್ಞಾನಪೀಠ'ದಲ್ಲಿ ಏರ್ಪಟ್ಟಿದ್ದ ಜಗದ್ಗುರುಗಳವರ ಪ್ರವಚನ ಮುಕ್ತಾಯದ ದಿನ ಪ್ರಾತಃಕಾಲ ಶಂಭುಭಟ್ಟರು ಮತ್ತು ಕನಕಲತೆ ಯುರೊಡನೆ ದುಗ್ಗವ್ವೆ, ಗುಪ್ತಗಂಗಾಶ್ರಮವನ್ನು ಪ್ರವೇಶಿಸಿದಳು. ಅವ ರನ್ನು ಕಂಡ ಶ್ರೀಪತಿ ಸಂತಸಗೊಂಡ!

ಜಗದ್ಗುರುಗಳು ಅನುಷ್ಠಾನದಿಂದ ಹೊರಬಂದು ಪೀಠವನ್ನು ಅಲಂಕರಿಸಿದಾಗ ಭಟ್ಟರು ಮಗಳೊಡನೆ ಮಹಾಗುರುವಿನ ಅಡಿದಾವರೆಗಳಿಗೆ ಸಾಷ್ಟಾಂಗ ಪ್ರಣಾಮ ಮಾಡಿದರು. ದುಗ್ಗವ್ವೆ ಗುರುದೇವನಿಗೆ ಅವರ ಪರಿಚಯ ಮಾಡಹೊರಟಾಗ ಗುರು ಪ್ರಸನ್ನಮುಖರಾಗಿ—

"ನಿಮ್ಮ ಎಲ್ಲ ವಿಚಾರವೂ ಭೈರಣ್ಣನಿಂದ ವೇದ್ಯವಾಗಿದೆ! ಇಲ್ಲಿಯ ಕಾರ್ಯಕ್ರಮ ಮುಗಿದಿದೆ. ನೀವು ಒಳ್ಳೆಯ ಸಮಯಕ್ಕೆ ಬಂದಿದ್ದೀರಿ. ಶ್ರೀಪತಿಯ ಅಪೇಕ್ಷೆಯನ್ನು ಪೂರ್ಣಗೊಳಿಸಿ ನಾವು ರಾಜನನ್ನು ಬೀಳ್ಕೊಂಡು ಮುನ್ನಡೆಯುವವರಿದ್ದೇವೆ. ನಿಮಗೆ ಒಳ್ಳೆಯದಾಗಲಿ!" ಎಂದು ಹರಸಿದರು

೭

## ಕಾಯಕಕಲ್ಪತರು

ಸಂಜೆಯ ಮುಕ್ತಾಯ ಸಮಾರಂಭದಲ್ಲಿ ಜನ ಕಿಕ್ಕಿರಿದು ನೆರೆದಿತ್ತು. ಗುರುಕೃಪೆಗೆ ಪಾತ್ರನಾದ ರಾಜ ಚಿನ್ನದ ಹರಿವಾಣದಲ್ಲಿ ಅನರ್ಘ್ಯವಾದ ಮುತ್ತು-ರತ್ನಗಳು, ಶ್ರೇಷ್ಠವಾದ ಉಡುಗೊರೆ ಮುಂತಾದುವನ್ನು ಫಲ-ಪುಷ್ಪಗಳ ಜೊತೆ ತಂದು ಗುರುದೇವನ ಪದತಲದಲ್ಲಿಟ್ಟು ಪ್ರಣಾಮಮಾಡಿದ. ಶ್ರೀಯವರು ಗಂಭೀರ ಮುಖಮುದ್ರೆ ತಳೆದು ಅಂತರ್ಮುಖಿಯಾದರು.

ಸನ್ನಿವೇಶ ಗಂಭೀರವಾಯಿತು. ರಾಜ ದಿಗ್ಭ್ರಾಂತನಾದ. ಯಾವ ಅಪರಾಧಕ್ಕಾಗಿ ಗುರು ಮುನಿದನೆಂದು ಚಿಂತಿಸತೊಡಗಿದ. ಬಗೆಬಗೆಯಾಗಿ ಅಂಗಲಾಚಿ ರಾಜ ತನ್ನ ಅಪರಾಧವನ್ನು ಮನ್ನಿಸಿ. ಅಳಿಲಭಕ್ತಿಯನ್ನು ಅರ್ಪಿಸಿಕೊಳ್ಳಲು ಗುರುವನ್ನು ಪ್ರಾರ್ಥಿಸಿದ.

ದೇಶಿಕೇಂದ್ರರು ಸ್ವಲ್ಪ ಹೊತ್ತು ಮೌನವಾಗಿದ್ದು ಬಹಿರ್ಮುಖರಾಗಿ ಅಪ್ಪಣೆ ಕೊಡಿಸಿದರು.

"ರಾಜನ್, ನೀನು ನಡೆದುಕೊಂಡ ರೀತಿಯೇ ನಮಗೆ ಮಹಾಪರಾಧವನ್ನೆಸಗಿದಂತಾಗಿದೆ!"

ರಾಜನು ನಡುಗಿದ. ದುಃಖ ಉಮ್ಮಳಿಸಿ ಬಂತು. ಕಣ್ಣುಗಳಲ್ಲಿ ಅಶ್ರುಧಾರೆ ಧಾರಾಕಾರವಾಗಿ ಸುರಿಯತೊಡಗಿತು ಕಂಠ ಗದ್ಗದಿತವಾಗಿತ್ತು. ಬಿನ್ನೈಸಿದ—

"ಗುರುದೇವ, ನನ್ನಿಂದಾದ ಅಂತಹ ಅಪರಾಧವು ಯಾವುದು ? ಕೃಪೆ ಮಾಡಿ ಎಚ್ಚರಿಸಿದರೆ ತಿದ್ದಿಕೊಳ್ಳುವೆನು. ಅನುಗ್ರಹಿಸಬೇಕು" ಎಂದು ಅಂಗಲಾಚಿದ.

ಗುರುವರ್ಯರು ಪ್ರಸನ್ನ ಮುಖಭಾವ ತಳೆದು ಅಪ್ಪಣೆ ಕೊಡಿಸಿದರು. "ರಾಜನ್, ನಿಮಗೆ ಶಿವದೀಕ್ಷೆಯಿತ್ತು ಮಹಾಮಂತ್ರೋಪದೇಶ ಮಾಡಿದ್ದಕ್ಕಾಗಿಯಲ್ಲವೆ ನೀನು ನಮಗೆ ಕಾಣಿಕೆಯನ್ನು ಕೊಟ್ಟಿರುವೆ ?"

"ಹೌದು, ಗುರುದೇವ. ಅದು ನನ್ನ ಅಳಿಲಭಕ್ತಿ ಹಾಗೂ ಅದು ನನ್ನ ಕರ್ತವ್ಯವಲ್ಲವೆ ?"

"ಅಂದರೆ, ನಮ್ಮ ಉಪದೇಶಕ್ಕೆ ಇದು ಬೆಲೆ ಎಂದು ಭಾವಿಸಿದೆಯಾ ?"

"ಛೀ ! ಛೀ ! ಹಾಗೆ ಭಾವಿಸಬಹುದೆ ? ಉಪನಿಷತ್ತಿನಲ್ಲಿ ಜಾನಶ್ರುತಿ ಬ್ರಹ್ಮೋಪದೇಶ ಮಾಡಿದ ಗುರು ರೈಕ್ವನಿಗೆ ಒಂದು ಸಾವಿರ ಸುವರ್ಣ ನಾಣ್ಯ ಮುಂತಾದ್ದನ್ನು ಕಾಣಿಕೆ ಕೊಟ್ಟ ವಿಷಯವನ್ನು ತಾವು ಅಪ್ಪಣೆ ಕೊಡಿಸಿದ್ದೀರಿ. ಆ ದೃಷ್ಟಿಯಿಂದ ನಾನು ಕೊಡುತ್ತಿರುವುದು ಅತ್ಯಲ್ಪ!" ಎಂದು ಅಡ್ಡಬಿದ್ದನು.

"ಉಪನಿಷತ್ತಿನಲ್ಲಿ ಈ ವಿಷಯ ಬಂದಿರುವುದು ನಿಜ. ಆದರೆ ಅಲ್ಲಿ ಸುವರ್ಣನಾಣ್ಯಗಳ ಜೊತೆಗೆ ಬ್ರಹ್ಮವಿದ್ಯಾಸ್ವರೂಪಿಣಿಯಾದ ರಾಜಕನ್ಯೆಯೂ ಗುರುಕಾಣಿಕೆಯಲ್ಲಿ ಸೇರಿದ್ದಳೆಂದು ಹೇಳಿದೆ!"

"ಉಪನಿಷತ್ತಿನ ಕತೆ ಇಲ್ಲಿಗೆ ಅನ್ವಯಿಸುವುದಿಲ್ಲವೆ ಗುರುದೇವ?"

"ಉಪನಿಷತ್ತಿನ ಕತೆಯನ್ನು ಪೂರ್ಣವಾಗಿ ಇಲ್ಲಿ ಅನ್ವಯಿಸಬಾರದು. ಏಕೆಂದರೆ ವೀರಶೈವದಲ್ಲಿ ಗುರು ಎರಡು ವಿಧ. ಗೃಹಸ್ಥ ಮತ್ತು ಮಠಸ್ಥ ಎಂದು. ಗೃಹಸ್ಥಗುರು ಶ್ರೋತ್ರಿಯ ಮತ್ತು ಬ್ರಹ್ಮನಿಷ್ಠ. ಮಠಸ್ಥ

ಗುರು ಕೇವಲ ಬ್ರಹ್ಮನಿಷ್ಠ ಮತ್ತು ಆರೂಢ. ಅವನಿಗೆ ಶ್ರೋತ್ರಿಯತ್ವ ಗೌಣ! ಶಿವಾಧಿಕಾರಿಯಾದ ಅವನಿಗೆ ಶ್ರೋತ್ರಿಯತ್ವ ಸ್ವಯಂಸಿದ್ಧ! ಅಂಥವನಿಗೆ ಲೌಕಿಕ ಕನ್ಯಾಪರಿಗ್ರಹ ನಿಷಿದ್ಧ.

ವೀರಶೈವ ಪೀಠಾಚಾರ್ಯರಲ್ಲಿ ರೇವಣಸಿದ್ಧರು ಮಾತ್ರ ತಾವು ಬ್ರಹ್ಮಭಾವದಲ್ಲಿದ್ದರೂ ಲೀಲಾಮಾತ್ರದಿಂದ ಗೃಹಸ್ಥರೆನಿಸಿದ್ದ ಪ್ರಸ್ತಾಪ ಬಂದಿದೆ. ಆದರೂ ಅದು ಗೌಣ. ಉಳಿದ ಆಚಾರ್ಯರು ಕೇವಲ ಬ್ರಹ್ಮ ನಿಷ್ಠರು. ಉಪನಿಷತ್ತಿನಲ್ಲಿ ಹೇಳಿರುವ ರೈಕ್ವ ಗೃಹಸ್ಥ. ಆದ್ದರಿಂದಲೇ ಅವನಿಗೆ ಜಾನಶೃತಿ ತನ್ನ ಮಗಳನ್ನು ಕೊಟ್ಟದ್ದಲ್ಲದೆ, ಅವನಿಗೆ ವಾಸಿಸಲು ಮನೆ, ಅವನ ಹೆಸರಿನಲ್ಲಿ ಒಂದು ಗ್ರಾಮ, ಮತ್ತು ಪರಿವಾರಗಳನ್ನು ಬಳುವಳಿಯಾಗಿ ಕೊಟ್ಟು ಬ್ರಹ್ಮೋಪದೇಶವನ್ನು ಅವನಿಂದ ಪಡೆದ.

ಪ್ರಕೃತ ನೀನು ನಮಗೆ ಒಪ್ಪಿಸಿರುವ ಕಾಣಿಕೆಯು ನಿನ್ನ ಸ್ವಯಾರ್ಜಿತವೇ ? ಪ್ರಜೆಗಳು ಕಷ್ಟದಿಂದ ಸಂಪಾದಿಸಿದ ಹಣದಿಂದ ನಿನ್ನ ಭಂಡಾರ ತುಂಬಿದೆ. ಈ ಹಣ ಅದೇ ಭಂಡಾರದಿಂದಲ್ಲವೆ ನೀನು ತಂದಿರುವುದು ?"

"ಹೌದು ಗುರುದೇವಾ, ಪ್ರಜೆಗಳ ಕಷ್ಟಾರ್ಜಿತ ಹಣದಲ್ಲಿ ಆರನೇ ಒಂದು ಭಾಗ ರಾಜನಿಗೆ ಸೇರಬೇಕಲ್ಲವೆ ? ಆದ್ದರಿಂದ ನಾನು ತಂದಿರುವ ಕಾಣಿಕೆ ನನ್ನದಾಗುವುದಿಲ್ಲವೆ ? ಅದು ಧರ್ಮ ಸಮ್ಮತವಲ್ಲವೆ ?"

"ವೀರಶೈವ ಸಿದ್ಧಾಂತದ ಪ್ರಕಾರ ಇಲ್ಲಿ ಪೂಜ್ಯವೆನಿಸಿರುವ ಗುರು–ಲಿಂಗ ಮತ್ತು ಜಂಗಮರೂ ಸಹ ಸತ್ಯಶುದ್ಧಕಾಯಕ ಮಾಡಬೇಕೆಂಬ ನಿಯಮವಿದೆ. ಅಂದ ಮೇಲೆ ನೀನೂ ಸಹ ನಿನ್ನ ಧರ್ಮಸಾಧನೆಗಾಗಿ ಒಂದು ಸತ್ಯಶುದ್ಧಕಾಯಕವನ್ನು ಅವಲಂಬಿಸಿ, ಆ ಮೂಲಕವೇ ಗುರು–ಲಿಂಗ–ಜಂಗಮಾರಾಧನೆ ಮಾಡಬೇಕು. ಇಲ್ಲದಲ್ಲಿ ನೀನು ಶಿವಧರ್ಮಕ್ಕೆ ಹೊರಗು. ಆಚಾರ್ಯ ರೇಣುಕರು ಕಾಯಕವನ್ನು 'ವೃತ್ತಿ,ಎಂದಿದ್ದಾರೆ. 'ವೃತ್ತಿ ಶ್ಚೈತನ್ಯರೂಪಿಣಿ' ಎಂಬ ಅವರ ಉಕ್ತಿ ಮರೆಯತಕ್ಕದ್ದಲ್ಲ.

ರಾಜನಿಗೆ ಇದ್ದ ಅಜ್ಞಾನದ ತೆರೆ ಹರಿಯಿತು. ಸುಜ್ಞಾನ ಪ್ರಭೆ ಮೈದೋರಿತು. ಅಂಥ ದ್ರವ್ಯಾರ್ಜನೆಗಾಗಿ ರಾಜನು ಶ್ರೀಯುವರಲ್ಲಿ

ಒಂದು ವಾರದ ಅವಧಿಯನ್ನು ಯಾಚಿಸಿದ. ಆಚಾರ್ಯರು 'ತಥಾಸ್ತು' ಎಂದರು.

ಅಂದಿನಿಂದ ರಾಜನು ಸಭೆಯಲ್ಲಿ ಕಾಣಿಸಿಕೊಳ್ಳಲಿಲ್ಲ. ಪ್ರಧಾನ ಮಂತ್ರಿಯೇ ರಾಜಕಾರ್ಯಗಳನ್ನು ನಡೆಯಿಸುತ್ತಿದ್ದ. ರಾಜನ ಸುಳಿವು ಎಲ್ಲಿಯೂ ಕಾಣಲಿಲ್ಲ.

"ರಾಜನ ಸಕಲಸಂಪತ್ತೂ ಪ್ರಜೆಗಳದೇ! ಅವನಿಗೆ ಪ್ರಜೆಯೇ ದೈವ. ಅದು ಲೌಕಿಕ. ಆದರೆ ಆತ್ಮೋದ್ಧಾರಕ್ಕಾಗಿ ತನ್ನದೇ ಆದ ಒಂದು ಕಾಯಕವಿರಬೇಕೆಂಬುದು ಗುರುವಿನ ಆಣತಿ. ಅಂಥ ಕಾಯಕವನ್ನು ಅವಲಂಬಿಸುವುದು ಕಷ್ಟ.

ರಾಜನು ಯಾವುದಾದರೊಂದು ಉದ್ಯೋಗವನ್ನು ಹುಡುಕಲು ತನ್ನ ವೇಷವನ್ನು ಮರೆಸಿ ನಗರದಲ್ಲಿ ರಾತ್ರಿ ಹೊತ್ತು ಸಂಚರಿಸ ತೊಡಗಿದ. ಎಲ್ಲಿಗೆ ಹೋದರೂ ಆತನನ್ನು ಕೆಲಸಕ್ಕೆ ನೇಮಿಸಿಕೊಳ್ಳಲು ಜನ ನಿರಾಕರಿಸುತ್ತಿದ್ದರು. ಅಂಗಡಿಗಳಲ್ಲಿ, ಕೈಗಾರಿಕೆಶಾಲೆಗಳಲ್ಲಿ ಕಾರ್ಮಿಕ ಕ್ಷೇತ್ರಗಳಲ್ಲಿ ಎಲ್ಲಿಯೂ ಅವನಿಗೆ ಒಂದು ಉದ್ಯೋಗ ದೊರೆಯುವುದು ದುಸ್ತರವಾಯಿತು. ಉದ್ಯೋಗಸಮಸ್ಯೆಯು ದುರ್ಭರ ಪರಿಸ್ಥಿತಿ ಅರಸನಿಗೆ ವೇದ್ಯವಾಯಿತು ನಗರದಲ್ಲಿ ರಾಜ ತಿರುಗಿ ತಿರುಗಿ ಬೇಸತ್ತ. ಕಡೆಗೆ ಒಂದು ದಿನ ಒಂದು ಕುಲುಮೆಯಲ್ಲಿ ಕಾಯ್ದ ಕಬ್ಬಿಣವನ್ನು ಚಮ್ಮಟಿಯಿಂದ ಹೊಡೆಯುವ ಕೆಲಸ ತೆರಪಾಗಿತ್ತು. ಕಾರಣ ಆ ಕೆಲಸಕ್ಕೆ ನೇಮಿಸಿಕೊಂಡಿದ್ದ ವ್ಯಕ್ತಿ ಅಂದು ಅಕಸ್ಮಾತ್ ಬಂದಿರಲಿಲ್ಲ. ಕುಲುಮೆಯ ಯಜಮಾನನು ಈ ಅಪರಿಚಿತನನ್ನು ಕಂಡು ಚಮ್ಮಟಿಗೆಯ ಕಾಯಕವನ್ನು ಮಾಡಲು ಸೂಚಿಸಿದ. ರಾಜ ಒಪ್ಪಿದ, ಆದರೇನು? ಭಾರವಾದ ಆ ಚಮ್ಮಟಿಯನ್ನು ಎತ್ತಿ ಹೊಡೆಯುವ ಅಭ್ಯಾಸ ಅರಸನಿಗೆಲ್ಲಿ ಬರಬೇಕು! ಎತ್ತಿ ಹೊಡೆಯುವಾಗ ಎಷ್ಟೋ ಏಟುಗಳು ಗುರಿ ತಪ್ಪುತ್ತಿದ್ದವು. ಜನ ಪರಿಹಾಸ್ಯ ಮಾಡುತ್ತಿದ್ದರು. ಯಜಮಾನ ಹೀಯಾಳಿಸುತ್ತಿದ್ದ. ಎಷ್ಟೇ ಅಪಮಾನವಾದರೂ ಇಂದು ಸ್ವಯಾರ್ಜಿತ

ವಾದ ಹಣದಿಂದ ಗುರುವಿಗೆ ಭಕ್ತಿಸಲ್ಲಿಸಿ ಅವರ ಕೃಪೆಗೆ ಪಾತ್ರನಾಗ ಬೇಕೆಂಬ ಹಂಬಲ ಅರಸನದು.

ಅಂದು ಸಂಜೆಯುವರೆಗೆ ಚಮ್ಮಾರಿಗೆ ಕಾಯಕ ಸಾಗಿತು. ರಾಜನ ಮೈಯಿಂದ ಅಮಿತವಾಗಿ ಬೆವರು ಸುರಿಯುತ್ತಿತ್ತು. ಮೈ ಹಣ್ಣಾಗಿತ್ತು. ಆದರೆ ಮನಸ್ಸು ಮಾತ್ರ ಪ್ರಸನ್ನವಾಗಿಯೇ ಇತ್ತು. ಆತನ ನಿರ್ಮಲಾಂತಃಕರಣ, ಕಷ್ಟಸಹಿಷ್ಣುತೆಗಳು ಯಜಮಾನನ ಮನಸ್ಸನ್ನು ಕರಗಿಸಿದವು. ಸಂಜೆ ಪ್ರತಿನಿತ್ಯಕೊಡುವ ಕೂಲಿಗಿಂತ ಎರಡರಷ್ಟು ಹಣವನ್ನು ಕೊಡಬೇಕೆನಿಸಿತು ಯಜಮಾನನಿಗೆ. ಆದರೆ ಆ ದಿನ ಅವನಿಗೆ ಬರಬೇಕಾದ ಯಾವ ಹಣವೂ ಬಂದಿರಲಿಲ್ಲ. ಎಷ್ಟು ಪ್ರಯತ್ನಿಸಿದರೂ ಹಣ ಒದಗಲಿಲ್ಲ, ನಾಳೆ ಬಂದರೆ ಎರಡು ದಿನದ ಕೂಲಿಯನ್ನೂ ಸೇರಿಸಿಕೊಡುವುದಾಗಿ ಕಮ್ಮಾರ ಹೇಳಿದ. ಆದರೆ ರಾಜನು ಒಪ್ಪಲಿಲ್ಲ, ಏಕೆಂದರೆ ಅವನು ಗುರುವಿಗೆ ಕೊಟ್ಟಿದ್ದ ಅವಧಿ ಇಂದಿಗೆ ಮುಗಿಯುವುದಿತ್ತು. "ನಾಳೆ ನಾನು ಬರುವುದಿಲ್ಲ"ವೆಂದು ಖಂಡಿತವಾಗಿ ಹೇಳಿದ ರಾಜ. ಕಮ್ಮಾರನ ಸಮಸ್ಯೆ ಬಗೆಹರಿಯಲಿಲ್ಲ, ಕಡೆಗೆ ಆತ ಆ ಕೂಲಿಗೆ .ಸಮ ಮೌಲ್ಯದ ಒಂದು ಕಬ್ಬಿಣದ ತುಂಡನ್ನು ಕೊಟ್ಟ. ರಾಜನಿಗೆ ಬೇಕಾಗಿದ್ದುದೂ ಅಷ್ಟೆ !

ಅದನ್ನೇ ಬಹು ಸಂತೋಷದಿಂದ ತಂದು ಆ ಸಂಜೆ ಅರಮನೆ ಸೇರಿದ ಪ್ರಭು. ಒಡ್ಡೋಲಗ ವಿಜೃಂಭಣೆಯಿಂದ ಏರ್ಪಟ್ಟಿತ್ತು. ಗುರುದೇವನು ಅಗ್ರಾಸನವನ್ನು ಅಲಂಕರಿಸಿದ್ದ. ಸಭೆಗೆ ಬಂದ ರಾಜನನ್ನು ಕಂಡ ಜನ ಹರ್ಷೋದ್ಗಾರ ಮಾಡಿತು. ರಾಜ ಸ್ವಯಾರ್ಜಿತ ವಾದ ಆ ಕಬ್ಬಿಣದ ತುಂಡನ್ನೇ ತಟ್ಟೆಯಲ್ಲಿಟ್ಟು ಮುಚ್ಚಿ ಫಲ ಪುಷ್ಪಗಳೊಂದಿಗೆ ತಂದು ಗುರು ಸನ್ನಿಧಿಗೆ ಅರ್ಪಿಸಿದ. ಗುರುವಿನ ಮುಖ ಪ್ರಫುಲ್ಲವಾಗಿತ್ತು. ಗುರುಗಳು ರಾಜನು ಕೊಟ್ಟ ಕಾಣಿಕೆಯನ್ನು ಕಂಡು ಸಂತೋಷಿಸಿದರು. ಮಾತ್ರವಲ್ಲದೆ ಅದು ಹೇಗೆ ಸ್ವಯಾರ್ಜಿತ ಎಂಬುದನ್ನು ಸಭೆಗೆ ನಿವೇದಿಸಲು ಅಪ್ಪಣೆ ಮಾಡಿದರು. ರಾಜನಿಗೆ ಕಷ್ಟಕ್ಕಿಟ್ಟು ಕೊಂಡಿತು, ಆದರೆ ಗುರುವಿನ ಆಜ್ಞೆ ಮೀರುವಂತಿರಲಿಲ್ಲ, ಒಂದು ವಾರ

ತಾನು ಕಾಣೆಯಾಗಿದ್ದುದರ ಕಾರಣವನ್ನು ಹೇಳತೊಡಗಿದ ರಾಜ ನಡೆದದ್ದನ್ನೆಲ್ಲ ಸಭೆಗೆ ವಿವರಿಸಿದ. ಸಭೆ ಮಂತ್ರಮುಗ್ಧವಾಗಿತ್ತು. ವೀರಶೈವದಲ್ಲಿರುವ ಕಾಯಕದ ಹಿರಿಮೆಯನ್ನು ಅರ್ಥಮಾಡಿಕೊಂಡ ವಿದ್ವಾಂಸರು ಅವಾಕ್ಕಾದರು. ಶ್ರೀಯವರ ಹಸ್ತಸ್ಪರ್ಶದಿಂದ ಕಬ್ಬಿಣ (ಕಾರ್ಬೊನನ್ನು) ಸುವರ್ಣವಾಗಿತ್ತು. ಗುರು ಹೇಳಿದರು "ಕಾಯಕದಿಂದ ಬಂದದ್ದು ಕಾರ್ಬೊನ್ನಾದರೂ ಅದು ಸುವರ್ಣವೇ! ಎಂದು"

ಗುರುವಿನ ಮಹಿಮೆಯನ್ನು ಜನ ಕೊಂಡಾಡಿತು. ಸತ್ಯಶುಧ್ಧ ಕಾಯಕದ ಹಿರಿಮೆಯನ್ನು ಜನ ಮನಗಂಡರು. ಅಂದಿನ ಸಭೆ ಜಯ ಜಯಕಾರದಿಂದ ಕೊನೆಗೊಂಡಿತು.

೮

## ಅರ್ಹ ಅಭ್ಯರ್ಥಿ

ವಿಧ್ವತ್ ಸಭೆಯಲ್ಲಿ ನಡೆದ ವಾಕ್ಯಾರ್ಥಗಳನ್ನು ಗಮನಿಸಿದ ಶ್ರೀಪತಿ ತಾನು ಕಾಶ್ಮೀರಕ್ಕೆ ಬಂದದ್ದು ಸಾರ್ಥಕವಾಯಿತು ಎಂದು ಕೊಂಡ.

ಮೊದಲನೆಯದಾಗಿ ತನಗೆ ಮಹಾಮಹಿಮರಾದ ಶಿವಾಚಾರ್ಯರ ಸಂದರ್ಶನ ಮತ್ತು ಅವರ ಅನುಗ್ರಹವಾದದ್ದು, ಎರಡನೆಯದಾಗಿ ದಿನ ದಿನವೂ ಸ್ಥಳ ಪರಸ್ಥಳಗಳಿಂದ ಆಗಮಿಸುತ್ತಿದ್ದ ವಿದ್ವಾಂಸರ ಸಮಾಗಮ ಮತ್ತು ಅವರ ಭಾಷಣಗಳಲ್ಲಿ ಪ್ರತಿಪಾದಿಸುತ್ತಿದ್ದ ಅನೇಕ ವಿಚಾರ ಸಂಪತ್ತು ಅವನದಾಗಿತ್ತು. ಕಡೆಯದಾಗಿ ವಿದ್ವತ್ ಸಭೆಯಲ್ಲಿ ಕಾಶ್ಮೀರ ಶೈವ ಮತ್ತು ವೀರಶೈವ ದರ್ಶನಗಳ ಬಗೆಗೆ ನಡೆದ ವಾಕ್ಯಾರ್ಥ! ಅದರಲ್ಲಿ ಕಾಶ್ಮೀರಶೈವದಲ್ಲಿ ಜಗದ್ಗುರುಗಳು ಉಲ್ಲೇಖಿಸಿದ ಅನೇಕ ಕೊರತೆಗಳು ಹಾಗೂ ಅವುಗಳಿಗೆ ಶ್ರೀಯವರು ನೀಡಿದ ಉತ್ತರಗಳ ಬಗೆಗೆ ವಶರಾಗಿ ಸ್ವಪ್ರಭಾನಂದರೇ ಮುಂತಾದ ಕಾಶ್ಮೀರ ಶೈವಪಂಡಿತರು ಜಗದ್ಗುರುಗಳಿಗೆ

ಶರಣಾಗಿ ಅವರಿಂದ ವೀರಶೈವ ದೀಕ್ಷೆಯನ್ನು ಪಡೆದರಲ್ಲದೆ ಸ್ವಪ್ರಭಾನಂದರು ಸಭೆಯ ಕಾರ್ಯಕ್ರಮಗಳು ನಡೆದ ಅವಧಿಯಲ್ಲಿಯೇ "ಶಿವಾದ್ವೈತ ಮಂಜರಿ" ಯಂತಹ ಪ್ರಕರಣ ಗ್ರಂಥವನ್ನು ರಚಿಸಿ ಶ್ರೀಯವರಿಗೆ ಸಮರ್ಪಿಸಿದ್ದು ಶ್ರೀಪತಿಯ ಮನಸ್ಸಿನ ಮೇಲೆ ಪ್ರಭಾವವನ್ನು ಬೀರಿತ್ತು.

ಜಗದ್ಗುರುಗಳು ತಾವು ಶ್ರೀನಗರವನ್ನು ಬಿಡುವ ಮುನ್ನ ಶ್ರೀಪತಿಯನ್ನು ಬಳಿಗೆ ಕರೆದು ಹೇಳಿದರು—

"ನಮ್ಮ ಸಂಚಾರದಲ್ಲಿ ಸಂಗ್ರಹಿಸಿರುವ ಕೆಲವು ಅಪೂರ್ವ ಓಲೆ ಪ್ರತಿ ಮತ್ತು ಹಸ್ತಪ್ರತಿಗಳನ್ನು ಈ ದಿನ ನಿನಗೆ ಅನುಗ್ರಹಿಸುತ್ತಿದ್ದೇವೆ. ಅವುಗಳನ್ನು ಸೂಕ್ತ ಕಂಡಂತೆ ನೀನು ಬಳಸಿಕೊಳ್ಳಬಹುದು. ಎಂದು.

ಶ್ರೀಪತಿ ಕಟ್ಟುಗಳನ್ನು ಬಿಚ್ಚಿದ. ಅದರಲ್ಲಿ

೧. ರೇಣುಕ ಮತ್ತು ದಾರುಕರ ಬ್ರಹ್ಮಸೂತ್ರವೃತ್ತಿಗಳು.

೨. ಕೈವಲ್ಯ ಚಂದ್ರೋದಯ–ಪರಮಾನಂದಾರಾಧ್ಯ ವಿರಚಿತ.

೩. ಕೈವಲ್ಯ ಪ್ರಕಾಶ—ಪರಮಶಿವಾರಾಧ್ಯ ವಿರಚಿತ

೪. ಶಿವಜ್ಞಾನಚಂದ್ರೋದಯ—ಶಾಂಭವಾನಂದಾರಾಧ್ಯ ಕೃತ

೫. ಶಿವಾದ್ವೈತ ಪ್ರಕಾಶ– ಉದ್ಭಟಾರಾಧ್ಯ ವಿರಚಿತ

ಇವಲ್ಲದೆ ಜ್ಯೋತಿರ್ನಾಥ, ಘಂಟಾನಾಥ, ಭೀಮನಾಥ ಮತ್ತು ಭಟ್ಟ ಭಾಸ್ಕರ ಮುಂತಾದವರ ಅಪೂರ್ವ ಕೃತಿಗಳ ಕಟ್ಟುಗಳಿದ್ದವು. ಶ್ರೀಪತಿ ಅದನ್ನು ಕಣ್ಣಿಗೊತ್ತಿಕೊಂಡು ಗುರುಗಳಿಗೆ ಅಡ್ಡಬಿದ್ದು 'ಅನುಗೃಹೀತೋಽಸ್ಮಿ' ಎಂದು ಬಿನ್ನೈಸಿದ.

"ಗುರುದೇವಾ, ನಾನು ಇಲ್ಲಿಗೆ ಬರುವುದಕ್ಕೆ ಮುಖ್ಯವಾದ ಕಾರಣಗಳು ಎರಡು ಅವುಗಳಲ್ಲಿ ತಮ್ಮ ಪುಣ್ಯ ಸಂದರ್ಶನ ಮೊದಲನೆಯದು."

ಇನ್ನು ಒಂದು ತಿಂಗಳವರೆಗೆ ತಮ್ಮ ಸನ್ನಿಧಿಯಲ್ಲಿ ನಡೆದ ಪ್ರವಚನದಲ್ಲಿ ತತ್ತ್ವಜ್ಞಾನದ ಅಮೃತವಾಹಿನಿ ನನ್ನ ಮನಸ್ಸಿನ ಹೊಲಬಿನ ಮೇಲೆ ಹರಿದದ್ದು. ಆ ಪವಿತ್ರ ಜ್ಞಾನತೀರ್ಥದಲ್ಲಿ ಮಿಂದು ಪುನೀತನಾಗಿದ್ದೇನೆ.

ಎಲ್ಲಕ್ಕಿಂತ ಮುಖ್ಯವಾಗಿ ಆ ಉಜ್ವಲ ಜ್ಞಾನಪ್ರಕಾಶದಲ್ಲಿ ನನ್ನ ಎಷ್ಟೋ ಸಂದೇಹಗಳು ಪರಿಹಾರವಾಗಿವೆ. ಆದರೆ ನಾನು ಬರೆಯಬೇಕೆಂದಿರುವ 'ಬ್ರಹ್ಮಸೂತ್ರ ಭಾಷ್ಯ'ಕ್ಕೆ ಆಗತ್ಯವಾದ ಅಗಸ್ತ್ಯ ಮಹರ್ಷಿ ಪ್ರಣೀತವಾದ 'ಸೂತ್ರವೃತ್ತಿ' ನನಗಿನ್ನೂ ಲಭ್ಯವಾಗಿಲ್ಲ!" ಎಂದು ಪ್ರಾಂಜಲನಾಗಿ ನಿವೇದಿಸಿದ ಶ್ರೀಪತಿ.

ಆಲಿಸಿದ ಗುರುವರ್ಯರು — "ನೀನು ತಿಳಿಸಿರುವ ಅಗಸ್ತ್ಯರು ಸಾಮಾನ್ಯರಲ್ಲ. ಅವರು ಆದಿ ರೇಣುಕರಿಂದಲೇ ಶಿವದೀಕ್ಷೆ ಪಡೆದ ಧನ್ಯಾತ್ಮರು! ಅಂಥವರು ಬ್ರಹ್ಮಸೂತ್ರಗಳ ಮೇಲೆ ಬರೆದಿರುವ ಸೂತ್ರ ವೃತ್ತಿಯು ನಿನ್ನ ಭಾಷ್ಯರಚನೆಗೆ ಅತ್ಯಗತ್ಯವೆಂಬುದನ್ನು ಬಲ್ಲೆವು. ಅದನ್ನು ದೊರಕಿಸಿಕೊಡಬೇಕೆಂದು ಪೀಠವನ್ನು ಬಿಡುವಾಗಲೇ ಸಂಕಲ್ಪಿಸಿದೆವು. ಮಾರ್ಗಮಧ್ಯದಲ್ಲಿ ಅನೇಕ ನಗರಗಳ ಪುಸ್ತಕ ಭಂಡಾರಗಳಲ್ಲಿ ಹುಡುಕಿಸಿದೆವು. ಆದರೆ ಅದು ದೊರೆಯಲಿಲ್ಲ. ಕಾಶ್ಮೀರದ ಗಡಿ ಎನಿಸಿರುವ 'ಜಯಮಾಲಾ' ನಗರದಲ್ಲಿ ಒಂದು ಬೃಹತ್ ಪುಸ್ತಕ ಭಂಡಾರವಿದೆ ಎಂದು ಕೇಳಿ ಅಲ್ಲಿಗೆ ಬಂದೆವು. ಗ್ರಂಥಭಂಡಾರದ ಗ್ರಂಥಪಟ್ಟಿಕೆಯಲ್ಲಿ ಅಗಸ್ತ್ಯಸೂತ್ರ ವೃತ್ತಿಯ ಹೆಸರಿತ್ತು! ಅದನ್ನು ಕಂಡು ಮನಸ್ಸಿಗೆ ಪರಮಾನಂದವಾಯಿತು. ಗ್ರಂಥಪಾಲಕರಿಂದ ಅದನ್ನು ಹೊರತೆಗೆಯಿಸಿ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಮೈಯುಬ್ಬಿ ಬಂತು! ಅದನ್ನು ಪ್ರತಿ ಮಾಡಿಸಿ ತಂದಿದ್ದೇವೆ!"

ಎಂದಾಗ ಶ್ರೀಪತಿಯ ಮುಖವರಳಿತು! ಭಟ್ಟರು ಮುಗ್ಧರಾದರು! ಕನಕಾ ಚಕಿತಳಾದಳು! ಭೈರಣ್ಣಾದಿಗಳು ಕುತೂಹಲಾವಿಷ್ಟರಾದರು!

ಗುರುವರ್ಯರು - ಮುಂದುವರೆದು ಹೇಳಿದರು—

"ಗ್ರಂಥರತ್ನವು ಹಸ್ತಗತವಾದ ಮೇಲೆ ಅದನ್ನು ಅರ್ಹ ಅಭ್ಯರ್ಥಿಗೆ ಅನುಗ್ರಹಿಸಿ ಕೃತಾರ್ಥರಾಗಬೇಕೆನಿಸಿತು. ಸುಸಂಸ್ಕೃತೆಯೂ ಸುಲಕ್ಷಣೆಯೂ ಆದ ಮಗಳನ್ನು ಅನುರೂಪನಾದ ವರನಿಗೆ ಧಾರೆ ಎರೆದು ಕೃತಕೃತ್ಯನಾಗ ಬಯಸಿದ ತಂದೆಯಂತೆ. ಅಂಥ ಕನ್ಯಾದಾನದಿಂದ ಉಭಯವಂಶಗಳೂ ಬೆಳಗುವಂತೆ ಈ ಸತ್ಕೃತಿರತ್ನಪ್ರದಾನದಿಂದ ಸಾರಸ್ವತಲೋಕದ ತತ್ತ್ವ ಶಾಸ್ತ್ರದಲ್ಲಿನ ಕತ್ತಲು ಕಳೆದು ಸತ್ಯಪ್ರಕಾಶವುಂಟಾಗಲೆಂದು ಬಗೆದೆವು.

ಶರಣಾಗಿ ಅವರಿಂದ ವೀರಶೈವ ದೀಕ್ಷೆಯನ್ನು ಪಡೆದರಲ್ಲದೆ ಸ್ವಪ್ರಭಾನಂದರು ಸಭೆಯು ಕಾರ್ಯಕ್ರಮಗಳು ನಡೆದ ಅವಧಿಯಲ್ಲಿಯೇ "ಶಿವಾದ್ವೈತ ಮಂಜರಿ" ಯಂತಹ ಪ್ರಕರಣ ಗ್ರಂಥವನ್ನು ರಚಿಸಿ ಶ್ರೀಯವರಿಗೆ ಸಮರ್ಪಿಸಿದ್ದು ಶ್ರೀಪತಿಯು ಮನಸ್ಸಿನ ಮೇಲೆ ಪ್ರಭಾವವನ್ನು ಬೀರಿತ್ತು.

ಜಗದ್ಗುರುಗಳು ತಾವು ಶ್ರೀನಗರವನ್ನು ಬಿಡುವ ಮುನ್ನ ಶ್ರೀಪತಿಯನ್ನು ಬಳಿಗೆ ಕರೆದು ಹೇಳಿದರು—

"ನಮ್ಮ ಸಂಚಾರದಲ್ಲಿ ಸಂಗ್ರಹಿಸಿರುವ ಕೆಲವು ಅಪೂರ್ವ ಓಲೆ ಪ್ರತಿ ಮತ್ತು ಹಸ್ತಪ್ರತಿಗಳನ್ನು ಈ ದಿನ ನಿನಗೆ ಅನುಗ್ರಹಿಸುತ್ತಿದ್ದೇವೆ. ಅವುಗಳನ್ನು ಸೂಕ್ತ ಕಂಡಂತೆ ನೀನು ಬಳಸಿಕೊಳ್ಳಬಹುದು. ಎಂದು.

ಶ್ರೀಪತಿ ಕಟ್ಟುಗಳನ್ನು ಬಿಚ್ಚಿದ. ಅದರಲ್ಲಿ

೧. ರೇಣುಕ ಮತ್ತು ದಾರುಕರ ಬ್ರಹ್ಮಸೂತ್ರವೃತ್ತಿಗಳು.

೨. ಕೈವಲ್ಯ ಚಂದ್ರೋದಯ–ಪರಮಾನಂದಾರಾಧ್ಯ ವಿರಚಿತ.

೩. ಕೈವಲ್ಯ ಪ್ರಕಾಶ—ಪರಮಶಿವಾರಾಧ್ಯ ವಿರಚಿತ

೪. ಶಿವಜ್ಞಾನಚಂದ್ರೋದಯ—ಶಾಂಭವಾನಂದಾರಾಧ್ಯ ಕೃತ

೫. ಶಿವಾದ್ವೈತ ಪ್ರಕಾಶ– ಉದ್ಭಟಾರಾಧ್ಯ ವಿರಚಿತ

ಇವಲ್ಲದೆ ಜ್ಯೋತಿರ್ನಾಥ, ಘಂಟಾನಾಥ, ಭೀಮನಾಥ ಮತ್ತು ಭಟ್ಟ ಭಾಸ್ಕರ ಮುಂತಾದವರ ಅಪೂರ್ವ ಕೃತಿಗಳ ಕಟ್ಟುಗಳಿದ್ದವು. ಶ್ರೀಪತಿ ಅದನ್ನು ಕಣ್ಣಿಗೊತ್ತಿಕೊಂಡು ಗುರುಗಳಿಗೆ ಅಡ್ಡಬಿದ್ದು 'ಅನುಗೃಹೀತೋಽಸ್ಮಿ' ಎಂದು ಬಿನ್ನೈಸಿದ.

"ಗುರುದೇವಾ, ನಾನು ಇಲ್ಲಿಗೆ ಬರುವುದಕ್ಕೆ ಮುಖ್ಯವಾದ ಕಾರಣಗಳು ಎರಡು ಅವುಗಳಲ್ಲಿ ತಮ್ಮ ಪುಣ್ಯ ಸಂದರ್ಶನ ಮೊದಲನೆಯದು."

ಇನ್ನು ಒಂದು ತಿಂಗಳವರೆಗೆ ತಮ್ಮ ಸನ್ನಿಧಿಯಲ್ಲಿ ನಡೆದ ಪ್ರವಚನದಲ್ಲಿ ತತ್ತ್ವಜ್ಞಾನದ ಅಮೃತವಾಹಿನಿ ನನ್ನ ಮನಸ್ಸಿನ ಹೊಲಬಿನ ಮೇಲೆ ಹರಿದದ್ದು. ಆ ಪವಿತ್ರ ಜ್ಞಾನತೀರ್ಥದಲ್ಲಿ ಮಿಂದು ಪುನೀತನಾಗಿದ್ದೇನೆ.

ಎಲ್ಲಕ್ಕಿಂತ ಮುಖ್ಯವಾಗಿ ಆ ಉಜ್ವಲ ಜ್ಞಾನಪ್ರಕಾಶದಲ್ಲಿ ನನ್ನ ಎಷ್ಟೋ ಸಂದೇಹಗಳು ಪರಿಹಾರವಾಗಿವೆ. ಆದರೆ ನಾನು ಬರೆಯಬೇಕೆಂದಿರುವ 'ಬ್ರಹ್ಮಸೂತ್ರ ಭಾಷ್ಯ'ಕ್ಕೆ ಅಗತ್ಯವಾದ ಅಗಸ್ತ್ಯ ಮಹರ್ಷಿ ಪ್ರಣೀತವಾದ 'ಸೂತ್ರವೃತ್ತಿ' ನನಗಿನ್ನೂ ಲಭ್ಯವಾಗಿಲ್ಲ!" ಎಂದು ಪ್ರಾಂಜಲನಾಗಿ ನಿವೇದಿಸಿದ ಶ್ರೀಪತಿ.

ಆಲಿಸಿದ ಗುರುವರ್ಯರು — "ನೀನು ತಿಳಿಸಿರುವ ಅಗಸ್ತ್ಯರು ಸಾಮಾನ್ಯರಲ್ಲ. ಅವರು ಆದಿ ರೇಣುಕರಿಂದಲೇ ಶಿವದೀಕ್ಷೆ ಪಡೆದ ಧನ್ಯಾತ್ಮರು! ಅಂಥವರು ಬ್ರಹ್ಮಸೂತ್ರಗಳ ಮೇಲೆ ಬರೆದಿರುವ ಸೂತ್ರ ವೃತ್ತಿಯು ನಿನ್ನ ಭಾಷ್ಯರಚನೆಗೆ ಅತ್ಯಗತ್ಯವೆಂಬುದನ್ನು ಬಲ್ಲೆವು. ಅದನ್ನು ದೊರಕಿಸಿಕೊಡಬೇಕೆಂದು ಪೀಠವನ್ನು ಬಿಡುವಾಗಲೇ ಸಂಕಲ್ಪಿಸಿದೆವು. ಮಾರ್ಗಮಧ್ಯದಲ್ಲಿ ಅನೇಕ ನಗರಗಳ ಪುಸ್ತಕ ಭಂಡಾರಗಳಲ್ಲಿ ಹುಡುಕಿಸಿದೆವು. ಆದರೆ ಅದು ದೊರೆಯಲಿಲ್ಲ. ಕಾಶ್ಮೀರದ ಗಡಿ ಎನಿಸಿರುವ 'ಜಯಮಾಲಾ' ನಗರದಲ್ಲಿ ಒಂದು ಬೃಹತ್ ಪುಸ್ತಕ ಭಂಡಾರವಿದೆ ಎಂದು ಕೇಳಿ ಅಲ್ಲಿಗೆ ಬಂದೆವು. ಗ್ರಂಥಭಂಡಾರದ ಗ್ರಂಥಪಟ್ಟಿಕೆಯಲ್ಲಿ ಅಗಸ್ತ್ಯಸೂತ್ರ ವೃತ್ತಿಯ ಹೆಸರಿತ್ತು! ಅದನ್ನು ಕಂಡು ಮನಸ್ಸಿಗೆ ಪರಮಾನಂದವಾಯಿತು. ಗ್ರಂಥಪಾಲಕರಿಂದ ಅದನ್ನು ಹೊರತೆಗೆಯಿಸಿ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಮೈಯುಬ್ಬಿ ಬಂತು! ಅದನ್ನು ಪ್ರತಿ ಮಾಡಿಸಿ ತಂದಿದ್ದೇವೆ!"

ಎಂದಾಗ ಶ್ರೀಪತಿಯ ಮುಖವರಳಿತು! ಭಟ್ಟರು ಮುಗ್ಧರಾದರು! ಕನಕಾ ಚಕಿತಳಾದಳು! ಭೈರಣ್ಣಾದಿಗಳು ಕುತೂಹಲಾವಿಷ್ಟರಾದರು!

ಗುರುವರ್ಯರು – ಮುಂದುವರೆದು ಹೇಳಿದರು:—

"ಗ್ರಂಥರತ್ನವು ಹಸ್ತಗತವಾದ ಮೇಲೆ ಅದನ್ನು ಅರ್ಹ ಅಭ್ಯರ್ಥಿಗೆ ಅನುಗ್ರಹಿಸಿ ಕೃತಾರ್ಥರಾಗಬೇಕೆನಿಸಿತು. ಸುಸಂಸ್ಕೃತೆಯೂ ಸುಲಕ್ಷಣೆಯೂ ಆದ ಮಗಳನ್ನು ಅನುರೂಪನಾದ ವರನಿಗೆ ಧಾರೆ ಎರೆದು ಕೃತಕೃತ್ಯನಾಗ ಬಯಸಿದ ತಂದೆಯಂತೆ. ಅಂಥ ಕನ್ಯಾದಾನದಿಂದ ಉಭಯವಂಶಗಳೂ ಬೆಳಗುವಂತೆ ಈ ಸತ್ಕೃತಿರತ್ನಪ್ರದಾನದಿಂದ ಸಾರಸ್ವತಲೋಕದ ತತ್ತ್ವ ಶಾಸ್ತ್ರದಲ್ಲಿನ ಕತ್ತಲು ಕಳೆದು ಸತ್ಯಪ್ರಕಾಶವುಂಟಾಗಲೆಂದು ಬಗೆದೆವು.

ಇಕೊ, ಅದನ್ನು ನಿನ್ನ ಕರಕಮಲದಲ್ಲಿಟ್ಟು ಆಶೀರ್ವದಿಸಿದ್ದೇವೆ. ಅದನ್ನು ಸದುಪಯೋಗ ಪಡಿಸಿಕೊಳ್ಳುವ ಹೊಣೆ ನಿನ್ನದು !"

ಎಂದ ಗುರುವರ್ಯರು ರೇಶ್ಮೆ ಮಡಿವಸ್ತ್ರದಲ್ಲಿ ಸುತ್ತಿ ಪೂಜಾಪೀಠ ದಲ್ಲಿರಿಸಿದ್ದ ಕಟ್ಟನ್ನು ವೀರಣ್ಣನಿಂದ ತರಿಸಿ ಶ್ರೀಪತಿಗೆ ನೀಡಿದರು.

ಹಸ್ತಪ್ರತಿ ಸ್ಪರ್ಶದಿಂದ ಶ್ರೀಪತಿಯ ಮೈ ರೋಮಾಂಚಿತವಾಯಿತು! ನೇತ್ರಪ್ರಾಂತಗಳಲ್ಲಿ ಆನಂದಬಾಷ್ಪಗಳು ತುಳುಕಿದವು. "ಕೃತಾರ್ಥೋಽಸ್ಮಿ" ಎಂಬ ಉದ್ಗಾರ ಶ್ರೀಪತಿಯ ಮುಖದಿಂದ ಅಪ್ರಯತ್ನವಾಗಿ ಹೊರಬಿತ್ತು.

"ಗುರುದೇವ, ಕೃತಾರ್ಥನಾದೆ ! ಅಲಭ್ಯವಾಗಿದ್ದ ಈ ಚಿಂತಾರತ್ನ ಅನಿಮಿತ್ತಬಂಧುವಾದ ತಮ್ಮ ದಿವ್ಯಕೃಪಾಶೀರ್ವಾದದಿಂದ ನನಗೆ ಲಭಿಸಿತು. ಇದು ನನ್ನ ಮೇಲೆ ತಮಗಿರುವ ಅಪಾರ ವಾತ್ಸಲ್ಯಕ್ಕೆ ಸ್ಪಷ್ಟ ನಿದರ್ಶನ ! ಈ ಸಮಯದಲ್ಲಿ ನನ್ನ ಬಾಲ್ಯದ ವಿದ್ಯಾಗುರುಗಳೊಬ್ಬರು ಹೇಳಿದ ಮಾತೊಂದು ನೆನಪಾಯಿತು !"

"ಯಾವ ಮಾತು ?"

"ಏಕಮೇವಾಕ್ಷರಂ ಯತ್ತು ಗುರುಃ ಶಿಷ್ಯಂ ಪ್ರಬೋಧಯೇತ್ ।
ಪೃಥಿವ್ಯಾಂ ನಾಸ್ತಿ ತದ್ದ್ರವ್ಯಂ ಯದ್ದತ್ವಾಽಽನೃಣೀ ಭವೇತ್ ॥

ಎಂದರೆ "ಗುರು ಶಿಷ್ಯನಿಗೆ ಬೋಧಿಸಿದ್ದು ಒಂದೇ ಅಕ್ಷರವಾದರೂ ಅದಕ್ಕೆ ಪ್ರತಿಯಾಗಿ ಯಾವುದನ್ನಾದರೂ ಕೊಟ್ಟು ಋಣಮುಕ್ತನಾಗ ಬಯಸಿದರೆ ಜಗತ್ತಿನಲ್ಲಿ ಅಂಥ ವಸ್ತುವೇ ಇಲ್ಲ" ಎಂದ ಶ್ರೀಪತಿ.

ಗುರು ಪ್ರಶ್ನಿಸಿದರು — "ಏಕಮೇವ ಅಕ್ಷರಂ" ಎಂದೆಯಲ್ಲ ! ಆ ಒಂದು ಅಕ್ಷರ ಯಾವುದು ?"

"ಆಗ ನಾನು ಗ್ರಹಿಸಿದ್ದ ಅರ್ಥ—ಅಕ್ಷರಮಾಲೆಯಲ್ಲಿನ ಯಾವುದಾ ದರೊಂದು ಅಕ್ಷರ ! ಎಂದು"

"ಆಗಬಹುದು. ವಾಸ್ತವವಾಗಿ ಎಲ್ಲ ವರ್ಣಗಳೂ ಮಾತೃಕಾ ಸಮಾಮ್ನಾಯದಲ್ಲಿ ಸೇರಿರುವುದರಿಂದ ಅವೆಲ್ಲವೂ ಬೀಜಾಕ್ಷರಗಳೇ ! ಆದರೆ ಇಲ್ಲಿ ಶ್ರೀಗುರು ದೀಕ್ಷಾಕಾಲದಲ್ಲಿ ಉಪದೇಶಿಸುವ ಮಹಾಮಂತ್ರದ ಮೊದಲ ಲ್ಲಿರುವ ಪ್ರಣವಾಕ್ಷರ !

ಮೇಲೆ ಹೇಳಿದ ಕಾರಿಕೆಯಲ್ಲಿ ಸೂಚಿಸಿರುವ 'ಏಕಮೇವಾಕ್ಷರಂ' ಎಂದರೆ ಇದೇ ! ಮಹಾಮಂತ್ರವು ಪ್ರಣವದ ವಿಕಾಸ ! ಅದು ಇಡೀ ಜನ್ಮವನ್ನೇ ಪಾವನಗೊಳಿಸುವ ಪ್ರಣವ ಸಹಿತ ಪಂಚಾಕ್ಷರ ಮಹಾಮಂತ್ರ! ಈ ಜಗತ್ತು ಆ ಮಹಾಮಂತ್ರಮಯ !"

ಜಗದ್ಗುರುಗಳ ಮಂತ್ರಾರ್ಥವಿವರಣ ಕೇಳಿ ಶ್ರೀಪತಿ ಚಕಿತನಾದ ! ನಾನು ಆ ಕಾರಿಕೆಯ ಸ್ಥೂಲವಾದ ಅಕ್ಷರಾರ್ಥವನ್ನು ಮಾತ್ರ ಗ್ರಹಿಸಿದ್ದೆ! ಆದರೆ ಗುರುಮುಖದಿಂದ ಬಂದ ಪ್ರಸಾದವಾಣಿ ಕೇಳಿದ ಮೇಲೆ ಪಾಂಡಿತ್ಯ ಬಲದಿಂದ ಮಾಡುವ ಅರ್ಥಕ್ಕೂ ಗುರುಮುಖದಿಂದ ಬರುವ ಅನುಭವ ಪೂರ್ಣವಾದ ಅರ್ಥಕ್ಕೂ ಎಷ್ಟು ಅಂತರವಿದೆ ಎಂಬುದು ಸ್ಪಷ್ಟವಾಯಿತು." ಎಂದ ಶ್ರೀಪತಿ ಗುರುವಿಗೆ ಮತ್ತೊಮ್ಮೆ ಪ್ರಣಾಮ ಮಾಡಿ ಮೇಲೆದ್ದ.

ಶ್ರೀಗುರು ಅಪ್ಪಣೆ ಕೊಡಿಸಿದರು—"ಮರಿ, ನೀನು ಈ ನಗರದ ಪುಸ್ತಕಭಂಡಾರಗಳನ್ನೂ ಮತ್ತೊಮ್ಮೆ ಶೋಧಿಸು. ಸೂತ್ರವೃತ್ತಿಯ ಮತ್ತೊಂದು ಪ್ರತಿಯು ದೊರೆಯಬಹುದು. ಅದು ನಿನ್ನ ಕಾರ್ಯಕ್ಕೆ ಸಹಾಯಕವಾಗುತ್ತದೆ !

ಎರಡನೆಯದಾಗಿ ನೀನು ಕೈ ಕೊಂಡಿರುವ ಭಾಷ್ಯರಚನೆ ಸಾಮಾನ್ಯ ವಾದ ಕೆಲಸವಲ್ಲ. ಅದು ಪೂರ್ಣವಾಗಲು ಐದಾರು ವರ್ಷಗಳಾದರೂ ಬೇಕಾದೀತು ! ನೀನೀಗ ವಿದ್ಯಾಪೀಠಕ್ಕೆ ಒಪ್ಪಿಸಬೇಕಾದ ಪ್ರಬಂಧ ಆ ಭಾಷ್ಯದ ಒಂದು ಮುಖ್ಯ ಭಾಗವಾಗಿದ್ದರೂ ಸಾಕು ! ಎಂದು ಭಾವಿಸುತ್ತೇವೆ."

"ಗುರುದೇವಾ, ನಾನು ಸಿದ್ಧಪಡಿಸುವ ಪ್ರಬಂಧವು ಅಪೂರ್ಣ ವಾಗಿದ್ದರೆ ವಿದ್ಯಾಪೀಠವು ಒಪ್ಪೀತೆ ?" ಎಂಬ ಸಂದೇಹವನ್ನು ವ್ಯಕ್ತ ಪಡಿಸಿದ ಶ್ರೀಪತಿ.

ಗುರು ಹೇಳಿದರು—"ಅಪ್ಪ, ನೀನು ಸಿದ್ಧಪಡಿಸುವ ಪ್ರಬಂಧವು ಅಪೂರ್ಣವಾಗಿರಬೇಕೆಂಬುದು ನಮ್ಮ ಮಾತಿನ ಅರ್ಥವಲ್ಲ ! ಈ ದಿಸೆಯಲ್ಲಿ ಸ್ವಪ್ರಭಾನಂದರು ನಮಗೆ ಒಪ್ಪಿಸಿರುವ "ಶಿವಾದ್ವೈತಮಂಜರಿ" ಯಲ್ಲಿ ಈ ಬಗ್ಗೆ ಮಾಡಿರುವ ವ್ಯಾಖ್ಯೆ ನಮ್ಮ ಮಾತನ್ನು ಪುಷ್ಟೀಕರಿಸುತ್ತದೆ.

ಆದರಲ್ಲಿ ಅವರು "ಬ್ರಹ್ಮ ಸೂತ್ರಗಳ ಮೊದಲ ಐದು ಅಧಿಕರಣಗಳನ್ನು ಮಾತ್ರ ವ್ಯಾಖ್ಯಾನಿಸಿ—

"ಉತ್ತಮಾಧಿಕಾರಿಣಂ ಪ್ರತಿ ಈಕ್ಷತ್ಯಂತ್ಯೈವ ಬ್ರಹ್ಮವಿದ್ಯಾ"

ಎಂದರೆ "ಉತ್ತಮಾಧಿಕಾರಿಗೆ ಬ್ರಹ್ಮಸೂತ್ರದ ಪ್ರಾರಂಭದ ಐದು ಅಧಿಕರಣಗಳು ಸಾಕು" ಎಂದಿದ್ದಾರೆ. ಏಕೆಂದರೆ ಬ್ರಹ್ಮ ಸೂತ್ರಗಳಲ್ಲಿ ಸಮನ್ವಯ-ಅವಿರೋಧ-ಸಾಧನ ಮತ್ತು ಫಲ ಎಂಬ ನಾಲ್ಕು ಅಧ್ಯಾಯಗಳಿವೆ. ಪ್ರಾರಂಭದ ಐದು ಅಧಿಕರಣಗಳಲ್ಲಿ ಈ ನಾಲ್ಕೂ ಅಧ್ಯಾಯಗಳ ಅರ್ಥ ಅಡಕವಾಗಿದೆ. ಹೇಗೆಂದರೆ ಈಕ್ಷಿತ್ರತ್ವಾಧಿಕರಣದಲ್ಲಿ ಅವಿರೋಧ ಮತ್ತು ಫಲಾಧ್ಯಾಯಗಳ ಅರ್ಥವೂ ಸಮನ್ವಯಸೂತ್ರದಲ್ಲಿ ಸಮನ್ವಯಾಧ್ಯಾಯಾರ್ಥವೂ ಜಿಜ್ಞಾಸಾಸೂತ್ರದಲ್ಲಿ ಸಾಧನಾಧ್ಯಾಯದ ಅರ್ಥವೆಲ್ಲವೂ ಸಂಗ್ರಹಿಸಲ್ಪಟ್ಟಿದೆ. ಆದ್ದರಿಂದ ಉತ್ತಮಾಧಿಕಾರಿಗೆ ಇದಿಷ್ಟೇ ಬ್ರಹ್ಮವಿದ್ಯೆ ಸಾಕು, ಎಂದಿದ್ದಾರೆ.

ಮುಂದುವರೆದು ಅವರು 'ಮಧ್ಯಮಾಧಿಕಾರಿಗೆ ಪ್ರಾರಂಭದ ಐದು ಪಾದಗಳು ('ಪಂಚಪಾದಿಕಾ ಬ್ರಹ್ಮವಿದ್ಯಾ') ಸಾಮಾನ್ಯರಿಗೆ ಉಳಿದೆಲ್ಲ ಶಾಸ್ತ್ರವೂ ಬೇಕು (ಅಧಮಾಧಿಕಾರಿಣಂ ಪ್ರತಿ ಅವಶಿಷ್ಟಂ ಶಾಸ್ತ್ರಂ ಪ್ರವೃತ್ತಂ) ಎಂದು ಹೇಳಿದೆ" ಎಂದ ಗುರುವರ್ಯರು ಮೌನ ತಳೆದರು.

ಶ್ರೀಪತಿ ಗುರುವಿನ ಅರ್ಥಗರ್ಭಿತವಾದ ಉಪದೇಶವನ್ನು ಮನಗಂಡು ಕೃತಜ್ಞತೆ ಸಲ್ಲಿಸಿದ.

ಶಂಭುಭಟ್ಟರು ಮತ್ತು ಕನಕಲತೆಯರು ಗುರುವಿಗೆ ಸಾಷ್ಟಾಂಗ ಪ್ರಣಾಮ ಮಾಡಿದರು. "ಕೃಪಾದೃಷ್ಟಿಯಿಂದ ಅವರನ್ನು ಗಮನಿಸಿದ ಗುರು 'ಭಟ್ಟರೇ, ನೀವು ಪುಣ್ಯಶಾಲಿಗಳು ! ನಿಮ್ಮ ಮಗಳು ಸಾಕ್ಷಾತ್ ಕನಕದುರ್ಗಿಯ ಪ್ರಸಾದದಿಂದ ಜನಿಸಿದವಳು, ಸುಸಂಸ್ಕೃತೆ, ಅವಳ ಕೈ ಹಿಡಿದು ಶ್ರೀಪತಿ ಲೋಕೋತ್ತರ ಯಶೋಭಾಗಿಯಾಗುವನು! ಈ ದಂಪತಿಗಳು ಲೋಪಾಮುದ್ರಾ-ಅಗಸ್ತ್ಯರಂತೆ ಅರುಂಧತೀ-ವಸಿಷ್ಠರಂತೆ ಧನ್ಯಾತ್ಮರಾಗಿ ಬಾಳಿ ಬೆಳಗಲಿ !"

ಎಂದ ಗುರು ಕನಕಲತೆಯನ್ನು ಬಳಿಗೆ ಕರೆದು "ಮಗು, ನಿಮ್ಮ ಬಾಳು ಬಂಗಾರವಾಗಲಿ! ನಿಮ್ಮ ಜೀವನ ಲೋಕಹಿತಕ್ಕೆ ಮುಡಿಪಾಗಲಿ! ಶ್ರೇಯೋಽಸ್ತು"ಎಂದು ಫಲಪುಷ್ಪ ನೀಡಿದರು. ಶ್ರೀಪತಿ ಗುರುವಾಕ್ಯಕ್ಕೆ ತಲೆಬಾಗಿ ವಿಸ್ಮಿತನಾದ ! ಕನಕಲತೆ ಶ್ರೀಗುರುವಿನ ಅಮೃತ ಹಸ್ತದಿಂದ ಅನುಗ್ರಹರೂಪವಾಗಿ ಬಂದ ಫಲಪುಷ್ಪಗಳನ್ನು ಮಡಿಲೊಡ್ಡಿ ಸ್ವೀಕರಿಸಿ ಕೈಮುಗಿದಳು.

ಶಂಭುಭಟ್ಟರು "ಗುರುದೇವ, ಕನಕಲತೆ ಇದೇ ಸಮಯದಲ್ಲಿ ಹಿಮ ಗಿರಿಧಾಮಗಳ ಸಂದರ್ಶನ ಮಾಡಬೇಕೆಂದು ಬಯಸಿ ಬಂದಿದ್ದಾಳೆ. ಅನುಮತಿಸಬೇಕು ! " ಎಂದು ಬಿನ್ನೈಸಿ ಕೈ ಮುಗಿದರು.

"ಒಳ್ಳೆಯ ಸಂಕಲ್ಪ ! 'ಹೆಣ್ಣು ಮಕ್ಕಳಿಗೆ ಸಮಯಕ್ಕೆ ತಕ್ಕ ಬುದ್ಧಿ' ಎಂಬುದಕ್ಕೆ ಇದು ನಿದರ್ಶನ. 'ಪ್ರಾಕೃತಿಕ ದೃಷ್ಟಿಯಿಂದ ಹಿಮಾಲಯ ಪರ್ವತಪ್ರದೇಶ ನೋಡತಕ್ಕದ್ದು. ಆದರೆ ಸಾಂಸ್ಕೃತಿಕ ದೃಷ್ಟಿಯಿಂದ ಹಿಮಗಿರಿಧಾಮಗಳು ಮಾನವನ ಜನ್ಮಸಾರ್ಥಕ್ಯದ ಮುಖ್ಯ ನೆಲೆಗಳು' ಎಂಬುದನ್ನು ದುಗ್ಗವ್ವೆ ನಿಮಗೆ ಸೂಚಿಸುತ್ತಾಳೆ ! ಶ್ರೀಪತಿ ತನ್ನ ಪ್ರಬಂಧ ರಚನೆಗೆ ಮುನ್ನ ಹಿಮಗಿರಿಧಾಮಗಳನ್ನು ಸಂದರ್ಶಿಸುವುದು ಅತ್ಯಗತ್ಯ !"

"ಗುರುದೇವಾ, ವಿದ್ಯಾಪೀಠದ ಕಾರ್ಯ ಗೌರವದಿಂದ ನಾನು ಈ ಕೂಡಲೆ ಹಿಂದಿರುಗಬೇಕಾಗಿದೆ. ಪ್ರಕೃತ ಕನಕಾ-ಶ್ರೀಪತಿಗಳು ಈಹಿರಿಯರ ಮಾರ್ಗದರ್ಶಿತ್ವದಲ್ಲಿ ಹಿಮಗಿರಿಧಾಮಗಳನ್ನು ಸಂದರ್ಶಿಸಿ ಬರಲು ಇವರಿಗೆ ಸೂಚಿಸಿ, ನಾನು ವಾರಾಣಸಿಗೆ ಹಿಂದಿರುಗಲು ಅನುಮತಿಸಬೇಕು" ಎಂದು ಕೈಮುಗಿದರು ದುಗ್ಗವ್ವೆ ಭೈರಣ್ಣರ ಕಡೆ ನೋಡುತ್ತಾ ಶಂಭುಭಟ್ಟರು.

"ಒಳ್ಳೆಯ ಸೂಚನೆ. ಆದರೆ ನಾನು ಈಗ ಶ್ರೀಪತಿಗೆ ನೀಡಿರುವ ಪವಿತ್ರ ಗ್ರಂಥಗಳು ಅಪೂರ್ವ ಮತ್ತು ಅಮೂಲ್ಯವಾದವು. ಅವುಗಳನ್ನು ಹಿಮಗಿರಿಧಾಮಗಳಿಗೆ ಒಯ್ಯುವುದು ಬೇಡ ! ನೀವು ಅವುಗಳನ್ನು ಜೋಪಾನವಾಗಿ ಜೊತೆಗೆ ಒಯ್ಯಿರಿ ; ಏಕೆಂದರೆ ಈ ಗಿರಿಧಾಮಗಳಲ್ಲಿ ಅವುಗಳ ರಕ್ಷಣೆ ಕಷ್ಟ !" ಎಂದು ಜಗದ್ಗುರುಗಳು ಸೂಚಿಸಿ ಎಲ್ಲರನ್ನೂ ಬೀಳ್ಕೊಟ್ಟರು ಪ್ರಸನ್ನವದನರಾಗಿ.

* * *

ತರುವಾಯ ಜಗದ್ಗುರುಗಳು ವೀರಣ್ಣನನ್ನು ಕರೆದು "ನಾವು ಇನ್ನು ನಗರ ಪ್ರದೇಶದಲ್ಲಿ ನಮ್ಮ ಅನುಷ್ಠಾನವನ್ನು ಮುಂದುವರಿಸುವುದು ಬೇಡ. ಹಿಮಗಿರಿಧಾಮಗಳಲ್ಲಿ ಅನುಷ್ಠಾನಯೋಗ್ಯವಾದ ಅನೇಕ ಗುಹೆಗಳಿರುವುದಾಗಿ ಕೇಳಿದ್ದೇವೆ. ಅಂಥ ನಿರ್ಜನವೂ ಪವಿತ್ರವೂ ಆದ ಗುಹೆಗಳಲ್ಲಿ ನಮ್ಮ ಅನುಷ್ಠಾನವನ್ನು ಮುಂದುವರಿಸಲೆಳಸಿದ್ದೇವೆ. ಶ್ರೀಪತಿಯ ಶ್ರೇಯಸ್ಸಿಗಾಗಿ ನವಕೋಟಿ ಮಹಾಮಂತ್ರವನ್ನು ಜಪಿಸಿ ಕಲ್ಪೋಕ್ತವಾಗಿ ಈ ಮಹಾಸವನವನ್ನು ಕಾಶಿಯ ಶ್ರೀ ವಿಶ್ವನಾಥನ ಸನ್ನಿಧಿಯಲ್ಲಿ ಮುಗಿಸಲೆಳಸಿದ್ದೇವೆ" ಎಂದರು.

"ಗುರುದೇವ, ತಮ್ಮ ಸಂಕಲ್ಪ ಅಮೋಘವಾದುದು ! ಈ ಮಹಾಸವನವನ್ನು ಶ್ರೀಪತಿಯಶ್ರೇಯಸ್ಸಿಗಾಗಿ!" ಎಂಬಮಾತು "ಶ್ರೀಪತಿ ಅದೆಷ್ಟು ಪುಣ್ಯಶಾಲಿ !" ಎಂಬುದನ್ನು ಸೂಚಿಸುತ್ತದೆ ಎಂದ ವೀರಣ್ಣ ಕುತೂಹಲದಿಂದ. "ಶ್ರೀಪತಿಯ ಶ್ರೇಯಸ್ಸು ಕೇವಲ ಅವನೊಬ್ಬನಿಗಾಗಿ ಅಲ್ಲ. ಅದು ಅವನ ಮನವನ್ನೂ ಮನೆಯನ್ನೂ ಬೆಳಗಿ ಈಲೋಕವನ್ನೂ ಬೆಳಗಿಸುತ್ತದೆ ! ಮನೆಯಲ್ಲಿ ಹೊತ್ತಿಸಿದ ಉಜ್ವಲದೀಪಪ್ರಕಾಶ ಮನೆಯನ್ನೂ ಬೆಳಗಿ ಆ ಸುತ್ತುಮುತ್ತಿನ ಕತ್ತಲನ್ನೂ ಕಳೆಯುವಂತೆ ! ನಿಷ್ಕಂಟಕವಾಗಿ ಬೆಳೆದ ಶ್ರೀಪತಿಯ ವಂಶಾಂಕುರದಿಂದ ನಮ್ಮ ಪೀಠವು ಬೆಳಗುವುದಲ್ಲದೆ ಅದರಿಂದ ಭಕ್ತಕೋಟಿಯ ಉದ್ಧಾರವೂ ಆಗುತ್ತದೆ !" ಎಂದರು ಗುರು ಪ್ರಸನ್ನವದನರಾಗಿ.



೧೬

# ಹಿಮಗಿರಿಧಾಮಗಳಲ್ಲಿ

## ೧

### ಅಮರನಾಥ ಗಿರಿಧಾಮ

"ಹಿಮಗಿರಿಧಾಮಗಳಲ್ಲಿ 'ಅಮರನಾಥಗಿರಿಧಾಮ' ನೋಡತಕ್ಕದ್ದು. ಅದರಲ್ಲಿಯೂ ಆ ಕ್ಷೇತ್ರದಲ್ಲಿರುವ ಹಿಮಮಯ ರಸಲಿಂಗದ ರಹಸ್ಯವು ಇಂದಿಗೂ ನಿಗೂಢ !"

ಕನಕಾ ಕೇಳಿದಳು "ಅಜ್ಜಿ, ಅಮರನಾಥ ಹಿಮಲಿಂಗದ ರಹಸ್ಯ ಇಂದಿಗೂ ನಿಗೂಢವೆಂದಿರಿ ! ಆ ಕ್ಷೇತ್ರ ಎಲ್ಲಿದೆ ? ಆ ಹಿಮಲಿಂಗದ ರಹಸ್ಯ ಯಾವುದು ?" ಎಂದು.

ಕಾಶ್ಮೀರಕ್ಕೆ ಉತ್ತರದಲ್ಲಿ ಸುಮಾರು ೯೦ ಮೈಲಿಗಳ ದೂರದಲ್ಲಿ ೧೮,೦೦೦ಅಡಿ ಎತ್ತರದ ಗಿರಿಶಿಖರಗಳ ತಪ್ಪಲಿನಲ್ಲಿ ಅಮರನಾಥಗುಹೆ ಇದೆ. ಪ್ರಕೃತಿಸಿದ್ಧವಾದ ಆ ಗುಹೆಯ ಉದ್ದ ಸುಮಾರು ೧೬೦ಅಡಿ, ಅಗಲ ೫೫ ಅಡಿ, ೫೦ಅಡಿ ಎತ್ತರ.ಗುಹೆಯ ಮಹಾದ್ವಾರವು ತುಂಬಾ ವಿಶಾಲವಾಗಿದೆ.

ಹಿಮಾಲಯದ ಪ್ರಾಕೃತಿಕ ವೈಚಿತ್ರ್ಯಗಳು ಅನೇಕ. ಅವುಗಳಲ್ಲಿ ಅಮರನಾಥಲಿಂಗದ ವೈಚಿತ್ರ್ಯ ಗಮನಾರ್ಹ ! ವಿಶಾಲವಾದ ಈ ಗುಹೆಯಲ್ಲಿರುವ ಹಿಮಮಯ ರಸಲಿಂಗದ ರಹಸ್ಯವನ್ನು ಅರಿಯಲು ಅನೇಕ ವಿಚಾರಶೀಲರು ಅಲ್ಲಿಗೆ ಪ್ರತಿವರ್ಷವೂ ಬರುತ್ತಾರೆ.

ಹಿಮಾಲಯದಲ್ಲಿ ರಾಶಿ ರಾಶಿಯಾಗಿ ಬೀಳುತ್ತಿರುವ ಹಿಮಪಾತವು ಒಂದೇ ಬಗೆಯಾಗಿರುವುದಿಲ್ಲ. ಆದರೆ ಈ ಹಿಮಗುಹೆಯಲ್ಲಿ ಸಹಸ್ರಾರು ವರ್ಷಗಳಿಂದ ಹಿಮವು ಲಿಂಗಾಕಾರವಾಗಿ ರೂಪುಗೊಳ್ಳುತ್ತಿರುವುದರ ರಹಸ್ಯ ಅಮರನಾಥದ ಹಿರಿಮೆಗೆ ಕಾರಣ. ಅದು ಶುಕ್ಲಪಕ್ಷದಲ್ಲಿ ಚಂದ್ರನ ಕಲೆಗಳು ದಿನ ದಿನಕ್ಕೆ ವೃದ್ಧಿಯಾಗಿ ಹುಣ್ಣಿಮೆಯಲ್ಲಿ ಪರಿಪೂರ್ಣವಾಗುತ್ತವೆ. ಮತ್ತೆ ಮಾರನೇ ದಿನದಿಂದ ಅಮಾವಾಸ್ಯೆಯವರೆಗೆ ಕ್ರಮ ಕ್ರಮವಾಗಿ ಕ್ಷೀಣಿಸಿ ಅಮಾವಾಸ್ಯೆಯ ದಿನ ಶೂನ್ಯವಾಗುವ ಚಂದ್ರನ ಹೋಲಿಕೆ ಈ ಹಿಮಲಿಂಗಕ್ಕೆ ಹೇಗೆ ಅನ್ವಯಿಸುತ್ತದೆ ? ಎಂಬುದು ಬಗೆಹರಿಯದ ರಹಸ್ಯ!

ಗುರುತ್ವಾಕರ್ಷಣ ಶಕ್ತಿಯಿಂದ ವೃದ್ಧಿ-ಕ್ಷಯಗಳಿಗೆ ಒಳಗಾಗುವ ಚಂದ್ರನಿಗೂ ಈ ಹಿಮ ಲಿಂಗದ ವೃದ್ಧಿ-ಕ್ಷಯಗಳಿಗೂ ಇರುವ ಅವ್ಯಕ್ತವಾದ ರಹಸ್ಯ ಯಾವುದು ? ಎಂಬುದೇ ನಿಗೂಢ!

ಗುಹೆಯ ದ್ವಾರವು ದಕ್ಷಿಣಕ್ಕಿಡೆ. ಪ್ರಾತಃಕಾಲದಲ್ಲಿ ಸೂರ್ಯನ ಕಿರಣಗಳು ಶಿವಲಿಂಗದ ಎಡಗಡೆಗೂ ಸಂಜೆ ಬಲಗಡೆಗೂ ಬೀಳುತ್ತವೆ. ಈ ಸೂರ್ಯಕಿರಣಗಳು ಶುಭ್ರವಾದ ಹಿಮಲಿಂಗದಲ್ಲಿ ಪ್ರತಿಫಲಿಸಿ ಗುಹೆಯ ಒಳಭಾಗವನ್ನು ಬೆಳಗಿಸುತ್ತವೆ. ಗುಹೆಯ ಮೇಲ್ಭಾಗದಿಂದ ಲಿಂಗದ ಮೇಲೆ ಹನಿ ಹನಿಯಾಗಿ ಜಿನುಗಿ ಬೀಳುವ ನೀರಿನಧಾರೆಗಳು ಪ್ರಕೃತಿಸಿದ್ಧವಾಗಿಯೆ ಲಿಂಗಕ್ಕೆ ಧಾರಾಭಿಷೇಕವಾದಂತೆ ಇರುವುದು ಇಲ್ಲಿಯ ಮತ್ತೊಂದು ವೈಶಿಷ್ಟ್ಯ. ! ಗುಹೆಯ ಮಧ್ಯದಲ್ಲಿ ಹಿಮಹಲಗೆಯ ಮೇಲೆ ಸುಮಾರು ಮೂರೂವರೆ ಅಡಿ ಎತ್ತರ, ಎರಡು ಅಡಿ ವ್ಯಾಸವುಳ್ಳುದಾಗಿ ರೂಪುಗೊಳ್ಳುವ ಈ ಹಿಮಲಿಂಗದ ವೈಶಿಷ್ಟ್ಯವು ಅಮರನಾಥಕ್ಕೆ ಇರುವ ಮುಖ್ಯ ಆಕರ್ಷಣೆ."

ಅಜ್ಜಿಯ ವಿವರಣೆಯನ್ನು ಕೇಳಿ ಕನಕಾ ಮುಗ್ಧಳಾದಳು. ಶ್ರೀಪತಿ ಕೇಳಿದ —"ಭೈರಣ್ಣ, ನಾವು ಮೊದಲು ಅಮರನಾಥ ಕ್ಷೇತ್ರ ದರ್ಶನ ಮಾಡಬೇಕು. ಅಲ್ಲಿಗೆ ಹೇಗೆ ಹೋಗಬೇಕು ? ದಾರಿ ಯಾವುದು, ಸೌಕರ್ಯವೇನು ?" ಎಂದು.

ಭೈರಣ್ಣ ಹೇಳಿದ—"ಅಮರನಾಥ ಪ್ರಯಾಣ ದುರ್ಗಮ ! ಕೇವಲ ಕಾಲು ನಡಗೆಯಿಂದ ಅಲ್ಲಿಗೆ ಹೋಗಲು ದುಶ್ಶಕ್ಯ. ಪ್ರತಿವರ್ಷವೂ ಶ್ರಾವಣ ಶುದ್ಧ ಹುಣ್ಣಿಮೆಗೆ ಅಲ್ಲಿ ದೊಡ್ಡ ಜಾತ್ರೆ ನಡೆಯುತ್ತದೆ. ಅದಕ್ಕಾಗಿ ಶ್ರೀನಗರದಿಂದ ಕುದುರೆಗಳು ಬಾಡಿಗೆಗೆ ಸಿಗುತ್ತವೆ. ಅಂಥ ಕುದುರೆ ಯವರನ್ನು ಗೊತ್ತುಪಡಿಸಬೇಕು. ಅವರ ಮಾರ್ಗದರ್ಶನದಲ್ಲಿ ನಾವು ಒಂದು ವಾರಕ್ಕೆ ಆಗುವಷ್ಟು ಆಹಾರ, ಔಷಧ ಮತ್ತು ಅಲ್ಲಿನ ಚಳಿ ತಡೆ ಯುವ ಉಣ್ಣೆಯ ಉಡುಪುಗಳನ್ನು ಜೊತೆಗೆ ಒಯ್ಯಬೇಕು" ಎಂದು.

ಭೈರಣ್ಣ ಪ್ರಯಾಣದ ಸಿದ್ಧತೆಯನ್ನು ಏರ್ಪಡಿಸಿದ, ಮರುದಿನ ದಿಂದ ಅಶ್ವಾರೂಢರಾದ ನಾಲ್ವರೊಂದಿಗೆ ಯಾತ್ರೆ ಆರಂಭವಾಯಿತು.

ಶ್ರೀನಗರದಿಂದ ಪೂರ್ವಕ್ಕೆ ಅರವತ್ತು ಮೈಲಿ ಅಂತರದಲ್ಲಿ 'ಪ್ರಥಮ ಗ್ರಾಮ'(ಪಹಲ್‌ಗಾವ್)ಎಂಬ ಹಳ್ಳಿ ಇದೆ. ಅಲ್ಲಿಂದ ಉತ್ತರಕ್ಕೆ ಮೂವತ್ತು ಮೈಲಿ ಅಮರನಾಥಗುಹೆ. ಅಮರನಾಥ ಯಾತ್ರೆ ಆರಂಭವಾಗುವುದು ಈ ಹಳ್ಳಿಯಿಂದಲೇ. ಅಲ್ಲಿಂದ ಮುಂದೆ ಕುದುರೆಸವಾರಿಯೂ ದುಸ್ತರ ; ಆದ್ದರಿಂದ ಅಲ್ಲಿಂದ ಪ್ರಾಯಃ ಕಾಲು ನಡಗೆಯಲ್ಲೆ ದಾರಿ ಸವೆಸಬೇಕು !

ಪ್ರಥಮಗ್ರಾಮಕ್ಕೆ ಹತ್ತುಮೈಲಿ ಅಂತರದಲ್ಲಿ ಚಂದನವಾಡಿ; ಅದರ ಎತ್ತರ ಸಮುದ್ರಮಟ್ಟದಿಂದ ಸುಮಾರು ೯,೫೦೦ ಅಡಿಗಳು. ಚಂದನ ವಾಡಿಯ ಪ್ರಕೃತಿ ಸೌಂದರ್ಯವನ್ನು ಕಂಡ ಶ್ರೀಪತಿ ಹರ್ಷಿತನಾದ. ಅದರ ಮುಂದೆ ಶೇಷನಾಗನದಿ ಹರಿಯುತ್ತದೆ. ಆ ನದಿಯ ಮೇಲೆ ಪ್ರಕೃತಿಸಿದ್ಧ ವಾದ ಹಿಮಹಲಗೆಗಳ ಸೇತುವೆ. ಪ್ರಯಾಣಿಕರು ಅದರ ಮೇಲೆ ನದಿಯನ್ನು ದಾಟಬೇಕು. ಅಲ್ಲಿ ರಾತ್ರೆ ತಂಗಲು ಸೌಕರ್ಯವುಂಟು. ಮುಂದೆ ಪಂಚ ತರಣಿಯವರೆಗೆ ತಂಗಲು ಸೌಕರ್ಯವಿಲ್ಲದ್ದರಿಂದ ರಾತ್ರೆ ಅಲ್ಲಿ ವಾಸ್ತವ್ಯ ಮಾಡಿ ಎಲ್ಲರೂ ಆಹಾರ ಸ್ವೀಕರಿಸಿ ವಿಶ್ರಮಿಸಿದರು.

ನಮ್ಮ ಯಾತ್ರಿಕರು ಮುಂಜಾನೆ ಶೇಷನಾಗನದಿಯಲ್ಲಿ ನಿತ್ಯಕೃತ್ಯಗಳನ್ನು ಮುಗಿಸಿ ಪ್ರಯಾಣಕ್ಕೆ ಸಿದ್ಧರಾದರು. ಪರ್ವತವನ್ನೇರಲು ಚೀಡವೃಕ್ಷದ ಬೆತ್ತಗಳು ಅಲ್ಲಿ ದೊರೆಯುತ್ತವೆ. ಆದ್ದರಿಂದ ಎಲ್ಲರೂ ಒಂದೊಂದು ಬೆತ್ತ ಕೊಂಡರು. ಶೇಷನಾಗನದಿಯ ತೀರದಲ್ಲಿ ದಾರಿ ಮುಂದುವರಿಯುತ್ತದೆ.

ಎಡಕ್ಕೆ ಎತ್ತರವಾದ ಗಿರಿಶಿಖರಗಳು,ಬಲಕ್ಕೆ ಭೋರ್ಗರೆಯುತ್ತಾ ಹರಿಯುವ 'ಶೇಷನಾಗನದಿ'. ದಟ್ಟವಾದ ಕಾಡು, ಅಲ್ಲಿ ಸಂಚರಿಸುವ ಕಸ್ತೂರಿ ಮೃಗಗಳು. ಇಂಥ ಅಪೂರ್ವವಾದ ಸುಂದರ ದೃಶ್ಯಗಳನ್ನು ನೋಡುತ್ತಾ ಇಕ್ಕಟ್ಟಾದ ಕೊರಕಲುದಾರಿಯಲ್ಲಿ ನೇರವಾಗಿ ಪರ್ವತವನ್ನು ಏರಬೇಕು. ಜಾರುವ ದಾರಿಯಲ್ಲಿ ಕೆಲವು ಕಡೆ ಮರದ ಬೇರುಗಳನ್ನು ಹಿಡಿದು ಎಚ್ಚರ ವಾಗಿ ನಡೆಯಬೇಕು. ಇದು ಅತಿ ಕಠಿಣವಾದ ದಾರಿ. ಇದರ ಹೆಸರು 'ಜಾರುವ ಘಟ್ಟ.' (ಪಿಸ್ಸೂಫೊಾಟ್) ಎಂದು ಗ್ರಾಮೀಣರು ಇದನ್ನು ಕರೆಯುತ್ತಾರೆ. ಮುಂದೆ 'ಭೋಜಪಾಲ' ಎಂಬ ಸಮತಲ ಪ್ರದೇಶ. ಅಲ್ಲಿ ಮರಗಿಡಗಳಿಲ್ಲ, ಹಿಮ ರಾಶಿ ರಾಶಿಯಾಗಿ ಬಿದ್ದಿರುತ್ತದೆ. ಇದರ ಎತ್ತರ ೧೨,೦೦೦ ಅಡಿಗಳು. ಈ ಮೈದಾನದ ಕೊನೆಯಲ್ಲಿ ಎತ್ತರವಾದ ಪರ್ವತ. ಅದರ ಬುಡದಲ್ಲಿ ಸುಂದರವಾದ ಸರೋವರ, ಸುತ್ತಲೂ ಹಿಮದ ಕಿರೀಟ ಗಳನ್ನು ಹೊತ್ತ ಗಿರಿಶಿಖರಗಳು. ಅವುಗಳ ಪಾದದಿಂದ ಹರಿದು ಬರುವ ಸ್ವಚ್ಛ ಹಿಮಪ್ರವಾಹ. ಸರೋವರದ ನೀರಿನಲ್ಲಿ ಪ್ರತಿಬಿಂಬಿಸಿರುವ ಗಿರಿಶಿಖರಗಳನ್ನು ಕಂಡು ಎಲ್ಲರೂ ವಿಸ್ಮಿತರಾದರು. ಸರೋವರದ ನೀಲಿಯ ತಿಳಿನೀರಿನಲ್ಲಿ ಹಾಲಿನಕೆನೆಯಂತೆ, ಬಿಳಿಯ ಹಿಮಗಡ್ಡೆಗಳು ತೇಲುವ ದೃಶ್ಯ ಅವರ್ಣನೀಯ. ಅದರ ಹೆಸರು 'ಶೇಷನಾಗಸರೋವರ.'! ಸರೋವರಕ್ಕೆ ಹೊಂದಿಕೊಂಡಿರುವ ಬೆಟ್ಟದ ದೊಡ್ಡ ಶಿಖರವು ಸರೋವರದ ಕಡೆ ಸರ್ಪದ ಹೆಡೆಯಂತೆ ಬಾಗಿರುವುದರಿಂದ ಅದಕ್ಕೆ 'ಶೇಷನಾಗ' ಎಂಬ ಹೆಸರು ಅನ್ವ ರ್ಥಕ. ಚಂದನವಾಡಿಯಿಂದ ಇಲ್ಲಿಗೆ ಏಳುಮೈಲಿಗಳು, ಭೈರಣ್ಣನ ತಂಡವು ಅಲ್ಲಿ ತುಸು ಹೊತ್ತು ವಿಶ್ರಮಿಸಿತು. ಆಹಾರವನ್ನು ಸ್ವೀಕರಿಸಿ ಮುಂದಿನ ದಾರಿ ಹಿಡಿಯಿತು, ಆ ದಾರಿ ಇನ್ನೂ ಕಡಿದು.

ಶೇಷನಾಗದಿಂದ ಮುಂದೆ ಎತ್ತರವಾದ ಪರ್ವತ. ಹಿಮದ ಮೇಲೆ ಎರಡು ಮೈಲಿ ಏರಿ ಬಂದರೆ 'ವಾವಜನ' ಎಂಬ ಅದರ ನೆತ್ತಿಗೆ ಬರುತ್ತೇವೆ.

ಎತ್ತರ ೧೪,೦೦೦ ಅಡಿಗಳು. ಅಲ್ಲಿ ಪ್ರಾಣವಾಯು ಕಡಿಮೆ. ಉಸಿರು ಕಟ್ಟಿ, ಎದೆಯಲ್ಲಿ ಯಾತನೆ, ರಕ್ತದ ಒತ್ತಡ, ಹೃದಯ-ಶ್ವಾಸ ಕೋಶದ ತೊಂದರೆ ಇರುವವರಿಗೆ ಅಪಾಯ. ಅಲ್ಲಿಂದ ಇಳಿಜಾರಿನ ದಾರಿ

ಯಲ್ಲಿ ಎಂಟು ಮೈಲಿ ನಡೆದರೆ 'ಪಂಚತರಣಿ' ಎಂಬ ಸ್ಥಳ. ಅಲ್ಲಿ ಮರ ಗಿಡಗಳಿಲ್ಲ. ಚಳಿ ತಡೆಯುವುದು ಕಷ್ಟ. ತುಟಿ-ಗಲ್ಲಗಳು ಬಿರಿಯುತ್ತವೆ. ಪಂಚತರಣಿಗೆ ಮೊದಲು ೧೨,೦೦೦ ಅಡಿ ಎತ್ತರದ 'ಮಹಾಗುಣ' ಎಂಬ ಮತ್ತೊಂದು ಘಟ್ಟ ದಾಟಬೇಕು.

'ಮಹಾಗುಣ'ದಿಂದ ಮುಂದೆ ಐದುನೂರು ಅಡಿ ಎತ್ತರದ ಪರ್ವತ. ದಟ್ಟವಾದ ಉಣ್ಣೆಯ ಹೊದಿಕೆ ಅಗತ್ಯ. ಅಲ್ಲಿಗೆ ಬರುವ ಹೊತ್ತಿಗೆ ಸಂಜೆ ಯಾಯಿತು. ರಾತ್ರಿ ಅಲ್ಲಿ ವಿಶ್ರಮಿಸಿ ಎಲ್ಲರೂ ಮುಂಜಾನೆ ಎದ್ದು ನೋಡಿದರೆ ಹಿಮದ ಕಿರೀಟಗಳನ್ನು ಹೊತ್ತ ಹಿಮಹೊದಿಕೆಯ ಗಿರಿ ಶಿಖರಗಳನ್ನು ಕಂಡು ಕನಕಾ ಅಜ್ಜಿಯನ್ನು ಪ್ರಶ್ನಿಸಿದಳು.

"ಅಜ್ಜಿ, ಈ ಚಳಿತಡೆಯುವುದು ನಿಮಗೆ ಕಷ್ಟವಲ್ಲವೆ ?" ಎಂದು.

— ದುಗ್ಗವ್ವೆ ಹೇಳಿದಳು 'ಮರಿ, ಸುಖ ದುಃಖಗಳನ್ನು ಸಮವಾಗಿ ಕಾಣಬೇಕು. ಕಷ್ಟಬಂದಾಗ ಕುಗ್ಗಿ ಸುಖಬಂದಾಗ ಹಿಗ್ಗುವುದು ಸಾಮಾ ನ್ಯರ ಸ್ವಭಾವ. ಹೀಗೆ ಸಮತ್ವ ಸಾಧಿಸಿದವನನ್ನೇ 'ಯೋಗಿ' ಎಂದು ಕರೆದಿದ್ದಾರೆ !' ಎಂದು.

ಅಜ್ಜಿಯ ವಿಚಾರಸರಣಿಗೆ ಎಲ್ಲರೂ ವಿಸ್ಮಿತರಾದರು.

ಮರುದಿನ ಬೆಳಿಗ್ಗೆ ಪಂಚತರಣಿಯಿಂದ ಹೊರಟು ಮತ್ತೆ ಸಾಯಂ ಕಾಲ ಹಿಂದಿರುಗುವ ಕಾರ್‍ಯಕ್ರಮವನ್ನು ಭೈರಣ್ಣ ರೂಪಿಸಿದ್ದ "ಬೆಳಿಗ್ಗೆ ದೇವರ ದರ್ಶನಕ್ಕೆ ಅಗತ್ಯವಾದ ಪೂಜಾಸಾಮಗ್ರಿ, ಮಡಿ ಬಟ್ಟೆ, ನೈವೇದ್ಯ ವಸ್ತುಗಳನ್ನು ಕೈಚೀಲದಲ್ಲಿರಿಸಿಕೊಂಡು ಉಳಿದ ಸಾಮಾನುಗಳನ್ನು ಅಲ್ಲಿಯೇ ಬಿಟ್ಟು ಹೊರಡಬೇಕು. ಅಲ್ಲಿ ನಮ್ಮ ಸಾಮಾನು ರಕ್ಷಣೆಯ ವ್ಯವಸ್ಥೆಯುಂಟು.

ಅಲ್ಲಿಂದ ಕಾಲು ನಡಗೆಯಲ್ಲಿ ಯಾತ್ರಿಕರು ಗುಂಪು ಗುಂಪಾಗಿ ಮುನ್ನಡೆಯುತ್ತಾರೆ. ಒಬ್ಬೊಬ್ಬರೆ ಹೋಗುವುದು ಅಪಾಯ. ಸಮೂಹ ವಿದ್ದರೆ ಒಳ್ಳೆಯದು !

ಪರ್ವತವನ್ನು ಹತ್ತಿ ಅಮರನಾಥಗುಹೆಯನ್ನು ಪ್ರವೇಶಿಸುವ ಮುನ್ನ ಅಲ್ಲಿ 'ಅಮರಗಂಗಾ' ನದಿ ಹರಿಯುತ್ತದೆ. ಆಕಾಶದಿಂದ ಮಂಜಿನ

ಸೋನೆ ಪುಡಿ ಪುಡಿಯಾಗಿ ಮೇಲೆ ಬೀಳುತ್ತಿರುತ್ತದೆ. ಮೈ ನಡುಕ! ದಂತ ಪಂಕ್ತಿ ಕಟಕಟಗುಟ್ಟುತ್ತದೆ.

ಪಂಚತರಣಿ ಎಂಬುದು ಒಂದು ಸರೋವರ. ಅದರೊಳಕ್ಕೆ ಐದು ನದಿಗಳ ನೀರು ಹರಿದುಬರುತ್ತಿರುವುದರಿಂದ ಅದಕ್ಕೆ 'ಪಂಚತರಣಿ' ಎಂದು ಹೆಸರು.

ಪಂಚತರಣಿಯಿಂದ ಅಮರನಾಥಕ್ಕೆ ಐದುಮೈಲಿ. ಏರುದಾರಿ. ಎಡಗಡೆ ಆಳವಾದ ಪ್ರಪಾತ, ಬಲಗಡೆ ಎತ್ತರವಾದ ಪರ್ವತ. ಇಕ್ಕಟ್ಟಾದ ಕಾಲುಹಾದಿ, ಪಂಚತರಣಿಯ ಉತ್ತರಕ್ಕೆ ಎತ್ತರವಾದ ಹಿಮಪರ್ವತ. ಮಧ್ಯದಲ್ಲಿ ವಿಶಾಲವಾದ ಗುಹೆ. ಅಲ್ಲಿಂದ ಮುಂದೆ ವಿಶಾಲವಾದ ಕಣಿವೆ. ದೂರದಲ್ಲಿ ಈಶಾನ್ಯ ದಿಗಂತದಲ್ಲಿ ಆಕಾಶವನ್ನು ಭೇದಿಸಿ ತಲೆಎತ್ತಿ ನಿಂತಿರುವ ಎತ್ತರವಾದ 'ಅಮರನಾಥ ಪರ್ವತ', ಅದರ ಬುಡದಲ್ಲಿ ಮೈದಾನ.

ಯಾತ್ರಿಕರು ಅಲ್ಲಿನ 'ಅಮರಗಂಗಾ'ನದಿಯಲ್ಲಿ ಮಿಂದು ಮುಂದೆ ಅರ್ಧ ಮೈಲಿ ನಡೆದರೆ ಅಮರನಾಥ ಗುಹೆ, ನಮ್ಮ ಯಾತ್ರಿಕ ತಂಡ ಗುಹೆಯನ್ನು ಪ್ರವೇಶಿಸಿ ಹಿಮಮಯ ರಸಲಿಂಗವನ್ನು ಆರಾಧಿಸಿತು. ಕೊಂಡೊಯ್ದ ಫಲಾದಿಗಳನ್ನು ಲಿಂಗಕ್ಕೆ ನಿವೇದಿಸಿ, ಪ್ರಸಾದ ಸೇವಿಸಿ ಹಿಂದಿರುಗಿತು.

ಕನಕಾ ಕೇಳಿದಳು "ಅಜ್ಜಿ, ಅಮರನಾಥಲಿಂಗವನ್ನು ಕುರಿತ ಐತಿಹ್ಯ ವೇನಾದರೂ ಉಂಟೆ?" ಎಂದು.

ದುಗ್ಗಮ್ಮ ಹೇಳಿದಳು "ಕನಕಾ, ಅಮರನಾಥಕ್ಷೇತ್ರವನ್ನು ಕುರಿತ ಪೌರಾಣಿಕ ಹೇಳಿಕೆಯೊಂದುಂಟು—

ಒಮ್ಮೆ ಪಾರ್ವತಿ ಆತ್ಮನ ಅಮರತ್ವವನ್ನು ಕುರಿತು ಪರಶಿವನನ್ನು ಪ್ರಶ್ನಿಸಿದಳು. ಪರಮೇಶ್ವರನು ಅತ್ಯಂತ ರಹಸ್ಯವಾದ ಈ ವಿಷಯವನ್ನು ಹೇಳಲು ನಿರ್ಜನವಾದ ಪ್ರದೇಶವನ್ನು ಅರಸುತ್ತಾ ಪತ್ನೀ ಸಮೇತನಾಗಿ ಈ ಅಮರನಾಥಕ್ಕೆ ಬಂದನು. ಗುಹೆಯಲ್ಲಿರುವ ಹಿಮದ ಹಲಗೆಯ ಮೇಲೆ ಕುಳಿತು ಆತ್ಮದ ಅಮರತ್ವ ರಹಸ್ಯವನ್ನು ಹೇಳಲು ಉಪಕ್ರಮಿಸಿದನು. ಆದರೆ ಗೂಢಾರ್ಥಗರ್ಭಿತವಾದ ವೇದಾಂತತತ್ತ್ವವಿಚಾರವನ್ನು ಕೇಳುತ್ತಿದ್ದ

ದೇವಿಯು ದೇವಮಾಯೆಯಿಂದ ಮೋಹಿತಳಾಗಿ ನಿದ್ದೆ ಹೋದಳು. ಆತ್ಮನ ಅಮರತ್ವವನ್ನು ಕುರಿತ ರಹಸ್ಯವನ್ನು ವಿವರಿಸುತ್ತಿದ್ದ ಪರಮಶಿವ ತಲ್ಲೀನನಾಗಿದ್ದ. ಪಾರ್ವತಿಯ ಕಡೆಯಿಂದ 'ಹೂ'ಕಾರವು ಕೇಳುತ್ತಿದ್ದುದರಿಂದ ಶಿವನ ಗಮನ ಆ ಕಡೆ ಹರಿದಿರಲಿಲ್ಲ. ಉಪದೇಶ ಮುಗಿದು ಪರಶಿವ ಪಾರ್ವತಿಯ ಕಡೆ ದೃಷ್ಟಿ ಹರಿಸಿದಾಗ ಅವರು ಕುಳಿತಿದ್ದ ಹಿಮ ಹಲಗೆಯ ಕೆಳಗಿದ್ದ ಗಿಳಿಮರಿಯೊಂದು ಹೊರಬಂದು 'ಪುರ್' ಎಂದು ಹಾರಿ ಹೋಯಿತು ! ಪಾರ್ವತಿಯ ಸ್ಥಿತಿಯನ್ನು ಕಂಡು ವಿಸ್ಮಿತನಾದ ಶಿವ !

ಕನಕಾ ಕೇಳಿದಳು "ಅಜ್ಜಿ, ಇಂಥ ಮಹತ್ತರವಾದ ವಿಷಯವನ್ನು ಹೇಳುವಾಗ ಪಾರ್ವತಿ ನಿದ್ದೆ ಹೋದದ್ದೇಕೆ ? ಆ ಗಿಳಿಮರಿ ಯಾವುದು ? ಅದು ಶಿವನು ಹೇಳುವ ರಹಸ್ಯವನ್ನು ಕೇಳಿದ್ದೇಕೆ ? ದಯಮಾಡಿ ಹೇಳಬೇಕು !" ಎಂದು.

"ಕನಕಾ, ನಿನ್ನ ಪ್ರಶ್ನೆ ಸರಿಯಾಗಿದೆ ! ಪಾರ್ವತಿಯ ನಿದ್ದೆಗೆ ದೇವಮಾಯೆ ಕಾರಣ ! ನೀನು ಸಾವಧಾನವಾಗಿ ಕೇಳಿದರೆ ಆ ಕಾರಣ ವೇದ್ಯವಾಗುತ್ತದೆ ! —ಪ್ರಕೃತ ಪರಶಿವತತ್ತ್ವವೆಂದರೆ ಅದೊಂದು ಜ್ಞಾನದ ಗಣಿ ! ಸ್ಫೂರ್ತಿಯ ಸೆಲೆ ! ಹೇಳಿ ಕೇಳಿ ಅದು ಸರ್ವಜ್ಞತತ್ತ್ವ ! ಶಿವನಲ್ಲಿ ಅಡಗಿರುವ ಜ್ಞಾನಾಮೃತವು ಹೊರಬರಬೇಕಾದರೆ ವಾತ್ಸಲ್ಯ–ಪ್ರೇಮಗಳು ಅಗತ್ಯ. ಆಕಳಿನಲ್ಲಿರುವ ಅಮೃತ ಚಿಮ್ಮಿ ಬರಬೇಕಾದರೆ ವತ್ಸ (ಕರು)ನ ಅಗತ್ಯವಿದೆಯಲ್ಲವೆ ? ಅದರಂತೆ ಇಲ್ಲಿ ಶಿವನ ಪ್ರೀತಿ ಪಾತ್ರಳಾದ ದೇವಿಗಲ್ಲದೆ ಆ ಜ್ಞಾನಾಮೃತವು ಸ್ಫುರಿಸಲಾರದು. ಅದನ್ನು ಸವಿಯುವ ಆತುರ ದೇವತೆಗಳದು. ಅದಕ್ಕಾಗಿ ಅವರು ದೇವಿಗೆ ದೇವಮಾಯೆಯನ್ನು ಒಡ್ಡಿದರು. ಅದರಿಂದ ಪಾರ್ವತಿ ನಿದ್ದೆ ಹೋದಳು. ದೇವತೆಗಳ ಪ್ರಾರ್ಥನೆಯಂತೆ ಅಗ್ನಿದೇವ ಗಿಳಿಮರಿಯಲ್ಲಿ ಹೊಕ್ಕು ಉಪದೇಶವನ್ನು ಆಲಿಸಿ ಹಾರಿಹೋದ. ಆದರೆ ಅದನ್ನು ನೇರವಾಗಿ ಧರಿಸುವ ಶಕ್ತಿ ಆ ಅಗ್ನಿಗಿಲ್ಲ ಅಲ್ಲದೆ ಇದರಿಂದ ಪಾರ್ವತಿಗೆ ಅಸಮಾಧಾನವೂ ಆದೀತು ! ಎಂದು ಶಿವ ಅಗ್ನಿಗೆ ಪಾರ್ವತಿಯ ಗರ್ಭವನ್ನು ಪ್ರವೇಶಿಸುವಂತೆ ಆದೇಶವಿತ್ತ. ಪಾರ್ವತಿಯ ಗರ್ಭದಲ್ಲಿ

ಶಿವಕುಮಾರ ಜನಿಸಿ 'ಅಗ್ನಿಭೂಃ' ಎಂಬ ಹೆಸರು ತಳೆದು ದುಷ್ಟರನ್ನು ಶಿಕ್ಷಿಸಿ, ಲೋಗರಿಗೆ ಜ್ಞಾನಾಮೃತ ಪಾನಮಾಡಿಸಿ ಅವರ ಉದ್ಧಾರಕ್ಕೆ ಕಾರಣನಾದ."

ಶಿವತತ್ತ್ವ ಮತ್ತು ಶಕ್ತಿ(ಪಾರ್ವತಿ)ತತ್ತ್ವಗಳ ಸ್ವರೂಪವನ್ನು ವಿವರಿಸಿ, ಶಿವನಲ್ಲಿ ಅಡಗಿರುವ ಜ್ಞಾನಾಮೃತವು ಸಾಮಾನ್ಯರಿಗೂ ದೊರೆಯುವಂತೆ ಮಾಡುವ ವಿಧಾನವನ್ನು ಕತೆಯ ರೂಪದಲ್ಲಿ ನಿರೂಪಿಸಿದ ಅಜ್ಜಿಯ ಆಳವಾದ ಅನುಭವವನ್ನು ಅರಿತ ಶ್ರೀಪತಿ-ಕನಕೆಯರು ಪರಸ್ಪರ ಮುಖ ನೋಡಿಕೊಂಡು; ಅಜ್ಜಿಗೆ ಕೃತಜ್ಞತೆ ಸಲ್ಲಿಸಿದರು.

## ೨

### ಹರಿದ್ವಾರ

ಅಮರನಾಥ ಕ್ಷೇತ್ರದಿಂದ ಹಿಂದಿರುಗಿದ ನಮ್ಮ ಯಾತ್ರಿಕರ ತಂಡ ಇನ್ನುಳಿದ ಹಿಮಗಿರಿಧಾಮಗಳನ್ನು ನೋಡುವ ಉದ್ದೇಶದಿಂದ ಭೈರಣ್ಣನ ಮುಂದಾಳುತ್ವದಲ್ಲಿ ಕುದುರೆಗಳನ್ನು ಏರಿ ಹರಿದ್ವಾರಕ್ಕೆ ಆಗಮಿಸಿತು.

ಹಿಮಗಿರಿಧಾಮಗಳಲ್ಲಿ ವಿಹರಿಸಲೆಳಸುವವರಿಗೆ ಪ್ರವೇಶದ್ವಾರ 'ಹರಿದ್ವಾರ! ಇದನ್ನು 'ಹರದ್ವಾರ' ಎಂದೂ ಕರೆಯುವವರಿದ್ದಾರೆ. ಅದಕ್ಕೆ ಕಾರಣ ಹರಿಯ ಆವಾಸ ಬದರಿ; ಹರನ ನಿವಾಸ ಕೇದಾರ! ಇವೆರಡೂ ಕ್ಷೇತ್ರಗಳಿಗೆ ಹೋಗಿಬರಲು ಹೆಬ್ಬಾಗಿಲು ಹರಿದ್ವಾರ.

ಇದಕ್ಕೆ 'ವಿಷ್ಣುಪದ' ಎಂಬ ನಾಮಾಂಕಿತವೂ ಉಂಟು!" ಎಂದು ಅಜ್ಜಿ ಸೂಚಿಸಿದಾಗ "ಅಜ್ಜಿ, ಹರಿದ್ವಾರಕ್ಕೆ 'ವಿಷ್ಣುಪದ' ಎಂದು ಹೆಸರು ಬರಲು ಕಾರಣವೇನು?" ಎಂದ ಶ್ರೀಪತಿ ವಿಸ್ಮಯ ಸೂಚಿಸಿ.

"ಅಪ್ಪ, ಇದಕ್ಕೆ ಪೌರಾಣಿಕ ಹಿನ್ನೆಲೆಯೊಂದಿದೆ. ಹಿರಣ್ಯಕಶಿಪುವಿನ ಮೊಮ್ಮಗ 'ಬಲಿಚಕ್ರವರ್ತಿ'. ಈತ ಧರ್ಮಿಷ್ಠ. ಅನೇಕ ಯಜ್ಞಗಳನ್ನು

ಮಾಡಿ ಪುಷ್ಕಳ ಪುಣ್ಯ ಗಳಿಸಿದ್ದ. ಆ ಪುಣ್ಯರಾಶಿಯನ್ನು ಕಂಡು ದೇವತೆಗಳಿಗೆ ಅಸೂಯೆ! ದೇವತೆಗಳ ಇಷ್ಟದಂತೆ ವಿಷ್ಣು ವಾಮನ(ಕುಳ್ಳ)ನಾದ ಈತ ಬ್ರಾಹ್ಮಣನ ವೇಷದಿಂದ ಯಜ್ಞದೀಕ್ಷೆ ವಹಿಸಿದ್ದ ಬಲಿಯಲ್ಲಿಗೆ ಹೋಗಿ ಮೂರು ಹೆಜ್ಜೆ ಭೂಮಿಯನ್ನು ದಾನವಾಗಿ ಯಾಚಿಸಿದ. ಚಕ್ರವರ್ತಿ 'ಅಸ್ತು' ಎಂದ.

ಕೂಡಲೇ ಕುಳ್ಳ ಬ್ರಾಹ್ಮಣ ಆಕಾಶದವರೆಗೆ ಬೆಳೆದ. ಆತ ಒಂದು ಹೆಜ್ಜೆಯಿಂದ ಭೂಮಿಯೆಲ್ಲವನ್ನೂ ಅಳೆದ. ಎರಡನೆಯ ಹೆಜ್ಜೆಯಿಂದ ಆಕಾಶವನ್ನೆಲ್ಲ ಅಳೆದ. ಮೂರನೇ ಹೆಜ್ಜೆಯನ್ನು ಎಲ್ಲಿಡಲಿ? ಎಂದ. ಮುಂದಿನ ಕತೆ ನಿಮಗೆ ಗೊತ್ತು!"

"ಅಜ್ಜಿ, ಮುಂದಿನ ಕತೆಯನ್ನೂ ಸೂಕ್ಷ್ಮವಾಗಿ ಹೇಳಿ!" ಎಂದಳು ಕನಕಾ ಕುತೂಹಲದಿಂದ.

"ಅದನ್ನು ಕೇಳಿ ಬಲಿ ವಿಸ್ಮಿತನಾದ! ಮಹಾದ್ವೈವಭಕ್ತನೂ, ದಾನಶೂರನೂ ಆದ ಆತ 'ಆ ಪಾದವನ್ನು ನನ್ನ ತಲೆಯ ಮೇಲಿಡಿ!' ಎಂದ. ವಾಮನ ಅವನನ್ನು ಪಾತಾಳಕ್ಕೆ ತುಳಿದ!

"ಈ ಕತೆಗೂ ಹರಿದ್ವಾರಕ್ಕೆ 'ವಿಷ್ಣುಪದ' ಎಂದು ಹೆಸರು ಬರುವುದಕ್ಕೂ ಏನು ಸಂಬಂಧ ಅಜ್ಜಿ!" ಎಂದು ಶ್ರೀಪತಿ ಕೇಳಿದ ಸೋಜಿಗದಿಂದ.

"ಮರಿ, ವಿಷ್ಣು ಎರಡನೆಯ ಪಾದವನ್ನು ಆಕಾಶಕ್ಕೆ ಚಾಚಿದನಲ್ಲ! ಅದು ಬ್ರಹ್ಮಲೋಕಕ್ಕೆ ಹೋಯಿತು. ಬ್ರಹ್ಮ ತನ್ನ ಕಮಂಡಲುವಿನಲ್ಲಿದ್ದ ಗಂಗೆಯಿಂದ ವಿಷ್ಣುವಿನ ಪಾದ ತೊಳೆದ. ಆ ಪಾದ ತೀರ್ಥವೇ ಹೊಳೆಯಾಗಿ ಹರಿದ್ವಾರದ ಮುಂದೆ ಹರಿಯಿತು. ಆದ್ದರಿಂದ ಅದಕ್ಕೆ 'ವಿಷ್ಣುಪದ' ಎಂದು ಹೆಸರು ಬಂತು.

"ಅಜ್ಜಿ, ಈ ಕತೆ ಚಮತ್ಕಾರವಾಗಿದೆ. ಪ್ರಾಯಃ ಇದನ್ನು ಯಾರೊ ಬುದ್ಧಿವಂತಪಂಡಿತನೊಬ್ಬ ಹರಿ-ಹರ ತಾರತಮ್ಯವನ್ನು ಸ್ಥಾಪಿಸಲು ಕಲ್ಪಿಸಿದಂತಿದೆ! ಏಕೆಂದರೆ ಗಂಗೆ ಆಕಾಶದಿಂದ ಭೂಮಿಗೆ ಇಳಿದದ್ದು. ಆ ಆಕಾಶಕ್ಕೆ 'ವಿಷ್ಣುಪದ' ಎಂಬ ಹೆಸರಿದೆ. ಗಂಗೆಗೂ 'ವಿಷ್ಣುಪದಿ' ಎಂಬ ಹೆಸರಿದೆ. ಇವೆರಡನ್ನೂ ಸೇರಿಸಿ ಈ ಕತೆ ಹೆಣೆದಿರಬೇಕು! ಆಕಾಶದಿಂದ 'ಗಂಗಾನ

ತರಣ'ವಾದಾಗ ಗಂಗೆಯ ರಭಸವನ್ನು ತಡೆಯಲು ಶಿವ ತನ್ನ ಜಟಾಜೂಟ ದಲ್ಲಿ ಅವಳನ್ನು ಬಿಗಿದು ಕಟ್ಟಿದ ಎಂದು ಹೇಳುತ್ತಾರೆ. ವಿಷ್ಣು ಪಾದ ತೊಳೆದ ಗಂಗೆಯನ್ನು ಶಿವ ತನ್ನ ತಲೆಯಲ್ಲಿ ಧರಿಸಿದ್ದರಿಂದ ಶಿವನಿಗಿಂತ ವಿಷ್ಣು ಹೆಚ್ಚು! ಎಂಬ ಹುಚ್ಚು ಕಲ್ಪನೆ ಇದರಲ್ಲಿ ಕಾಣುತ್ತದೆ. ವಾಸ್ತವ ವಾಗಿ ಹರಿ-ಹರರು ಶಕ್ತಿ–ಶಿವ ಸ್ವರೂಪರು. ಅವರು ಜಗತ್ತಿನ ತಾಯಿ ತಂದೆಗಳೆಂದು ಹೇಳಲಾಗಿದೆ. ತಾಯಿ-ತಂದೆಗಳಲ್ಲಿ ಮೇಲು-ಕೀಳು ಭಾವನೆ ಸರಿಯೇ ?

ಅಲ್ಲದೆ ಆಕಾಶಗಂಗೆ ಭೂಲೋಕಕ್ಕೆ ಬಂದದ್ದು ಭಗೀರಥನ ಮಹತ್ ಪ್ರಯತ್ನದಿಂದ. "ಭಾಗೀರಥೀ ತ್ರಿಪಥಗಾ" ಎಂದರೆ ಸ್ವರ್ಗ, ಮರ್ತ್ಯ ಪಾತಾಳಗಳವರೆಗೆ ಹರಿದು ಪಾವನಗೈದ ಭಾಗೀರಥಿಯ ಬಗೆಗೆ ಮೇಲಿನ ಕಲ್ಪನೆ ತರ್ಕಬದ್ಧ ಎನಿಸುವುದಿಲ್ಲ!"

ಎಂದ ಶ್ರೀಪತಿಯ ವಾದಸರಣಿಯನ್ನು ಗಮನಿಸಿದ ದುಗ್ಗವ್ವೆ ಅವನ ಬೆನ್ನು ತಟ್ಟಿ 'ಭೇಷ್ !' ಎಂದಳು.

### ಕನಖಲ

ತನ್ನ ಮಾತನ್ನು ಮುಂದುವರಿಸಿದ ದುಗ್ಗವ್ವೆ 'ಹರಿದ್ವಾರ'ಕ್ಕೆ 'ಕನಖಲ' ಎಂಬ ಮತ್ತೊಂದು ಹೆಸರಿದೆ ಎಂದಳು.

'ಅಜ್ಜಿ, ಹರಿದ್ವಾರಕ್ಕೆ 'ಕನಖಲ' ಎಂದು ಹೆಸರು ಬರಲು ಕಾರಣ ವೇನು ?" ಎಂದಳು ಕನಕಲತಾ ಸಂದೇಹ ಸೂಚಿಸಿ.

'ಕನ' ಎಂಬುವನೊಬ್ಬ 'ಖಲ' ಎಂದರೆ ಪಾಪಿಷ್ಟ. ಅವನು ಈ ಸ್ಥಳದಲ್ಲಿ ಸ್ನಾನ ಮಾಡಿದ್ದರಿಂದ ಅವನ ಪಾಪವು ನಷ್ಟವಾಗಿ ಮುಕ್ತನಾದ. ಆದ್ದರಿಂದ ಈ ಸ್ಥಳ 'ಕನಖಲ'ವೆನಿಸಿತು. ಇಲ್ಲಿ ದಕ್ಷ ಪ್ರಜಾಪತಿ ಶಿವನನ್ನು ವಿರೋಧಿಸಿ ಒಂದು ಯಜ್ಞವನ್ನು ಮಾಡಿದ !"

"ಅಜ್ಜಿ, ದಕ್ಷನು ಶಿವನನ್ನು ವಿರೋಧಿಸಲು ಕಾರಣವೇನು ? ಆ ಯಜ್ಞವು ಸಾಂಗವಾಗಿ ನೆರವೇರಿತೆ ?"

"ಶಿವನನ್ನು ವಿರೋಧಿಸಿ ಮಾಡಿದ ಯಾವ ಕಾರ್ಯವು ತಾನೆ ಸಾಂಗವಾದೀತು !"

"ದಕ್ಷಪ್ರಜಾಪತಿಯ ಕತೆಯನ್ನು ಸೂಕ್ಷ್ಮವಾಗಿ ಹೇಳಿ !"

"ಜಗತ್ತಿನ ಸೃಷ್ಟಿಕ್ರಿಯೆಯಲ್ಲಿ ನಿಯುಕ್ತರಾದ ಬ್ರಹ್ಮರು ಒಂಬತ್ತು ಮಂದಿ. ಅವರಲ್ಲಿ ದಕ್ಷಪ್ರಜಾಪತಿಯೂ ಒಬ್ಬ. ಅವನಿಗೆ ಹಲವಾರು ಮಂದಿ ಹೆಣ್ಣುಮಕ್ಕಳು. ಅವರಲ್ಲಿ ಸತೀದೇವಿಯೂ ಒಬ್ಬಳು. ಗೌರಿ, ದಾಕ್ಷಾಯಿಣಿ ಎಂಬ ಹೆಸರುಗಳೂ ಅವಳಿಗಿವೆ !

ದಕ್ಷ ತನ್ನ ಪುತ್ರಿಯರನ್ನು ಬೇರೆ ಬೇರೆ ದೇವತೆಗಳಿಗೆ ಕೊಟ್ಟು ಲಗ್ನ ಮಾಡಿದ್ದ. ಸತೀದೇವಿಯನ್ನು ಶಿವನಿಗೆ ಕೊಡಲಾಗಿತ್ತು. ಒಮ್ಮೆ ದಕ್ಷ ಪ್ರಜಾಪತಿ ತನ್ನ ಹೆಣ್ಣು ಮಕ್ಕಳ ಮನೆಗಳಿಗೆ ಭೇಟಿ ಕೊಟ್ಟಾಗ, ಆಯಾ ಅಳಿಯಂದಿರು ಮಾವನನ್ನು ಅಕ್ಕರೆಯಿಂದ ಆದರಿಸಿ, ತುಂಬಾ ಗೌರವ ದಿಂದ ಬೀಳ್ಕೊಟ್ಟರು.

ಮಾರ್ಗ ಮಧ್ಯದಲ್ಲಿ ದಕ್ಷನು ಕೈಲಾಸಕ್ಕೂ ಭೇಟಿ ಕೊಟ್ಟ. ಅಲ್ಲಿ ದೇವಾಧಿದೇವ, ಮಹಾದೇವ ಪರಶಿವನ ಆಸ್ಥಾನ ಸಂಭ್ರಮದಿಂದ ಏರ್ಪಟ್ಟಿತ್ತು. ಹರಿ-ಬ್ರಹ್ಮರು, ಲೋಕಪಾಲರು ಮನು–ಮುನಿಗಳೆಲ್ಲರೂ ಭಕ್ತಿಯಿಂದ ಪರಶಿವನನ್ನು ಓಲೈಸುತ್ತಿದ್ದರು.

ದಕ್ಷನಿಗೆ ತಾನು ಶಿವನಿಗೆ ಮಾವನೆಂಬುವ ದರ್ಪ ! 'ಶಿವ ತನ್ನನ್ನು ಓಲೈಸುವ'ನೆಂದು ಆತ ಭಾವಿಸಿದ್ದ. ಆದರೆ ಭಕ್ತಿಗೆ ಒಲಿವ ಶಿವ ದರ್ಪ ವನ್ನು ಕಡೆಗಣಿಸಿದ್ದ. ತನ್ನ ಇಷ್ಟಾರ್ಥಸಿದ್ಧಿಸದಾಗ ದಕ್ಷನಲ್ಲಿ ಮನೆ ಮಾಡಿದ್ದ ದರ್ಪ ಅಭಿಮಾನವಾಯಿತು. ಅದು ಅಹಂಕಾರವಾಗಿ ಹೆಪ್ಪುಗಟ್ಟಿ ಕ್ರೋಧವಾಯಿತು, ಕ್ರೋಧವು ವಿವೇಕವನ್ನು ಕಬಳಿಸಿತು, ಬುದ್ಧಿ ಬಡ ವಾಯಿತು. ಕೂಡಲೆ ವಿವೇಕ ಶೂನ್ಯನಾದ ದಕ್ಷ ಶಿವನನ್ನು ನಿಂದಿಸುತ್ತಾ ಸಭೆಯಿಂದ ಹೊರಬಿದ್ದ !

ದಕ್ಷಪ್ರಜಾಪತಿ 'ಕನಖಲ' ಎಂಬ ಈ ಸ್ಥಳಕ್ಕೆ ಬಂದು ಒಂದು ಯಜ್ಞ ವನ್ನು ಆರಂಭಿಸಿದ. 'ಅಧ್ವರ'ಎಂದರೆ ಯಜ್ಞ, ಅದಕ್ಕೆ ಅಧಿಪತಿ 'ಅಧ್ವರಪತಿ' ಎಂದರೆ ಶಿವ. ಆದರೆ ಶಿವನ ಮೇಲಿನ ಕೋಪದಿಂದ ದಕ್ಷ ಯಜ್ಞಾಧಿಪತ್ಯ

ವನ್ನು ಶಿವನಿಗೆ ಕೊಡಲಿಲ್ಲ. ಶಿವನಿಲ್ಲದ ಯಜ್ಞ ಪ್ರಾರಂಭವಾಯಿತು. ಈ ಅಕ್ರಮವನ್ನು ಕಂಡು ಋಷಿಮುನಿಗಳು ದಕ್ಷನನ್ನು ಶಪಿಸಿ ಸಭಾತ್ಯಾಗ ಮಾಡಿದರು. ಮೇಲಾಗಿ ಈ ಯಾಗಕ್ಕೆ ಎಲ್ಲ ದೇವತೆಗಳಿಗೂ ಕರೆ ಯೋಲೆ ಹೋಗಿದ್ದವು. ಶಿವನಿಗೆ ಮಾತ್ರ ಕರೆ ಇರಲಿಲ್ಲ.

ತಂದೆಯ ಈ ಅಕೃತ್ಯಕ್ಕಾಗಿ ಮೊದಲು ನೊಂದವಳು ದಾಕ್ಷಾಯಿಣಿ. ಅವಳು ತಂದೆಗೆ ವಿವೇಕ ಹೇಳಲು ನಂದೀಶ್ವರನನ್ನು ಒಡಗೊಂಡು ಯಜ್ಞ ಶಾಲೆಗೆ ಬಂದಳು. ಕರೆಯದೆಯೇ ಬಂದ ಮಗಳನ್ನು ಮತ್ತು ಅವಳ ಪತಿ ಯನ್ನು ದಕ್ಷ ಅವಾಚ್ಯ ಶಬ್ದಗಳಿಂದ ನಿಂದಿಸತೊಡಗಿದ. ಶಿವನಿಂದೆ ಕೇಳ ಲಾರದೆ ಸತೀದೇವಿ ಎರಡೂ ಕಿವಿಗಳನ್ನು ಮುಚ್ಚಿಕೊಂಡು ಯಜ್ಞಕುಂಡಕ್ಕೆ ಧುಮುಕಿ ತನ್ನ ಯೋಗಾಗ್ನಿಯಿಂದ ಸುಟ್ಟು ಬೂದಿಯಾದಳು. ಸುದ್ದಿ ತಿಳಿದ ಶಿವ ಉಗ್ರನಾದ ! ಉಗ್ರ ವೀರಭದ್ರನಾದ ! ಭದ್ರಕಾಳಿ ಸಮೇತ ವೀರಭದ್ರ ಯಜ್ಞಶಾಲೆಗೆ ನುಗ್ಗಿದ. ಎಲ್ಲ ದೇವತೆಗಳೂ ತಲೆ ಮರೆಸಿ ಕೊಂಡರು. ವೀರಭದ್ರ ದಕ್ಷನನ್ನು ಶಿಕ್ಷಿಸಿದ, ದಕ್ಷನ ಸತಿ ಪ್ರಸೂತಿ. ಅವಳು ಶರಣಾಗಿ ಪತಿಭಿಕ್ಷೆ ಬೇಡಿದಳು. ಕುರಿತಲೆ ಹೊತ್ತ ದಕ್ಷ ಕರು ಣಾಳು ವೀರಭದ್ರನಿಗೆ ಭಕ್ತಿಯಿಂದ ಮಣಿದ !

ಇಲ್ಲಿರುವ 'ದಕ್ಷಮಹಾದೇವ ಮಂದಿರ' ಮತ್ತು 'ಸತೀಕುಂಡ'ಗಳು ಹಿಂದಿನ ಈ ಕತೆಯನ್ನು ನೆನಪಿಸುತ್ತವೆ." ಎಂದು ಅಜ್ಜಿ ಕತೆ ಹೇಳಿ ಮುಗಿಸಿದಳು.

"ಶಿವದ್ವೇಷ ಯಾರಿಗೂ ಭೂಷಣವಲ್ಲ !" ಎಂದ ಶ್ರೀಪತಿ. "ಸತೀ ದೇವಿಯ ನಿರ್ಮಲ ಪತಿಭಕ್ತಿ ಮತ್ತು ತಂದೆಯ ಮೇಲಿನ ಅವಳ ಮಮತೆ ಗಳಿಗೆ ಈ ಕಥೆ ನಿದರ್ಶನ !" ಎಂದಳು ಕನಕಲತೆ. ಹೀಗೆ ಇಬ್ಬರೂ ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದರು.

"ಅಜ್ಜಿ, ಹರಿದ್ವಾರಕ್ಕೆ ಸಂಬಂಧಿಸಿದ ವಿಚಾರವಾಗಿ ನಾವು ಇನ್ನೂ ಕೇಳುವುದೇನಿದೆ ದಯಮಾಡಿ ಹೇಳಿ !" ಎಂದಳು ಕನಕಾ ಅಜ್ಜಿಯನ್ನು ನೋಡಿ.

"ಮಹಾಭಾರತಕ್ಕೆ ಸಂಬಧಿಸಿದ ಇನ್ನೂ ಒಂದೆರಡು ವಿಚಾರಗಳು ಈ ಸ್ಥಳದಲ್ಲಿ ನಡೆದಿವೆ— ಶಂತನು ಚಕ್ರವರ್ತಿಯ ಮೊದಲ ಹೆಂಡತಿ ಗಂಗಾದೇವಿ. ಅವಳು ಆತನನ್ನು ವರಿಸಿದ್ದು ಇಲ್ಲಿಯೇ ! ಭಾರದ್ವಾಜ ಋಷಿ ಅಪ್ಸರೆಯೊಬ್ಬಳನ್ನು ಮೋಹಿಸಿ ದ್ರೋಣನಿಗೆ ತಂದೆಯಾದದ್ದು ಇಲ್ಲಿ ! ಅರ್ಜುನನು ತೀರ್ಥಯಾತ್ರೆ ಹೊರಟು ಮೊದಲು ಬಂದದ್ದು ಹರಿದ್ವಾರಕ್ಕೆ, ಇಲ್ಲಿ ಅವನು ಗಂಗಾನದಿಯಲ್ಲಿಳಿದು ಸ್ನಾನಮಾಡುತ್ತಿದ್ದಾಗ 'ಉಲೂಪಿ' ಎಂಬ ನಾಗಕನ್ಯೆ ಅವನನ್ನು ಮೋಹಿಸಿ, ಪಾತಾಳಕ್ಕೆ ಕರೆದೊಯ್ದು ಮತ್ತೆ ತಂದು ಬಿಟ್ಟದ್ದು ಇಲ್ಲಿ ! ಕಡೆಯದಾಗಿ ಪಾಂಡವರು ಸ್ವರ್ಗಾರೋಹಣ ಪ್ರಾರಂಭಿಸಿದ್ದು ಇಲ್ಲಿಂದಲೇ !"

ಎಂದು ದುಗ್ಗಮ್ಮ ಕತೆಯನ್ನು ಮುಂದುವರಿಸಿದಳು.

## ಹರಿದ್ವಾರದ ಪ್ರಾಕೃತಿಕ ವೈಭವ

"ಶಿವಾಲಿಕ ಪರ್ವತದ ಪರಿಸರದಲ್ಲಿ ಹರಿಯುತ್ತಿರುವ ಪವಿತ್ರ ಭಾಗೀರಥಿಯ ದಡದಲ್ಲಿ ನೆಲೆಸಿರುವ ಹರಿದ್ವಾರದ ಪ್ರಾಕೃತಿಕ ವೈಭವ ಅವರ್ಣನೀಯ. ನದಿಗೆ ಹೊಂದಿಕೊಂಡಿರುವ ಮನಸಾದೇವಿಯ ಪರ್ವತ ಈ ನಗರಕ್ಕೆ ಪ್ರಕೃತಿದೇವಿ ನೀಡಿದ ಒಂದು ಕೊಡುಗೆ ಎಂಬ ವರ್ಣನೆಯನ್ನು ಆಲಿಸತ್ತಾ ಎಲ್ಲರೂ ಮನಸಾದೇವಿಯ ಪರ್ವತದ ಕಡಿದಾದ ಮೆಟ್ಟಿಲುಗಳನ್ನು ಹತ್ತಿ ಶಿಖರಕ್ಕೆ ಬಂದರು. ಶಿಖರದ ಮೇಲಿನಿಂದ ಹರಿದ್ವಾರದ ದೃಶ್ಯವನ್ನು ನೋಡಿ ಕನಕಾ ತುಂಬಾ ಹರ್ಷ ತಳೆದಳು.

ಪುರಾಣದಲ್ಲಿ ಹರಿದ್ವಾರಕ್ಕೆ 'ಮಾಯಾ' ಎಂಬ ಹೆಸರಿದೆ. ಇದು ಭಾರತದ ಪ್ರಸಿದ್ಧ ನಗರಗಳಲ್ಲಿ ಒಂದು ಎಂದಳು ದುಗ್ಗಮ್ಮ

ಸಂಜೆಗೆ ಎಲ್ಲರೂ ಗಂಗಾತೀರಕ್ಕೆ ಬಂದಿದ್ದರು. ಅಷ್ಟು ಹೊತ್ತಿಗೆ. ಸ್ಥಳ ಪರಸ್ಥಳಗಳಿಂದ ಬಂದಿದ್ದ ಸಹಸ್ರಾರು ಮಂದಿ ಯಾತ್ರಿಕರು ಅಲ್ಲಿ ನಡೆದ ಗಂಗಾ ಪೂಜೆ ಮತ್ತು ಆರತಿ ಕಾರ್ಯಕ್ರಮವನ್ನು ಕಂಡು ಹರ್ಷ ಪುಳಕಿತರಾದರು !

೨

## ಹೃಷೀಕೇಶ ಧಾಮ

ಕಂಕಲ್ ಕಣಿವೆಯಿಂದ ಸುಮಾರು ಇಪ್ಪತ್ತು ಮೈಲಿ ದೂರದಲ್ಲಿದೆ ಹೃಷೀಕೇಶದ ಪವಿತ್ರ ತಪೋಭೂಮಿ. ಇಲ್ಲಿ ತಪೋಮಗ್ನರಾಗಿದ್ದ ಋಷಿ ಮುನಿಗಳಿಗೆ ರಾಕ್ಷಸರಿಂದ ಹಿಂಸೆಯಾಗದಂತೆ ರಕ್ಷಣೆ ಕೊಟ್ಟ ನಾರಾಯಣ ನಿಗೆ 'ಹೃಷೀಕೇಶ'ನೆಂಬ ಹೆಸರಿದೆ. ಅದೇ ಹೆಸರು ಈ ಪವಿತ್ರಧಾಮಕ್ಕೂ ರೂಢಿಗೆ ಬಂತು. ಹೃಷೀಕೇಶ ಹಿಮಾಲಯ ಪರ್ವತದ ಪಾದಪ್ರದೇಶ.

ಹರಿದ್ವಾರದ ಮನಸಾದೇವೀ ಪರ್ವತದಲ್ಲಿರುವ 'ಸೂರ್ಯಕುಂಡ' ದಲ್ಲಿ ಹುಟ್ಟಿದ 'ಚಂದ್ರಭಾಗಾ'ನದಿ ಹೃಷೀಕೇಶದಲ್ಲಿ ಗಂಗಾ ನದಿಯನ್ನು ಸೇರುತ್ತದೆ. ಇದರ ಉತ್ತರಭಾಗದಲ್ಲಿ ಸಾಧು-ಸಂತರ ಅನೇಕ ಪುಣ್ಯಾ ಶ್ರಮಗಳಿವೆ.

## ನರೇಂದ್ರನಗರ

ಇದು ಹೃಷೀಕೇಶಕ್ಕೆ ೧೨ ಮೈಲಿ ದೂರದಲ್ಲಿದೆ. ಇದರ ಎತ್ತರ ೧೮೫೦ ಅಡಿಗಳು. ಇಲ್ಲಿಂದ ಮುಂದೆ ಕಾಣುವ ಸುಮಾರು ೧೮೫೩ ಮೈಲಿ ವಿಸ್ತಾರವಾದ ಹಿಮಾಲಯ ಪರ್ವತ ಪ್ರಾಂತವನ್ನು 'ಕೇದಾರಖಂಡ' ಅಥವಾ 'ಉತ್ತರಖಂಡ' ಎಂದು ಕರೆಯುತ್ತಾರೆ. ಯಮುನೋತ್ರಿ, ಗಂಗೋತ್ರಿ, ಕೇದಾರ ಮತ್ತು ಬದರಿಗಳೆಂಬ ಹಿಮಾ ಲಯದ ಚತುರ್ಧಾಮಗಳನ್ನು ಇದು ಒಳಗೊಂಡಿದೆ. ವೇದಕಾಲದಲ್ಲಿ ಈ ಪ್ರದೇಶವನ್ನು 'ಬ್ರಹ್ಮ ದೇಶ'ವೆಂದೂ, ಮಹಾಭಾರತದಲ್ಲಿ 'ಪಾಂಚಾಲ ದೇಶ'ವೆಂದೂ ಕರೆಯಲಾಗಿದೆ. ಬಾಣಕವಿ ತನ್ನ ಕಾದಂಬರಿಯಲ್ಲಿ ಇದನ್ನು 'ಕಿನ್ನರ ದೇಶ' ಎಂದಿದ್ದಾನೆ.

೩

## ಯಮುನೋತ್ರೀ ಧಾಮ

ಋಷೀಕೇಶದಿಂದ ಯಮುನೋತ್ತರೀ ಧಾಮಕ್ಕೆ ೨೨೮ ಮೈಲಿಗಳು. ಯಮುನೋತ್ರಿಗೆ ಹೋಗುವ ಯಾತ್ರಿಕರ ಸೌಕರ್ಯಕ್ಕಾಗಿ ಅಲ್ಲಲ್ಲಿ ಕೆಲವು ತಂಗುದಾಣಗಳು ಏರ್ಪಟ್ಟಿವೆ. ಅವುಗಳನ್ನು ಪ್ರಾಯಃ 'ಚಿಟ್ಟಿ' ಎಂದು ಕರೆಯುತ್ತಾರೆ.

ಯಮುನೋತ್ರಿಯ ಹಾದಿಯಲ್ಲಿ ನರೇಂದ್ರನಗರ, ಟಿಹರಿ, ಬಾರಕೋಟ, ಸಯಾನಚಿಟ್ಟಿ, ಹನುಮಾನ್‌ಚಿಟ್ಟಿ, ಜಾನಕಿಚಿಟ್ಟಿ ಎಂಬ ಆರು ತಂಗುದಾಣಗಳಿವೆ. ಋಷೀಕೇಶದಿಂದ ಹನುಮಾನ್ ಚಿಟ್ಟಿಗೆ ಸುಮಾರು ೨೦೦ ಮೈಲಿಗಳು. ಅಲ್ಲಿಂದ ಯಮುನೋತ್ರಿ ೨೮ ಮೈಲಿಗಳು. ಹನುಮಾನ್ ಚಿಟ್ಟಿಯವರೆಗಿನ ಏರು ದಾರಿಯಲ್ಲಿ ವಾಹನ ಸಂಚಾರವುಂಟು. ಮುಂದಿನ ಹಾದಿಯನ್ನು ಕಾಲುನಡಿಗೆ ಅಥವಾ ಕುದುರೆಯನ್ನೇರಿ ಕ್ರಮಿಸಬಹುದು.

ಋಷೀಕೇಶದ ಎತ್ತರ ೧,೧೦೦ ಅಡಿಗಳು. ಸಯಾನ ಚಿಟ್ಟಿಯ ಎತ್ತರ ೬೪೦೦ ಅಡಿಗಳು. ಅಲ್ಲಿಂದ ಮುಂದೆ ಹನುಮಾನ್ ಚಿಟ್ಟಿ ೫ ಮೈಲಿಗಳು, ಅದರ ಎತ್ತರ ೬೫೦೦ ಅಡಿಗಳು. ಅಲ್ಲಿಂದ ಯಮುನೋತ್ರಿ ೨೦ ಮೈಲಿ. ಎರಡು ಅಡಿ ಅಗಲದ ಕಾಲು ದಾರಿಯಲ್ಲಿ ಏರಿ ಹೋಗುತ್ತಿರಬೇಕು. ಹನುಮಾನ್ ಚಿಟ್ಟಿ ಯಮುನೋತ್ರಿಗಳ ಮಧ್ಯೆ 'ಪೂಲ್ ಚಿಟ್ಟಿ' ಎಂಬ ಹೂವಿನ ನಿಲ್ದಾಣವಿದೆ. ಒಂದು ಪಕ್ಕದಲ್ಲಿ ಗಗನಚುಂಬಿ ಪರ್ವತಗಳು, ಮತ್ತೊಂದುಕಡೆ ಸಹಸ್ರಾರು ಅಡಿ ಆಳದ ಕಂದರದಲ್ಲಿ ಬಂಡೆಯಿಂದ ಬಂಡೆಗೆ ಅಪ್ಪಳಿಸಿ ಬೋರ್ಗರೆವ ಯಮುನೆಯ ಪ್ರವಾಹ, ಕೆಲವು ಕಡೆ ದಟ್ಟವಾದ ಕಾಡು, ಕ್ರೂರ ಮೃಗಗಳ ಆರ್ಭಟ ; ಕೆಲವು ಕಡೆ ಬೋಳು ಬೆಟ್ಟಗಳು, ಇಂತಹ ಮಹೋನ್ನತ ಪರ್ವತ ಪಂಕ್ತಿ ಯಮುನೆಯ ಜನ್ಮಭೂಮಿ.

ಜಾನಕಿ ಚೆಟ್ಟಿಯಿಂದ ೫ ಮೈಲಿಯ ಏರು ದಾರಿ ತುಂಬಾ ಪ್ರಯಾಸದ್ದು. ಕಿರುದಾರಿಯ ಅಂಚಿನಲ್ಲಿ ಕೆಳಗೆ ತತ್ತಳದಲ್ಲಿ ಬಿಳ್ನೊರೆಮುಕ್ಕಳಿಸುವ ಯಮುನೆಯನ್ನು ನೋಡಿದರೆ ತಲೆ ತಿರುಗಿ ಬೀಳುವಂತಾಗುತ್ತದೆ! ಎರಡೂ ಕಡೆ ನಿಷ್ಠುರ ಶಿಲಾಭಿತ್ತಿಗಳು. ಅವುಗಳ ನಡುವೆ ಆಳದ ಕಂದರದಲ್ಲಿ ಮೊರೆಯುವ ಯಮುನೆ ಪೂಲ್‌ಚೆಟ್ಟಿಯ ಎರಡೂ ಕಡೆ ಹಿಮಾವೃತವಾದ ಗಗನಚುಂಬಿ ಪರ್ವತಗಳ ಸಂಧಿಸುವಲ್ಲಿ ೧೦,೮೦೦ ಅಡಿಗಳ ಎತ್ತರದಲ್ಲಿ ಯಮುನೆ ಹುಟ್ಟುತ್ತದೆ. "ಬಂದೇರ್ ಪೂಂಚ್" ಎಂದು ಕರೆಯುವ ಆ ಮಹಾಪರ್ವತದ ಎತ್ತರ ೨೦೭೩೧ಅಡಿಗಳು. ಆ ಮಹಾಪರ್ವತದ ಅವಳಿ ಶಿಖರಗಳ ಬುಡದಲ್ಲಿ ಬಿಸಿನೀರಿನ ಕುಂಡವೊಂದಿದೆ. ಅದರ ಮೇಲೆ ಕಲ್ಲು ಮಂಟಪ, ಅದಕ್ಕೆ ಆತುಕೊಂಡಿರುವ ಬೆಟ್ಟದ ಬಂಡೆಯಲ್ಲಿ ಹಬೆ ಉಗುಳುವ ಎರಡು ಕಂಡಿಗಳಿಂದ ಬಿಸಿ ನೀರು ನುಗ್ಗಿ ಬಂದು ಕುಂಡಕ್ಕೆ ಬೀಳುತ್ತದೆ.

ವಾಸ್ತವವಾಗಿ ಯಮುನೆ ಆ ಅವಳಿ ಪರ್ವತಗಳ ಹಿಂದಿರುವ ಕಾಳಿಂದಿ ಎಂಬ ಪರ್ವತದ ಬುಡದಲ್ಲಿರುವ ನೀರ್ಬಂಡೆಗಳು ಬಿಸಿಲ ಝಳಕ್ಕೆ ಕರಗಿ ಗಂಧಕದ ಕಲ್ಲುಗಳಲ್ಲಿ ಬಿಸಿಯಾಗಿ ಈ ಕುಂಡಕ್ಕೆ ಬೀಳುತ್ತದೆ. ಪಕ್ಕದಲ್ಲಿ ಒಂದು ಕಲ್ಲುಮಂಟಪ. ಅಲ್ಲಿ ಯಮುನೆಯ ಸ್ತ್ರೀಶಿಲಾಮೂರ್ತಿ ಇದೆ. ಅರ್ಚಕರು ಅಲ್ಲಿ ಯಾತ್ರಿಕರಿಗೆ ಪೂಜೆಗಳನ್ನು ಮಾಡಿಸುತ್ತಾರೆ.

ಯಮುನೆಗೆ ಸೂರ್ಯಪುತ್ರಿ, ಯಮನ ತಂಗಿ, ಕಾಳಿಂದೀ ಮುಂತಾದ ಹೆಸರುಗಳಿವೆ. ಕಾಳಿಂದೀ ಪರ್ವತದಿಂದ ಬರುವ ಜಲ ಗಂಗೆಯಂತೆ ಶುಭ್ರವಲ್ಲ. ಅದರ ನೀರು ಕಪ್ಪು.

ಯಮುನೆ ಹಿಮಾಲಯದ ಗಿರಿಕಂದರಗಳಲ್ಲಿ ಎಂಬತ್ತು ಮೈಲಿಗಳು ಹಾದು ಹಸ್ತಿನಾವತಿ (ಇಂದ್ರಪ್ರಸ್ಥ) ಬೃಂದಾವನ, ಮಥುರೆ, ಆಗ್ರಾಗಳನ್ನು ಹಿಂದಿಕ್ಕಿ ಪ್ರಯಾಗದ ಬಳಿ ತನ್ನ ಮೂಲದಿಂದ ೮೬೦ ಮೈಲಿಗಳ ದೂರದಲ್ಲಿ ಗಂಗೆಯನ್ನು ಸೇರುತ್ತದೆ.

ಭೈರಣ್ಣನ ಮಾರ್ಗದರ್ಶಿತ್ವದಲ್ಲಿ ನಮ್ಮ ಅಶ್ವಾರೂಢವಾದ ಯಾತ್ರಿಕರ ತಂಡ ಯಮುನೋತ್ರಿಯವರೆಗೆ ಸಂಚರಿಸಿ ಪ್ರಕೃತಿ

ಸೌಂದರ್ಯದ ನೆಲೆಮನೆಯಂತಿರುವ ಹಿಮಾಲಯದ ರಮ್ಯ ದೃಶ್ಯಗಳನ್ನು ಕಂಡು ತಣಿದುದಲ್ಲದೆ ಯಮುನೋತ್ರಿಯಲ್ಲಿ ಮಿಂದು ಯಮುನೆಗೆ ಪೂಜಾದಿಗಳನ್ನು ಸಲ್ಲಿಸಿತು.

ಕನಕಾ ಕೇಳಿದಳು, "ಅಜ್ಜಿ, ಗಂಗಾ ಮತ್ತು ಯಮುನೆಯರಿಗೆ ಭಾರತದಲ್ಲಿ ದೊರೆತಿರುವ ಈ ಪ್ರಾಶಸ್ತ್ಯಕ್ಕೆ ಕಾರಣವೇನು ?" ಎಂದು.

"ಅಮ್ಮ, ಗಂಗೆ-ಯಮುನೆಯರಿಗೆ ಭಾರತದ ಸಂಸ್ಕೃತಿಯಲ್ಲಿ ಅಗ್ರಪೂಜೆ ಸಲ್ಲುತ್ತದೆ. ಎಲ್ಲ ಧರ್ಮಕಾರ್ಯಗಳ ಪ್ರಾರಂಭವು ಗಂಗಾಪೂಜೆಯಿಂದಲೇ ಆರಂಭವಾಗುತ್ತದೆ. ಗಂಗಾ-ಯಮುನಾ ಸಂಗಮದ ಪ್ರಯಾಗ ಇಷ್ಟು ಪವಿತ್ರವೆನಿಸಿರುವುದಕ್ಕೆ ಇದೇ ಮುಖ್ಯ ಕಾರಣ. ಸ್ತೋತ್ರಗಳಲ್ಲಿ, ಶಿಲ್ಪಗಳಲ್ಲಿ ಯಮುನೆ ಗಂಗೆಯೊಡನೆ ಕಾಣಿಸಿಕೊಳ್ಳುತ್ತಾಳೆ. ಗುಪ್ತರಾಜರ ಕಾಲದ ಶಿಲ್ಪಗಳಲ್ಲಿ ದೇವಸ್ಥಾನದ ಬಾಗಿಲುವಾಡಗಳ ಮೇಲೆ ಗಂಗಾ-ಯಮುನೆಯರಿಬ್ಬರೂ ಮೂರ್ತಿ ಸ್ವರೂಪ ತಳೆದು ಕ್ರಮವಾಗಿ ಮಕರ-ಕಚ್ಛಪಗಳ ಮೇಲೆ ಕುಳಿತ ನದೀದೇವತೆಗಳಾಗಿ ಮೆರೆದಿದ್ದಾರೆ. ಶಿವನ ಸಂಸರ್ಗದಿಂದ ಗಂಗೆ ಪವಿತ್ರತೆ ಪಡೆದಿರುವಂತೆ ಶ್ರೀಕೃಷ್ಣನ ಸಂಸರ್ಗ ಯಮುನೆಗೆ ಬೆಸೆದುಕೊಂಡಿದೆ. ಯಮುನಾತೀರದಲ್ಲಿ ರಾಧಾ-ಶ್ಯಾಮರ ಹಾಗೂ ಗೋಪಿಕೆಯರ ಬಾಲಲೀಲೆಯ ಶೃಂಗಾರ ರಮ್ಯ ದೃಶ್ಯಗಳ ನೆನಪು ಭಾರತೀಯರಿಗೆ ಮರೆಯದ ಅಮರಸ್ಮರಣೆಯಾಗಿದೆ !

೪

## ಗಂಗೋತ್ರಿ

ಗಂಗೋತ್ರಿ ಹರಿದ್ವಾರದಿಂದ ೨೫೦ ಮೈಲಿಗಳ ಅಂತರದಲ್ಲಿದೆ. ಅದರ ಎತ್ತರ ಸಮುದ್ರ ಮಟ್ಟದಿಂದ ೧೦,೩೦೦ ಅಡಿಗಳು. ಅಲ್ಲಿಗೆ ಹೋಗುವ ಹಾದಿ ದುರ್ಗಮ. ಅಲ್ಲಿನ ಪ್ರಾಕೃತಿಕಸೌಂದರ್ಯ ಅನುಪಮ. ದಾರಿಯುದ್ದಕ್ಕೂ ಗಗನ ಚುಂಬಿಯಾದ ಪರ್ವತ ಶಿಖರದ ಸಾಲುಗಳು,

ಮಹೋನ್ನತವಾದ ದೇವದಾರು ವೃಕ್ಷಗಳು, ಭೂರ್ಜವೃಕ್ಷಗಳು ಇವುಗಳಿಂದ ತುಂಬಿದ ಕಾಡುಗಳಲ್ಲಿ ಕಸ್ತೂರೀ ಮೃಗಗಳೂ ಹೇರಳವಾಗಿವೆ.

ಯಮುನೋತ್ರಿಯಿಂದ ಹಿಂದಿರುಗಿದ ನಮ್ಮ ಯಾತ್ರಿಕರ ತಂಡವು ಭೈರಣ್ಣನ ಮುಂದಾಳತ್ವದಲ್ಲಿ ಹನುಮಾನ್ ಚೆಟ್ಟಿಯಿಂದ ಒಂದುನೂರು ಮೈಲಿ ದೂರದಲ್ಲಿರುವ ಉತ್ತರಕಾಶಿಗೆ ಆಗಮಿಸಿತು. ಉತ್ತರಕಾಶಿಯಿಂದ ಮುಂದೆ ಲಂಕೆ ಎಂಬ ಸ್ಥಳವಿದೆ. ಅದು ಸುಮಾರು ೭೦ ಮೈಲಿ ದೂರದಲ್ಲಿದೆ. ಉತ್ತರಕಾಶಿ ಪುರಾಣಕಾಲದ ಇಂದ್ರಕೀಲ. ಇದು ಅರ್ಜುನ ಶಿವನನ್ನು ಕುರಿತು ತಪಸ್ಸು ಮಾಡಿ, ಶಿವನಿಂದ ಪಾಶುಪತಾಸ್ತ್ರವನ್ನು ಪಡೆದ ಪವಿತ್ರ ತಪೋಭೂಮಿ.

ಪರ್ವತ ಸಾಲುಗಳ ಅಂಚಿನ ಕಿರುದಾರಿಯಲ್ಲಿ ಏರಿಹೋಗುವಾಗ ಒಂದು ಕಡೆ ಪರ್ವತಪಂಕ್ತಿ ಮತ್ತೊಂದು ಕಡೆ ಸಾವಿರಾರು ಅಡಿ ಆಳದ ಕಂದರದಲ್ಲಿ ಬಂಡೆಯಿಂದ ಬಂಡೆಗೆ ಧುಮ್ಮಿಕ್ಕಿ ಭೋರ್ಗರೆದು ಹರಿಯುವ ಜಾಹ್ನವಿ! ಕೆಲವು ಕಡೆ ವೇಗವಾಗಿ ಕೆಲವು ಕಡೆ ಸ್ಥಿಮಿತವಾಗಿ ಕೆಲವೆಡೆ ಗಂಭೀರವಾಗಿ ಮತ್ತೊಂದು ಕಡೆ ಭೈರವ ಅಟ್ಟಹಾಸದಿಂದ ಮೊರೆವ ಗಂಗೆ, ಬೆಳ್ನೊರೆಯನ್ನು ಹೊರಚೆಲ್ಲುವ ವೈಖರಿ ಮರೆಯುವಂತಹುದಲ್ಲ!

ಮುಂದೆ 'ಹರಶಿಲಾ' ಎಂಬ ಕಣಿವೆ, ಅದರ ಎತ್ತರ ೮,೪೦೦ ಅಡಿಗಳು. ಅಲ್ಲಿಂದ ಒಂದು ಹರಿದಾರಿ ಮುಂದೆ ಬಂದರೆ ಗಂಗೋತ್ತರಿಯ ದ್ವಾರವೆನಿಸಿದ 'ಲಂಕಾ' ಎಂಬ ನೆಲೆ. ಅದರ ಎತ್ತರ ೯,೩೦೦ ಅಡಿಗಳು. ಅಲ್ಲಿ ತುಂಬಾ ಚಳಿ, ಚಳಿಯ ಪ್ರಭಾವದಿಂದ ಕೈಕಾಲುಗಳ ಸಂದಿಯಲ್ಲಿ ಕೊರೆತ ಪ್ರಾರಂಭವಾಗುತ್ತದೆ. ಅಲ್ಲಿಂದ ಮುಂದೆ ಎರಡು ಹರಿದಾರಿ ಏರಿದರೆ 'ಭೈರವಘಟ್ಟ' ಸಿಕ್ಕುತ್ತದೆ. ಭೈರವ ದೇವಾಲಯವೂ ಅಲ್ಲಿದೆ.

ಭೈರವಘಟ್ಟದಿಂದ ಗಂಗೋತ್ರಿಗೆ ಎಂಟು ಮೈಲಿಗಳು, ಆ ಏರು ದಾರಿಯಲ್ಲಿ ಗಂಗೆಯ ಪ್ರತಾಪವನ್ನು ತಡೆದ ಜಹ್ನು ಋಷಿಯ ಆಶ್ರಮವಿದ್ದ ಸ್ಥಳವುಂಟು. ಪುರಾಣದಲ್ಲಿ ಭಗೀರಥನ ಪ್ರಾರ್ಥನೆಯಿಂದ ಧರೆಗಿಳಿದ ಗಂಗೆ ಈ ಸ್ಥಳದಲ್ಲಿ ವೇಗವಾಗಿ ಮುನ್ನುಗ್ಗಿದಾಗ ಆ ಋಷಿಯ ಆಶ್ರಮವನ್ನು ಕೊಚ್ಚಿಹಾಕಿತಂತೆ! ಅದರಿಂದ ಕುಪಿತನಾದ ಋಷಿ ಗಂಗೆಯನ್ನು ಪಾನ

ಮಾಡಿ ಬಿಟ್ಟು ಮತ್ತೆ ಭಗೀರಥನ ಪ್ರಾರ್ಥನೆಯಂತೆ ತನ್ನ ಕಿವಿಯಿಂದ ಅದನ್ನು ಹೊರಬಿಟ್ಟ ಆದ್ದರಿಂದಲೇ ಗಂಗೆಗೆ ಅಲ್ಲಿಂದ ಮುಂದೆ "ಜಾಹ್ನವಿ" ಯೆಂದು ಹೆಸರಾಯಿತು. ಎಂದು ಹೇಳುವಕತೆ ಇಲ್ಲಿಯದೆ. ಅಲ್ಲಿಂದ ಉತ್ತರಕ್ಕೆ ಎರಡೂ ಕಡೆಯ ಪರ್ವತಗಳು ಒಂದನ್ನೊಂದು ಸಂಧಿಸಿದಂತಿರುವ ರುದ್ರ ಭಯಂಕರ ಪ್ರಾಕೃತಿಕ ರಮಣೀಯ ದೃಶ್ಯ ! ಅವು ಹಿಮಶುಭ್ರ ಕಿರೀಟಗಳನ್ನು ಧರಿಸಿ ನಗಾಧಿರಾಜನ ಸಾಮಂತರಂತೆ ಹಿಮವನ್ನು ಹೊದ್ದು ನಿಂತಿವೆ.

ಇದೇ ಗಂಗೋತ್ರಿ; ಇಲ್ಲಿ ಗಂಗಾದೇವಿಯ ದೇವಸ್ಥಾನವಿದೆ. ಅದರ ಮುಂದೆಭಗೀರಥನು ಗಂಗೆಯನ್ನು ಕುರಿತು ಉಗ್ರ ತಪಸ್ಸನ್ನು ಮಾಡಿದ ಶಿಲಾವೇದಿಕೆ ತನ್ನ ಪೂರ್ವಕತೆಯನ್ನು ಘೋಷಿಸುತ್ತಿದೆ. ಗಂಗೋತ್ರಿಯಿಂದ ಮೇಲೇರಿದಾಗ "ರುದ್ರಗಂಗಾತೀರ್ಥ"ವಿದೆ. ಅದರಲ್ಲಿ ಮಿಂದು ಮೇಲೇರಿದರೆ "ರುದ್ರಗುಹೆ" ಸಿಕ್ಕುತ್ತದೆ. ಅದು ತಪೋಯೋಗ್ಯವಾದ ಪವಿತ್ರ ಸ್ಥಳ. ಗಂಗೋತ್ತರಿಯ ಆಸುಪಾಸಿನಲ್ಲಿ ತಪೋಯೋಗ್ಯವಾದ ಬೇರೆ ಬೇರೆ ಆಶ್ರಮಗಳೂ ಇವೆ.

ಆದರೆ ಈ ಗಂಗೋತ್ರಿಯು ಗಂಗಾ ಮೂಲವಲ್ಲ. ಅಲ್ಲಿಂದ ಮುಂದೆ ೧೫ ಮೈಲಿ ಮೇಲೇರಿ ಹೋದರೆ 'ಗಂಗಾಮುಖ' ಎಂಬ ಸ್ಥಳಸಿಕ್ಕುತ್ತದೆ. ಅದೇ ದಾರಿಯಲ್ಲಿ ೧೦ಮೈಲಿ ನಡೆದರೆ 'ಭೋಜಪಾಸ್' ಎಂಬ ತಂಗುದಾಣ ಸಿಕ್ಕುತ್ತದೆ. ರಾತ್ರಿ ಛಳಿಯನ್ನು ತಡೆಯಲು ಅಲ್ಲಿ ಉಣ್ಣೆಯ ದಪ್ಪ ಹೊದಿಕೆ ಬೇಕು. ಅಲ್ಲಿ ರಾತ್ರೆ ತಂಗಿದ್ದು ಮುಂಜಾನೆ ಐದು ಮೈಲಿ ಮೇಲೆ ಏರಿದರೆ "ಗೋಮುಖ" ತಲುಪುತ್ತೇವೆ. ಅದರ ಮೇಲೆ ಎತ್ತರವಾದ ಕಣಿವೆ. ಅಲ್ಲಿ ತಲೆಯೆತ್ತಿ ನಿಂತಿರುವ "ಸುದರ್ಶನ" ಮತ್ತು "ಶಿವಲಿಂಗ" ಎಂಬ ಪರ್ವತಗಳು ಅವುಗಳ ಎತ್ತರ ೨೧,೪೦೦ಅಡಿಗಳು ಆಪರ್ವತಗಳತಪ್ಪಲಿನಲ್ಲಿ ಹರಡಿರುವ ಬಂಡೆಗಳ ಮೇಲೆ ದಟ್ಟವಾಗಿ ನಿಂತ ನೀರು ನೀರ್ಗಲ್ಲು ಬಂಡೆಗಳಾಗಿದೆ. ಸುಮಾರು ೩೦ಮೈಲಿ ಉದ್ದಗಲದ ಪ್ರದೇಶದಲ್ಲಿರುವ ಈನೀರು ಬಂಡೆಗಳು ಬಿಸಿಲಿನ ಝಳಕ್ಕೆ ಕರಗಿ ಸುಮಾರು ೭೦-೮೦ ಅಡಿಗಳ ಎತ್ತರದ ಬಂಡೆಗಳ ಸಮುಚ್ಚಯದಿಂದ ಕೆಳಗೆ ಒಸರಿ ಉಕ್ಕಿ ಹರಿಯುವುದೇ ಗಂಗಾ ಮೂಲವೆಂಬ 'ಗೋಮುಖ.'ಗೋಮುಖದ ಎತ್ತರ ೧೨,೭೭೦ ಅಡಿಗಳು.

ಅಲ್ಲಿಂದ ಹರಿದು ಬರುವ ಶುಭ್ರಜಲವು ಪ್ರವಾಹವಾಗಿ ಗಂಗೋತ್ರಿಗೆ ಬಂದು ಭಾಗೀರಥಿಯಾಗಿ ಮುಂದೆ ಜಾಹ್ನವಿಯಾಗಿ ಬದರಿ ಕಡೆಯಿಂದ ಬರುವ 'ಅಲಕನಂದಾ' ಕೇದಾರದ ಕಡೆಯಿಂದ ಬರುವ 'ಮಂದಾಕಿನಿ' ಉಪನದಿಗಳಿಂದ ಪರಿಪುಷ್ಟವಾಗಿ ಹರಿದ್ವಾರದಲ್ಲಿ ಪವಿತ್ರಗಂಗೆ ಎನಿಸುತ್ತದೆ. ಹರಿದ್ವಾರದ ಗುಡ್ಡದ ಮೇಲಿರುವ 'ಗಂಗಾಮಾಯಿ' ಇದರ ಸಂಕೇತ.

ನಮ್ಮ ಯಾತ್ರಿಕರ ಬಳಗ ಗೋಮುಖ – ಗಂಗೋತ್ರಿಗಳನ್ನು ಸಂದರ್ಶಿಸಿ ಹಿಂದಿರುಗುವಾಗ ಶ್ರೀಪತಿ ಕೇಳಿದ—

ಅಜ್ಜಿ, ಕಾಶ್ಮೀರದಲ್ಲಿ ಗುರುದೇವನು ನಮ್ಮನ್ನು ಬೀಳ್ಕೊಡುವಾಗ "ಚತುರ್ಧಾಮಗಳ ಬಗ್ಗೆ ಇರುವ ವಿಶೇಷರಹಸ್ಯಗಳನ್ನು ದುಗ್ಗವ್ವೆ ವಿವರಿಸುತ್ತಾಳೆ !" ಎಂದಿದ್ದರು. ಪ್ರಕೃತ ನಾವು ಯಮುನೋತ್ರಿ ಮತ್ತು ಗಂಗೋತ್ರಿಗಳನ್ನು ಹಾಯ್ದು ಬರುತ್ತಿದ್ದೇವೆ. ದಯಮಾಡಿ ಇಲ್ಲಿಯ ವಿಶೇಷವೇನು ಎಂಬುದನ್ನು ವಿವರಿಸಬೇಕು" ಎಂದು.

ಅಜ್ಜಿಯ ಮುಖ ಗಂಭೀರವಾಯಿತು ; ಕನಕಲತೆಯ ಕುತೂಹಲ ಕೆರಳಿ ನಿಂತಿತ್ತು. "ನಿಜ ಮರಿ, ಇದು ಬಹಳ ಗಹನವಾದ ವಿಚಾರ, ಜಗತ್ತಿನಲ್ಲಿ ಎಷ್ಟೋ ನದಿಗಳು ಪರ್ವತಾಗ್ರಗಳಲ್ಲಿ ಹುಟ್ಟಿ ಹರಿದು ಸಮುದ್ರ ಸೇರುತ್ತವೆ. ಆದರೆ ಭಾರತದ ಉತ್ತರದಲ್ಲಿ ಬಹು ಎತ್ತರವಾದ ಹಿಮಗಿರಿ ಶಿಖರಗಳಲ್ಲಿ ಹುಟ್ಟಿ ಹರಿಯುವ ಈ ಎರಡು ನದಿಗಳು ತಾತ್ವಿಕ ದೃಷ್ಟಿಯಿಂದ ವಿಶೇಷಮಹತ್ವ ಪಡೆದಿವೆ ಎಂಬುದನ್ನೇ ಗುರುದೇವನು ಸೂಚಿಸಿದ್ದು."

"ಗುರುದೇವನಿಗೆ ಹಿಮಾಲಯದಿಂದ ಕನ್ಯಾಕುಮಾರಿಯವರೆಗಿನ ಭಾರತಾವನಿಯೆಲ್ಲವೂ ಸಾಂಸ್ಕೃತಿಕವಾಗಿ ಒಂದೇ ಎಂಬ ಉದಾತ್ತಭಾವನೆ ಇದೆ! ಅದನ್ನು ಅವರು 'ಅನುಷ್ಠಾನನಿರತ ಶಿವಯೋಗಿ' ಎಂದು ಕರೆದಿರುವುದು ಅರ್ಥಗರ್ಭಿತವಾಗಿದೆ."

"ಅಜ್ಜಿ, ಗುರುದೇವನ ನುಡಿಯಂತೆ ನಿಮ್ಮ ಮಾತು ಕೂಡ ಗಹನವಾದ ಒಗಟಿನಂತೆಯೇ ಇದೆ. ಸಾಮಾನ್ಯರು ಅದನ್ನು ಗ್ರಹಿಸುವುದು ಕಷ್ಟ ! ದಯಮಾಡಿ ಅದನ್ನು ಬಿಡಿಸಿ ಹೇಳಬೇಕು" ಎಂದಳು ಕೈಮುಗಿದು ಕನಕಾ.

"ನಿಜ ಮರಿ, ಇಡಿಯ ಭಾರತವರ್ಷವನ್ನು ಅನುಷ್ಠಾನನಿರತ ಶಿವ ಯೋಗಿ' ಎಂದು ಹೇಳುವಲ್ಲಿ ಅನೇಕ ಕಾರಣಗಳಿರಬಹುದು ! ಮುಖ್ಯವಾಗಿ ಸಹಸ್ರಾರು ವರ್ಷಗಳಿಂದ ಅನೇಕ ಋಷಿಮುನಿಗಳು ಇಲ್ಲಿ ತಪಸ್ಸುಮಾಡಿ ಸಿದ್ಧಿ ಪಡೆಯುತ್ತಿರುವುದು. ಮೇಲಾಗಿ ಈ ಋಷಿಮುನಿಗಳ ತಪಸ್ಸಿದ್ಧಿಯ ಫಲ ಅವರು ಸತ್ತ್ವೋದ್ರಿಕ್ತ ಸ್ಥಿತಿಯಲ್ಲಿ ಕಂಡ ನಿಗಮಾಗಮಗಳು ಭಾರತ ದಲ್ಲಿಯೇ ಅಭಿವ್ಯಕ್ತವಾಗಿರುವುದು !

ಋಷಿ ಮುನಿಗಳ ತಪಸ್ಸಿದ್ಧಿಗೆ ಅನುಷ್ಠಾನವು ಅಗತ್ಯ. ಅದಕ್ಕೆ ಪವಿತ್ರವಾದ ಹಿಮಗಿರಿಧಾಮಗಳು ಯೋಗ್ಯ ಪರಿಸರ. ಯೋಗಶಾಸ್ತ್ರದ ಪ್ರಕಾರ ಪ್ರಾಣಾಯಾಮ ಪ್ರಧಾನವಾದದ್ದು ಅನುಷ್ಠಾನ. ಅನುಷ್ಠಾನ ನಿರತನಾದ ಸಾಧಕನ ಶ್ವಾಸೋಚ್ಛ್ವಾಸಗಳು ಇಡಾ, ಪಿಂಗಳ ಮತ್ತು ಸುಷುಮ್ನಾನಾಡಿಗಳ ತ್ರಿವೇಣೀಸಂಗಮವಾಗಿ ಅಲ್ಲಿ ಪ್ರಾಣಾನಿಲ ಸಂಚಲನ ವುಂಟಾಗಿ ಬೆನ್ನೆಲುಬಿನಲ್ಲಿ ಸುಷುಮ್ನಾನಾಡಿಯ ಮೂಲಕ ಹರಿದು ಸಾಧಕನ ಆಧಾರಚಕ್ರವನ್ನು ಸೇರುತ್ತದೆ. ಅಲ್ಲಿ ಅದು ಸುಪ್ತವಾಗಿರುವ ಕುಂಡಲಿನೀ ಶಕ್ತಿಯನ್ನು ಜಾಗೃತಗೊಳಿಸುತ್ತದೆ. ಈ ಕುಂಡಲಿನಿಯು ಆತನ ಸಾಧನೆಯು ಬೆಳೆದಂತೆ ಊರ್ಧ್ವ ಮುಖವಾಗಿ ಆಧಾರಾದಿ ಷಟ್‌ಚಕ್ರಗಳ ಮೂಲಕ ಸಹಸ್ರಾರವನ್ನು ಸೇರುತ್ತದೆ. ಆಗ ಸಾಧಕ ಊರ್ಧ್ವರೇತಸ್ಕನಾಗಿ 'ರಾಜ ಯೋಗಿ' ಎನಿಸುತ್ತಾನೆ.

ಈ ದೃಷ್ಟಿಯಿಂದಲೇ ಗುರುದೇವನು ಅಖಂಡ ಭಾರತವನ್ನು ಅನು ಷ್ಠಾನನಿರತ ಶಿವಯೋಗಿಗೆ ಹೋಲಿಸಿರುವುದು. ಆದ್ದರಿಂದ ಮೇಲೆ ಹೇಳಿದ ಲಕ್ಷಣಗಳನ್ನು ಭಾರತವರ್ಷದಲ್ಲಿ ಗುರ್ತಿಸುವುದು ಅನಿವಾರ್ಯ. ಮಾತ್ರ ವಲ್ಲದೆ ಭಾರತದ ಶ್ರೀಸಾಮಾನ್ಯನೂ ಕೂಡ ಈ ಸಾಧನೆಯಲ್ಲಿ ನಿರತನಾಗಿ ರಾಜಯೋಗಿಯಾಗಬೇಕು. ಆಗ ಭಾರತವು ಸರ್ವಾಂಗ ಪರಿಪೂರ್ಣವಾಗು ತ್ತದೆ. ಮೇಲಾಗಿ ಅಜೇಯವೂ ಅನುಪಮವೂ ಆಗುತ್ತದೆ. ಜಗತ್ತಿನ ಯಾವ ರಾಷ್ಟ್ರವೂ ಇದನ್ನು ಎದುರಿಸಲಾರದು. ಆದ್ದರಿಂದ ಭಾರತದ ಪ್ರತಿ ಯೊಬ್ಬನೂ ಇದನ್ನು ಅನುಷ್ಠಾನದಲ್ಲಿ ತಂದು ಇಹ ಪರ ಸೌಖ್ಯವನ್ನು ಪಡೆಯಬೇಕು."

"ಅಜ್ಜಿ, ಶಿವಯೋಗಿಯ ಹೋಲಿಕೆಯನ್ನು ಅನ್ವಯಿಸುವಲ್ಲಿ ಭಾರತ ವರ್ಷದ ಆ ಷಟ್ ಚಕ್ರಸ್ಥಾನಗಳು ಯಾವುವು ಎಂಬುದನ್ನು ದಯಮಾಡಿ ಗುರ್ತಿಸಿ ಕೊಡಬೇಕು" ಎಂದು ಕೈಮುಗಿದು ವಿಜ್ಞಾಪಿಸಿದ ಶ್ರೀಪತಿ.

"ಸಾಧಕನಾದ ಭಾರತ ರಾಷ್ಟ್ರಪುರುಷನು ಸಾಂಸ್ಕೃತಿಕವಾಗಿ ರಾಷ್ಟ್ರದಲ್ಲಿ ಸಮಗ್ರತೆ ಮತ್ತು ಏಕಸೂತ್ರತೆಯನ್ನು ಸಂಘಟಿಸುವುದಕ್ಕಾಗಿ ಕನ್ಯಾಕುಮಾರಿಯನ್ನೇ ತನ್ನ ಅನುಷ್ಠಾನದ ಆಧಾರಪೀಠವನ್ನಾಗಿ ಭಾವಿಸಬೇಕು. ಉತ್ತರಮುಖನಾಗಿ ಕುಳಿತ ಈ ಸಾಧಕನ ಮಸ್ತಕವೇ ಹಿಮಾಲಯದ ಚತುರ್ಧಾಮಗಳು. ಅಲ್ಲಿ ಹರಿಯುವ ಗಂಗಾಯಮುನೆಯರೇ ಇಡಾ-ಪಿಂಗಳ ನಾಡಿಗಳು. ಗುಪ್ತಗಾಮಿನಿಯೆನಿಸಿ ಹರಿಯುವ ಸರಸ್ವತಿಯೊಡನೆ ಸಂಧಿಸುವ ತ್ರಿವೇಣೀಸಂಗಮವೇ ಪವಿತ್ರ ಪ್ರಯಾಗಕ್ಷೇತ್ರ. ಮೇಲೆ ಕಂಡ ಮಹೋದ್ದೇಶ ಸಾಧನೆಗಾಗಿ ಎಸಗುವ ಅನುಷ್ಠಾನದಿಂದ ಸಂಚಲನಗೊಂಡ ಪ್ರಾಣಾನಿಲವು ಏಕಸೂತ್ರವೆಂಬ ಸುಷುಮ್ನೆಯ ಮೂಲಕ ಕನ್ಯಾಕುಮಾರಿಯ ಆಧಾರ ಚಕ್ರವನ್ನು ಸೇರುತ್ತದೆ. ಅಲ್ಲಿ ಅಸುರೀಶಕ್ತಿಗಳ ಹಿಡಿತಕ್ಕೆ ಸಿಕ್ಕಿ ಅಜ್ಞಾನಾವಸ್ಥೆಯಲ್ಲಿ ಸುಪ್ತ(ನಿಷ್ಕ್ರಿಯ) ವಾಗಿರುವ ಭಾರತಯೋಗಿಯ ಪ್ರಜ್ಞಾಶಕ್ತಿ ಎಂಬ ಕುಂಡಲಿನಿಯನ್ನು ಜಾಗ್ರತಗೊಳಿಸುತ್ತದೆ. ಜಾಗ್ರತವಾದ ಆಪ್ರಜ್ಞಾಶಕ್ತಿಯು ಊರ್ಧ್ವಮುಖಿಯಾಗಿ ಆಧಾರಾದಿ ಷಟ್ ಚಕ್ರಗಳ ಮೂಲಕ ಸಹಸ್ರಾರವನ್ನು ಸೇರುತ್ತದೆ. ಎಂದರೆ—

ಸಾಂಸ್ಕೃತಿಕವಾಗಿ ಭಾರತ ರಾಷ್ಟ್ರ-ಪುರುಷನಿಗೆ

| | | |
|---|---|---|
| ೧. | ಕನ್ಯಾಕುಮಾರಿಯೇ | ಆಧಾರ ಚಕ್ರ |
| ೨. | ಜಲತತ್ತ್ವ ಪ್ರಧಾನವಾದ ಜಂಬುಕೇಶ್ವರ ಕ್ಷೇತ್ರ | ಸ್ವಾಧಿಷ್ಠಾನ " |
| ೩. | ಭಾರತದ ನಾಭಿಯೆನಿಸಿದ ಶ್ರೀಗಿರಿಯು | ಮಣಿಪೂರಕ " |
| ೪. | ಭಾರತದ ಹೃದಯದಂತಿರುವ ಉಜ್ಜಯನಿಯು | ಅನಾಹತ " |
| ೫. | ತ್ರಿವೇಣೀಸಂಗಮದ ಪ್ರಯಾಗವು | ವಿಶುದ್ಧಿ " |
| ೬. | ನೇಪಾಳ (ನೇತ್ರಫಾಲ) ಪಶುಪತಿ ಕ್ಷೇತ್ರವು | ಆಜ್ಞೇಯ " |

೭. ಕೇದಾರವು ಮಸ್ತಕದಲ್ಲಿರುವ ಸಹಸ್ರಾರಚಕ್ರ

೮. ವಿಶ್ವದಲ್ಲಿಯೇ ಮಹೋನ್ನತವೆನಿಸಿದ ಗೌರೀಶಂಕರ ಶಿಖರವು ಶಿಖಾಚಕ್ರ

೯. ನೇಪಾಳದಲ್ಲಿರುವ ಮುಕ್ತಿನಾಥ ಕ್ಷೇತ್ರವೇ ಪಶ್ಚಿಮಚಕ್ರ

೧೦. ಈ ನವ ಚಕ್ರಗಳಲ್ಲಿ ವಾರಾಣಸಿಯು ವಾಗ್ದೇವಿಯ ಆವಾಸ ಸ್ಥಾನ. ಇದು ವೇದ ಮತ್ತು ಆಗಮಗಳ ಸಂಕಲನ ಕ್ಷೇತ್ರ. ವಿಶ್ವನಾಥ-ಅನ್ನಪೂರ್ಣೆಯರು ನೆಲೆಸಿರುವ ಈ ವಾರಾಣಸಿ.

ಎಂದ ಮೇಲೆ ಭಾರತ ರಾಷ್ಟ್ರಪುರುಷನು ಆತ್ಮೋದ್ಧಾರ ಮತ್ತು ಲೋಕ ಕಲ್ಯಾಣವನ್ನು ಬಯಸುವ ಶಿವಯೋಗಿಯಂತೆ ಇಹ-ಪರ ಸುಖ ಸಾಧನೆಗಾಗಿ ಎಸಗಿದ ತತ್ವಾನುಸರಣೆಯೇ ಭಾರತದ ಗುರಿ !

"ದುಗ್ಗವ್ವೆಯ ವಿವರಣವನ್ನು ಕೇಳಿ ಶ್ರೀಪತಿ-ಕನಕಲತೆಯರು ಪುಳಕಿತರಾದರು ! ಅವರು ಅಜ್ಜಿಗೆ ಕೃತಜ್ಞತೆಯನ್ನು ಸಮರ್ಪಿಸಿ ಕೇದಾರನಾಥ ಧಾಮದ ಕಡೆ ಅಭಿಮುಖರಾದರು.

೫

## ಕೇದಾರಧಾಮ

ಹಿಮಾಲಯದ ಚತುರ್ಧಾಮಗಳಲ್ಲಿ ಕೇದಾರವು ಮೂರನೆಯದು. ಗಂಗೋತ್ರಿಯಿಂದ ಹಿಂದಿರುಗಿದ ನಮ್ಮ ಯಾತ್ರಿಕರ ತಂಡವು ಭೈರಣ್ಣನ ಮುಂದಾಳುತ್ವದಲ್ಲಿ ಕೇದಾರಧಾಮದ ಕಡೆ ತಿರುಗಿತು.

ದುಗ್ಗವ್ವೆ, ಶ್ರೀಪತಿ-ಕನಕಲತೆಯರಿಗೆ ಕೇದಾರ ಪ್ರಯಾಣದ ಪರಿಚಯ ಮಾಡಿಸುತ್ತಿದ್ದಳು.

"ಗಂಗೋತ್ರಿಯಿಂದ ಉತ್ತರಕಾಶಿ, ಟಿಹರಿ, ಶ್ರೀನಗರ ( ಇದು ಕಾಶ್ಮೀರದ ಶ್ರೀನಗರವಲ್ಲ ) ದೇವಪ್ರಯಾಗಗಳ ಮೂಲಕ ರುದ್ರ-ಪ್ರಯಾಗಕ್ಕೆ ಬರಬೇಕು, 'ಪ್ರಯಾಗ' ಎಂದರೆ ಎರಡು ನದಿಗಳ ಸಂಗಮ

ಸ್ಥಳ. ಇದು ಕೇದಾರದಿಂದ ಹರಿದು ಬರುವ ಮಂದಾಕಿನಿ ಮತ್ತು ಬದರಿ ಕ್ಷೇತ್ರದಿಂದ ಹರಿದು ಬರುವ ಅಲಕನಂದಾ ನದಿಗಳ ಸಂಗಮಕ್ಷೇತ್ರ.

ರುದ್ರಪ್ರಯಾಗಕ್ಕೆ ಹರಿದ್ವಾರ-ಹೃಷೀಕೇಶಗಳಿಂದಲೂ ನೇರವಾಗಿ ಬರಬಹುದು. ಹೃಷೀಕೇಶದಿಂದ ಇಲ್ಲಿಗೆ ೧೫೦ ಮೈಲಿಗಳು.

ಇಲ್ಲಿಂದ ಕೇದಾರಕ್ಕೆ ೬೫ ಮೈಲಿಗಳು. ಬದರಿಗೆ ೧೨೫ ಮೈಲಿಗಳು, ಗಂಗೋತ್ರಿಯಿಂದ ಕೇದಾರಕ್ಕೆ ೧೬೫ ಮೈಲಿಗಳು.

ರುದ್ರಪ್ರಯಾಗವು ಸಮುದ್ರ ಮಟ್ಟದಿಂದ ೨೦೦೦ ಅಡಿಗಳ ಎತ್ತರದಲ್ಲಿದೆ. ಹಿಂದೆ ಇಲ್ಲಿ ನಾರದನು ತಪಸ್ಸುಮಾಡಿದ್ದನಂತೆ ! ನದಿಯ ಸಂಗಮದಲ್ಲಿ ನೀರಿನ ಸೆಳೆತ ಹೆಚ್ಚು. ಯಾತ್ರಿಕರು ಸರಪಳಿಗಳನ್ನು ಹಿಡಿದು ಎಚ್ಚರದಿಂದ ಸ್ನಾನ ಮಾಡುತ್ತಾರೆ.

ರುದ್ರಪ್ರಯಾಗದಿಂದ 'ಗುಪ್ತಕಾಶಿ' ಮೂವತ್ತು ಮೈಲಿ. ದೂರದಲ್ಲಿದೆ. ದಾರಿಯಲ್ಲಿ ಒಂದು ಫರ್ಲಾಂಗ್ ದೂರದಲ್ಲಿ ಪ್ರಾಕೃತಿಕವಾದ ಒಂದು ಸುರಂಗದಲ್ಲಿ ನಡೆಯಬೇಕು. ಮುಂದಿನ ಪರ್ವತವನ್ನೇರಿ ಇಳಿದು ಸುತ್ತಿ ಸುತ್ತಿ ಹೋಗುವಾಗ ದಾರಿಯಲ್ಲಿ ಹಳ್ಳಿಗಳು, ಹುಲ್ಲುಗಾವಲುಗಳು, ಹೊಲಗಳು ಅಲ್ಲಿ ಕೆಲಸ ಮಾಡುವ ಗ್ರಾಮೀಣ ರೈತ ಮಕ್ಕಳ ದೃಶ್ಯಗಳು ಬಹು ರಮ್ಯವಾಗಿರುತ್ತವೆ.

'ಗುಪ್ತಕಾಶಿ' ಸಮುದ್ರಮಟ್ಟದಿಂದ ೪೮೫೦ ಅಡಿಗಳ ಎತ್ತರದಲ್ಲಿದೆ. ಹಿಂದೆ ಇದು ಅನೇಕ ಋಷಿಮುನಿಗಳು ತಪಸ್ಸು ಮಾಡಿದ ಸ್ಥಳ ! ಇಲ್ಲಿಯ ಮುಖ್ಯದೇವತೆ 'ವಿಶ್ವನಾಥ ಸ್ವಯಂಭು ಲಿಂಗ!' ಇಲ್ಲಿಗೆ ಸಮೀಪದಲ್ಲಿ 'ಮಣಿಕರ್ಣಿಕಾ' ಎಂಬ ಚಿಕ್ಕ ಕೆರೆ ಇದೆ. ಇಲ್ಲಿ ಗಣಪತಿ ಮತ್ತು ಗೋವು ಇವುಗಳ ಬಾಯಿಂದ 'ಗಂಗಾ' ಮತ್ತು 'ಯಮುನಾ' ಎಂಬ ಎರಡು ನೀರಿನ ಧಾರೆಗಳ. ಹೊರಚೆಲ್ಲಿ ಕೆರೆಗೆ ಬಂದು ಸೇರುತ್ತವೆ. ಈ ತೀರ್ಥದಲ್ಲಿ ಮಿಂದು 'ಗುಪ್ತದಾನ' ಮಾಡುವುದರಿಂದ ಇದಕ್ಕೆ 'ಗುಪ್ತಕಾಶಿ' ಎಂಬ ಹೆಸರು ಬಂದಿದೆಯಂತೆ !

ಇಲ್ಲಿಯ ಪ್ರಕೃತಿ ಸೌಂದರ್ಯ ನೋಡತಕ್ಕದ್ದು ! ಮಂದಾಕಿನೀ ಇಲ್ಲಿಂದ ಒಂದುಸಾವಿರ ಅಡಿಗಳ ಆಳದ ಕಣಿವೆಯಲ್ಲಿ ರಭಸದಿಂದ ಹರಿಯು ತ್ತದೆ. ಇಲ್ಲಿಂದ ೨೦ ಮೈಲಿ ನಡೆದರೆ 'ಸೋನಪ್ರಯಾಗ' ತಲುಪುತ್ತೇವೆ. ಇದು 'ಮಂದಾಕಿನೀ' ಮತ್ತು 'ಸೋನಗಂಗಾ' ನದಿಗಳ ಸಂಗಮ ದಲ್ಲಿದೆ.

ಗುಪ್ತಕಾಶಿ ಮತ್ತು ಕೇದಾರಗಳ ಮಧ್ಯದಲ್ಲಿರುವ ಒಂದು ತಂಗುದಾಣ ಗೌರೀಕುಂಡ. ಇಲ್ಲಿ ೬೫೦೦ ಅಡಿ ಎತ್ತರವಾದ ಬೆಟ್ಟದ ಬುಡದಲ್ಲಿ ಹುಲ್ಲುಗಾವಲುಗಳ ಮಧ್ಯೆ ಮಂದಾಕಿನೀ ಮಂದವಾಗಿ ಹರಿಯುತ್ತದೆ ! ಇಲ್ಲಿ ಚಳಿ ಹೆಚ್ಚು. ಇಲ್ಲಿ ಬಿಸಿನೀರಿನ ಕುಂಡವಿದೆ. ಅದರ ಹತ್ತಿರವಿರುವ ಗೌರೀದೇವಾಲಯ ನೋಡತಕ್ಕದ್ದು. ಒಂದು ಪಕ್ಕದಲ್ಲಿ ಗೋವಿನಮುಖ ದಿಂದ ಹರಿದುಬರುವ ಬಿಸಿನೀರು ಕುಂಡದಲ್ಲಿ ಬಿದ್ದು ಮತ್ತೊಂದು ಕಡೆ ಹೊರಬಿದ್ದು ಮಂದಾಕಿನಿಯನ್ನು ಸೇರುತ್ತದೆ. ಚಳಿಯಿಂದ ಕಳವಳ ಗೊಂಡ ಯಾತ್ರಿಕರು ಈ ಕುಂಡದಲ್ಲಿ ಮಿಂದು ಸುಖಿಸುತ್ತಾರೆ. ಅನೇಕ ಔಷಧಿಗಳ ಸಾರವನ್ನೊಳಗೊಂಡ ಈ ಕುಂಡದ ಬಿಸಿನೀರಿನ ಸ್ನಾನ ಮಾನವ ರಿಗೆ ಆರೋಗ್ಯಕರ ಎನ್ನಲಾಗಿದೆ.

ಗೌರೀಕುಂಡಕ್ಕೆ ಹತ್ತಿರದಲ್ಲಿ 'ಅಮೃತಕುಂಡವಿದೆ'. ಅದರ ನೀರು ತಂಪು. ಅದಕ್ಕೆ ಸಮೀಪದಲ್ಲಿ ಹಳದಿ ನೀರಿನ ಮತ್ತೊಂದು ಕುಂಡವಿದೆ. ಅಲ್ಲಿ ಯಾರೂ ಸ್ನಾನ ಮಾಡುವುದಿಲ್ಲ. ಕೇವಲ ಆ ಜಲಪ್ರೋಕ್ಷಣೆಯಿಂದ ತೃಪ್ತರಾಗುತ್ತಾರೆ ಯಾತ್ರಿಕರು. ಕಾರಣ ಪಾರ್ವತಿಯು ತನ್ನ ಮುಟ್ಟಿನ ಕಡೆಯ ದಿನ ಇಲ್ಲಿ ಮಿಂದು ಪಾವನಳಾದಳಂತೆ !

ಇಲ್ಲಿಂದ ಕೇದಾರಕ್ಕೆ ಏರುದಾರಿಯಲ್ಲಿ ಕಾಲುನಡಿಗೆಯಿಂದ ಏರ ಬೇಕು. ದಂಡಿ, ಕಂಡಿ, ಕುದುರೆಗಳ ಮೂಲಕ ಹೋಗಬಹುದು. ದಂಡಿ ಎಂದರೆ ನಾಲ್ವರು ಹೊರುವ ಮಂಚ (ಪಲ್ಲಕ್ಕಿ). ಕಂಡಿ ಎಂದರೆ ಬೆನ್ನಿಗೆ ಏರಿಸಿದ ಕುರ್ಚಿಯಲ್ಲಿ ಯಾತ್ರಿಕನನ್ನು ಹಿಮ್ಮುಖವಾಗಿ ಕೂರಿಸಿ ಕೊಂಡು ಪರ್ವತ ಏರುವುದು. ಕುದುರೆಯಮೇಲೆ ಕೆಲವರು ಉಳಿದವರು ಚೀಡವೃಕ್ಷದ ಕೋಲೂರಿಕೊಂಡು ಸುತ್ತುಮುತ್ತಿನ ರಮ್ಯ ದೃಶ್ಯಗಳನ್ನು

ನೋಡುತ್ತಾ, ಕೇದಾರೇಶನಿಗೆ ಜಯಕಾರ ಮಾಡುತ್ತಾ, ನಡೆಯುವ ದೃಶ್ಯ ಅವರ್ಣನೀಯ !

ಗೌರೀಕುಂಡದಿಂದ ಸುಮಾರು ಆರು ಮೈಲಿಯವರೆಗೆ ಗಿರಿ ಶಿಖರಗಳನ್ನು ಹತ್ತಬೇಕು. ದಾರಿಯಲ್ಲಿ ಒಂದೆಡೆ ಹಿಮದಹರಳುಗಳು ದಟ್ಟವಾಗಿ ಹರಡಿರುತ್ತವೆ. ಅದರ ಮೇಲೆ ಸ್ವಲ್ಪದೂರ ನಡೆಯಬೇಕಾಗುತ್ತದೆ. ಎಡಗಡೆ ಎತ್ತರವಾದ ಪರ್ವತ ! ಅಲ್ಲಿಂದ ದಾರಿಗೆ ಬೀಳುವ ಹಿಮ ಖಂಡಗಳು ಬಲಗಡೆ ಆಳದಲ್ಲಿ ಭೋರ್ಗರೆದು ಹರಿಯುವ ಮಂದಾಕಿನೀ ನದಿಯ ಪ್ರವಾಹ ! ಕಾಲು ಜಾರಿದರೆ ಕೇದಾರನಾಥನೇ ದಿಕ್ಕು !" ಎಂದು ನೆನೆಯುವ ಯಾತ್ರಿಕರು ಹಿಮದ ದಾರಿ ಹಾಯ್ದು ನಿಟ್ಟುಸಿರು ಬಿಡುತ್ತಾ ಮುನ್ನಡೆಯುತ್ತಾರೆ. ಮುಂದೆ ಎಡಗಡೆ ಎರಡು ಗಿರಿಶಿಖರಗಳು ಸಂಧಿಸುವ 'ರಾಮಬಾಣ' ( ಬಾಡ ) ಎಂಬ ಒಂದು ತಂಗುದಾಣವಿದೆ. ಅದರ ಪಕ್ಕದಲ್ಲಿ ಮಂದಾಕಿನಿಯು ಹರಿಯುತ್ತದೆ. ನದಿಯ ನೀರಿನಲ್ಲಿ ಹಿಮದ ಗಡ್ಡೆಗಳು ತೇಲುತ್ತಿರುವ ಸುಂದರ ದೃಶ್ಯ, ಯಾತ್ರಿಕರ ಕಣ್ಣಿಗೆ ಔತಣ ನೀಡುತ್ತದೆ.

ರಾಮಬಾಡದಿಂದ ಸುಮಾರು ಮೂರು ಮೈಲಿ ಒಂದೇ ಸಮನಾಗಿ ಪರ್ವತ ಏರಬೇಕು. ಅಲ್ಲಿ ಯಾವ ಗಿಡ ಮರಗಳೂ ಇಲ್ಲ. ಬಂಡೆಗಳಸಂದಿಯಲ್ಲಿ ಬೆಳೆದಿರುವ ಪರಿಮಳಬೀರುವ ಬಿಳಿಎಸಳಿನ ಉದ್ದಕೇಸರದ ಸುಂದರವಾದ ಹೂಗಳು ಅಲ್ಲಿವೆ. ಅವನ್ನು "ಸ್ಥಲಕಮಲ" ಎಂದು ಕರೆಯುತ್ತಾರೆ. ಇವು ಕೇದಾರನಾಥನಿಗೆ ಬಹು ಪ್ರಿಯವಂತೆ. ಗಿಡ ಮರಗಳು ಬೆಳೆಯದಿರುವುದರಿಂದ ಅಲ್ಲಿ ಯಾವ ನಿಸರ್ಗ ಸೌಂದರ್ಯವನ್ನು ನಿರೀಕ್ಷಿಸುವಂತಿಲ್ಲ. ಇದು ಕೇವಲ ಹಿಮಮಯ ಪ್ರದೇಶ, ಆ ಪರ್ವತದ ತುದಿಗೇರಿದಾಗ ಅಲ್ಲಿಗೆ ಕೇದಾರನಾಥ ದೇವಾಲಯಶಿಖರವು ಕಾಣುತ್ತದೆ. ಅದನ್ನು ಕಂಡು ಹರ್ಷಿತರಾದ ಯಾತ್ರಿಕರು ಅಲ್ಲಿಯೇ ಅಡ್ಡಬಿದ್ದು "ಕೇದಾರನಾಥಕೀ ಜೈ" ಎಂದು ಕೈ ಜೋಡಿಸಿ ವಂದಿಸುತ್ತಾರೆ. ಶಿಖರದ ಮೇಲಿರುವ ಕಂಚಿನ ಕಲಶವು ಎಳೆಬಿಸಿಲಿಗೆ ಫಳ ಫಳ ಹೊಳೆಯುತ್ತದೆ. ಅದರ ಮೇಲೆ ಏರಿಸಿದ ಕಾವಿಯ ಬಾವುಟವು ಕೈಬೀಸಿ ಯಾತ್ರಿಕರನ್ನು ಕರೆಯುವಂತೆ ಇರುವ

ರಮ್ಯ ದೃಶ್ಯ. ಅದನ್ನು ಕಂಡ ಎಂಥ ನಾಸ್ತಿಕನಾದರೂ ತನಗೆ ಅರಿವಿಲ್ಲ ದೆಯೇ ಕೇದಾರನಾಥನಿಗೆ ಕೈ ಮುಗಿಯುವಂತಾಗುತ್ತದೆ. ಯಾತ್ರಿಕರಿಗೆ ಅಲ್ಲಿಂದಲೇ ಪ್ರಥಮ ದರ್ಶನವಾಗುವುದರಿಂದ ಆ ಸ್ಥಳವನ್ನು 'ದೇವ ದೇಖಿನೀ' ಎಂದು ಕರೆಯುತ್ತಾರೆ.

ಅಲ್ಲಿಂದ ಕೇದಾರಧಾಮವು ಕೇವಲ ಮೂರು ಮೈಲಿ. ಯಾತ್ರಿಕರು ಕೇದಾರನಾಥನ ದರ್ಶನಕ್ಕಾಗಿ ಹಾತೊರೆಯುತ್ತಾ ಬೇಗ ಬೇಗನೆ ಮುನ್ನಡೆದು ಕೇದಾರಧಾಮವನ್ನು ಸೇರುತ್ತಾರೆ.

ಕೇದಾರಧಾಮವು ಸಮುದ್ರ ಮಟ್ಟದಿಂದ ೧೧,೭೫೦ ಅಡಿ ಎತ್ತರ ದಲ್ಲಿದೆ. ದೇವಾಲಯದ ಹತ್ತಿರವಿರುವ ಪರ್ವತ ೨೩,೦೦೦ಅಡಿ ಎತ್ತರವಿದೆ. ಈ ಪರ್ವತಪಂಕ್ತಿಗೆ "ರುದ್ರಹಿಮಾಲಯ" ಅಥವಾ "ಮಹಾಪಂತ್" ಎಂದು ಹೆಸರು. ಇದೇ 'ಸುಮೇರುಪರ್ವತ'. ಈ ಪರ್ವತ ಶ್ರೇಣಿಯಲ್ಲಿ ರುದ್ರಹಿಮಾಲಯ, ಬ್ರಹ್ಮಪುರಿ, ವಿಷ್ಣುಪುರಿ, ಉದ್ಗಿರಿ ಕಾಂತ, ಮತ್ತು ಸ್ವರ್ಗಾರೋಹಿಣಿ ಎಂಬ ಐದು ಶಿಖರಗಳಿವೆ. ಧರ್ಮರಾಯನು ತನ್ನ ತಮ್ಮಂದಿರೆಲ್ಲ ತೀರಿಕೊಂಡ ಮೇಲೆ ತನಗೆ ಪ್ರಿಯಸ್ನೇಹಿತನಂತಿದ್ದ ನಾಯಿ ಯೊಡನೆ ಸ್ವರ್ಗಾರೋಹಣ ಮಾಡಿದ್ದು ಇಲ್ಲಿಯೇ ಎನ್ನುತ್ತಾರೆ!

ಕೇದಾರಧಾಮದಿಂದ ಒಂದು ಮೈಲಿ ದೂರದಲ್ಲಿ ಶ್ರೀ ಶಂಕರಾ ಚಾರ್ಯರದೆಂದು ಹೇಳುವ ಸಮಾಧಿ ಇದೆ!" ಎಂದಾಗ ಶ್ರೀಪತಿ—

ಅಜ್ಜಿಯನ್ನು ಕುರಿತು "ಅಮ್ಮ. "ಶಂಕರರ ಜೀವನಚರಿತ್ರೆಯಲ್ಲಿ ಆಚಾರ್ಯರು ಕೇದಾರಕ್ಕೆ ಬಂದಿದ್ದು, ಇಲ್ಲಿಂದ ಬದರಿಗೆ ಹೋಗುತ್ತಾರೆ. ಅಲ್ಲಿ ದತ್ತಾತ್ರೇಯರ ದರ್ಶನವಾಗುತ್ತದೆ. ಅವರ ಸೂಚನೆಯಂತೆ ಆಚಾರ್ಯರು ಕೈಲಾಸ ಪರ್ವತವನ್ನು ಹತ್ತಿ ಅಲ್ಲಿ ಒಂದು ಗುಹೆಯನ್ನು ಪ್ರವೇಶಿಸುತ್ತಾರೆ" ಎಂದಿದೆ. ಅಂದಮೇಲೆ ಇಲ್ಲಿರುವುದು ಅವರ ನಿಜ ಸಮಾಧಿಯಾದೀತೆ!" ಎಂದು ಸಂದೇಹವನ್ನು ವ್ಯಕ್ತಪಡಿಸಿದ ಶ್ರೀಪತಿ.

ಅಜ್ಜಿ ಹೇಳಿದಳು "ಇದ್ದರೂ ಇರಬಹುದು. ಆಗ ಇಲ್ಲಿರುವ ಸಮಾಧಿ ಅವರ ತೋರಗದ್ದಿಗೆಯಾಗುತ್ತದೆ. ತೋರಗದ್ದಿಗೆ ಎಂದರೆ ಆ ಮಹಾತ್ಮರು

ಅನುಷ್ಠಾನ ಮಾಡಿದ ಸ್ಥಳ. ಭಕ್ತರು ಅವರ ನೆನಪಿಗಾಗಿ ಹೀಗೆ ಗದ್ದಿಗೆ ಏರ್ಪಡಿಸುತ್ತಾರೆ" ಎಂದು.

### ಕೇದಾರದ ಜ್ಯೋತಿರ್ಲಿಂಗದರ್ಶನ

'ಕೇದಾರನಾಥ' ಎಂಬುದು ಏನು ? ಅದು ಒಂದು ಮೂರ್ತಿಯಲ್ಲ. ಶಿವಲಿಂಗದ ಲಕ್ಷಣವೂ ಅಲ್ಲಿ ಕಾಣುವುದಿಲ್ಲ. ಆದ್ದರಿಂದ ಅದೊಂದು ಶಿಲಾ ಖಂಡ. ವಿಚಾರ ಮಾಡಿದರೆ ಅದೊಂದು ಮಹಾಪರ್ವತ ಶಿಖರದ ಪ್ರತೀಕ! ಎಂದರೆ ಅದು ಸುಮೇರುಪರ್ವತ ಶಿಖರದ ಸಂಕೇತ ! ಪ್ರಾಯಃ ಮೊದಲು ಪ್ರಕೃತಿಯ ಆರಾಧಕನಾಗಿದ್ದ ಮಾನವ ಮಹೋನ್ನತ ಶಿಖರಾಕೃತಿಯನ್ನೇ ಈ ರೂಪದಲ್ಲಿ ಆರಾಧಿಸುತ್ತಿದ್ದುದನ್ನು ಇದು ಸೂಚಿಸುತ್ತದೆ.

ಸಾಂಪ್ರದಾಯಿಕವಾಗಿ ಈ ಬಗ್ಗೆ ಹೇಳುವ ಕತೆ ಹೀಗಿದೆ- "ಪಾಂಡವರು ತಮ್ಮ ಕಡೆಯ ದಿನಗಳಲ್ಲಿ ತಮಗೆ ಉಂಟಾಗಿದ್ದ ಗೋತ್ರ (ಬಂಧು)ವಧೆಯ ಕಳಂಕಪಂಕವನ್ನು ತೊಳೆದುಕೊಳ್ಳಲು ಇಲ್ಲಿಗೆ ಬಂದಾಗ ಶಿವನು ವೃಷಭ ಇಲ್ಲವೆ ಮಹಿಷದ ಆಕಾರದಿಂದ ಅವರಿಗೆ ಕಾಣಿಸಿಕೊಂಡ. ಆದರೂ ಕಳಂಕಿತರಾದ ಅವರನ್ನು ನೋಡಲು ಇಷ್ಟವಿಲ್ಲದೆ ಓಡತೊಡಗಿದ. ಅದನ್ನು ಹಿಡಿಯಲು ಬೆನ್ನಟ್ಟಿಹೋದ ಪಾಂಡವರಲ್ಲಿ ಬಲಿಷ್ಠನಾದ ಭೀಮನು ಅದನ್ನು ಹಿಡಿಯ ಹೋದಾಗ ಅದು ಕೊಂಬುಗಳಿಂದ ಭೂಮಿಯನ್ನು ಬಗೆದು ಒಳನುಗ್ಗಿತು. ಭೀಮನಿಗೆ ಸಿಕ್ಕಿದ್ದು ಪೃಷ್ಠಭಾಗ ಮಾತ್ರ, ಅದೇ ಇಂದು ತ್ರಿಕೋಣಾಕಾರವಾಗಿರುವ ಕೇದಾರನಾಥ."

"ಹಾಗಾದರೆ ಅದರ ಉಳಿದ ಭಾಗಗಳೆಲ್ಲಿವೆ ?" ಕನಕಾ ಕೇಳಿದಳು. ಅಜ್ಜಿ ಹೇಳಿದಳು—"ನೋಡು ಮರಿ, ಭೂಮಿಯನ್ನು ಹೊಕ್ಕ ವೃಷಭದ ಮುಖವು ನೇಪಾಳದಲ್ಲಿ ಕಾಣಿಸಿಕೊಂಡು ಪಶುಪತಿನಾಥನೆಂದು ಕರೆಯಲ್ಪಟ್ಟಿದೆ. ಅದರ ಕಾಲುಗಳು 'ತುಂಗನಾಥ'ದಲ್ಲಿಯೂ, ಹೊಟ್ಟೆಯು 'ಮಧ್ಯ ಮಹೇಶ್ವರ'ದಲ್ಲಿಯೂ, ಶಿರಸ್ಸು "ಕಾಪಾಲೇಶ್ವರ'ದಲ್ಲಿಯೂ ಇವೆ. ಕೇದಾರವೂ ಸೇರಿ ಇವು "ಪಂಚಕೇದಾರಗಳು". ಇದರ ನೆನಪಿಗಾಗಿ ಕೇದಾರೇಶ್ವರಮಂದಿರದಲ್ಲಿ ದ್ರೌಪದಿಸಹಿತ ಪಂಚಪಾಂಡವರ ಮೂರ್ತಿಗಳು ಸ್ಥಾಪಿತವಾಗಿವೆ."

"ಅಜ್ಜಿ, ನೀವು ಊಖೀಮಠವನ್ನು ಕೇದಾರದ ಮೂಲಪೀಠ ಎಂದು ಹೇಳಿದಿರಿ. ದಯಮಾಡಿ ಅದರ ಪರಿಚಯ ಮಾಡಿಕೊಡಿ!" ಎಂದು

"ಊಖೀಮಠವು ಇಲ್ಲಿಂದ ಕೆಳಗೆ ಮೂವತ್ತು ಮೈಲಿ ದೂರದಲ್ಲಿದೆ. ನಾವು ಕೇದಾರೇಶ್ವರನನ್ನು ವಿಧ್ಯುಕ್ತವಾಗಿ ಆರಾಧಿಸಿ ಹಿಂದಿರುಗುವಾಗ ಅಲ್ಲಿಗೆ ಭೇಟಿ ಕೊಡೋಣ!" ಎಂದ ದುಗ್ಗವ್ವೆಯ ಸೂಚನೆಯಂತೆ ಎಲ್ಲರೂ ಕೇದಾರೇಶ್ವರ ಸೇವೆಯನ್ನು ಮುಗಿಸಿ, ಹಿಂದಿರುಗಿದರು.

ದುಗ್ಗವ್ವೆ ಊಖೀಮಠದ ವಿಷಯವನ್ನು ಎತ್ತಿ ಹೇಳತೊಡಗಿದಳು.

'ಊಖೀಮಠವು ಗುಪ್ತಕಾಶಿಗೆ ಹತ್ತು ಮೈಲಿ ದೂರದಲ್ಲಿದೆ. 'ಊಖೀ' ಎಂಬುದು ಉಷಾ ಎಂಬುದರ ತದ್ಭವ. ಉಷೆ ಪುರಾಣಕಾಲದ ಬಾಣಾಸುರನ ಮಗಳು. ಶ್ರೀಕೃಷ್ಣನ ಮೊಮ್ಮಗ ಅನಿರುದ್ಧ. ಒಮ್ಮೆ ಅವನು ಇವಳನ್ನು ಕಂಡು ಮೋಹಿತನಾದ. ಅವರಿಬ್ಬರಲ್ಲಿ ಅನುರಾಗ ಬೆಳೆಯಿತು. ಅನಿರುದ್ಧ ದ್ವಾರಕೆಯಿಂದ ಗಗನಮಾರ್ಗದಲ್ಲಿ ಬಾಣಾಸುರನ ಅಂತಃಪುರಕ್ಕೆ ಬಂದು ಉಪ್ಪರಿಗೆಯಲ್ಲಿದ್ದ ಉಷೆಯೊಡನೆ ರಮಿಸುತ್ತಿದ್ದ!

ಬಾಣಾಸುರ ಅನಿರುಧ್ಧನನ್ನು ಬಂಧಿಸಿದ!

ಶ್ರೀಕೃಷ್ಣ ಹೇಳಿಕೇಳಿ ಅಸುರಾಂತಕ! ಅವನು ಬಾಣಾಸುರನ ಮೇಲೆ ಯುದ್ಧವನ್ನು ಘೋಷಿಸಿದ. ಬಾಣಾಸುರ ಪರಮ ಶಿವಭಕ್ತ. ಬಾಣ ಶಿವನ ಮೊರೆಹೊಕ್ಕ. ಭಕ್ತಪರಾಧೀನನಾದ ಶಿವ ಬಾಣನ ಪರವಾಗಿ ಶ್ರೀಕೃಷ್ಣನನ್ನು ಎದುರಿಸುವುದು ಅನಿವಾರ್ಯವಾಯಿತು. ಈ ನಿಮಿತ್ತ ದಿಂದ ಹರಿ–ಹರರಲ್ಲಿ ಕದನವಾದರೆ ಜಗತ್ತಿನ ಪ್ರಳಯವು ಖಂಡಿತ! ಎಂದು ಯೋಚಿಸಿದ ದೇವತೆಗಳು ಕೇದಾರದ ಜಗದ್ಗುರುಗಳಿಗೆ ಶರಣಾದರು. ಅವರ ಸಂಧಾನದಿಂದ ಹರಿ–ಹರರಲ್ಲಿ ನಡೆಯಲಿದ್ದ ಕದನವು ಉಷಾ-ಅನಿ ರುದ್ಧರ ಪರಿಣಯದಲ್ಲಿ ಮುಕ್ತಾಯವಾಯಿತು. ಇದರ ಸವಿನೆನಪಿಗಾಗಿ ಬಣಾಸುರ ತನ್ನ ಮಗಳ ಹೆಸರಿನಲ್ಲಿ ಮಠವನ್ನು ಕಟ್ಟಿಸಿ ತನ್ನ ಕುಲ ಗುರು ಗಗೆ ಕಾಣಿಕೆಯಾಗಿ ಒಪ್ಪಿಸಿದ.

ಅದೇ ಈಗಿರುವ ಭವ್ಯವಾದ ಊಖೀಮಠ. ಹಿಮವತ್ಕೇದಾರದ ವೈರಾಗ್ಯ ಸಿಂಹಾಸನವಿರುವುದು ಇಲ್ಲಿಯೆ!

ಕೇದಾರದಲ್ಲಿ ವರ್ಷದಲ್ಲಿ ಆರುತಿಂಗಳು ಹಿಮಪಾತವಾಗುವುದರಿಂದ ಅಲ್ಲಿಯ ರಾವಲ್‌ರು ಉತ್ಸವಮೂರ್ತಿಯನ್ನು ಇಲ್ಲಿಗೆ ಬಿಜಯಂಗೈಸಿ ಕೊಂಡು ಇಲ್ಲಿ ಆರಾಧಿಸುವುದು ಪದ್ಧತಿ."

"ಅಜ್ಜಿ, ಆ ಪದ್ಧತಿಯ ವಿವರವನ್ನು ಕೃಪೆಮಾಡಿ ತಿಳಿಸಿಕೊಡ ಬೇಕು."

"ಹಿಮಾಲಯದಲ್ಲಿರುವ ಕೇದಾರ ಮತ್ತು ಬದರಿಗಳು ಅವಳಿ ಧರ್ಮ ಕ್ಷೇತ್ರಗಳು. ಈ ಕ್ಷೇತ್ರಗಳ ಅಧಿಪತಿಗಳಾದವರನ್ನು 'ರಾವಲ್' ಎಂದು ಕರೆಯುತ್ತಾರೆ. ಪಂಚಪೀಠಗಳಲ್ಲಿ ಒಂದಾದ ಕೇದಾರದ ಜಗದ್ಗುರುಗಳು ಕೇದಾರೇಶ್ವರ ಮಂದಿರದ 'ರಾವಲ್' ಎಂದರೆ ಪ್ರಧಾನಾರ್ಚಕರೂ ಆಗಿರು ತ್ತಾರೆ!

"ಏನು, ಕೇದಾರಪೀಠದ ಅಧಿಪತಿಗಳು ಕೇದಾರೇಶ್ವರನ ಮುಖ್ಯ ಅರ್ಚಕರೆ? ಇದರಿಂದ ಅವರು ಸ್ಥಾವರಲಿಂಗಾರ್ಚಕರಾದಂತಾಯಿತಲ್ಲವೆ?"

"ನಿನ್ನ ಪ್ರಶ್ನೆ ಸರಿ, ಆದರೆ ಇಲ್ಲಿ ಒಂದು ಅಂಶವನ್ನು ಗಮನಿಸ ಬೇಕು. ಕೇದಾರಪೀಠಕ್ಕೆ ಜಗದ್ಗುರುಗಳಾಗುವವರು ಕರ್ನಾಟಕದ ವೀರ ಮಾಹೇಶ್ವರ ಜಂಗಮ ವಂಶದವರಾಗಬೇಕು. ಎಂಬ ನಿಗಮವಿದೆ. ಅವರನು ಉಳಿದ ಐದು ಪೀಠಗಳ ಅಧಿಪತಿಗಳೂ ಆರಿಸುತ್ತಾರೆ. ಅದರಂತೆ ಬದರಿಯ ರಾವಲ್ ಅವರು ಸಹ ಕೇರಳದ ನಂಬೂದಿರಿಪಾಡ್ ಪಂಗಡದ ಬ್ರಾಹ್ಮಣರು. ಅವರನ್ನು ಅನಂತ ಶಯನದ ಬ್ರಾಹ್ಮಣ ವಿದ್ವತ್‌ವೃಂದವು ಆರಿಸುತ್ತದೆ. ಇಬ್ಬರೂ ಅಖಂಡ ಬ್ರಹ್ಮಚಾರಿಗಳು. ಮೇಲಾಗಿ ಇವರು ಹಿಂದಿನ ರವಲ್ ಅವರಲ್ಲಿ ಚೇಲಾ ವೃತ್ತಿಯಲ್ಲಿದ್ದಿರಬೇಕು ಎಂಬ ನಿಯಮವಿದೆ. ಆದ್ದರಿಂದ ಇವರಿಗೆ 'ತಿಲಕ' ಎಂಬ ಸಂಸ್ಕಾರವನ್ನು 'ಟಿಹರಿ ಸಂಸ್ಥಾನ'ದ ಪ್ರಭುತ್ವವು ಏರ್ಪಡಿಸುತ್ತದೆ. ಇವರ ವೇಷಭೂಷಣಗಳು ವಿಶಿಷ್ಟವಾದವು. ಅವರಿಗೆ ನಿಗದಿಯಾದ ರಾಜ ಮರ್ಯಾದೆಗಳುಂಟು. ರಾವಲರು ತಮ್ಮ ಕೈಕೆಳಗೆ ಕೆಲವರು ಚೇಲಾ (ಶಿಷ್ಯ) ಗಳನ್ನು ಆರಿಸಿಕೊಂಡು ಅವರ ಮೂಲಕ ದೇವಾಲಯದ ಕೈಂಕರ್ಯಗಳನ್ನು ನೆರವೇರಿಸುತ್ತಾರೆ. ಆದ್ದರಿಂದ ಇವರಿಗೆ ಸ್ಥಾವರಲಿಂಗಾರ್ಚಕತ್ವದ ಕಳಂಕವಿರುವುದಿಲ್ಲ.

"ಈ ಕ್ಷೇತ್ರಕ್ಕೆ 'ಕೇದಾರ' ಎಂಬ ಹೆಸರು ಬರಲು ಕಾರಣವೇನು ?"

"ಇದು ತುಂಬಾ ಗಹನವಾದ ವಿಚಾರ! 'ಕೇದಾರ' ಎಂದರೆ ಹೊಲ, ಗದ್ದೆ ಎಂದು ಅರ್ಥ. ಪುರಾತನ ಕಾಲದಲ್ಲಿ ಆದಿಮಾನವ ಮೃಗಗಳಂತೆ ಬೇಟೆಯಾಡಿ ಜೀವಿಸುತ್ತಿದ್ದ. ಆ ಕಾಲದಲ್ಲಿ ದಯಾಳುವಾದ ರುದ್ರನು ನೆಲವನ್ನು ಉತ್ತು ಹದಮಾಡಿ ಧಾನ್ಯಗಳನ್ನು ಬಿತ್ತಿ ಬೆಳೆದೆಗೆದು ಜನರನ್ನು ಶಾಖಾಹಾರಿಗಳನ್ನಾಗಿ ಮಾಡಿದ ಮಹಾನುಭಾವ! ಆದ್ದರಿಂದಲೇ ಶ್ರೀ ರುದ್ರಾಧ್ಯಾಯದಲ್ಲಿ ಅವನಿಗೆ "ಕೃಷ್ಟಾನಾಂ ಪತಯೇ ನಮಃ" ಎಂದು ವಂದನೆ ಮಾಡಲಾಗಿದೆ.

ಅವನ ಪ್ರಮಥಗಣದಲ್ಲಿ ಸೇರಿದ ವೀರ, ನಂದಿ, ಭೃಂಗಿ, ವೃಷಭ ಮತ್ತು ಸ್ಕಂದರು ಶಿವಧರ್ಮವನ್ನು ಭೂಲೋಕದಲ್ಲಿ ಹರಡಿದ ಗೋತ್ರ ಪುರುಷರು. ಭಾರತಾದ್ಯಂತವೂ ಪ್ರಸಿದ್ಧವಾಗಿರುವ ಈ ಐದು ಪೀಠಗಳು ಈ ಪ್ರಮಥರ ಪರಂಪರೆಯಲ್ಲಿ ನಡೆದುಬರುತ್ತಿವೆ.

ಕೇದಾರಪೀಠವು ಭೃಂಗೀಶ್ವರ ಪರಂಪರೆಗೆ ಸೇರಿದ್ದು. ಈ ಪೀಠದ ಮೊದಲ ಆಚಾರ್ಯರು ಏಕೋರಾಮಸಿದ್ಧ ಭಗವತ್ಪಾದರು. ಯುಗ ಯುಗಗಳಲ್ಲಿಯೂ ಈ ಪೀಠದ ಆಚಾರ್ಯರು ಬೇರೆ ಬೇರೆ ಹೆಸರುಗಳಿಂದ ಈ ಪೀಠವನ್ನು ಅಲಂಕರಿಸಿ ತತ್ತ್ವೋಪದೇಶ ಮಾಡುತ್ತಿದ್ದಾರೆ ಎಂದು ಶಿವಾಗಮಗಳು ಉಲ್ಲೇಖಿಸಿವೆ. ಈ ಪೀಠದ ಪಟ್ಟವಲ್ಲರಿಯ ಪ್ರಕಾರ ಇಲ್ಲಿ ಆಗಿಹೋದ ಆಚಾರ್ಯರು ೨೪೦ ಮಂದಿ. ಇನ್ನೂರ ಮೂವತ್ತೊಂಬತ್ತನೆಯ "ಸತ್ಯಸ್ವರೂಪ ಲಿಂಗ ಶಿವಾಚಾರ್ಯ"ರು ಈಗಿರುವ "ಸ್ವರೂಪ ಲಿಂಗ ಶಿವಾಚಾರ್ಯ"ರ ಗುರುಗಳು. ಇವರು ವಿಕ್ರಮಶಕೆ ೧೦೦೫ರಲ್ಲಿ ಈಪೀಠವನ್ನು ಅಲಂಕರಿಸಿದ್ದು.

ಈ ಪೀಠಕ್ಕೆ ಮಾಂಧಾತ, ಸಗರ ಮತ್ತು ಭಗೀರಥರು ಈ ಪ್ರಾಂತದ ಭೂಭಾಗವನ್ನು ದಾನವಾಗಿ ನೀಡಿದ್ದರು. ದ್ವಾಪರಾಂತ್ಯದಲ್ಲಿದ್ದ ಪಾಂಡವರು ತಮಗೆ ಬಂದಿದ್ದ ಬಂಧುವಧಾದೋಷವನ್ನು ಕಳೆದುಕೊಳ್ಳುವುದಕ್ಕಾಗಿ ಕೇದಾರ ಮತ್ತು ಬದರಿಗಳ ವಿಶಾಲ ಭೂಭಾಗವನ್ನು ಈ ಎರಡು ಪೀಠಗಳ ಆಧಿಪತ್ಯವುಳ್ಳ ಲಿಂಗಿ ಬ್ರಾಹ್ಮಣ ಮತ್ತು ಅಲಿಂಗಿ ಬ್ರಾಹ್ಮಣ ಎಂಬ ಶಿವ

ಯೋಗಿಗಳಿಗೆ ದಾನಮಾಡಿದನು. ಈ ದಿಸೆಯಲ್ಲಿ ಧರ್ಮರಾಜನು ತಾನು ಮಾಡುವ ಭೂದಾನವು ಯಾರಿಗೆ ಕೊಡಬೇಕೆಂದು ವೃದ್ಧ ಪಿತಾಮಹರಾದ ಭೀಷ್ಮರನ್ನು ಪ್ರಶ್ನಿಸಿದಾಗ ಅವರು ಮೇಲಿನ ನಿರ್ಣಯವನ್ನು ಕೊಟ್ಟ ವಿಚಾರವು ಮಹಾಭಾರತದ ಅನುಶಾಸನ ಪರ್ವ (ಅಧ್ಯಾಯ ೨೨) ದಲ್ಲಿದೆ. ಇದಲ್ಲದೆ ಬೇರೆಬೇರೆ ರಾಜ ಮಹಾರಾಜರು ಉಂಬಳಿ ಹಾಕಿ ಕೊಟ್ಟ ೧೪೨ ಗ್ರಾಮಗಳು ಇಂದಿಗೂ ಈ ಪೀಠದ ವಶದಲ್ಲಿವೆ.

"ಅಜ್ಜಿ, ನೀವು ಹಿಮಪಾತಕಾಲದಲ್ಲಿ ಬದರಿ ಮತ್ತು ಕೇದಾರದ ರಾವಲರು ಅಲ್ಲಿಯ ಉತ್ಸವಮೂರ್ತಿಗಳನ್ನು ಹಿಮಾಲಯದ ಕೆಳಗೆ ಬದರಿಯವರು ಜ್ಯೋಶೀಮಠಕ್ಕೂ ಕೇದಾರದ ರಾವಲರು 'ಊಖೀಮಠ'ಕ್ಕೂ ತಂದು ಆರಾಧಿಸುತ್ತಾರೆ ಎಂದಿರಿ. ಅದನ್ನು ವಿವರಿಸಿ ಹೇಳಬೇಕು"

"ಇಲ್ಲಿ ಮುಖ್ಯವಾಗಿ ಗಮನಿಸಬೇಕಾದದ್ದು ಇಲ್ಲಿಯ ಅಖಂಡ ಜ್ಯೋತಿರ್ದರ್ಶನ! ಹಿಮಪಾತವು ಆರಂಭವಾದಾಗ ಈ ಎರಡೂ ಕ್ಷೇತ್ರಗಳ ರಾವಲರು ಈ ದೇವಮಂದಿರಗಳ ಬಾಗಿಲಿಗೆ ಬೀಗ ಹಾಕುವಮುನ್ನ ಅಲ್ಲಿರುವ ಬೃಹತ್ ಬಾಣಲಿಗಳಿಗೆ ಪದ್ಧತಿಯಂತೆ ಎಣ್ಣೆ ತುಂಬಿಸಿ ಬತ್ತಿ ಹೊತ್ತಿಸುತ್ತಾರೆ. ಜ್ಯೋತಿಯು ಆರು ತಿಂಗಳವರೆಗೆ ನಂದದೆ ಉರಿಯುವುದರಿಂದ ಇದಕ್ಕೆ ನಂದಾಜ್ಯೋತಿ, ಅಥವಾ ಅಖಂಡಜ್ಯೋತಿ ಎಂಬ ಹೆಸರಿದೆ. ಪ್ರಾಯಃ ಈ ಅವಧಿಯು ಪ್ರತಿವರ್ಷದ ಕಾರ್ತೀಕ ಶುದ್ಧಬಿದಿಗೆಯಿಂದ ಮುಂದೆ ವೈಶಾಖ ಶುದ್ಧ ಬಿದಿಗೆಯವರೆಗೆ ಇರುತ್ತದೆ. ಬಾಗಿಲು ತೆರೆಯುವ ಹಾಗೂ ಮುಚ್ಚುವ ದಿನಗಳನ್ನು ಪ್ರಭುತ್ವವು ಪ್ರಕಟಿಸುತ್ತದೆ. ಆಗ್ಗೆ ಈ ಎರಡೂ ಕ್ಷೇತ್ರಗಳಲ್ಲಿ ಅದನ್ನು ನೋಡಲು ಸಹಸ್ರಾರು ಮಂದಿ ಯಾತ್ರಿಕರು ನೆರೆಯುತ್ತಾರೆ.

ಹೀಗೆ ದುಗ್ಗವ್ವೆ ಹೇಳುತ್ತಿರುವಾಗ ಎಲ್ಲರೂ ಊಖೀಮಠದ ದ್ವಾರದ ಮುಂದಕ್ಕೆ ಬಂದಿದ್ದರು. ಭೈರಣ್ಣನು ಜಗದ್ಗುರುಗಳ ಸಂದರ್ಶನವ್ಯವಸ್ಥೆಯನ್ನು ಏರ್ಪಡಿಸಿದ್ದ. ಜಗದ್ಗುರುಗಳು ತಮ್ಮ ಅನುಷ್ಠಾನವನ್ನು ಮುಗಿಸಿ ಹೊರಬಂದು ಸಿಂಹಾಸನಾಸೀನರಾಗಿರುವ ಸಮಯವನ್ನು ಕಾದ್ದು ಎಲ್ಲರೂ ಫಲಪುಷ್ಪಾದಿಗಳನ್ನು ಜಗದ್ಗುರುಗಳವರಿಗೆ ಅರ್ಪಿಸಿ ಪ್ರಣಾಮ

ಮಾಡಿದರು. ತ್ರಿಕಾಲಜ್ಞಾನಿಗಳಾದ ಪೂಜ್ಯರು ಶ್ರೀಪತಿ–ಕನಕೆಯರ ಪೂರ್ವೋತ್ತರ ವೃತ್ತಾಂತವನ್ನೆಲ್ಲ ಸೂಕ್ಷ್ಮವಾಗಿ ಹೇಳಿ

"ಅಪ್ಪ, ನೀವು ಕಾಶ್ಮೀರದಿಂದ ಬಂದಿದ್ದೀರಿ! ಶ್ರೀಗಿರಿಯ ಪೂಜ್ಯ ದೇಶಿಕೇಂದ್ರರ ಪೂರ್ಣವಾದ ಅನುಗ್ರಹ ನಿಮಗಿದೆ. ಆದ್ದರಿಂದ ನೀನು ಕೈಗೊಂಡಿರುವ ಮಹತ್ಕಾರ್ಯವು ಯಶಸ್ವಿಯಾಗುವುದರಲ್ಲಿ ಸಂದೇಹ ವಿಲ್ಲ"ಎಂದರು ಜಗದ್ಗುರುಗಳು ಅಭಯಮುದ್ರೆ ಸೂಚಿಸಿ.

ಶ್ರೀಪತಿ ಬಿನ್ನವಿಸಿದ— "ಗುರುದೇವ, ನಾನು ಬ್ರಹ್ಮಸೂತ್ರಗಳ ಮೇಲೆ ಭಾಷ್ಯವನ್ನು ಬರೆಯಲು ಸಂಕಲ್ಪಿಸಿದ್ದೇನೆ. ಆ ಬಗ್ಗೆ ಪೂಜ್ಯ ದೇಶಿಕೇಂದ್ರರು ಅನೇಕ ಅಪೂರ್ವಗ್ರಂಥರತ್ನಗಳನ್ನು ಅನುಗ್ರಹಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದುದು 'ಅಗಸ್ತ್ಯ ಸೂತ್ರವೃತ್ತಿ' ಎಂದು ಅರಿಕೆ ಮಾಡಿದ.

ಜಗದ್ಗುರುಗಳು ಅಪ್ಪಣೆ ಕೊಡಿಸಿದರು—"ಬ್ರಹ್ಮಸೂತ್ರಗಳ ಮೇಲೆ ದಾರುಕಾದಿ ಆಚಾರ್ಯರು ವೃತ್ತಿಗಳನ್ನು ಬರೆದಿರುವಂತೆ ನಮ್ಮ ಮಠದ ಪೂರ್ವಾಚಾರ್ಯರು ಸಹ ಒಂದು ಭಾಷ್ಯವನ್ನು ಬರೆದಿದ್ದಾರೆ. ಅದರ ಹೆಸರು 'ಅಧಿಕರಣ ಭಾಷ್ಯ' ಅದನ್ನೂ ನೀನು ನೋಡು." ಎಂದು ಅದನ್ನು ಶ್ರೀಪತಿಗೆ ನೀಡಿದರು. ಶ್ರೀಪತಿ ಭಾಷ್ಯದ ಕಟ್ಟನ್ನು ಕಣ್ಣಿಗೆ ಒತ್ತಿಕೊಂಡು 'ಗುರುದೇವ, ಕೃತಾರ್ಥನಾದೆ' ಎಂದು ಪ್ರಣಾಮ ಮಾಡಿದ. ಜಗದ್ಗುರುಗಳು ಈ ದಿಸೆಯಲ್ಲಿ ರಚಿತವಾಗಿರುವ ಇನ್ನೂ ಅನೇಕ ಹೊತ್ತಗೆಗಳನ್ನು ಶ್ರೀಪತಿಗೆ ನೀಡಿ ಆಶೀರ್ವದಿಸಿದರು.

ಶ್ರೀಪತಿ ಮತ್ತು ಕನಕಲತೆಯರು ಗುರುವಿನ ಸನ್ನಿಧಿಯಲ್ಲಿ ತತ್ತ್ವ ಜಿಜ್ಞಾಸೆಯಲ್ಲಿ ತೊಡಗಿರುವಾಗ ಭೈರಣ್ಣ ಏನನ್ನೋ ನೆನೆದು ಹೊರಬಂದ. ಪೀಠದ ಮಹಾದ್ವಾರದ ಬಳಿ ಯಾತ್ರಿಕರ ದೊಡ್ಡ ಜಾತ್ರೆಯೇ ನೆರೆದಿತ್ತು. ಸೋಜಿಗಗೊಂಡ ಭೈರಣ್ಣ ಅವರನ್ನು ಗಮನಿಸಿದಾಗ ಅವರಲ್ಲಿ ಬ್ರಾಹ್ಮಣ ದಂಪತಿಗಳಿಬ್ಬರನ್ನು ಗುರ್ತಿಸಿ ಭೈರಣ್ಣ—

"ಓಹೊ! ಶಾಸ್ತ್ರಿಗಳಿಗೆ ನಮಸ್ಕಾರ! ತಾಯಿಯವರಿಗೆ ಶರಣು!" ಎಂದು ಅವರಿಗೆ ದೀರ್ಘದಂಡ ಪ್ರಣಾಮ ಮಾಡಿದ.

ಸದಾಶಿವ ಶಾಸ್ತ್ರಿಗಳು ಜಟಾಧಾರಿಯಾದ ಅಪರಿಚಿತ ವ್ಯಕ್ತಿಯನ್ನು ಎಲ್ಲಿಯೋ ಕಂಡಿದ್ದ ನೆನಪು. ಆದರೆ ಅದು ಬಗೆ ಹರಿಯಲಿಲ್ಲ ! ಅವರು ಉತ್ತರಿಸಲಾರದೆ ತಬ್ಬಿಬ್ಬಾದರು !

"ನಾನು ಯಾರು ಎಂಬುದು ಈಗಲಾದರೂ ನೆನಪಾಯಿತೇ" ಎಂದು ಮತ್ತೆ ಪ್ರಶ್ನಿಸಿದಾಗ ಶಾಸ್ತ್ರಿಗಳು ಕುತೂಹಲದಿಂದ ಆತನನ್ನು ನೋಡ ತೊಡಗಿದರು. ಭೈರಣ್ಣನೇ ಹೇಳಿದ,

"ಸ್ವಾಮಿ, ಇದು ಎಂಟುವರ್ಷದ ಹಿಂದಿನ ಒಂದು ಘಟನೆ ! ನೀವು ಶಂಭುಭಟ್ಟರ ಜೊತೆ ವಿಂಧ್ಯಾಟವಿಯಲ್ಲಿ ಬರುತ್ತಿದ್ದಾಗ ನಿಮ್ಮ ಮಗನ್ನು ಕಾಲಭೈರವನಿಗೆ ಬಲಿಗೊಡಲು ನಿಮ್ಮನ್ನು ಗಾಬರಿಗೊಳಿಸಿದ್ದ ಕಾಲ ಭೈರವ ನಾನೆ !" ಎಂದ, ಅದನ್ನು ಕೇಳಿದ ಸಾವಿತ್ರಿ ಆ ಘಟನೆಯನ್ನು ನೆನೆದು ನಡುಗಿದಳು ! ಅದನ್ನು ಕಂಡ ಭೈರಣ್ಣ—

"ತಾಯಿ, ಈಗ ಹೆದರುವ ಅಗತ್ಯವಿಲ್ಲ. ಅದಕ್ಕಾಗಿ ನಾನು ಇಟ ಮತ್ತೊಮ್ಮೆ ನಿಮ್ಮ ಕ್ಷಮೆ ಬೇಡುತ್ತೇನೆ," ಎಂದಾಗ ಆ ದಂಪತಿ ಮುಖದಲ್ಲಿ ಪ್ರಸನ್ನತೆಯ ನಸುನಗೆ ಮಿನುಗಿತು. ಎಲ್ಲರೂ ಶ್ರೀಮ ಒಂದು ಜಗುಲಿಯ ಮೇಲೆ ಕುಳಿತರು. ಭೈರಣ್ಣ ಅಂದಿನಿಂದ ಇಂದಿನವ ನಡೆದ ತಾನು, ಶ್ರೀಪತಿ ಮತ್ತು ಕನಕೆಯರ ವಿಷಯವನ್ನೆಲ್ಲ ವಿವರಿಸಿ

ಸಾವಿತ್ರಿ ಕೇಳಿದಳು, "ಈಗ ಶ್ರೀಪತಿ ಕನಕೆಯರು ಎಲ್ಲಿದ್ದಾರೆ ಎಂದು. ಅಷ್ಟು ಹೊತ್ತಿಗೆ ಅವರೂ ಗುರುವಿನ ಆಶೀರ್ವಾದ ಪಡೆ ಹೊರ ಬಂದರು. ಪರಸ್ಪರ ಕುಶಲ ಪ್ರಶ್ನೆಗಳಾದ ಮೇಲೆ ಶಾಸ್ತ್ರಿಗಳು—

"ನಾವು ಪ್ರಯಾಗದಿಂದ ಚಿ|| ಶ್ರೀಕಾಂತನೊಡನೆ ನಿಮ್ಮನ್ನು ಅಗಲಿದೆವು." "ಅಂದರೆ ಆ ಶ್ರೀಕಾಂತನೆಲ್ಲಿದ್ದಾನೆ ?" ಶ್ರೀಪತಿ ಪ್ರಶ್ನಿಸಿ ಕಳಕಳಿಯೊಡನೆ.

"ಅದೇ ವಿಷಯಕ್ಕೆ ಬರುತ್ತಿದ್ದೇನೆ. ನಾವು ವಿಶ್ವನಾಥ-ಅನ್ನಪೂರ್ಣೆ ಯರ ಸೇವೆ ಮಾಡಿಕೊಂಡು ನಮ್ಮ ಬಂಧುಗಳಾದ ಭೀಮನ ಪಂಡಿತರ ಮನೆಗೆ ಬಂದೆವು. ಬಹುದಿನಗಳ ಮೇಲೆ ಭೇಟಿಯಾದ ನಮ್ಮನ್ನು ಅವರ

ಒಂದುವಾರ ಮನೆಯಲ್ಲಿ ಉಳಿಸಿಕೊಂಡರು. ಈ ಅವಧಿಯಲ್ಲಿ ಅವರ ಮಗ "ಮಲ್ಲಿಕಾರ್ಜುನ" ಮತ್ತು ನಮ್ಮ "ಶ್ರೀಕಾಂತ"ರಿಗೆ ಗೆಳೆತನ ಬೆಳೆದಿತ್ತು. ಅವರು ತೀರ್ಥಯಾತ್ರೆಗೆ ಹೋಗಲು ಸಿದ್ಧರಾದ ನಮ್ಮನ್ನು ತಡೆದು ಹೇಳಿದರು.

"ಓದಿ ಬೆಳಕಾಗುವ ಎಳೆ ವಯಸ್ಸಿನ ಮಗನನ್ನು ಹೀಗೆ ಹಿಂದಿಟ್ಟು ಕೊಂಡು ನೀವು ಊರೂರು ತಿರುಗುವುದು ಸರಿಯಲ್ಲ! ನೀವು ಬೇಕಾದರೆ ತೀರ್ಥಯಾತ್ರೆಗೆ ಹೊರಡಿ! ಚಿರಂಜೀವಿಯನ್ನು ನಾವು ನಿಮ್ಮೊಡನೆ ಕಳಿಸುವುದಿಲ್ಲ! ಅವನನ್ನು ನಮ್ಮ ಮಗನ ಜೊತೆ ಶಾಲೆಗೆ ಸೇರಿಸಲಾಗುತ್ತದೆ. ನೀವು ಯಾತ್ರೆ ಮುಗಿಸಿಕೊಂಡು ಬಂದು ಬೇಕಾದರೆ ಕರೆದು ಕೊಂಡು ಹೋಗಿ!" ಎಂದರು. ಅವರ ಧರ್ಮ ಪತ್ನಿ ಗೌರಮ್ಮನವರು ಸಹ ನಮ್ಮ ಮನೆಯವರ ಕಡೆಯಿಂದ ಹತ್ತಿರದ ಬಂಧುಗಳೆ! ಅವರು ಶ್ರೀಕಾಂತನು ಇಲ್ಲಿಯೇ ಇರಲಿ ಅವನು ನಮಗೇನು ಹೊರೆಯಾಗುವುದಿಲ್ಲ! ನೀವು ಹೋಗಿ ಬನ್ನಿ!" ಎಂದು ವಾತ್ಸಲ್ಯದಿಂದ ಚಿರಂಜೀವಿಯನ್ನು ಇರಿಸಿ ಕೊಂಡು ನಮ್ಮನ್ನು ಬೀಳ್ಕೊಟ್ಟರು.

ನಾವು ಎಂಟು ವರ್ಷಗಳಿಂದ ಭಾರತವನ್ನೆಲ್ಲ ಸಂಚರಿಸಿ ಅನೇಕ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿದೆವು. ನಾಳೆಯೇ ನಾವು ಇಲ್ಲಿಂದ ವಾರಾಣಸಿ ಸೇರಿ, ಮಗನನ್ನು ಒಡಗೊಂಡು ಸ್ವಗ್ರಾಮ ಸೇರುತ್ತೇವೆ." ಎಂದು ಶಾಸ್ತ್ರಿಗಳು ಹೇಳುತ್ತಿರುವಾಗ ಸಾವಿತ್ರಿ ಕನಕಲತೆಯನ್ನು ಬರಸೆಳೆದು, ಮುದ್ದಿಸಿ ತಲೆ ನೇವರಿಸುತ್ತಿದ್ದಳು, ಕನಕಾ ಕೇಳಿದಳು.

"ಅತ್ತೆ, ನಿಮ್ಮಿಂದ ಒಂದು ಉಪಕಾರವಾಗಬೇಕು!"

"ಏನಮ್ಮ ಅಂಥ ಉಪಕಾರ! ನಿಮ್ಮ ತಂದೆ ನಮಗೆ ತೋರಿಸಿದ ಮಾರ್ಗದರ್ಶನವನ್ನು ಮರೆಯಲಾದೀತೆ!" ಎಂದಳು.

"ನೀವು ಕಾಶಿಯಲ್ಲಿ ನಮ್ಮ ಮನೆಗೆ ಭೇಟಿ ಕೊಡಬೇಕು. ನಾವು ಊರು ಬಿಟ್ಟು ನಾಲ್ಕು ತಿಂಗಳಾಯಿತು. ಈಗ ಬದರಿಗೆ ಹೊರಟಿದ್ದೇವೆ, ಆ ವೇಳೆಗೆ ಅಲ್ಲಿ ಹಿಮಪಾತ ಆರಂಭವಾಗುತ್ತೆ. ಆಗ ಮಂದಿರದ ಬಾಗಿಲು

ಮುಚ್ಚುತ್ತಾರಂತೆ! ಆಗ್ಗೆ ನಾವು ಅಲ್ಲಿ 'ಅಖಂಡಜ್ಯೋತಿಯ' ದರ್ಶನ ಮಾಡಿಕೊಂಡು ಉತ್ಥಾನದ್ವಾದಶಿಗೆ ಕಾಶಿಗೆ ಹಿಂದಿರುಗುತ್ತೇವೆ" ಎಂಬು ದನ್ನು ಅವರಿಗೆ ತಿಳಿಸಬೇಕು.

"ಇದು ಯಾವ ದೊಡ್ಡ ಉಪಕಾರ! ಸರಿ, ನೀವು ಯಾತ್ರೆಯನ್ನು ಸಾಂಗವಾಗಿ ಮುಗಿಸಿಕೊಂಡು ಬನ್ನಿ! ಅಲ್ಲಿಯವರೆಗೆ ನಾವು ನಿಮ್ಮ ಮನೆಯಲ್ಲಿಯೇ ಇದ್ದು ನಿಮ್ಮನ್ನು ಸ್ವಾಗತಿಸುತ್ತೇವೆ!

ಎಂದು ಮಾತು ಕೊಟ್ಟಳು ಸಾವಿತ್ರಿ ವಾತ್ಸಲ್ಯದಿಂದ. ಗುರುವಿನ ಅಪ್ಪಣೆಯಂತೆ ಎಲ್ಲರೂ ಮಧ್ಯಾಹ್ನದ ಪ್ರಸಾದವನ್ನು ಶ್ರೀಮಠದಲ್ಲಿಯೇ ಸ್ವೀಕರಿಸಿ ಗುರುವಿನ ಅಪ್ಪಣೆ ಪಡೆದು ಮುನ್ನಡೆದರು.

## ಬದರಿಧಾಮ

ರುದ್ರಪ್ರಯಾಗದಿಂದ ಬದರಿಗೆ ೨೨೦ ಮೈಲಿಗಳು, ರುದ್ರಪ್ರಯಾಗವು ನಾರದನು ತಪಸ್ಸು ಮಾಡಿದ ಸ್ಥಳ. ಅಲ್ಲಿಂದ ಮುಂದೆ ಅಲಕನಂದಾ ನದಿಯ ದಡದಲ್ಲಿ ಬದರಿಗೆ ಪ್ರಯಾಣಿಸಬೇಕು ಯಾತ್ರಿಕರು.

ಕರ್ಣಪ್ರಯಾಗ, ನಂದಪ್ರಯಾಗ, ಚಮೋಲಿ, ಪೀಪಲಕೋಟಿ ಮತ್ತು ಗರುಡಗಂಗಾ ಮುಂತಾದ ತೀರ್ಥಕ್ಷೇತ್ರಗಳನ್ನು ಹಿಂದಿಕ್ಕಿ ಯಾತ್ರಿಕರು ಜ್ಯೋಶೀಮಠವನ್ನು ತಲುಪುತ್ತಾರೆ.

"ಜ್ಯೋಶೀಮಠ"ವು ಪುರಾಣಕಾಲದ "ಯೋಧಿಪುರ. ಇದು ಹಿರಣ್ಯ ಕಶಿಪುವಿನ ರಾಜಧಾನಿ. ಯಕ್ಷ, ಕಿನ್ನರರ ಜನಪದ. ಹಿಂದೆ ಇದನ್ನು "ಕಾರ್ತಿಕೇಯಪುರ" ಎಂದು ಕರೆಯುತ್ತಿದ್ದರು. ಪಾರ್ವತಿ ಶಿವನನು ಕುರಿತು ತಪಸ್ಸು ಮಾಡಿದ್ದು ಇಲ್ಲಿ ಎಂದು ಹೇಳುತ್ತಾರೆ.

ಆಚಾರ್ಯಶಂಕರರು ಇಲ್ಲಿಗೆ ಬಂದು ಒಂದು ಗುಹೆಯಲ್ಲಿ ತಪಸ್ಸು ಮಾಡಿದರಂತೆ! ಅವರು ಇಲ್ಲಿನ ಒಂದು ವೃಕ್ಷದ ಕೆಳಗೆ ಜ್ಯೋತಿಯನ್ನು ಬೆಳಗಿಸಿ, ಮಠವನ್ನು ಕಟ್ಟಿಸಿದರು. ಅದರಿಂದ ಇದಕ್ಕೆ "ಜ್ಯೋತಿ (ಜ್ಯೋಶಿ) ಮಠ" ಎಂಬ ಹೆಸರಾಯಿತು.

ಬದರಿಯಲ್ಲಿ ಹಿಮಪಾತವು ಆರಂಭವಾದಾಗ ಕೇದಾರದಲ್ಲಿರುವಂತೆ

ಇಲ್ಲಿಯೂ ಸಹ ಅಲ್ಲಿಯ ರಾವಲರು ಉತ್ಸವಮೂರ್ತಿಯನ್ನು ಇಲ್ಲಿಗೆ ತಂದು ಆರಾಧಿಸುತ್ತಾರೆ. ಕೇದಾರದಲ್ಲಿರುವಂತೆ ಇಲ್ಲಿಯೂ ಸಹ "ಅಖಂಡ ಜ್ಯೋತಿ"ಯನ್ನು ಉರಿಸುವ ಪದ್ಧತಿ ಇದೆ.

ಜ್ಯೋತಿರ್ಮಠವು ಸಮುದ್ರಮಟ್ಟದಿಂದ ೬,೧೦೦ಅಡಿ ಎತ್ತರದಲ್ಲಿದೆ. ಇಲ್ಲಿಂದ ಮುಂದೆ ವಿಷ್ಣುಪ್ರಯಾಗ. ಇದು ಧವಲಗಂಗಾ ಮತ್ತು ಅಲಕನಂದೆಯರ ಸಂಗಮದಲ್ಲಿದೆ.

ಇಲ್ಲಿಂದ ಮುಂದೆ ಕೇವಲ ಶಿಲಾವೃತ ಪರ್ವತ ಪ್ರದೇಶ. ಅಲ್ಲಿ ಗಿಡ ಮರಗಳಿಲ್ಲ. ಅಕ್ಕ ಪಕ್ಕಗಳಲ್ಲಿ ನರ-ನಾರಾಯಣ ಪರ್ವತಗಳು, ಕಲ್ಲು ಬಂಡೆಗಳ ಮಧ್ಯದಲ್ಲಿ ಧುಮ್ಮಿಕ್ಕುವ ಅಲಕನಂದೆಯ ಜಲನರ್ತನದ ರಮ್ಯ ರುದ್ರನೃತ್ಯ. ಅಲ್ಲಿಂದ ಮುಂದೆ ಕಾಣುವುದು ಒಂದು ಹೂವಿನ ಕಣಿವೆ. ಇಲ್ಲಿರುವ ಸರೋವರವನ್ನು ಹೇಮಕುಂಡವೆಂದು ಕರೆಯುತ್ತಾರೆ. ಈ ಸರೋವರದ ನೀರಿನಲ್ಲಿ ಹಿಮಾವೃತವಾದ ಸಪ್ತ ಪರ್ವತ ಶಿಖರಗಳು ಪ್ರತಿಬಿಂಬಿಸಿರುವ ದೃಶ್ಯ ಅತಿಮನೋಹರ ! ಇದೇ ಜಗತ್ ಪ್ರಸಿದ್ಧವಾದ 'ಲೋಕಪಾಲ' ಎಂದು ಕರ್ಣತಣಿಸುವ ಹೂವಿನ ಕಣಿವೆ ! ಇದರ ಎತ್ತರ ೧೦,೧೦೦ ಅಡಿಗಳು, ವಿಸ್ತಾರವಾದ ಈ ಕಣಿವೆಯಲ್ಲಿ ನಾನಾ ಬಣ್ಣದ ಹೂವಿನ ವೈಭವವನ್ನು ನೋಡಲು ಎಲ್ಲೆಡೆಯಿಂದ ಪ್ರವಾಸಿಗರು ಬರುತ್ತಾರೆ.

ಇಲ್ಲಿಂದ ಮುಂದೆ ಪಾಂಡುಕೇಶ್ವರ. ಇದು ಮಹಾಭಾರತದ ಪಾಂಡು ರಾಜನು ವಾಸಮಾಡಿದ್ದ ಸ್ಥಳವಂತೆ ! ಹಿಂದೆ ಇದು 'ಪಾಂಚಾಲ ದೇಶ' ವೆನಿಸಿತ್ತು. ಮುನಿಶಾಪಪೀಡಿತನಾದ ಪಾಂಡುರಾಜ ಕುಂತಿ–ಮಾದ್ರಿಯರೊಡನೆ ಇರುವಾಗ ಒಂದು ವಸಂತದಲ್ಲಿ ಮಾದ್ರಿಯನ್ನು ಕೂಡಿದ ರಾಜ ಮೃತನಾದದ್ದು ಇಲ್ಲಿ ! ಪಾಂಡುಕುಮಾರರು ತಮ್ಮ ಬಾಲ್ಯವನ್ನು ಕಳೆದದ್ದು ಇಲ್ಲಿ.

ಮುಂದೆ ಸಿಕ್ಕುವುದು ಹನುಮಾನ್ ಚೆಟ್ಟಿ. ಪಾಂಡವ ಮಧ್ಯಮನಾದ ಭೀಮನು ಸೌಗಂಧಿಕಾಪುಷ್ಪವನ್ನು ಹುಡುಕಿಕೊಂಡು ಬಂದಾಗ ದಾರಿಯಲ್ಲಿ ಹನುಮಂತ ತನ್ನ ಬಾಲವನ್ನು ಚಾಚಿ ಕುಳಿತಿದ್ದದ್ದು ಇಲ್ಲಿಯೆ!

ಭೀಮ ದಾರಿಗೆ ಅಡ್ಡವಾಗಿ ಬಿದ್ದಿದ್ದ ಆ ಬಾಲವನ್ನು ಎತ್ತಲಾರದ ಭೀಮನ ಗರ್ವಭಂಗವಾದದ್ದು ಇಲ್ಲಿ! ಪ್ರಾಯಃ ಇದು ಅಂದಿನ ಗಂಧಮಾದನ ಪರ್ವತವಿರಬಹುದು! ಇಲ್ಲಿನ ಉನ್ನತ ಹಿಮಶಿಖರಗಳ ಮಧ್ಯದಲ್ಲಿ ಶೋಭಿಸುವ ವಿಶಾಲ ಬದರಿಕಾ ಕ್ಷೇತ್ರವು ಕಾಣುತ್ತದೆ. ಮಂದಿರದ ಮೇಲೆ ನಿಂತಿರುವ ಬಾವುಟವು ಯಾತ್ರಿಕರನ್ನು ಸ್ವಾಗತಿಸುವಂತಿದೆ.

ಬದರಿಕಾಕ್ಷೇತ್ರವು ಭಾರತದ ಉತ್ತರಗಡಿಯಲ್ಲಿರುವ ಒಂದು ಸುಂದರ ಗಿರಿಧಾಮ. ಹಿಮಾಲಯವು ಶಿವನಿಗೆ ವಾಸಲಾಗಿದ್ದರೂ ಶಿವನಲ್ಲಿ ಶಕ್ತಿರೂಪ ದಿಂದ ಅಡಗಿರುವ ನಾರಾಯಣನು ವ್ಯಕ್ತವಾಗಿ ಬದರಿಯಲ್ಲಿ ಕೇದಾರದ ಹತ್ತಿರ ನೆಲೆಸಿರುವುದು ತಾತ್ವಿಕವಾಗಿಯೂ ಉಚಿತವೆನಿಸಿದೆ. ಎಷ್ಟಾದರೂ ಶಿವನು "ಮುಕುಂದ ಪ್ರಿಯ"ನಲ್ಲವೆ?

ಬದರಿಯ ಎಡಬಲಗಳಲ್ಲಿ ನೆಲೆಸಿರುವ ನರ-ನಾರಾಯಣ ಪರ್ವತ ಗಳು ಹಿಂದೆ ಲೋಕಕಲ್ಯಾಣಾರ್ಥವಾಗಿ ತಪೋನಿರತರಾಗಿದ್ದ ನರ-ನಾರಾ ಯಣರ ತಪೋಭೂಮಿ ಎಂಬುದನ್ನು ಸಾರುತ್ತವೆ. ಈ ಪರ್ವತಗಳ ಎತ್ತರ ಕ್ರಮವಾಗಿ ೧೯,೨೧೦ ಮತ್ತು ೧೯,೭೫೦ ಅಡಿಗಳು. ಅನೇಕ ಋಷಿ ಮುನಿಗಳು ಇಲ್ಲಿ ತಪಸ್ಸು ಮಾಡಿ ಸಿದ್ಧಿ ಪಡೆದ ಪವಿತ್ರ ಬದರಿ ಇದು. ಇದರ ಹಿನ್ನಲೆಯಲ್ಲಿರುವುದು ನೀಲಕಂಠಪರ್ವತ. ಅದರ ಎತ್ತರ ೨೧,೬೪೦ ಅಡಿಗಳು.

ನಾರಾಯಣನು ತಪಸ್ಸಿಗೆ ಕುಳಿತಾಗ ಅವನ ತಪೋಭಂಗ ಮಾಡಲು ಇಂದ್ರನು ಕಳುಹಿಸಿದ ಅಪ್ಸರೆಯರು ನಾರಾಯಣನು ತನ್ನ ಊರುಗಳಿಂದ ಸೃಜಿಸಿದ ಊರ್ವಶಿಯ ಅಪೂರ್ವ ಸೌಂದರ್ಯವನ್ನು ಕಂಡು ನಾಚಿ ಹಿಂದಿರುಗಿದ್ದು ಇಲ್ಲಿ.

## ಬದರಿ ನಾರಾಯಣ ದೇವಾಲಯ

ಇದು ೧೦,೨೦೦ ಅಡಿಗಳ ಎತ್ತರದಲ್ಲಿದೆ. ಮಂದಿರವು ೪೫ ಅಡಿ ಎತ್ತರವಿದೆ. ವಿಶಾಲವಾದ ಪ್ರಾಕಾರ, ಮೇಲೆ ಹತ್ತಲು ಹಾಲುಗಲ್ಲಿನ ಸೋಪಾನ. ಮಂದಿರದ ಕಟ್ಟಡ ಕರಿ ಕಲ್ಲಿನದು. ಒಳಗಿನ ಕಂಬಗಳು ನಯ ವಾಗಿ ತಿದ್ದಿದಂತಿವೆ. ಕಂಭಗಳ ಮೇಲೆ ಮಹಾವಿಷ್ಣುವಿನ ಅವತಾರದ

ಶಿಲ್ಪವಿದೆ. ಇದನ್ನು ಆಚಾರ್ಯ ಶಂಕರರು ಕಟ್ಟಿಸಿದರೆಂದು ಹೇಳುತ್ತಾರೆ.

ಬದರೀನಾರಾಯಣನ ಮೂರ್ತಿ ಕಪ್ಪು ಶಿಲೆಯದು. ಪದ್ಮಾಸನಸೀನ ಭಂಗಿಯಲ್ಲಿರುವ ಈ ವಿಗ್ರಹವು ಸುಮಾರು ಮೂರು ಅಡಿ ಎತ್ತರವಿದೆ. ಇದನ್ನು ಗೌತಮಬುದ್ಧನದೆಂದು ಬೌದ್ಧರು ಹೇಳುತ್ತಾರೆ. ಶಂಕರರು ಅಲ್ಲಿಗೆ ಬರುವ ಮುನ್ನ ಅಲ್ಲಿ ಬೌದ್ಧಮತವು ವ್ಯಾಪಕವಾಗಿ ಹರಡಿದ್ದುದು ನಿಜ. ವಿಗ್ರಹದ ಎರಡೂ ಕಡೆ ನರ-ನಾರಾಯಣರ ವಿಗ್ರಹಗಳಿವೆ. ಬಲಕ್ಕಿರುವುದು ಗರುಡ-ಕುಬೇರರ ವಿಗ್ರಹಗಳು.

ಶಂಕರಾಚಾರ್ಯರು ನಾರದ ಕುಂಡದಲ್ಲಿ ಹುದುಗಿದ್ದ ನಾರಾಯಣನ ವಿಗ್ರಹವನ್ನು ಹೊರತೆಗಿಸಿ ಪ್ರತಿಷ್ಠಾಪಿಸಿದರೆಂಬ ಪ್ರತೀತಿ ಇದೆ. ನಾರಾಯಣನ ವಿಗ್ರಹದ ಸೊಂಟದಲ್ಲಿ ಶ್ರೀದೇವಿ, ಮುಖದ ಬದಿಯಲ್ಲಿ ಭೂದೇವಿ, ಎಡಗಡೆ ಲೀಲಾವತಿ, ಎಡ ತೊಡೆಯಲ್ಲಿ ಊರ್ವಶಿ ವಿಗ್ರಹಗಳಿವೆ. ನಾರಾಯಣನ ಎಡಗಡೆ ಧನುರ್ಬಾಣಧರಿಸಿ ಅಂಗುಷ್ಠದ ಮೇಲೆ ನಿಂತು ತಪಸ್ಸು ಮಾಡುತ್ತಿರುವ ನರನ ವಿಗ್ರಹವಿದೆ. ಇದರ ಹತ್ತಿರ ತಪೋನಿರತ ಉದ್ಧವನ ಉತ್ಸವ ಮೂರ್ತಿಯಿದೆ. ಇದನ್ನು ಹಿಮಪಾತ ಕಾಲದಲ್ಲಿ ಪಾಂಡುಕೇಶ್ವರಕ್ಕೆ ಒಯ್ದು ಆರಾಧಿಸುವುದು ಪದ್ಧತಿ.

ದೇವಾಲಯದ ಪರಿಸರದಲ್ಲಿ ಎರಡು ಬಿಸಿನೀರಿನ ಕುಂಡಗಳಿವೆ. ಇವುಗಳಿಗೆ ಅಗ್ನಿತೀರ್ಥವೆಂದು ಹೆಸರು. ಇಲ್ಲಿ ತಮ್ಮದೇ ಆದ ಐತಿಹ್ಯಗಳನ್ನು ಹೊತ್ತ ಇತರ ತೀರ್ಥ ಕುಂಡಗಳು ಇವೆ. ದೇವಾಲಯಕ್ಕೆ ಹೋಗುವ ದಾರಿಯಲ್ಲಿ ಆದಿಕೇದಾರೇಶ್ವರ ದೇವಸ್ಥಾನವಿದೆ. ಬದರೀ ನಾರಾಯಣನ ದರ್ಶನಕ್ಕಿಂತ ಮೊದಲು ಈ ಕೇದಾರೇಶ್ವರ ದರ್ಶನ ಮಾಡಬೇಕೆಂಬ ನಿಯಮವಿದೆ. ಎಡಗಡೆ ಶಂಕರಾಚಾರ್ಯ ಮಂದಿರ.

ಇಲ್ಲಿ ಬದರೀನಾರಾಯಣನ ಎಡಗಡೆ ಅಖಂಡಜ್ಯೋತಿ ಸದಾಕಾಲವು ಉರಿಯುತ್ತಿರುತ್ತದೆ. ಕೇದಾರದಲ್ಲಿರುವಂತೆ ಇಲ್ಲಿಯೂ ಕೇರಳದ ನಂಬೂದಿರಿ ಶಾಖೆಯ ಬ್ರಾಹ್ಮಣ ಬ್ರಹ್ಮಚಾರಿಯು ರಾವಲ್" (ಪ್ರಧಾನಾರ್ಚಕ) ಪದವಿಯನ್ನು ಅಲಂಕರಿಸುತ್ತಾನೆ. ದೇವತಾರ್ಚನೆಯನ್ನು ಅವರ ಚೇಲಾಗಳು ಮಾಡುತ್ತಿರುವಾಗ ರಾವಲರು ದೇವರಿಗೆ ಚಾಮರ ಬೀಸುತ್ತಿರುತ್ತಾರೆ.

ಭೈರಣ್ಣನ ಮುಂದಾಳುತ್ವದಲ್ಲಿ ಶ್ರೀಪತಿ ಮತ್ತು ಕನಕೆಯರು ಬದರಿ ನಾರಾಯಣನ ಸೇವೆಯನ್ನು ಸಾಂಗಗೊಳಿಸಿದರು. ತರುವಾಯ ಕ್ಷೇತ್ರದ ಅಧ್ಯಕ್ಷರಾದ 'ರಾವಲ್' ಶ್ರೀಜಗದ್ಗುರು ಸಚ್ಚಿದಾನಂದ ಭಾರತಿಯವರನ್ನು ಅವರು ಸಂದರ್ಶಿಸಿದರು. ಕುಶಲ ಪ್ರಶ್ನೆಯ ತರುವಾಯ ಶ್ರೀಪತಿ ಬದರಿ ಮತ್ತು ಕೇದಾರಗಳ ವೈಶಿಷ್ಟ್ಯದ ಬಗೆಗೆ ಪ್ರಶ್ನಿಸಿದಾಗ ಜಗದ್ಗುರುಗಳು–

"ಪಂಡಿತರೆ, ಭಾರತದ ಉತ್ತರ ಗಡಿಯಲ್ಲಿರುವ ಈ ಸೋದರ ಧರ್ಮ ಕ್ಷೇತ್ರಗಳು ಅಖಂಡ ಭಾರತದ ಮಹಾ ಜನಪದದ ಮಸ್ತಕದಂತಿವೆ! ಕನ್ಯಾ ಕುಮಾರೀಭೂಶಿರ ಇದರ ಪಾದಪೀಠ. ವೇದಾಗಮ ಸಂಸ್ಕೃತಿಗಳು ಉಸಿರು.

ಇಲ್ಲಿ ನೆಲೆಸಿರುವ ಶೈವ ಮತ್ತು ವೈಷ್ಣವ ದೇವತಾ ಸಾನ್ನಿಧ್ಯಗಳು ಜಗತ್ ಪೂಜ್ಯವಾಗಿರುವಂತೆ ಇವುಗಳ ಅಧ್ಯಕ್ಷರೂ ಲೋಕಪೂಜ್ಯರೆಂಬು ದರ ಸಂಕೇತ. ಇವರಿಗೆ ಇಲ್ಲಿಯ ಪ್ರಭುತ್ವವು ಏರ್ಪಡಿಸುವ 'ತಿಲಕ' ಸಂಸ್ಕಾರ ಮತ್ತು ಈ ಸಂಸ್ಕಾರವನ್ನು ಪಡೆದ ಇವರಿಗೆ ವಿಶಿಷ್ಟವಾದ ಸ್ಥಾನ ಮಾನಗಳು ಮುಡಿಪಾಗಿವೆ.

ಸಹಸ್ರಾರು ವರ್ಷಗಳ ಹಿಂದೆ ಮಾಂಧಾತ, ಸಗರ, ಭಗೀರಥ ಮತ್ತು ಯುಧಿಷ್ಠಿರ ಮುಂತಾದ ರಾಜನ್ಯರು ಶ್ರೋತ್ರಿಯ ಬ್ರಹ್ಮನಿಷ್ಠರಾದ ಈ ಈರ್ವರು ಶಿವಯೋಗಿಗಳಿಗೆ ಈ ಕ್ಷೇತ್ರಗಳ ವಿಶಾಲ ಭೂಭಾಗವನ್ನು ದಾನ ಮಾಡಿದ್ದಾರೆ. ಈ ಉಭಯ ಪೀಠಾಧಿಪತಿಗಳಿಗೆ ಆರ್ಷಿಯಿಂದ ನಡೆದು ಬಂದಿರುವ ಮೈತ್ರಿ ಇಂದಿಗೂ ಅಚ್ಚ ಹಸುರಾಗಿದೆ!" ಎಂದರು ಜಗದ್ಗುರು ಗಳು ತುಂಬಿದ ಹೃದಯದಿಂದ. ಸಹೃದಯರಾದ ಪೂಜ್ಯ ಗುರುವರ್ಯರ ಅಪಾರ ವಾತ್ಸಲ್ಯಕ್ಕೆ ಕೃತಜ್ಞತೆ ಸಲ್ಲಿಸಿ ಅವರಿಂದ ಆಶೀರ್ವಾದ ಪಡೆದರು. ನಿಗದಿಯಾದ ದಿನ ಅವರು ಅಖಂಡ ಜ್ಯೋತಿಯದರ್ಶನ ಮಾಡಿ ಎಲ್ಲರೂ ಬದರಿಯನ್ನು ಬೀಳ್ಕೊಂಡರು.

* * * *

ಹಿಂದೆ ಕಾಶ್ಮೀರದಿಂದ ಹಿಂದಿರುಗಿದ್ದ ಶಂಭುಭಟ್ಟರು ಶ್ರೀಪತಿ ಮತ್ತು ಕನಕ-ಲತೆಯರನ್ನು ಗುರುದೇವನು ಪತಿ-ಪತ್ನಿಯರೆಂದು ಕರೆದು ಆಶೀರ್ವದಿಸಿದ್ದ ವಿಷಯವನ್ನು ಅವರು ತಿಳಿಸಿದ್ದರು.

ಇದೀಗ ಊಖೀಮಠದಿಂದ ಹಿಂದಿರುಗಿದ್ದ ಸಾವಿತ್ರಿ–ಸದಾಶಿವ ಶಾಸ್ತ್ರಿಗಳು ಶಂಭುಭಟ್ಟರ ಮನೆಗೆ ಬಂದು ಅವರು ಉತ್ಥಾನದ್ವಾದಶಿಗೆ ಮನೆಗೆ ಬರುವರೆಂದು ಸೂಚಿಸಿದ್ದರು, ಎಲ್ಲರೂ ಆ ಶುಭದಿನವನ್ನು ಹಾರೈಸುತ್ತಿದ್ದರು.

* * * *

ಈ ಸಲ ಉತ್ಥಾನದ್ವಾದಶಿಯ ಸಮಾರಂಭ ಶಂಭು ಭಟ್ಟರ ಮನೆಯಲ್ಲಿ ಒಂದು ವೈಶಿಷ್ಟ್ಯ ಪಡೆದಿತ್ತು. ಮನೆ ಸಾರಣೆ ಕಾರಣೆ ತಳಿರ್ತೋರಣಗಳಿಂದ ವಿರಾಜಮಾನವಾಗಿತ್ತು. ಶ್ರೀನಗರದಿಂದ ಅಮರನಾಥ ಮತ್ತು ಹಿಮಗಿರಿಧಾಮಗಳ ಯಾತ್ರೆಯನ್ನು ಪೂರ್ಣಗೊಳಿಸಿ ಗುರು-ದೇವತಾ ಪ್ರಸಾದವನ್ನು ಪಡೆದು ಹಿಂದಿರುಗಲಿರುವ ನೆಚ್ಚಿನ ಶ್ರೀಪತಿ ಮತ್ತು ಮುದ್ದಿನ ಮಗಳು ಕನಕಲತೆಯರನ್ನು ಎದುರುಗೊಳ್ಳುವ ಸಮಾರಂಭ ! ಶ್ರೀಪತಿ ಮತ್ತು ಕನಕಲತೆಯರನ್ನು ಪತಿ-ಪತ್ನಿಯರಂತೆ ಮನೆ ಬಾಗಿಲಲ್ಲಿ ಕಾಲು ತೊಳೆದು ಆರತಿ ಬೆಳಗಿ ಬರಮಾಡಿ ಕೊಳ್ಳ ಬೇಕೆ ? ಅಥವಾ ಪ್ರತ್ಯೇಕ ಆರತಿ ಮಾಡುವುದೇ! ಎಂಬ ಸಂದೇಹ ಹೆಣ್ಣು ಮಕ್ಕಳಲ್ಲಿ ಗುಸು ಗುಸು ನಡೆದಿತ್ತು. ಈ ಶುಭ ಸಂತಸದ ಸಮಾರಂಭವನ್ನು ನೋಡಲು ಇಷ್ಟಮಿತ್ರರು, ಬಂಧು ಬಾಂಧವರು ಅಲ್ಲಿ ಕಿಕ್ಕಿರಿದು ನೆರೆದಿದ್ದರು, ಸಮಾರಂಭದಲ್ಲಿ ಭಾಗವಹಿಸಿದ್ದ ಶರಭಾರಾಧ್ಯರು "ಇವರನ್ನು ಕಾಶ್ಮೀರದಲ್ಲಿ ಲೋಪಾಮುದ್ರಾ ಅಗಸ್ತ್ಯರಂತೆ, ಅರುಂಧತೀ–ವಶಿಷ್ಠರಂತೆ ಬಾಳಿ ಬೆಳಗಲಿ" ಎಂದು ಗುರುದೇವನು ಹರಸಿರುವುದರಿಂದ ಜೊತೆಗೆ ನಿಲ್ಲಿಸಿ ಆರತಿ ಮಾಡುವುದರಲ್ಲಿ ತಪ್ಪಿಲ್ಲ ! ಎಂದು ತೀರ್ಪಿತ್ತರು.

ಕೇಳಿದ ಬಳಗ "ತಥಾಸ್ತು" ಎಂದಿತು. ಅದನ್ನು ಕೇಳಿದ ಕನಕಗೆ ಎಲ್ಲಿಲ್ಲದ ನಾಚಿಕೆ! ಆವಳು ತಗ್ಗಿಸಿದ ತಲೆ ಮೇಲೆ ಎತ್ತಲೇ ಇಲ್ಲ. ಆರತಿಯ ತರುವಾಯ ಅವಳು ಒಳಗೆ ನುಗ್ಗಿ ಅವಿತುಕೊಂಡಳು! ಸಖಿಯರು ರೇಗಿಸಿ ರೇಗಿಸಿ ಅವಳನ್ನು ಗೋಳು ಹೊಯ್ದು ಕೊಂಡರು ! ಶಂಭು ಭಟ್ಟರು ನೆರದವರಿಗೆ ಭೂರಿ ಭೋಜನ ಕೂಟವನ್ನು ಏರ್ಪಡಿಸಿದ್ದರು. ಮರು ದಿನ ಭಟ್ಟರು ಈ ಪ್ರವಾಸದಲ್ಲಿ ನೆರವಿತ್ತ ದುಗ್ಗವ್ವ–ಭೈರಣ್ಣರನ್ನು ಸತ್ಕರಿಸಿ ಬೀಳ್ಕೊಟ್ಟರು.

## ೧೭

# ಅವತರಣ—ಅಭ್ಯುದಯ

ಸಮಾರಂಭದ ತರುವಾಯ ಶಂಭುಭಟ್ಟರು ತಾವು ಕಾಶ್ಮೀರವನ್ನು ಬಿಡುವಾಗ ಗುರುದೇವನು ನೀಡಿದ್ದ ಗ್ರಂಥಗಳ ಕಟ್ಟನ್ನು ತಂದು ಶ್ರೀಪತಿಗೆ ಒಪ್ಪಿಸಿ ಹೇಳಿದರು.

ಈ ಎಲ್ಲ ಗ್ರಂಥಗಳನ್ನು ಸಾವಧಾನವಾಗಿ ಮನನ ಮಾಡಿ ಪ್ರಬಂಧವನ್ನು ಪೂರ್ಣಗೊಳಿಸಲು ಎಲ್ಲ ಸೌಕರ್ಯವನ್ನು ಇಲ್ಲಿಯೇ ಕಲ್ಪಿಸಿ ಕೊಡಲಾಗುತ್ತದೆ" ಎಂದು.

ಆದರೆ ಶ್ರೀಪತಿ ಅದಕ್ಕೆ ಒಪ್ಪಲಿಲ್ಲ "ದಯಮಾಡಿ ಈ ದಿಸೆಯಲ್ಲಿ ನನ್ನ ಮನಸ್ಸಿಗೆ ಸ್ವಾತಂತ್ರ್ಯವನ್ನು ನೀಡಿ ಸಹಕರಿಸಿರಿ" ! ಎಂದು ಪ್ರಾರ್ಥಿಸಿದ, ಎಲ್ಲ ಮೌನವಾದರು, ಮೌನವನ್ನು ಸಮ್ಮತಿಯೆಂದು ನಿರ್ಧಸಿದ ಶ್ರೀಪತಿ ಅದೇ ರಾತ್ರಿ ವಿದ್ಯಾಪೀಠದಲ್ಲಿದ್ದ ತನ್ನ ಅಭ್ಯಾಸದ ಕೋಣೆ ಸೇರಿದ, ದುಗ್ಗವ್ವೆ ಮತ್ತು ಬೈರಣ್ಣರು ಮತ್ತೆ ಭೇಟಿ ಮಾಡುವುದಾಗಿ ಶ್ರೀಪತಿಗೆ ಮಾತು ಕೊಟ್ಟು ಭಟ್ಟರ ಮನೆಯಿಂದ ಹೊರಬಿದ್ದರು.

ಮರುದಿನ ಶ್ರೀಪತಿ ನಿಯಮ ನಿಷ್ಠನಾಗಿ ತಪಸ್ವಿಯಂತೆ ಮೂರು ತಿಂಗಳ ಕಾಲ ಎಲ್ಲ ಗ್ರಂಥಗಳನ್ನು ಸಾವಧಾನವಾಗಿ ಓದಿ ಮನನ ಮಾಡಿದ. ಅಗಸ್ತ್ಯ ಸೂತ್ರ ವೃತ್ತಿಯನ್ನು ಅನೇಕಾವೃತ್ತಿ ಅಭ್ಯಾಸ ಮಾಡಿ ಅರಗಿಸಿಕೊಂಡು ತನ್ನ ಪ್ರಬಂಧ ರಚನೆಗೆ ಮೊದಲಿಟ್ಟ !.

* * * *

ಪಂಚ ಪಂಚ ಉಷಃಕಾಲ, ಪ್ರಾಯಃ ಬ್ರಾಹ್ಮ ಮುಹೂರ್ತ ವಿರಬೇಕು ! ಬಾಂದಳದಲ್ಲಿ ಮೇಘಜಾಲ ಘೇರಾಯಿಸುತ್ತಿತ್ತು, ಮಿಂಚು ಥಳೀ ಹೊಳೆದು ಬೆಳಗ ತೊಡಗಿತ್ತು. ಆ ಬೆಳಕಿಗೆ ಕಣ್ಣು ಕೋರೈಸಿ

ಮುಕುಳಿತವಾಯಿತು, ಗುಡುಗು ಸಿಡಿಲಾಗಿ ಗರ್ಜಿಸಿದಾಗ ಗಾಢನಿದ್ದೆಯಲ್ಲಿದ್ದ ಶ್ರೀಪತಿಗೆ ಎಚ್ಚರವಾಯಿತು.

ಕಣ್ಣು ತೆರೆಯಲಾಗಲಿಲ್ಲ. ಬೆಳಕಿನ ಪುಂಜದ ಮಧ್ಯೆ ಮೂಡಿದ್ದ ಅಸ್ಪಷ್ಟ ರೇಖಾಚಿತ್ರವೊಂದು ಪ್ರಣವವಾಗಿ, ಲಿಂಗರೂಪು ತಳೆದು ಮನೋನೇತ್ರದ ಮುಂದೆ ಕಂಡಂತಾಯಿತು. ಅದರ ಹಿಂದೆ ಗುರುದೇವನ ಅಭಯ ಮುದ್ರೆಯ ಸ್ಪಷ್ಟ ಚಿತ್ರ ಮೂಡಿತ್ತು, ಕೂಡಲೇ ಶ್ರೀಪತಿಯ ಮುಗಿದ ಕರಸಂಪುಟ ಅವನಿಗರಿವಿಲ್ಲದೆಯೇ ಆ ದಿವ್ಯ ವ್ಯಕ್ತಿತ್ವಕ್ಕೆ ಮಣಿಯಿತು.

ಗಗನತಲದಿಂದ ಧಾರಾಕಾರವಾಗಿ ಹನಿಯುತ್ತಿದ್ದ ಮಳೆ ಮೂಸಲಧಾರೆಯಾಗಿ ಬಿರು ಮಳೆಯಾಗಿ ಪರಿಣಮಿಸಿತು. ಆಕಾಶಗಂಗೆಯ ಅವತರಣದಂತೆ ಶ್ರೀಪತಿಯ ಪ್ರತಿಭೆಯ ವಿಮಲ ಗಂಗಾಜಲ ಛಂದೋರೂಪು ತಳೆದು ಹೊಳೆಯಾಗಿ ಹರಿಯಿತು.

ಅವ್ಯಕ್ತ ಮಧುರವಾದ ಮಂಗಲ ಪದ್ಯದ ರಸವನ್ನು ರುಚಿಸಿದ ನಾಲಿಗೆ ಅದರ ಮಾಧುರ್ಯಕ್ಕೆ ಮಾರುಹೋಗಿ ಮತ್ತೆ ಮತ್ತೆ ಅದನ್ನು ಮೆಲುಕು ಹಾಕಿತು. ಅದೇ ಕೃತಿಯ ಮಂಗಲವಾಗಿ ಬೆಳಗಿತು.

ಓಂ ನಮೋ ಲಿಂಗರೂಪಾಯ ಜಗಜ್ಜನ್ಮಾದಿಹೇತವೇ ।
ನಿಗಮಾಗಮ ವೇದ್ಯಾಯ ಭಕ್ತಸಿದ್ಧಿ ಪ್ರದಾಯಿನೇ ॥

ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣವಾಗಿ ವೇದಾಗಮ ವೇದ್ಯವಾಗಿ ಭಕ್ತರಿಗೆ ಇಷ್ಟಾರ್ಥವನ್ನು ನೀಡುವ ಆ ಬೆಳಕಿಗೆ ಶ್ರೀಪತಿ ಮತ್ತೆ ಮತ್ತೆ ಮಣಿದ. ॥೧॥

**ಶಿವಪಾದ ಸ್ತುತಿ**

ಶಿವ-ಜೀವರ ಸಾಮರಸ್ಯ ಲಾಭವೇ ಕೃತಿಯ ಗುರಿ, ಅದು ಸಿದ್ಧಿಸಬೇಕಾದರೆ ಅದಕ್ಕೆ ಅಡ್ಡವಾಗಿರುವ ಕತ್ತಲ ತೆರೆ ಸರಿಯ ಬೇಕು. ಅದು ಸಾಮಾನ್ಯ ತೆರೆಯಲ್ಲ ; ಪುರ್ಯಷ್ಟಕ ತೆರೆ ! ॥೨॥

ಇನ್ನು ನಮ್ಮ ಗುರಿ ಸಾಧನೆಗೆ ವಿರೋಧವಾಗಿರುವ ಇತರ ಸಿದ್ಧಾಂತ ಮದಗಜಗಳ ಕುಂಭ ಸ್ಥಳಗಳನ್ನು ಭೇದಿಸಲು 'ಶಿವಾದ್ವೈತ ವೆಂಬ ಸಿಂಹದ

ದೃಷ್ಟಿ ಬೀಳಬೇಕು. 'ವಿಶೇಷಾದ್ವೈತ'ವೆಂಬ ಸುಭದ್ರನಾವೆಯಿಲ್ಲದಿದ್ದರೆ ಸಂಸಾರ ಸಾಗರವನ್ನು ಸುಲಭವಾಗಿ ದಾಟಲು ಸಾಧ್ಯವಾದೀತೇ! ಆದ್ದರಿಂದ ಶಂಭುವಿನ ಪಾದಪದ್ಮವನ್ನು ನೆನೆಯಬೇಕು. ॥೩॥

ಎಲೈ ಶಿವನೆ, ದಾಸೋಽಹಂಭಾವವು ನಿರಂತರವೂ ನನಗೆ ಸಿದ್ಧಿಸುವಂತೆ ಕೃಪೆಮಾಡು !

## ಶಿವತತ್ತ್ವವನ್ನು ಬಲ್ಲವರು ಯಾರು ?

ವಿಚಾರಮಾಡಿದರೆ ಶಿವತತ್ತ್ವವನ್ನು ಬಲ್ಲವನು ಶಿವನೊಬ್ಬನೆ ! ಶಿವನ ಅನುಗ್ರಹದಿಂದ ಶಿವತತ್ತ್ವವನ್ನು ಬಲ್ಲವರಲ್ಲಿ ನಂದೀಶ್ವರ ವಿಷ್ಣು ಶಿವಕುಮಾರರು ಮುಖ್ಯ! ಇನ್ನುಳಿದವರಲ್ಲಿ ಸದಾಶಿವ ಶಕ್ತಿಧರ ಸುಕೇಶ ಚಂಡೀಶ್ವರ ಭೃಂಗಿರಿಟ ಶಿಲಾದ ಅಗಸ್ತ್ಯ ವಾಮದೇವ ರೇವಣಸಿದ್ಧ ಮತ್ತು ಮರುಳಸಿದ್ಧರು ಪ್ರಸಿದ್ಧರು. ಇವರನ್ನೂ ನಾವು ನೆನೆಯಬೇಕು ! (೫–೮)

## ಗುರುವಂದನ

ನಿಜಗುರು ದೇಶಿಕೇಂದ್ರರು ಶರಣರು. ಅವರು ವೇದಾಂತ–ಸಿದ್ಧಾಂತ ಮತ ಸ್ಥಾಪಕರು. ಅನಂತಪುಣ್ಯಪರಿಪಾಕದಿಂದ ಪೂರ್ವಾಚಾರ್ಯರ ಪರಂಪರೆಯಲ್ಲಿ ಬಂದವರು. ಮೇಲಾಗಿ ಶಿವಮತಾಚಾರ್ಯರಾದ ಇವರು ಕಾಮಿಕವೊದಲು ವಾತೂಲ ಕಡೆಯಾದ ಇಪ್ಪತ್ತೆಂಟು ಶಿವಾಗಮಗಳನ್ನು ಬೋಧಿಸುವಲ್ಲಿ ಷಣ್ಮುಖರು. ಪೂರ್ವೋತ್ತರ ಮೀಮಾಂಸೆಗಳನ್ನು ಶಿಕ್ಷಿಸುವಲ್ಲಿ ಚತುರ್ಮುಖರು. ತರ್ಕ–ವ್ಯಾಕರಣ ಪರಿಣತರಲ್ಲಿ ಸಾಕ್ಷಾತ್ ಶಿವನೇ ಆಗಿದ್ದಾರೆ.

ಇವರು ಧರಿಸಿರುವ ದಂಡ-ಶಿಖೆ-ಉಪವೀತಗಳು ಜ್ಞಾನಮಯ. ಕಾಷಾಯಾಂಬರ ಭಸ್ಮದ ಗಟ್ಟಿ ಜೋಳಿಗೆ ಅಜಿನ ಮತ್ತು ಮೌಂಜೀ ಧಾರಣಮಾಡಿ, ಪ್ರಣವಕಮಂಡಲು ಹಿಡಿದಿರುವ ಏಕೋರಾಮಸಿದ್ಧ ಭಗವತ್ಪಾದರಿಗೆ ನನ್ನ ನಮನಗಳು. (೯–೧೧)

## ಕೃತಿ ವೈಶಿಷ್ಟ್ಯ

ಉಪನಿಷತ್ತುಗಳ ಸಾರವೂ ಶಿವಜ್ಞಾನಪ್ರದವೂ ಆದ ವಿಶೇಷಾದ್ವೈತ ಪ್ರತಿಪಾದಕ "ಶ್ರೀಕರಭಾಷ್ಯವು" ವೈದಿಕ ಶೈವರ ಕೈಪಿಡಿಯಾಗಲಿ.

ದ್ವೈತ* ಮತ್ತು ಅದ್ವೈತ ಸಿದ್ಧಾಂತಗಳು ಶ್ರುತಿಯ ಕೇವಲ ಏಕದೇಶವನ್ನು ಮಾತ್ರ ಮಾನ್ಯಮಾಡುತ್ತವೆ. ಆದರೆ 'ದ್ವೈತಾದ್ವೈತ' ಅಥವಾ 'ವಿಶೇಷಾದ್ವೈತ' ವೆಂಬ ಈ 'ವೀರಶೈವ ಭಾಷ್ಯವು' ಎಲ್ಲ ಶ್ರುತಿಗಳಿಗೂ ಸಮನ್ವಯುವನ್ನು ಸಾಧಿಸಿದೆ! ||೧೨-೧೫||

## ವಿಶೇಷಾದ್ವೈತ

'ವಿ' ಎಂದರೆ ಪರಮಾತ್ಮ (ವಿಃ ಪಕ್ಷಿ ಪರಮಾತ್ಮನೋಃ) 'ಶೇಷ' ಎಂದರೆ ಶಿವನ ಅಂಶವಾದ ಜೀವಾತ್ಮ. ಇವರಿಬ್ಬರಿಗೆ ಆಗುವ 'ಅದ್ವೈತ' ಎಂದರೆ ಅವಿರಳ ಸಾಮರಸ್ಯ; ಇದನ್ನು ಸಾಧಿಸುವುದೇ 'ವಿಶೇಷಾದ್ವೈತ!'

ವೇದವ್ಯಾಸರ ಬ್ರಹ್ಮಸೂತ್ರಗಳಿಗೆ ಅಗಸ್ತ್ಯ ಮಹರ್ಷಿಯು ಬರೆದಿರುವ 'ಸೂತ್ರವೃತ್ತಿ' ಯನ್ನು ಅನುಸರಿಸಿ ಈ ಭಾಷ್ಯವು ರಚಿತವಾಗಿದೆ! ||೧೬-೧೮||

೨

ಕೃತಿಗೆ ಮಂಗಲವನ್ನು ಹಾಡಿದ ಶ್ರೀಪತಿ ತನ್ನ ಭಾಷ್ಯವನ್ನು ಪ್ರಾರಂಭಿಸಲು ಸಂಕಲ್ಪಿಸಿ ಮಲಗುವ ಮುನ್ನ ಗುರುದೇವನನ್ನು ನೆನೆದು ಪವಡಿಸಿದ. ಗಾಢವಾದ ನಿದ್ದೆ. ಸುಖನಿದ್ದೆಯ ತರುವಾಯ ಅವನೊಂದು ಅಪೂರ್ವ ಕನಸು ಕಂಡ---

ಕಣ್ಣು ಕೋರೈಸುವ ದಿವ್ಯಪ್ರಕಾಶ. ಅದರ ಮಧ್ಯದಲ್ಲೊಂದು ಮಹೋನ್ನತ ಪರ್ವತ. ಅದು ಪ್ರಾಯಃ ಕೈಲಾಸಪರ್ವತವಿರಬೇಕೆಂದು

---

* ಇದು ಶ್ರೀ ಆನಂದತೀರ್ಥೋಪಜ್ಞವಾದ ದ್ವೈತವಲ್ಲ. ಶ್ರುತಿ ಪ್ರತಿಪಾದಿತ ಸನಾತನ ದ್ವೈತ. ಆಚಾರ್ಯ ಶಂಕರರು 'ದ್ವಾಸುಪರ್ಣಾ' ಮುಂತಾದ ದ್ವೈತ ಪ್ರತಿಪಾದಕ ಶ್ರುತಿಗಳನ್ನು ಪೂರ್ವಪಕ್ಷವೆಂದು ಭಾವಿಸಿ ಅದ್ವೈತವನ್ನು ಸಾಧಿಸಿದ್ದು.

ಊಹಿಸಿದ. ಹಿಮಶುಭ್ರವಾದ ವಿಶಾಲ ಶಿಲಾತಲಗಳು. ಅಲ್ಲಿ ವಿಹರಿಸುವ ಗಂಧರ್ವ ಸ್ತ್ರೀಯರು ಅವುಗಳನ್ನು ತಮ್ಮ ಲೀಲಾಮಣಿದರ್ಪಣದಂತೆ ಬಳಸುತ್ತಿದ್ದಾರೆ. ದಟ್ಟವಾಗಿ ಬೆಳೆದಿರುವ ಕಾಡು. ಮಂದಾರ ಬಕುಳ ಅಶೋಕ ಮಾವು ಮುಂತಾದ ಪುಣ್ಯವೃಕ್ಷಗಳು. ಮಲ್ಲಿಗೆಯ ಮಕರಂದ ವನ್ನು ಕುಡಿದು ಕೊಬ್ಬಿದ ದುಂಬಿಗಳು, ಕುಂಕುಮಕೇಸರಿಯ ಗೊಂಚಲು ಗಳಿಂದ ಸುವಾಸಿತವಾದ ದಿಕ್ತಟಗಳು. ಕೋಗಿಲೆಗಳ ಪಂಚಮದಿಂಚರ. ಕಿನ್ನರಿಯರ ಗೀತರಸಮಾಧುರ್ಯ ತುಂಬಿದ ಗಿರಿಗುಹೆಗಳು. ಶಿವಯೋಗಿ ಪುಂಗವರು ತಿರುಗಾಡುವ ತಪ್ಪಲುಗಳು. ಅವುಗಳ ಮಧ್ಯದಲ್ಲಿ ಒಂದು ವಿಶಾಲ ಸರೋವರ. ಪ್ರಾಯಃ ಅದು ಮಾನಸ ಸರೋವರವೇ ಇರಬೇಕು. ಅದರ ಪವಿತ್ರವಾದ ಜಲವು ಚಿನ್ನದ ತಾವರೆಯ ಮೊಗ್ಗುಗಳಿಂದ ಸುವಾಸಿತ ವಾಗಿದೆ.

ಅಲ್ಲೊಂದು ಸಭಾಮಂಟಪ. ಚಿನ್ನದ ನೂರಾರು ಕಂಭಗಳಿಂದ ಅದು ಮಹೋನ್ನತವಾಗಿದೆ. ಮಾಣಿಕ್ಯಮಣಿದೀಪಕಿರಣಗಳಿಂದ ಭವನದ ಒಳ ಭಾಗವು ಬೆಳಗುತ್ತಿದೆ. ಭವನದ ದ್ವಾರದ ಎರಡೂ ಕಡೆಯ ಕಂಭಗಳ ಮೇಲೆ ಶಂಖ-ಪದ್ಮನಿಧಿಗಳು ಪರಿಶೋಭಿಸುತ್ತಿವೆ. ಕಿರುತಾರೆಗಳಂತೆ ಮಿರುಗುವ ಮುತ್ತಿನ ಮಣಿಗಳನ್ನು ಪೋಣಿಸಿದ ಮೇಲ್ಕಟ್ಟು ವಸ್ತ್ರಗಳು. ಮುಟ್ಟಿ ಗುರುತಿಸಬಹುದಾದ ವೈಢೂರ್ಯದ ಗೋಡೆ ಸಾಲುಗಳು. ಅಲ್ಲಿ ಸಂಚರಿಸುವ ಪ್ರಮಥರ ಕಾಲುಗಳಲ್ಲಿ ದನಿಗೈವ ನೂಪುರಗಳು. ಹವಳದ ಲೋವೆ-ಶಿಖರಗಳಿಂದ ಶೋಭಿಸುವ ಆ ಮಣಿಮಂಟಪದ ಮಧ್ಯದಲ್ಲಿ—

ವಂದಿಸುವ ದೇವತೆಗಳ ಮಕುಟಗಳಲ್ಲಿರುವ ಮಂದಾರ ಕುಸುಮ ರಸದಿಂದ ತೊಳೆದ ದಿವ್ಯರತ್ನಸಿಂಹಾಸನ. ಅದನ್ನು ಅಲಂಕರಿಸಿರುವ ಪರಮೇಶ್ವರ, ಸರ್ವಲೋಕಮಹೇಶ್ವರ. ಆತ ವೇದಾಂತಕಮಲಗಳ ಅರಣ್ಯ ದಲ್ಲಿ ವಿಹರಿಸುವ ಕಲಹಂಸ. ಉದಾರ ಗುಣವೆಂಬ ಸಿಪ್ಪಿನ ಮುತ್ತು. ಸರ್ವಮಂಗಳ ಸೌಭಾಗ್ಯಕ್ಕೆ ನಿಕೇತನ. ಸಂಸಾರವೆಂಬ ವಿಷದಿಂದ ಮೂರ್ಛೆ ಹೊಂದಿದ ಜೀವರಿಗೆ ಸಂಜೀವನ! ನಿತ್ಯಪ್ರಕಾಶವೆಂಬ ನೈರ್ಮಲ್ಯಕ್ಕೆ ಕಲ್ಪದ್ರುಮ. ಪರಮಾನಂದ-ಮಕರಂದವನ್ನು ಹೀರುವ ಮಧುವ್ರತ. ಆತ್ಮಶಕ್ತಿಲತೆಯಲ್ಲಿ ಅರಳಿದ ಮೂಲೋಕ ಕುಸುಮಗಳ ಮೊಗ್ಗು. ಆತ

ಅನಂತ ಬ್ರಹ್ಮಾಂಡ ಭಾಂಡಗಳನ್ನು ಒಟ್ಟುಗೂಡಿಸುವಲ್ಲಿ ಪ್ರವೀಣ. ಸಮಸ್ತ ದೇವತೆಗಳ ಚಕ್ರವರ್ತಿ. ಅನೇಕ ಚಂದ್ರಬಿಂಬಗಳ ಛಾಯೆಯನ್ನು ಒಳಗೊಂಡ ದೇಹಸೌಭಾಗ್ಯ ಅವನದು. ರತ್ನಖಚಿತ ಕಿರೀಟಗಳ ಕಾಂತಿಯಿಂದ ಚಿತ್ರಿತವಾದ ವಸ್ತ್ರಧರಿಸಿದ್ದಾನೆ. ಮಸ್ತಕದಲ್ಲಿ ತಾವರೆದಂಟಿನ ತುಂಡಿನಂತೆ ಬೆಳಗುವ ಚಂದ್ರಕಲೆ. ಕಲ್ಪಕುಸುಮದ ಕರ್ಣಕುಂಡಲ. ಮುತ್ತಿನ ದಾರದಿಂದ ಪೋಣಿಸಿದ ರುಂಡಮಾಲೆ ಕೊರಳಲ್ಲಿ. ಪೂರ್ಣಚಂದ್ರನ ಸೌಂದರ್ಯವನ್ನು ಮೀರಿಸುವ ಮುಖಮಂಡಲ. ಮುಂಜಾನೆ ಅರಳಿದ ಕಮಲಗಳಂತೆ ಶೋಭಿಸುವ ಎರಡು ಕಣ್ಣುಗಳು. ಮೂರನೆಯದು ಮುಚ್ಚಿದೆ. ನಸುನಗೆ ಮಿತಭಾಷಣಗಳಿಂದ ಮಧುರವಾದ ಅಧರಪಲ್ಲವ. ಗಂಡಸ್ಥಲದೊಡನೆ ಚೆಲ್ಲಾಟವಾಡುವ ಮಕರ ಕುಂಡಲ. ಕಾಲಕೂಟ ವಿಷವನ್ನು ಕಂಠದಲ್ಲಿ ಅಡಗಿಸಿ ಕಲಮೆಯಾಗಿಸಿಕೊಂಡಿರುವ ಸಾಕ್ಷಾತ್ ಪರಮೇಶ್ವರ!

ಅವನ ವಾಮ ಪಾರ್ಶ್ವವನ್ನೆ ತನ್ನ ನಿವಾಸವನ್ನಾಗಿಸಿ ಕೊಂಡಿರುವ ಸರ್ವಮಂಗಳೆ! ಅವಳದು ಮಂಗಲಪ್ರದ ಪ್ರಿಯವೇಷ. ಸಮಸ್ತ ಲೋಕ ನಿರ್ಮಾಣ ಸಮವಾಯಸ್ವರೂಪ. ಇಚ್ಛಾ-ಜ್ಞಾನ-ಕ್ರಿಯೆ ಎಂಬ ಬಹು ಶಕ್ತಿವಿಲಾಸ. ವಿದ್ಯಾಶಕ್ತಿಯಿಂದ ಶೋಭಿಸುವ ಅವಳು ಶಿವನನ್ನು ಬಿಟ್ಟಿರದ ಸೌಭಾಗ್ಯವನ್ನು ಪಡೆದಿದ್ದಾಳೆ. ಅವಳು ಸಂಸಾರ ವಿಷಕಾಂತಾರ (ಕಾಡು) ವನ್ನು ಸುಡುವ ದಾವಾಗ್ನಿ. ಅವಳ ತುರುಬಿನ ಮಲ್ಲಿಗೆಯ ಸೌರಭಕ್ಕೆ ಝೇಂಕರಿಸಿಬರುತ್ತಿರುವ ದುಂಬಿಗಳು, ಸಂಪೂರ್ಣಚಂದ್ರ ಸೌಭಾಗ್ಯಕ್ಕೆ ಸಮವಾದ ಮುಖಪದ್ಮ. ಮೂಗುತಿಯ ಲಾವಣ್ಯವನ್ನು ಮೀರಿಸುವ ಎಳನಗೆ.ರನ್ನದೋಲೆ ಬೆಳಗಿನ ರಂಗಸ್ಥಲದಲ್ಲಿ ನರ್ತಿಸುವ ಕಡೆಗಣ್ಣ ನೋಟ, ನೈದಿಲೆಯ ಕಾಂತಿಯನ್ನು ಇಳಿಕೆಯ್ವ ಎರಡು ಕಣ್ಣುಗಳ ಸೌಂದರ್ಯ. ಕಾಮನ ಬಿಲ್ಲಿನಂತೆ ಬಗ್ಗಿದ ಹುಬ್ಬುಗಳು, ಗುಲಾಬಿಯನ್ನು ಮೀರಿಸುವ ಚೆಂದುಟಿ, ಮನ್ಮಥನ ಶಂಖವನ್ನು ತಿರಸ್ಕರಿಸುವ ಕಂಬುಕಂಠ. ಚಿರಯೌವನಲಾವಣ್ಯದಿಂದ ಶೋಭಿಸುವ ಶರೀರಸೌಷ್ಟವ. ಕಂಠಿನೋತ್ತುಂಗ ಸ್ತನಾಭೋಗ. ತಾವರೆಯ ದಂಟಿನಂತೆ ತೆಳುವಾದ ನಡು. ಶೃಂಗಾರ ವಾಹಿನಿಯ ಮರಳುದಿಬ್ಬದಂತಿರುವ ಕಟಿಪಶ್ಚಾದ್ಭಾಗ. ಮಾವಿನ ಚಿಗುರಿ

ನಂತೆ ಸುಕೋಮಲ-ಪಾದಪಂಕಜ. ಸ್ಥಿರಮಂಗಲ ದೊಡವೆಗಳಿಂದ ಅಲಂಕರಿಸಿದ ಅವಯುವ ಸಂಪತ್ತು. ಶೃಂಗಾರೋದ್ಯಾನದಲ್ಲಿ ಬೆಳೆದ ಬಾಳೆದಿಂಡಿನಂತಿರುವ ಊರುಯುಗಳ. ಕುಂಕುಮರಾಗದ ಮೃದುದುಕೂಲ ಧರಿಸಿರುವ ಜಗನ್ಮಾತೆ ಪರಶಿವನ ಎಡ ಭಾಗವನ್ನು ಅಲಂಕರಿಸಿದ್ದಾಳೆ.

ಅವಳ ಅಕ್ಕಪಕ್ಕಗಳಲ್ಲಿರುವ ಪರಿವಾರ ಶಿವನ ಊಳಿಗದಲ್ಲಿ ನಿರತ ವಾಗಿದೆ. ಬಿಳಿಯ ಕಮಲದಂತೆ ಸ್ವಚ್ಛವಾದ ಪೂರ್ಣಚಂದ್ರನನ್ನು ಹೋಲುವ ಬೆಳ್ಗೊಡೆಯನ್ನು ಮಹಾಲಕ್ಷ್ಮಿ ಹಿಡಿದಿದ್ದಾಳೆ. ಸಂಗೀತವಿದ್ಯಾ ವಿಶಾರದೆ ಶಾರದೆ ತಂತಿ ಮೀಟಿ ಹಾಡುತ್ತಿದ್ದಾಳೆ. ಉಪನಿಷತ್ ವಧುಗಳು ಝುಣತ್ಕಾರಮಾಡುವ ಕೈಗಳಿಂದ ಓಂಕಾರ ಬೀಸಣಿಗೆ ಹಿಡಿದು ಗಾಳಿ ಬೀಸುತ್ತಿದ್ದಾರೆ. ದಿವ್ಯ ಕನ್ನಿಕೆಯರು ಗಲ್ಗಲೆಂದು ದನಿಗುಡುವ ಮಣಿ ಕಂಕಣದ ಕೈಗಳಿಂದ ಚಾಮರ ಹಾಕುತ್ತಿದ್ದಾರೆ. ಚಲಿಸುವ ಆ ಚಾಮರ ಗಳ ಮಧ್ಯದಲ್ಲಿ ಕಾಣುವ ಉಮೆಯ ಮುಖಮಂಡಲ ಸಂಚರಿಸುವ ರಾಜ ಹಂಸೆಗಳ ಮಧ್ಯದಲ್ಲಿ ಶೋಭಿಸುವ ಕಮಲದಂತೆ ರಾರಾಜಿಸುತ್ತಿದೆ. ಅಂಗ ಗಳಿಂದ ಕೂಡಿದ ವೇದಪುರುಷರು ಉಪನಿಷತ್ ಶಿರೋಮಂತ್ರಗಳಿಂದ ಪರ ಶಿವನನ್ನು ಚೂಡಾಮಣಿಯಂತೆ ಧರಿಸಿ ಭಕ್ತಿಯಿಂದ ಆರಾಧಿಸುತ್ತಿದ್ದಾರೆ.

ಅನಂತನೇ ಮೊದಲಾದ ಆಪ್ತಾಧಿಕಾರಿಗಳು, ಅಷ್ಟವಿದ್ಯೇಶ್ವರರು, ಧುಂಡಿ ನಂದೀ ಮಹಾಕಾಳ ಚಂಡ ಭೃಂಗಿರಿಟಿ ಘಂಟಾಕರ್ಣ ಪುಷ್ಪ ದಂತ ಕಪಾಲೀ ವೀರಭದ್ರ ಮುಂತಾದ ಪ್ರಮಥರು. ವಿಶ್ವತಂತ್ರಾಧಿ ಕಾರಿಗಳಾದ ಬ್ರಹ್ಮ ಉಪೇಂದ್ರ ಮಹೇಂದ್ರರು ; ಆದಿತ್ಯರು, ವಸುಗಳು, ಯಕ್ಷ-ಗಂಧರ್ವ-ಕಿನ್ನರರು, ದಾನವ-ರಾಕ್ಷಸ, ದೈತ್ಯ ಸಿದ್ಧ ವಿದ್ಯಾಧರರು ಎದುರಿನಲ್ಲಿ "ಅಗಸ್ತ್ಯ* ಜೈಮಿನಿ ವಿಶ್ವಾಮಿತ್ರ ಕಾಶ್ಯಪ ಭರದ್ವಾಜ ಅಂಗಿರಾ

* ಅಗಸ್ತ್ಯೋ ಜೈಮಿನಿಶ್ಚೈವ ವಿಶ್ವಾಮಿತ್ರೋಽಥಕಾಶ್ಯಪಃ ।
ಭರದ್ವಾಜೋಽಂಗಿರಾ ಅತ್ರಿರ್ವಸಿಷ್ಠೋ ರೋಮಹರ್ಷಣಃ ॥ ೧೪
ಏತೇ ಸರ್ವೇ ಮಹಾಭಾಗಾ ಅತಿವರ್ಣಾಶ್ರಮೇ ರತಾಃ ॥
ವೀರಶೈವಾ ಸಮಾಖ್ಯಾತಾ ಜೀವನ್ಮುಕ್ತಾ ನ ಸಂಶಯಃ ॥ ೧೫
ಮತಪ್ರವರ್ತಕಾಸ್ಸರ್ವೇ ಗುರು ಪೀಠಾಧಿಕಾರಣಃ ।

—ನೀಲಕಂಠಭಾಷ್ಯ (ಕ್ರಿಯಾಸಾರ ಉ. ೧)

ಅತ್ರಿ ವಸಿಷ್ಠ ರೋಮಹರ್ಷಣ ವೇದವ್ಯಾಸ ಮುಂತಾದ ಅತಿವರ್ಣಾ ಶ್ರಮಿಗಳಾದ ವೀರಶೈವ ಮಹರ್ಷಿಗಳು" ಸಭೆಯನ್ನು ಅಲಂಕರಿಸಿದ್ದಾರೆ.

ಆ ಸಮಯದಲ್ಲಿ ವೇದವ್ಯಾಸರು ಎದ್ದು ನಿಂತು ಕೈಜೋಡಿಸಿ—

"ಪರಮೇಶ್ವರ, ಭೂಲೋಕದಲ್ಲಿ ಅನೇಕ ಮತಗಳು ಹುಟ್ಟಿ ಕೊಂಡಿವೆ. ನಾನು ಬರೆದಿರುವ ಬ್ರಹ್ಮಸೂತ್ರಗಳಿಗೆ ಅನೇಕರು ಭಾಷ್ಯ ಗಳನ್ನು ಬರೆದು ನನ್ನ ಉದ್ದೇಶಕ್ಕೆ ವಿರೋಧವಾಗಿ ಅರ್ಥೈಸಿದ್ದಾರೆ. ಆದರೂ ಅವರವರು ತಾವು ಬರೆದಿರುವುದೇ ಸರಿ ಎಂದು ಭಾವಿಸಿ ತಮ್ಮ ತಮ್ಮಲ್ಲಿ ಜಗಳವಾಡುತ್ತಿದ್ದಾರೆ. ನಿನ್ನ ಅನುಗ್ರಹದಿಂದ ನನಗೆ ಲಭ್ಯ ವಾಗಿರುವ ಆ ಸೂತ್ರಗಳಿಗೆ ಅರ್ಥವಿವೇಚನಮಾಡಿ ನೀನೇ ಅವುಗಳ ನಿಜ ವಾದ ಅರ್ಥವನ್ನು ಪ್ರಕಾಶಪಡಿಸು" ಎಂದು ಕಳಕಳಿಯಿಂದ ಪ್ರಾರ್ಥಿಸಿದನು೧.

ದಯಾಳುವಾದ ಪಾರ್ವತೀಪತಿಯು "ತಥಾಸ್ತು" ಎಂದು ವೇದ ವ್ಯಾಸನಿಗೆ ಅಭಯ ಪ್ರದಾನಮಾಡಿ ತಾನು ನೀಲಕಂಠ ಶಿವಾಚಾರ್ಯ ನೆಂಬ ಹೆಸರಿನಿಂದ ಭೂಲೋಕದಲ್ಲಿ ಜನ್ಮತಳೆದು ಬ್ರಹ್ಮಸೂತ್ರಗಳಿಗೆ ಶಕ್ತಿ ವಿಶಿಷ್ಟಾದ್ವೈತಸಿದ್ಧಾಂತ ಪರವಾದ ಭಾಷ್ಯವನ್ನು ಬರೆದನು೨. ಉತ್ತಮ

---

೧ ಏವಂ ಮತಾನಿ ಬಹುಶೋ ಭುವಿ ವಿಸ್ತಾರಿತಾನ್ಯಪಿ ।
ಸಮುಪೇತ್ಯ ತದಾ ವ್ಯಾಸಃ ಪ್ರಾರ್ಥಯಾಮಾಸ ಶಂಕರಮ್ ॥೨೮॥
ಮತಾನಿ ವಿವಿಧಾನ್ಯೇವ ಸಮುತ್ಪನ್ನಾನಿ ಶಂಕರ ।
ಮತ್ಕೃತಾನಾಂ ಚ ಸೂತ್ರಾಣಾಮಯಥಾನಯನಂ ಕೃತಮ್ ॥೨೯॥
ಪರಮೇವೇತಿ ನಿಶ್ಚಿತ್ಯ ಕುರ್ವಂತಿ ಕಲಹಂ ಮಿಥಃ ।
ತ್ವತ್ ಪ್ರಸಾದೈಕಲಭ್ಯಸ್ಯ ಸೂತ್ರಜಾಲಸ್ಯ ಶಂಕರ ॥೩೦॥
ಯಥಾ ಪೂರ್ವಂ ತ್ವಯಾ ಕಾರ್ಯಂ ಮತ್ಸೂತ್ರಾರ್ಥವಿವೇಚನಮ್ ।
ಇತಿ ತೇನ ಪ್ರಾರ್ಥಿತಸ್ಸನ್ ದಯಾಲುಃ ಪಾರ್ವತೀಪತಿಃ ॥೩೧॥
ನೀಲಕಂಠ ಶಿವಾಚಾರ್ಯ ನಾಮ್ನಾ ಭಾಷ್ಯಮಚೀಕರತ್
ವಿಶಿಷ್ಟಾದ್ವೈತ ಸಿದ್ಧಾಂತ ಪ್ರತಿಪಾದನ ಮುತ್ತಮಂ ॥೩೨॥
೨ ತಸ್ಮಾತ್ ಶಕ್ತಿವಿಶಿಷ್ಟಸ್ಯ ಜಿಜ್ಞಾಸಾ ಬ್ರಹ್ಮಣಃ ಕೃತಾ ॥೯೬॥
—ನೀಲಕಂಠಭಾಷ್ಯೇ (ಕ್ರಿಯಾಸಾರ ಉ. ೧)

ವಾದ ಆ ಭಾಷ್ಯವು "ನೀಲಕಂಠಭಾಷ್ಯ" ಎಂಬ ಪವಿತ್ರನಾಮದಿಂದ ಪ್ರಖ್ಯಾತವಾಗಿದೆ. "ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆಯಲು ತೊಡಗಿರುವ ಎಲೈ ಶ್ರೀಪತಿಯೇ, ನೀನು ನೀಲಕಂಠಭಾಷ್ಯವನ್ನು ಆಮೂಲಾಗ್ರವಾಗಿ ಅವಲೋಕಿಸು. ಅದರ ಮಾರ್ಗದರ್ಶನ ಅತ್ಯಗತ್ಯ! ನಿನಗೆ ಮಂಗಳವಾಗಲಿ!"

ಎಂಬ ಅಶರೀರವಾಣಿಯನ್ನು ಕೇಳಿ ಶ್ರೀಪತಿ ಎಚ್ಚೆತ್ತ. ಕಣ್ತೆರೆದಾಗ ಆ ದೃಶ್ಯ ಕಾಣೆಯಾಗಿತ್ತು. ಪಾರ್ವತೀ–ಪರಮೇಶ್ವರರ ದಿವ್ಯ ಸಂದರ್ಶನ–ಅಪೂರ್ವವಾದ ಸಭಾದೃಶ್ಯಗಳನ್ನು ಕಂಡ ತಾನೇ ಭಾಗ್ಯಶಾಲಿ ಎಂದು ಭಾವಿಸಿದ.

೩

ಮರುದಿನ ಶ್ರೀಪತಿ ನಿತ್ಯಾಹ್ನಿಕಗಳನ್ನು ಮುಗಿಸಿ ಗುರುಸ್ಮರಣೆಮಾಡಿ ಪವಿತ್ರವಾದ ನೀಲಕಂಠ ಭಾಷ್ಯವನ್ನು ಸಾವಧಾನವಾಗಿ ಅವಲೋಕಿಸಿದ. ಶ್ರೀಪತಿ ತನ್ನಲ್ಲಿ — "ಸ್ವಪ್ರಭಾನಂದರ 'ಶಿವಾದ್ವೈತ' 'ಸೂತ್ರವೃತ್ತಿಕಾರರ 'ವಿಶೇಷಾದ್ವೈತ' ಮತ್ತು ನೀಲಕಂಠ ಶಿವಾಚಾರ್ಯರ 'ಶಕ್ತಿವಿಶಿಷ್ಟಾದ್ವೈತ' ಪದಗಳು ಮೂರಾದರೂ ಅರ್ಥ ಒಂದು; ಕಣ್ಣು ಮೂರಾದರೂ ಪರಶಿವನೊಬ್ಬ ಎಂಬಂತೆ ಇವು ನನ್ನ ಭಾಷ್ಯಕ್ಕೆ ಒಂದು ವಿನೂತನ ಅಪೂರ್ವತ್ವವನ್ನೇ ತಂದಿವೆ!" ಎಂದು ನಿರ್ಧರಿಸಿ ತನ್ನ ಕೃತಿಯನ್ನು ಪ್ರಾರಂಭಿಸಿದ—

ಅದೇ ವೇಳೆಗೆ ಭೈರಣ್ಣ ಕೋಣೆಯ ಬಾಗಿಲಲ್ಲಿ ಕಾಣಿಸಿಕೊಂಡ!

ಭೈರಣ್ಣನನ್ನು ಕಂಡ ಶ್ರೀಪತಿಗೆ ಸೋಜಿಗ! ಸಡಗರದಿಂದ ಮೇಲೆದ್ದ ಶ್ರೀಪತಿ ಭೈರಣ್ಣನನ್ನು ಸ್ವಾಗತಿಸಿದ.

'ಏನು! ಎಲ್ಲಿಂದ ಬಂದದ್ದು? ಗುರುದೇವನ ಅನುಷ್ಠಾನ ನಿರ್ವಿಘ್ನವಾಗಿ ಸಾಗಿದೆಯೇ? ವೀರಣ್ಣ ಹೇಗಿದ್ದಾರೆ!

ಎಂದು ಶ್ರೀಪತಿ ರಾತ್ರಿ ತನಗಾದ ಕನಸಿನ ಸುದ್ದಿ ಹೇಳಿ ಪ್ರಶ್ನೆಗಳ ಮಳೆಗರೆದ.

"ನಾನು ಈಗ ಗಂಗೋತ್ರಿಯ ರುದ್ರಗುಹೆಯಿಂದ ಬರುತ್ತಿದ್ದೇನೆ. ಕಾಶ್ಮೀರದಿಂದ ಪಯಣಿಸಿದ ಗುರುದೇವನು ಅಮರನಾಥ ಗವಿಯಲ್ಲಿ ಕೆಲವು ದಿನ ಅನುಷ್ಠಾನ ಮಾಡಿ ಅಲ್ಲಿ ಹಿಮಪಾತವು ಆರಂಭವಾದದ್ದನ್ನು ಗಮನಿಸಿ ಅಲ್ಲಿಂದ ಯಮುನೋತ್ರಿಗೆ ಬಂದು ಅಲ್ಲಿ ಕೆಲವು ದಿನವಿದ್ದು ಈಗ ಗಂಗೋತ್ರಿಯ 'ರುದ್ರಗುಹೆ' ಯಲ್ಲಿ ತಮ್ಮ ಅನುಷ್ಠಾನವನ್ನು ವನ್ನು ಮುಂದುವರಿಸಿದ್ದಾರೆ!

ನನಗೆ ಗಂಗೋತ್ರಿಯಲ್ಲಿಯೇ ವೀರಣ್ಣ ಭೇಟಿಯಾದ. ಗುರುದೇವನ ಬಟ್ಟೆಗಳನ್ನು ಮಡಿಮಾಡಿ ಅವರ ಪೂಜೆ-ಅನುಷ್ಠಾನಕ್ಕೆ ಹೂ ಪತ್ರೆಗಳನ್ನು ಬಿಡಿಸುತ್ತಿದ್ದ. ಎಲ್ಲವನ್ನೂ ವಿವರಿಸಿದೆ. ಅನಂತರ ಇಬ್ಬರೂ ಗವಿಯ ದಾರಿ ಹಿಡಿದೆವು. ಮುಂದೆ ಪವಿತ್ರ ರುದ್ರ ತೀರ್ಥದಲ್ಲಿ ಮಿಂದು ಗುಹೆಯನ್ನು ಸೇರಿದೆವು. ಸಾಷ್ಟಾಂಗ ಪ್ರಣಾಮವನ್ನು ಮಾಡಿದ ನನ್ನನ್ನು ಕಂಡ ಗುರು ನಿನ್ನ ಬಗೆಗೆ ಕುಶಲ ಪ್ರಶ್ನೆಮಾಡಿ "ಶ್ರೀಪತಿಯ ಅಭ್ಯಾಸ ಹೇಗೆ ಸಾಗಿದೆ? ಎಂದರು ವಾತ್ಸಲ್ಯದಿಂದ

"ಗುರುದೇವ, ಈಗ ಶ್ರೀಪತಿ ತಪಸ್ವಿಯಂತೆ ನಿಯಮ ನಿಷ್ಠನಾಗಿ ದ್ದಾನೆ. ತಾವು ಆಶೀರ್ವದಿಸಿಕೊಟ್ಟ ಎಲ್ಲ ಗ್ರಂಥಗಳನ್ನು ಮೂರು ತಿಂಗ ಳಿಂದ ಅಭ್ಯಾಸಮಾಡಿ ಮನನ ಮಾಡುತ್ತಿದ್ದಾನೆ:" ಎಂದು ಬಿನ್ನೈಸಿದೆ ವಿನಯದಿಂದ.

"ಈಗ ಉತ್ತರಾಯಣ ಪ್ರಾರಂಭವಾಗಿದೆ. ಇದೇ ಮಾಘಶು|| "ಸಪ್ತಮಿ ಸೋಮವಾರ ಸೂರ್ಯನು ರಥವನ್ನೇರಿ ಉತ್ತರ ಮುಖನಾಗಿದ್ದಾನೆ. ಶ್ರೀಪತಿ ತನ್ನ ಪ್ರಬಂಧ ರಚನೆಯನ್ನು ಇಂದಿನಿಂದ ಆರಂಭಿಸಲಿ! ನಾವು ಹಿಂದೆ ಹೇಳಿದಂತೆ ಬ್ರಹ್ಮಸೂತ್ರಗಳ ಐದು ಅಧಿಕರಣಗಳು ಅಥವಾ ಐದು ಪಾದಗಳಿಗೆ ಭಾಷ್ಯವನ್ನು ಬರೆದು. ವಿಶೇಷಾದ್ವೈತದ ಮುಖ್ಯ ಪ್ರಮೇಯ ಗಳನ್ನು ಸೂಚಿಸಿ ಅದನ್ನು ಸಕಾಲದಲ್ಲಿ ವಿದ್ಯಾಪೀಠಕ್ಕೆ ಕಳುಹಿಸಲಿ!"

ಎಂದು ಅಪ್ಪಣೆಕೊಡಿಸಿ ಮೌನ ತಳೆದರು.

"ಗುರುದೇವನ ಇಂಗಿತವನ್ನರಿತು ನಾನು ಅಲ್ಲಿಂದ ಹಿಂದಿರುಗಿದೆ. ಎಂದ ಭೈರಣ್ಣ ಶ್ರೀಪತಿಯ ಮುಖನೋಡಿ.

"ತುಂಬಾ ಸಂತೋಷ! ನೆನ್ನೆ ರಾತ್ರಿ ಕನಸಿನಲ್ಲಿ ಕಾಣಿಸಿಕೊಂಡ ಗುರುದೇವನು ಇದನ್ನೇ ಸೂಚಿಸಿದ್ದರು. ಅದಕ್ಕೆ ನಿದರ್ಶನವೆಂಬಂತೆ ನಿಮ್ಮ ಆಗಮನವಾದದ್ದು ಶುಭ ಸೂಚನೆ!"

ಎಂದು ಶ್ರೀಪತಿ ತನ್ನ ರಚನೆಯನ್ನು ಮುಂದುವರಿಸಿದ.

೪

ಮರುದಿನ ಮುಂಜಾನೆ ನಿತ್ಯಕರ್ಮಗಳನ್ನು ಮುಗಿಸಿದ ಶ್ರೀಪತಿ ಭಾಷ್ಯರಚನೆಯಲ್ಲಿ ಮಗ್ನನಾಗಿದ್ದ' ಭೈರಣ್ಣ ಹೇಳಿದ—

"ಅಪ್ಪ, ಗುರುದೇವನು ಸೂಚಿಸಿದ ಮತ್ತೊಂದು ವಿಷಯವನ್ನು ನಿನ್ನ ಗಮನಕ್ಕೆ ತರುವುದನ್ನು ಮರೆತೆ!"

"ಯಾವ ವಿಷಯ?"

"ರಚಿತವಾದ ಪ್ರಬಂಧವನ್ನು ಶ್ರೀಪತಿಯಿಂದ ಓದಿಸಿ, ಆ ಭಾಷ್ಯವು ತತ್ತ್ವಜಿಜ್ಞಾಸುಗಳಿಗೆ ಸುಲಭವಾಗಿ ಅರ್ಥವಾಗುವುದೇ ಹೇಗೆ? ಎಂಬುದನ್ನು ದೃಢಪಡಿಸಿಕೊಂಡು, ನಿನಗೆ ಅಲ್ಲಿ ಬರುವ ಸಂದೇಹವನ್ನು ಪ್ರಶ್ನಿಸಿ. ಪರಿಹರಿಸಿಕೊಂಡು ಬರಬೇಕು! ಎಂಬುದು."

"ಆಗಬಹುದು" ಗುರುದೇವನ ಆಜ್ಞೆಗೆ ತಲೆಬಾಗುತ್ತೇನೆ। ಇಲ್ಲಿ ನನ್ನದೂ ಒಂದು ಪ್ರಾರ್ಥನೆ ಇದೆ!"

"ಯಾವ ಪ್ರಾರ್ಥನೆ?"

"ನಾನು ವಿದ್ಯಾಪೀಠಕ್ಕೆ ಕಳುಹಿಸಲಿರುವ ಪ್ರಬಂಧವು ಪೂರ್ಣವಾಗುವವರೆಗೆ ನೀವು ಇಲ್ಲಿಯೇ ಇರಬೇಕು. ಅದರ ಸ್ಥೂಲರೂಪವನ್ನು ಮನನ ಮಾಡಿಕೊಂಡು ಸಂದೇಹಗಳನ್ನು ಪ್ರಶ್ನಿಸಿ ಪರಿಹರಿಸಿಕೊಂಡು ಹೋಗಿ ಗುರುದೇವನಿಗೆ ನಿವೇದಿಸಬೇಕು!

"ಅದೂ ಆಗಬಹುದು!"

* * * *

ಭಾಷ್ಯರಚನೆಗೆ ಮೊದಲು ಅಲ್ಲಿ ಬರುವ ಕೆಲವು ಪಾರಿಭಾಷಿಕ ಪದಗಳ ಅರ್ಥವಿವರಣಮಾಡುವುದು ಅನಿವಾರ್ಯ. ಪ್ರಾಯಃ ಅವು- ಸೂತ್ರ, ವೃತ್ತಿ, ಭಾಷ್ಯ, ಅಧಿಕರಣ, ಮತ್ತು ತಾತ್ಪರ್ಯಲಿಂಗಗಳು ಮುಂತಾದವು.

"ಸೂತ್ರ ಎಂದರೇನು?

"ಅಲ್ಪಾಕ್ಷರವುಳ್ಳ ಸಂದೇಹವಿಲ್ಲದ, ಸಾರವತ್ತಾದ, ವಿಶ್ವತೋಮುಖವೂ ವಿರೋಧಾಭಾಸಕ್ಕೆ ಎಡೆ ಇಲ್ಲದುದೂ ಆದ ನಿರ್ದುಷ್ಟ ಪದಪುಂಜಕ್ಕೆ "ಸೂತ್ರ"ವೆಂದು ಹೆಸರು ?!"೧

"ವೃತ್ತಿ ಎಂದರೇನು ?"

"ಸೂತ್ರದ ಸಂಕ್ಷಿಪ್ತ ವ್ಯಾಖ್ಯೆಗೆ "ವೃತ್ತಿ" ಎಂದು ಹೆಸರು"

"ಭಾಷ್ಯವೆಂದರೇನು ?"

"ಸೂತ್ರದಲ್ಲಿನ ಪದವನ್ನು ಎತ್ತಿಕೊಂಡು ಸೂತ್ರಾನುಸಾರಿಯಾದ ವಾಕ್ಯಗಳಿಂದ ಸೂತ್ರಕಾರನ ಆಶಯುವನ್ನು ಶ್ರುತಿ ಸ್ಮೃತಿ ಪುರಾಣ ಮುಂತಾದವುಗಳಿಂದ ಸಮರ್ಥಿಸುವುದಲ್ಲದೆ ತನ್ನ ಪ್ರತಿಭಾತೂಲಿಕೆಯಿಂದ ಹೊಳೆದ ಭಾವಗಳಿಂದ ಆ ಚಿತ್ರವನ್ನು ಅಲಂಕರಿಸಿ ಸಿದ್ಧಾಂತವನ್ನು ಸ್ಥಾಪಿಸುವುದು ಭಾಷ್ಯ ೨.

* * * *

ಶ್ರೀಕರಭಾಷ್ಯದ ಪ್ರಕಾರ ಬ್ರಹ್ಮಸೂತ್ರಗಳು ಇರುವುದು ಐದು ನೂರ ನಲವತ್ತುನಾಲ್ಕು (೫೪೪) ಅವನ್ನು ನಾಲ್ಕು ಅಧ್ಯಾಯ, ಹದಿನಾರು ಪಾದಗಳನ್ನಾಗಿ ವಿಂಗಡಿಸಿದೆ. ಬೇರೆ ಬೇರೆ ಆಚಾರ್ಯರು ತಮ್ಮ ತಮಗೆ ಇಷ್ಟವಾದಂತೆ ಸೂತ್ರಸಂಖ್ಯೆ ಮತ್ತು ಅಧಿಕರಣಗಳ ಸಂಖ್ಯೆಯನ್ನು

---

೧ ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಂ ।
ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ॥

೨ ಸೂತ್ರಸ್ಥಂ ಪದಮಾದಾಯ ವಾಕ್ಯೈಃ ಸೂತ್ರಾನುಸಾರಿಭಿಃ ।
ಸ್ವಪದಾನಿ ಚ ವರ್ಣ್ಯಂತೇ ಭಾಷ್ಯಂ ಭಾಷ್ಯವಿದೋ ವಿದುಃ ॥

ಗೊತ್ತುಪಡಿಸಿಕೊಂಡಿದ್ದಾರೆ. ಈ ದಿಸೆಯಲ್ಲಿ ಶ್ರೀಕರಭಾಷ್ಯದಲ್ಲಿ ಒಂದು ನೂರ ಎಪ್ಪತ್ತುನಾಲ್ಕು (೧೭೪) ಅಧಿಕರಣಗಳಿವೆ.

"ಅಧಿಕರಣ ಎಂದರೇನು ?"

"ಶ್ರುತಿ ಸಮ್ಮತವಾದ ವಿಷಯುವನ್ನು ಎತ್ತಿಕೊಂಡು ಚರ್ಚಿಸಿ ನಿರ್ಣಯಿಸುವುದು ಅಧಿಕರಣ."೧

"ಅಧಿಕರಣದಲ್ಲಿ ವಿಷಯ, ವಿಶಯ (ಸಂಶಯ), ಪೂರ್ವಪಕ್ಷ, ಸಿದ್ಧಾಂತ, ಪ್ರಯೋಜನ ಮತ್ತು ಸಂಗತಿ ಎಂಬ ಆರು ವಿಭಾಗಗಳಿವೆ."

ಶ್ರುತಿಯ ಅರ್ಥವೇ 'ವಿಷಯ.'

ಈ ವಿಷಯುವು ಸರಿಯೆ? ಅಲ್ಲವೆ? ಎಂಬುದು 'ಸಂಶಯ.' ಇದು ಸರಿಯಲ್ಲವೆಂದು ವಾದಿಸುವುದು "ಪೂರ್ವಪಕ್ಷ." ಪೂರ್ವಪಕ್ಷದಲ್ಲಿ ವಿಷಯುವು ಸರಿಯಲ್ಲವೆಂಬುದಕ್ಕೆ ಕೊಟ್ಟಿರುವ ಕಾರಣಗಳನ್ನು ಪ್ರಮಾಣ ಪೂರ್ವಕವಾಗಿ ನಿರಾಕರಿಸಿ, ಸರಿಯಾದ ಆಧಾರಗಳನ್ನಿತ್ತು ವಿಷಯುವನ್ನು ಸಮರ್ಥಿಸಿ ನಿರ್ಣಯಿಸುವುದು "ಸಿದ್ಧಾಂತ." ವಿಷಯಕ್ಕೆ ಇರುವ ಫಲವೇ "ಪ್ರಯೋಜನ."

ಅಧಿಕರಣದ ಸಂದರ್ಭವನ್ನು ಸೂಚಿಸುವುದು "ಸಂಗತಿ." ಇಷ್ಟಾದ ಮೇಲೆ ವಿಷಯದ ಪ್ರಾರಂಭ ಮತ್ತು ಮುಕ್ತಾಯಗಳನ್ನು ಆರು ವಿಧವಾದ ತಾತ್ಪರ್ಯಲಿಂಗಗಳಿಂದ ದೃಢಪಡಿಸಬೇಕು.

ಆ ತಾತ್ಪರ್ಯ ಲಿಂಗಗಳು ಯಾವುವು ?

"ಉಪಕ್ರಮ ಮತ್ತು ಉಪಸಂಹಾರ, ಅಭ್ಯಾಸ, ಅಪೂರ್ವತ್ವ, ಫಲ, ಅರ್ಥವಾದ ಮತ್ತು ಉಪಪತ್ತಿಗಳು೨."

೧ ವಿಷಯೋ ವಿಶಯಶ್ಚೈವ ಪೂರ್ವಪಕ್ಷಸ್ತಥೋತ್ತರಂ ।
ಫಲಂ ಚ ಸಂಗತಿಶ್ಚೇತಿ ಶಾಸ್ತ್ರೇಽಧಿಕರಣಂ ಸ್ಮೃತಂ ॥
(ಶ್ರೀಕರಭಾಷ್ಯ ಪು. ೪)

೨ ಉಪಕ್ರಮೋಪಸಂಹಾರೋಽಭ್ಯಾಸೋಽಪೂರ್ವತಾ ಫಲಂ ।
ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯ ನಿರ್ಣಯೇ ॥
(ಶ್ರೀಕರ ಭಾಷ್ಯ ಪು. ೮೫)

೧ ವಿಷಯವನ್ನು ಪ್ರಾರಂಭಿಸುವುದು "ಉಪಕ್ರಮ" ಮತ್ತು ಪ್ರಾರಂಭಿಸಿದ ವಿಷಯವನ್ನು ಮುಗಿಸುವುದು "ಉಪಸಂಹಾರ."
೨ ವಿಷಯವನ್ನು ಪುತ್ತೆ ಮತ್ತೆ ನೆನಪಿಸುವುದು "ಅಭ್ಯಾಸ."
೩ ಯಾರೂ ಹೇಳದ ರೀತಿಯಲ್ಲಿ ವಿವರಿಸುವುದು "ಅಪೂರ್ವತ್ವ."
೪ ವಿಷಯದ ಪ್ರಶಂಸೆ "ಅರ್ಥವಾದ."
೫ ಇದರಿಂದ ದೊರೆಯುವ ಇಷ್ಟಾರ್ಥಸಿದ್ಧಿಯೇ "ಫಲ."
೬ ವಿಷಯ ಸಮರ್ಥನೆಗೆ ಅಗತ್ಯವಾದ ಪ್ರಮಾಣ ಸಂಗ್ರಹ "ಉಪಪತ್ತಿ."

ಉದಾಹರಣೆಗಾಗಿ—ಇಲ್ಲಿ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬುದು ಈ ಬ್ರಹ್ಮಸೂತ್ರಗಳ ಮೊದಲ ಸೂತ್ರ. ಇದರಲ್ಲಿ 'ಅಥ-ಅತಃ ಬ್ರಹ್ಮ ಜಿಜ್ಞಾಸಾ' ಎಂಬ ಮೂರು ಪದಗಳಿವೆ. ಇವಕ್ಕೆ ಕ್ರಮವಾಗಿ "ಅನಂತರ-ಅದಕ್ಕಾಗಿ-ಬ್ರಹ್ಮವನ್ನು ಕುರಿತು ವಿಚಾರಮಾಡಬೇಕು. ಎಂದು ಅರ್ಥ.

ಈ ಸೂತ್ರಕ್ಕೆ ಭಾಷ್ಯದಲ್ಲಿ ಕೊಟ್ಟಿರುವ ಸ್ಥೂಲ ವಿವರಣ ಇದು. "ಗುರುಮುಖದಿಂದ ಶಿವದೀಕ್ಷೆ ಪಡೆದ ಸಾಧಕನು, ಲಿಂಗಾಂಗಸಾಮರಸ್ಯ ರೂಪಮೋಕ್ಷವನ್ನು ಪಡೆಯುವುದಕ್ಕಾಗಿ ಬ್ರಹ್ಮವನ್ನು ಕುರಿತು ವಿಚಾರ ಮಾಡಬೇಕು." ಇದು ಜಿಜ್ಞಾಸಾಧಿಕರಣ. ಜಿಜ್ಞಾಸಾಧಿಕರಣಕ್ಕೆ 'ತೈತ್ತಿರೀಯೋಪನಿಷತ್ತಿನಲ್ಲಿ (ತೈ·ಆ.ಶಿ. ೪) ಬರುವ "ಯಃ ಛಂದಸಾಂ ವೃಷಭೋ ವಿಶ್ವರೂಪಃ.... ಅಮೃತಸ್ಯ ದೇವಧಾರಣೋ ಭೂಯಾಸಂ*' ಎಂಬುದು ವಿಷಯವಾಕ್ಯ 'ಅಮೃತಸ್ಯ-ಲಿಂಗಾಂಗಸಾಮರಸ್ಯವೆಂಬ ಮೋಕ್ಷಸಾಧನೆಗಾಗಿ ದೇವಧಾರಣವುಳ್ಳವನಾಗಿ ಆಗುವೆನು. ಇಲ್ಲಿ ದೇವಧಾರಣ ಶಬ್ದಕ್ಕೆ ಲಿಂಗಧಾರಣ ಎಂಬುದನ್ನು ಭಾಷ್ಯದಲ್ಲಿ ಅನೇಕ ಪ್ರಮಾಣಗಳಿಂದ ಸಮರ್ಥಿಸಿದೆ.

"ಮೋಕ್ಷವನ್ನು ಪಡೆಯಲು ಲಿಂಗಧಾರಣ ರೂಪ ಶಿವದೀಕ್ಷೆಯು ಅಗತ್ಯವಿದೆಯೇ? ಇಲ್ಲವೆ? ಎಂಬುದು ಸಂಶಯ. 'ಮೋಕ್ಷಪಡೆಯಲು ಬೇರೆ

*ತತ್ರಾಮೃತಸ್ಯ ವಾಕ್ಯೇನ (ಕ್ಲೋ॰ಕ್ತ) ಲಿಂಗಧಾರಣ ವೈಭವೇ
—ನೀಲಕಂಠಭಾಷ್ಯ (ಕ್ರಿ. ಸಾ ಉ ೧-೫)
ಅಮೃತಸ್ಯೇತಿವಾಕ್ಯೇನ ಧಾರಣಂ ಪ್ರತಿಪಾದಿತಂ [ಉ-೧-೧೪೧]

ಬೇರೆ ಉಪಾಯಗಳಿರುವಾಗ ಲಿಂಗಧಾರಣ ರೂಪ ಶಿವದೀಕ್ಷೆ ಪಡೆಯುವ ಅಗತ್ಯವಿಲ್ಲ' ಎಂಬುದು ಪೂರ್ವಪಕ್ಷ."

ಲಿಂಗಾಂಗ ಸಾಮರಸ್ಯರೂಪವಾದ ಮುಕ್ತಿಯನ್ನು ಪಡೆವುದು ಪ್ರತಿಯೊಬ್ಬನ ಮುಖ್ಯ ಗುರಿಯಾಗಿರುವುದರಿಂದ ಅಂತಹ ಶಿವದೀಕ್ಷೆಯನ್ನು ಗುರುಮುಖದಿಂದ ಪಡೆಯುವುದು ಅಗತ್ಯ ಎಂಬುದು ಸಿದ್ಧಾಂತ.

ಶಿವದೀಕ್ಷೆ ಪಡೆದ ಸಾಧಕನು ಷಟ್‌ಸ್ಥಲ ಮಾರ್ಗದಿಂದ ಮುಕ್ತಿಯನ್ನು ಪಡೆಯುವುದು ಪ್ರಯೋಜನ.

ವಿವೇಕಶಾಲಿಯು ಭವಚಕ್ರಕ್ಕೆ ಸಿಕ್ಕದೆ ನಿತ್ಯಸುಖಿಯಾಗಬೇಕು ಎಂಬುದು 'ಸಂಗತಿ.'

ಈ ದಿಸೆಯಲ್ಲಿ ಹಿಂದೆ ಹೇಳಿದ ಆರು ವಿಧವಾದ ತಾತ್ಪರ್ಯಲಿಂಗಗಳಿಂದ ವಿಷಯವನ್ನು ದೃಢಪಡಿಸಬೇಕು. ಇದರಂತೆ ಪ್ರತಿಯೊಂದು ಅಧಿಕರಣವನ್ನೂ ವಿಚಾರಮಾಡಿ ವಿವೇಚಿಸಿ ಭಾಷ್ಯವನ್ನು ರಚಿಸಲಾಗಿದೆ.

ಶ್ರೀಕರಭಾಷ್ಯದಲ್ಲಿನ ಕೆಲವು ವೈಶಿಷ್ಟ್ಯಗಳು

ವೀರಶೈವಕ್ಕೆ ಮೀಸಲಾದ ಒಂದೆರಡು ವೈಶಿಷ್ಟ್ಯಗಳನ್ನು ಇಲ್ಲಿ ದಿಗ್ದರ್ಶನಮಾಡಿದೆ—

ಶಿವಾಗಮಗಳಲ್ಲಿ ಪರಶಿವ ಸ್ವರೂಪವನ್ನು ಆರು ವಿಧವಾಗಿ ವಿಭಾಗಿಸಿದೆ. ಈ ಸಿದ್ಧಾಂತದಲ್ಲಿ ಪರಶಿವ ಸ್ವರೂಪವು ಲಿಂಗ ಮತ್ತು ಅಂಗ ಎಂದು ಎರಡು ವಿಧ. ಇದರಲ್ಲಿ ಲಿಂಗರೂಪ ಪರಶಿವ ಸ್ವರೂಪವು ಸರ್ವಜ್ಞತ್ವ ನಿತ್ಯತೃಪ್ತತ್ವ ಅನಾದಿಬೋಧತ್ವ ಸ್ವತಂತ್ರತ್ವ ಅಲುಪ್ತಶಕ್ತಿತ್ವ ಮತ್ತು ಅನಂತಶಕ್ತಿತ್ವ ೧ ಎಂಬ ಆರು ಅವಯವಗಳಿಂದ ಕೂಡಿದೆ. ಅಂಗದಲ್ಲಿ ಭಕ್ತಾದಿ ಆರು ಭಾಗಗಳಿವೆ ೨.

---

೧ ಸರ್ವಜ್ಞತಾ ತೃಪ್ತಿರನಾದಿಬೋಧಃ ಸ್ವತಂತ್ರತಾನಿತ್ಯಮಲುಪ್ತಶಕ್ತಿಃ
ಅನಂತಶಕ್ತಿಶ್ಚ ವಿಭೋರ್ವಿಧಿಜ್ಞಾಃ ಷಡಾಹುರಂಗಾನಿ ಮಹೇಶ್ವರಸ್ಯ ॥
(ಶ್ರೀಕರಭಾಷ್ಯ ೯೭)

೨ ಯದ್ಭಕ್ತಸ್ಥಲಮಿತ್ಯಾಹುಃ ತತ್ಸರ್ವಜ್ಞತ್ವಮಿಹೋಚ್ಯತೇ ।
ಯನ್ಮಾಹೇಶ್ವರಕಂ ನಾಮ ಸಾ ತೃಪ್ತಿರ್ನಮ ಶಾಂಕರಿ ॥

| ಲಿಂಗಸ್ಥಲಗಳು | | ಅಂಗಸ್ಥಲಗಳು |
|---|---|---|
| ೧ ಸರ್ವಜ್ಞತ್ವ | — | ಭಕ್ತಸ್ಥಲ |
| ೨ ನಿತ್ಯತೃಪ್ತತ್ವ | — | ಮಾಹೇಶ್ವರಸ್ಥಲ |
| ೩ ಅನಾದಿಬೋಧತ್ವ | — | ಪ್ರಸಾದಿಸ್ಥಲ |
| ೪ ಸ್ವತಂತ್ರತ್ವ | — | ಪ್ರಾಣಲಿಂಗಿಸ್ಥಲ |
| ೫ ಅಲುಪ್ತ ಶಕ್ತಿತ್ವ | — | ಶರಣಸ್ಥಲ |
| ೬ ಅನಂತತ್ವ | — | ಐಕ್ಯಸ್ಥಲ |

ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಗಳು ಕ್ರಮವಾಗಿ ಜಿಜ್ಞಾಸಾ, ಅವಿರೋಧ, ಸಾಧನ ಮತ್ತು ಫಲ ಎಂದು ಹೆಸರಿಸಲ್ಪಟ್ಟವೆ. ಇಲ್ಲಿ ಮೊದಲ ಐದು ಅಧಿಕರಣಗಳೆಂದರೆ ಜಿಜ್ಞಾಸಾಧಿಕರಣ, ಜಗಜ್ಜನ್ಮಾದ್ಯಧಿಕರಣ, ಶಾಸ್ತ್ರಯೋನಿತ್ವಾಧಿಕರಣ, ಸಮನ್ವಯಾಧಿಕರಣ ಮತ್ತು ಈಕ್ಷಿತೃತ್ವಾಧಿಕರಣಗಳು. ಇವುಗಳಲ್ಲಿ ಮೊದಲ ನಾಲ್ಕು ಸೂತ್ರಗಳು ಒಂದೊಂದು ಸೂತ್ರವು ಒಂದೊಂದು ಅಧಿಕರಣ. ಈಕ್ಷಿತೃತ್ವಾಧಿಕರಣದಲ್ಲಿ ಎಂಟು ಸೂತ್ರಗಳಿವೆ.

ಶ್ರೀಪತಿಯ ಪ್ರಬಂಧವು ಹಿಂದೆ ಹೇಳಿದಂತೆ ಐದು ಅಧಿಕರಣಗಳಿಗೇ ನಿಲ್ಲದೆ ಮುಂದಿನ ಐದು ಪಾದಗಳವರೆಗೂ ವಿಸ್ತೃತವಾಗಿದೆ. ಇದಕ್ಕೆ ಮುಖ್ಯ ಕಾರಣ ವೀರಶೈವಕ್ಕೆ ಸಂಬಂಧಿಸಿದ ಮತ್ತೆ ಕೆಲವು ಮುಖ್ಯ ಪ್ರಮೇಯಗಳನ್ನು ನಿರೂಪಿಸುವುದು.

---

ಯತ್ ಪ್ರಸಾದಾಭಿಧಂ ನಾಮ ತತ್ ಬೋಧೋ ಮೇ ನಿರಂಕುಶಃ ।
ಯತ್ ಪ್ರಾಣಲಿಂಗಕಂ ನಾಮ ತತ್ ಸ್ವಾತಂತ್ರ್ಯಮುದಾಹೃತಂ ॥
ಯದಸ್ತಿ ಶರಣಂ ನಾಮ ಹ್ಯಲುಪ್ತಾ ಶಕ್ತಿರುಚ್ಯತೇ ॥
ಯದ್ವೈಕ್ಯಸ್ಥಲಮೂರ್ಧ್ವಸ್ಥಂ ಹ್ಯನಂತಾ ಶಕ್ತಿರುಚ್ಯತೇ ॥
ಏತದಂಗಸ್ಥಲಂ ದೇವಿ ಗುಹ್ಯಾತ್ ಗುಹ್ಯತರಂ ಪರಂ ॥
(ಶ್ರೀಕರಭಾಷ್ಯ ೯೮)

ಬ್ರಹ್ಮಸೂತ್ರದ ಐದು ಅಧಿಕರಣಗಳ ತರುವಾಯ ಬರುವುದು ಆನಂದಮಯಾಧಿಕರಣ. ಇದರಲ್ಲಿ ಎಂಟು ಸೂತ್ರಗಳಿವೆ. ಇವುಗಳಿಂದ ಪರಬ್ರಹ್ಮವು ಆನಂದಮಯ ಸ್ವರೂಪವುಳ್ಳದ್ದು ಎಂದು ಸ್ಥಾಪಿಸಲಾಗಿದೆ.

ಇಲ್ಲಿಂದ ಮುಂದೆ ಪ್ರಥಮಪಾದ ಪೂರ್ತಿ ಪರಬ್ರಹ್ಮನಿಗೆ ಷಡ್‌ಲಿಂಗಾತ್ಮಕತ್ವವನ್ನು ನಿರೂಪಿಸಲಾಗಿದೆ. ಇದು ಭಾಷ್ಯದ ಮುಖ್ಯ ಘಟ್ಟ. ಏಕೆಂದರೆ ಪರಬ್ರಹ್ಮ ಸ್ವರೂಪವನ್ನು ಜಗಜ್ಜನ್ಮಾಧಿಕರಣ ಮತ್ತು ಸಮನ್ವಯಾಧಿಕರಣಗಳಲ್ಲಿ ಸಿದ್ಧಾಂತಮಾಡಿ, ತರುವಾಯ ಆನಂದಮಯಾಧಿಕರಣದಲ್ಲಿ ಪರಶಿವಬ್ರಹ್ಮವು ಆನಂದಮಯ ಎಂದು ನಿರ್ಧರಿಸಿದೆ. ಆದರೂ ಶಿವನಿಗೆ ಆಚಾರಾದಿಷಡ್ಲಿಂಗಾತ್ಮಕತ್ವವನ್ನು ಈ ಪಾದದಲ್ಲಿ ಬೇರೆ ಬೇರೆ ಸೂತ್ರಗಳಿಂದ ಅನ್ವಯಿಸಿದೆ.

೧ ಅಂತಸ್ತದ್ಧರ್ಮೋಪದೇಶಾತ್ — ಮಹಾಲಿಂಗಾತ್ಮಕತ್ವ ನಿರೂಪಣ
೨ ಆಕಾಶಸ್ತಲ್ಲಿಂಗಾತ್ — ಪ್ರಸಾದಲಿಂಗಾತ್ಮಕತ್ವ ನಿರೂಪಣ
೩ ಅತ ಏವ ಪ್ರಾಣಃ — ಚರಲಿಂಗಾತ್ಮಕತ್ವನಿರೂಪಣ
೪ ಜ್ಯೋತಿಶ್ಚರಣಾಭಿಧಾನಾತ್ — ಶಿವಲಿಂಗಾತ್ಮಕತ್ವ ನಿರೂಪಣ
೫ ಛಂದೋಽಭಿಧಾನಾತ್.... ದರ್ಶನಮ್ — ಗುರುಲಿಂಗಾತ್ಮಕತ್ವ ನಿರೂಪಣ
೬ ಭೂತಾದಿವ್ಯಪದೇಶೋಪಪತ್ತೇಶ್ಚೈವಮ್ — ಆಚಾರಲಿಂಗಾತ್ಮಕತ್ವ ನಿರೂಪಣ
೭ ಪ್ರಾಣಸ್ತಥಾನುಗಮಾತ್ — ಬಾಹ್ಯ ಇಷ್ಟಲಿಂಗಾತ್ಮಕತ್ವ ನಿರೂಪಣ
೮ ಜೀವಮುಖ್ಯ ಪ್ರಾಲಿಂಗ .... ತದ್ಯೋಗಾತ್–ಇಷ್ಟ- ಪ್ರಾಣ–ಭಾವ-ಲಿಂಗಾತ್ಮಕತ್ವ ನಿರೂಪಣ ಪೂರ್ವಕ ತ್ರೈವಿಧ್ಯೋಪಾಸನ ಪ್ರಕಾರವನ್ನು ಅನ್ವಯಿಸಲಾಗಿದೆ.

ಇಲ್ಲಿ ಮಹಾಲಿಂಗಾತ್ಮಕತ್ವ ಪ್ರತಿಪಾದಕ ಸೂತ್ರ— "ಅಂತಸ್ತದ್ಧರ್ಮೋಪದೇಶಾತ್ (೧-೧,೭-೨೧)" ಎಂಬದು.

"ಅಥ ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷಃ........ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ...." (ಛಾಂದೊಗ್ಯ೧-೬) ಎಂಬುದು ವಿಷಯವಾಕ್ಯ.

ಈ ವಾಕ್ಯಕ್ಕೆ ಶ್ರೀನೀಲಕಂಠಶಿವಾಚಾರ್ಯರು ತಮ್ಮ ಭಾಷ್ಯದಲ್ಲಿ "ಆದಿತ್ಯ ಮಂಡಲದಲ್ಲಿ ಕಾಣುವ ಸುವರ್ಣಮಯ ಪುರುಷನು ಪರಶಿವ ಬ್ರಹ್ಮ. ಅವನ ಎರಡು ಕಣ್ಣುಗಳು ಸೂರ್ಯ ಕಿರಣಗಳಿಗೆ ಅರಳುವ ಕೆಂಪು ಕಮಲಗಳಂತಿವೆ ......ಎಂದು ಅರ್ಥೈಸಿದ್ದಾರೆ. ಮುಂದುವರಿದು ಅವರು ಆ ಕಣ್ಣುಗಳಿಗೆ ವಿಶೇಷಣವಾಗಿರುವ 'ಕಪ್ಯಾಸಂ' ಪದಕ್ಕೆ 'ಕಪಿಯ ಆಸನ ದಂತಿರುವ ಕಣ್ಣುಗಳುಳ್ಳವನು ಎಂದು ಇತರರು ಮಾಡಿರುವ ಅಪಾರ್ಥ" ವನ್ನು ಮುಮ್ಮೊದಲಿಗೆ ನಿರಾಕರಿಸಿದ್ದಾರೆ.

ಅದನ್ನು ಶ್ರೀಕರಭಾಷ್ಯದಲ್ಲಿ ಹೀಗೆ ಉದ್ಧರಿಸಿದೆ. 'ಕಪ್ಯಾಸಂ ಪುಡರೀಕಮೇವಮಕ್ಷಿಣೀ' ಇತಿ ವಾಕ್ಯೇ ತಸ್ಯ ಪರಮೇಶ್ವರಸ್ಯ ಲೋಕಾ ನುಗ್ರಹಾರ್ಥಂ ಸೂರ್ಯಚಂದ್ರಾತ್ಮಕ ನೇತ್ರದ್ವಯಂ ವಿಕಸಿತಂ. ಮುಕುಳೀಕೃತಂ ತೃತೀಯ ಲೋಚನಮಿತಿ ವಿಖ್ಯಾತಂ. ತದ್ಯಥಾ....

ಕಂ ಜಲಂ ರಶ್ಮಿಭಿಃ ಪಿಬತೀತಿ ಕಪಿಃ ಸೂರ್ಯಃ, ತೇನ ಆಸಂ- ಆಸಿತಂ ವಿಕಸಿತಮಿತ್ಯರ್ಥಃ, ಪುಡರೀಕಂ ಯಥಾ ಸ್ಫುಗತಿ ತಥಾ ಮಹೇಶ್ವ ರಸ್ಯ ಲೋಚನದ್ವಯಂ; ತೃತೀಯ ಲೋಚನಂ ತು ಮುಕುಳೀಕೃತಸ್ವ ಭಾವಂ ವಿಕಸಿತಪುಡರೀಕಸದೃಶಂ ನ ಭವತಿ" ಎಂದು ಸಮರ್ಥಿಸಿದೆ.

ಬ್ರಹ್ಮಮೀಮಾಂಸೆಯ ಎರಡನೆಯ ಪಾದವು "ಸರ್ವತ್ರ ಪ್ರಸಿದ್ಧ್ಯಧಿ ಕರಣ"ದಿಂದ ಆರಂಭವಾಗುತ್ತದೆ. ಸರ್ವತ್ರ 'ವೇದ-ವೇದಾಂತ- ಆಗಮಸ್ಮೃತಿ ಪುರಾಣ ಇತಿಹಾಸಗಳಲ್ಲಿ ಪರಶಿವಬ್ರಹ್ಮರೂಪಲಿಂಗವನ್ನು ಶರೀರದ ಒಳಗೆ ಮತ್ತು ಹೊರಗೆ ಧಾರಣಮಾಡಬೇಕು ಎಂದು ಶ್ರುತಿಯು ಆದೇಶಿಸಿದೆ."

ಶ್ರೀಪತಿ ತನ್ನ ಪ್ರಬಂಧವನ್ನು ವಿವರಿಸುತ್ತಿರುವಾಗ ಮಧ್ಯೆ ಬಾಯಿ ಹಾಕಿ ಭೈರಣ್ಣ ಪ್ರಶ್ನಿಸಿದ — "ಪಂಡಿತರೆ, ಮೋಕ್ಷಕ್ಕಾಗಿ ಶರೀರದ ಹೊರಗೆ ಲಿಂಗಧಾರಣವನ್ನು ಗುರುಮುಖದಿಂದ ಪಡೆಯಬೇಕೆಂದು ಮೊದಲ ಸೂತ್ರದಲ್ಲಿ ಹೇಳಿಯಾಯಿತು! ಅನಂತರ ಏಳನೆಯ ಅಧಿಕರಣದಿಂದ ಮೊದಲ ಪಾದ ಪೂರ್ತಿ ಬೇರೆ ಬೇರೆ ಸೂತ್ರಗಳಿಂದ ಮಹಾಲಿಂಗ ... ... ಆಚಾರಲಿಂಗ ಮುಂತಾದ ಷಡ್ವಿಧಲಿಂಗಗಳನ್ನು ವರ್ಣಿಸಿ ಕಡೆಯ "ಜೀವ ಮುಖ್ಯ ಪ್ರಾಣಲಿಂಗ" ಎಂಬ ಸೂತ್ರದಲ್ಲಿ ಈ ತ್ರಿವಿಧಲಿಂಗಗಳನ್ನು ಉಪಾಸನ ಮಾಡಬೇಕೆಂಬುದನ್ನು ಹೇಳಲಾಗಿದೆ. ಆದರೆ ಮತ್ತೆ ಇಲ್ಲಿ ಅದೇ ವಿಷಯವನ್ನು ಹೇಳಿದರೆ ಪುನರುಕ್ತಿದೋಷ ಬರುವುದಿಲ್ಲವೆ ?"

"ಭೈರಣ್ಣ, ಇಲ್ಲಿ ಪುನರುಕ್ತಿ ದೋಷದ ಪ್ರಶ್ನೆಗೆ ಅವಕಾಶವೇ ಇಲ್ಲ! ಏಕೆಂದರೆ ಇದುವರೆಗೆ ಹೇಳಿದ ಮಹಾಲಿಂಗ.... ಆಚಾರಲಿಂಗ ಎಂಬ ಷಡ್ವಿಧ ಲಿಂಗಗಳು ಮತ್ತು ಇಷ್ಟ-ಪ್ರಾಣ-ಭಾವಲಿಂಗ ಎಂಬ ಮೂರು ಲಿಂಗಗಳು ಸೇರಿ ಒಟ್ಟು ನವಲಿಂಗಪ್ರಭೇದಗಳು. ಇವು ಮಾನವನ ಶರೀರದ ಒಳಗೆ ಮತ್ತು ಹೊರಗೆ ಯಾವ ಯಾವ ಸ್ಥಲಗಳಲ್ಲಿ ಸ್ಥಾಪಿಸಲ್ಪಡುತ್ತವೆ ಎಂಬುದನ್ನು ಇಲ್ಲಿ ವಿವರಿಸಲಾಗಿದೆ. ಅದೇ ಈ ಸಿದ್ಧಾಂತದ ಪರಮ ರಹಸ್ಯ.

ಈ ವಿಷಯವು ಗುರುಮುಖದಿಂದ ಶಿವದೀಕ್ಷೆ ಪಡೆದವನಿಗಲ್ಲದೆ ಇತರರಿಗೆ ತಿಳಿಯಲಾರದು. ಇದನ್ನು ತೈತ್ತಿರೀಯದ ಮಹಾನಾರಾಯಣಾನುವಾಕದಲ್ಲಿ ಸ್ಪಷ್ಟವಾಗಿ ಹೇಳಿದೆ—

"ದಹರಂ ವಿಪಾಪ್ಮಂ... ಯತ್ಪುಂಡರೀಕಂ ಪುರಮಧ್ಯಸಂಸ್ಥಂ .... ತಸ್ಮಿನ್‌ಯದಂತಃ ತದುಪಾಸಿತವ್ಯಂ" (೧೦-೭).

ಈ ಶರೀರವೇ ಒಂದು ಪುರ. ಸ್ಥೂಲ ಸೂಕ್ಷ್ಮ ಮತ್ತು ಕಾರಣ ಎಂದು ಈ ಪುರಗಳು ಮೂರು.

"ಪೂರ್ಷು ಶೇತ ಇತಿ ಪುರುಷಃ" ಎಂದು ಇದರ ನಿರ್ವಚನ. ಇವುಗಳ ಮಧ್ಯದಲ್ಲಿರುವ ಹೃದಯಕೋಶ (ದಹರಾಕಾಶ)ದಲ್ಲಿ ವಾಸಿಸುವ ಜೀವಾತ್ಮನಿಗೆ ಆಶ್ರಯವಾಗಿರುವ ಜ್ಯೋತಿರ್ಲಿಂಗವನ್ನು ಅನುಸಂಧಾನ

ಮಾಡಬೇಕು. ಆ ಜ್ಯೋತಿರ್ಲಿಂಗದ ಹೆಸರು 'ಮಹೇಶ್ವರ'[೧] ಎಂದು. ಆ ಮಹೇಶ್ವರನೇ ಶರೀರದ ಒಳಗಿನ ಮತ್ತು ಹೊರಗಿನ ದಶವಿಧ ಲಿಂಗ ರೂಪದಿಂದ ವ್ಯಾಪಿಸಿದ್ದಾನೆ.

೧ ಓಂ ಊರ್ಧ್ವಾಯ ನಮಃ । ಊರ್ಧ್ವಲಿಂಗಾಯ ನಮಃ ।
ಸರ್ವತತ್ತ್ವಾತೀತ ಸದಾಶಿವ

೨ ಹಿರಣ್ಯಾಯ ನಮಃ ಃ ಹಿರಣ್ಯಲಿಂಗಾಯ ನಮಃ ।
ಪಶ್ಚಿಮಚಕ್ರದಲ್ಲಿರುವ ಭಾವಲಿಂಗ

೩ ಸುವರ್ಣಾಯ ನಮಃ । ಸುವರ್ಣಲಿಂಗಾಯ ನಮಃ ।
ಶಿಖಾಚಕ್ರದಲ್ಲಿರುವ ಪ್ರಾಣಲಿಂಗ

೪ ದಿವ್ಯಾಯ ನಮಃ । ದಿವ್ಯಲಿಂಗಾಯ ನಮಃ ।
ಸಹಸ್ರಾರ ಚಕ್ರದಲ್ಲಿರುವ ಅಂತರಿಕ್ಷಲಿಂಗ

೫ ಭವಾಯ ನಮಃ । ಭವಲಿಂಗಾಯ ನಮಃ ।
ಆಜ್ಞಾ ಚಕ್ರದಲ್ಲಿರುವ ಮಹಾಲಿಂಗ (ಭ್ರೂಮಧ್ಯ)

೬ ಶರ್ವಾಯ ನಮಃ । ಶರ್ವಲಿಂಗಾಯ ನಮಃ ।
ವಿಶುದ್ಧಿ ಚಕ್ರದಲ್ಲಿರುವ ಪ್ರಸಾದಲಿಂಗ (ಕಂಠ)

೭ ಶಿವಾಯ ನಮಃ । ಶಿವಲಿಂಗಾಯ ನಮಃ ।
ಅನಾಹತ ಚಕ್ರದಲ್ಲಿರುವ ಚರಲಿಂಗ (ಹೃದಯ)

೮ ಜ್ವಲಾಯ ನಮಃ । ಜ್ವಲಲಿಂಗಾಯ ನಮಃ ।
ಮಣಿಪೂರಕ ಚಕ್ರದಲ್ಲಿರುವ ಶಿವಲಿಂಗ (ನಾಭಿ)

೯ ಆತ್ಮಾಯ ನಮಃ । ಆತ್ಮಲಿಂಗಾಯ ನಮಃ ।
ಸ್ವಾಧಿಷ್ಠಾನ ಚಕ್ರದಲ್ಲಿರುವ ಗುರುಲಿಂಗ (ಗುಹ್ಯ)

೧೦ ಪರಮಾಯ ನಮಃ । ಪರಮ ಲಿಂಗಾಯ ನಮಃ ।
ಆಧಾರ ಚಕ್ರದಲ್ಲಿರುವ ಆಚಾರ ಲಿಂಗ (ಗುದ)

---

೧ ಯೋ ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ।
ತಸ್ಯ ಪ್ರಕೃತಿಲೀನಸ್ಯ ಯಃಪರಃ ಸ ಮಹೇಶ್ವರಃ ॥ (೧೦–೮)

## ಕರಪೀಠದಲ್ಲಿರುವ ಬಾಹ್ಯ ಇಷ್ಟಲಿಂಗ

"ಏತತ್ಸೋಮಸ್ಯ ಸೂರ್ಯಸ್ಯ ಸರ್ವಲಿಂಗಗ್ಂ ಸ್ಥಾಪಯತಿ ಪಾಣಿ ಮಂತ್ರಂ ಪವಿತ್ರಂ" (ಮಹಾನಾರಾಯಣ ಉ: ೩೪-೧೬)

ಕರಕಮಲದಲ್ಲಿರುವ ಮಂತ್ರಮಯ ಇಷ್ಟಲಿಂಗವೆಂದು ಸೂಚಿಸಿದೆ.

ಮೇಲೆ ಹೇಳಿದ ಈ ದಶವಿಧಲಿಂಗೋಪಾಸನವು ಇಷ್ಟಲಿಂಗೋಪಾಸನದಲ್ಲಿಯೇ ಅಡಗಿದೆ."

"ಸ್ವಾಮಿ, ದಹರಾಕಾಶದಲ್ಲಿ ಬೆಳಗುವ ಮಹೇಶ್ವರನನ್ನು ಜ್ಯೋತಿರ್ಲಿಂಗ ಎಂದು ಯಾರು ಕರೆದಿದ್ದಾರೆ? "

"ಆಚಾರ್ಯ ರೇಣುಕರು 'ಮಾನವನ' ಆಧಾರ ಹೃದಯ ಮತ್ತು ಭ್ರೂಮಧ್ಯಗಳಲ್ಲಿ ಜ್ಯೋತಿರ್ಲಿಂಗವು ಸದಾ ಬೆಳಗುತ್ತಿರುತ್ತದೆ.೧ ಎಂದೂ ಶ್ವೇತಾಶ್ವತರ ಶ್ರುತಿಯಲ್ಲಿ—

ಅಂಗುಷ್ಠದಷ್ಟಿರುವ ಅಂತರಾತ್ಮನು ಯಾವಾಗಲೂ ಜನರ ಹೃದಯದಲ್ಲಿರುತ್ತಾನೆ. ಇದನ್ನು ಅರಿತವನು ಮುಕ್ತನಾಗುತ್ತಾನೆ. ೨ ಎಂದೂ

ಹೃದಯದ ಪಿಂಡಾಕಾಶ, ಬಿಂದ್ವಾಕಾಶ ಮತ್ತು ಪರಮಾಕಾಶಕ್ಕೆ "ಪ್ರಾಣಲಿಂಗ" ವೆಂದು ಹೆಸರು. ೩

---

೧ ಆಧಾರೇ ಹೃದಯೇ ವಾಪಿ ಭ್ರೂಮಧ್ಯೇ ವಾ ನಿರಂತರಂ ।
ಜ್ಯೋತಿರ್ಲಿಂಗಂ ಸದಾ ಭಾತಿ ಯತ್ ಬ್ರಹ್ಮೇತ್ಯಾಹುರಾಗಮಾಃ
(ಸಿ. ಶಿ. ಪರಿ. ೬)

೨ ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ ।
ಹೃದಾ ಮನೀಷಾ ಮನಸಾಭಿಕ್ಲೃಪ್ತೋ ಯ ಏತದ್ವಿದುರಮೃತಾಸ್ತೇ ಭವಂತಿ ॥ (೩-೧೩)

೩ ಶಿವಾಖ್ಯಂ ಪರಮಂ ಬ್ರಹ್ಮ ಪರಮಾಕಾಶಲಕ್ಷಣಂ ।
ಲಿಂಗಮಿತ್ಯುಚ್ಯತೇ ಸದ್ಭಿಃ ಯದ್ವಿನಾ ನ ಜಗತಃ ಸ್ಥಿತಿಃ ॥
(ಸಿ. ಶಿ. ಪರಿ. ೨೧)

ಬಾದರಾಯಣರು "ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್" (೧-೩-೨೫) ಎಂಬ ತಮ್ಮ ಸೂತ್ರದಲ್ಲಿ ಸ್ಪಷ್ಟಪಡಿಸಿದ್ದಾರೆ.

"ಪಂಡಿತರೆ" ದಯಮಾಡಿ ಆ ಸೂತ್ರದ ಅರ್ಥವನ್ನು ವಿವರಿಸಬೇಕು!"

"ಬ್ರಹ್ಮವಿದ್ಯೆಗೆ ಅಧಿಕಾರಿ ಯಾರು? ಎಂಬುದನ್ನು ಸೂಚಿಸಲು ಈ ಅಧಿಕರಣ ಹೊರಟಿದೆ. ಇಲ್ಲಿ ಅಳತೆಗೆ ನಿಲುಕದ (ಅಪರಿಚ್ಛಿನ್ನ) ಪರ ಬ್ರಹ್ಮನಿಗೆ ಅಂಗುಷ್ಠ ಮಾತ್ರತ್ವವನ್ನು ಹೇಗೆ ಹೇಳುವುದು? ಎಂದರೆ 'ಅಂಗುಷ್ಠದಷ್ಟಿರುವ ಹೃದಯವಿರುವುದು ಮಾನವನಿಗೆ ಮಾತ್ರ. ಆದ್ದರಿಂದ ಬ್ರಹ್ಮಶಾಸ್ತ್ರಕ್ಕೆ ಎಲ್ಲ ಮಾನವರೂ ಅಧಿಕಾರಿಗಳು, ಅರ್ಥೀ ಸಮರ್ಥೋ ವಿದ್ವಾನ್ ಎಂಬ ಪ್ರಭೇದಗಳಿರುವುದು ಮಾನವರಲ್ಲಿ ಮಾತ್ರ. ನಿತ್ಯ ಸುಖ (ಮುಕ್ತಿ)ದ ಹಂಬಲವಿರುವುದೂ ಮಾನವರಿಗೇ! ಈ ಎಲ್ಲ ಕಾರಣ ಗಳಿಂದ ಮಾನವರೆಲ್ಲರೂ ಬ್ರಹ್ಮವಿದ್ಯೆಗೆ ಅಧಿಕಾರಿಗಳು.

ಮಾನವನ ಹೃದಯಕೋಶದ ಪರಿಮಾಣ ಮತ್ತು ಆಕಾಶ (ಅವ ಕಾಶ)ವು ಅಂಗುಷ್ಠದಷ್ಟಿರುವುದರಿಂದ ಅದೇ ಪ್ರಾಣಲಿಂಗ. ಶಿಷ್ಯನ ಹೃದ ಯದಲ್ಲಿರುವ ಆ ಪ್ರಾಣಲಿಂಗದ ಕಲೆಯನ್ನೇ ಗುರುವು ತನ್ನ ಭಾವ ಮನೋದೃಷ್ಟಿಗಳಿಂದ ಆಕರ್ಷಿಸಿ ಸಂಸ್ಕಾರ ಹೊಂದಿದ ಇಷ್ಟಲಿಂಗದಲ್ಲಿ ನಿಕ್ಷೇಪಿಸಿ, ಆದನ್ನು ಶಿಷ್ಯನ ಕರಕಮಲದಲ್ಲಿಟ್ಟು ಉಪಾಸಿಸಲು ಬೆಸಸು ತ್ತಾನೆ.

ಮೇಲೆ ಹೇಳಿದ ದಶವಿಧ ಲಿಂಗೋಪಾಸನೆಯೂ ಸಹ ಈ ಇಷ್ಟ ಲಿಂಗದ ಮೂಲಕವಾಗಿಯೇ ನಡೆಯುತ್ತದೆ.

"ಪಂಡಿತರೆ; ಮಾನವರೆಲ್ಲರೂ ಶಿವದೀಕ್ಷೆಗೆ ಅಧಿಕಾರಿಗಳು ಎಂದು ನೀವು ಹೇಳಿದ್ದು ನನಗೆ ಸರಿ ಎನಿಸುವುದಿಲ್ಲ; ಏಕೆಂದರೆ ಶಿವದೀಕ್ಷೆಗೆ ಒಂದು ಅರ್ಹತೆ ಬೇಡವೆ?"

"ಅರ್ಹತೆ ಇಲ್ಲದವನಿಗೆ ಶಿವದೀಕ್ಷೆಗೆ ಅವಕಾಶವೇ ಇಲ್ಲ. ಗುರುವು ಶಿಷ್ಯನಿಗೆ 'ಶಕ್ತಿಪಾತ' (ಶಿವಕೃಪೆ) ವಾಗಿದೆಯೇ ಎಂಬುದನ್ನು ಪರೀಕ್ಷಿಸಿ ಶಿವದೀಕ್ಷೆ ಕೊಡುತ್ತಾನೆ.

'ಶಕ್ತಿಪಾತಂ ಸಮಾಲೋಕ್ಯ ದೀಕ್ಷಯಾ ಯೋಜಯೇದಮುಂ' (ಸಿ. ಶಿ. ಪರಿ ೬-೧೧೦) ಎಂದು ಆಚಾರ್ಯ ರೇಣುಕರು ಸೂಚಿಸಿದ್ದಾರೆ.

" 'ಶಕ್ತಿಪಾತ' ವೆಂದರೆ ಏನು?"

"ಶಕ್ತಿಪಾತವೆಂದರೆ ಶಿವಕೃಪೆ!"

"ಶಿವನ ಕೃಪಾದೃಷ್ಟಿ ಯಾರ ಮೇಲೆ ಬಿದ್ದಿದೆಯೋ ಅಂಥವನೇ ಶಿವದೀಕ್ಷೆಗೆ ಅರ್ಹ".

" 'ಶಕ್ತಿಪಾತವಾಗಿರುವುದನ್ನು ಗುರ್ತಿಸುವುದು ಹೇಗೆ ?"

"ಮುಕ್ತಿಯಲ್ಲಿ ಆಸಕ್ತಿ, ಭವದ ಬಗ್ಗೆ ಜಿಗುಪ್ಸೆ, ಶಿವನಲ್ಲಿ, ಶಿವಭಕ್ತರಲ್ಲಿ ಮತ್ತು ಶಿವಶಾಸ್ತ್ರಗಳಲ್ಲಿ ಶ್ರದ್ಧೆ, ಮುಂತಾದ ಲಕ್ಷಣಗಳು ಯಾವನಲ್ಲಿ ಸ್ಥಿರವಾಗಿರುತ್ತವೆಯೋ ಅಂಥವನನ್ನು ಗುರ್ತಿಸಿ ಶಿವದೀಕ್ಷೆ ಮಾಡಬೇಕು. ಈ ಬಗೆಯ ಲಕ್ಷಣವನ್ನು ಹೊಂದಿರುವವರಲ್ಲಿ ಜಾತಿ ಕುಲ ಲಿಂಗ ಮುಂತಾದುವನ್ನು ಲೆಕ್ಕಿಸಬಾರದು."

"ಶೂದ್ರರು ಮತ್ತು ಸ್ತ್ರೀಯರು ಬ್ರಹ್ಮ ವಿದ್ಯೆಗೆ ಅರ್ಹರಲ್ಲ" ಎಂದು ಕೆಲವು ಸ್ಮೃತಿಗಳಲ್ಲಿ ಹೇಳಿದೆಯಲ್ಲವೆ ?"

"ಹೇಳಿದೆ ನಿಜ. ಶೂದ್ರತ್ವವು ಎರಡು ವಿಧ ; ಜಾತಿ ಶೂದ್ರ ಮತ್ತು ಅನ್ವರ್ಥಶೂದ್ರ ಎಂದು." ಅಲ್ಲಿ ಮೊದಲನೆಯದು ವರ್ಣಧರ್ಮದಲ್ಲಿ ನಾಲ್ಕನೆಯವನು ಜಾತಿಶೂದ್ರ. ಅಲ್ಲಿ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರನ್ನು ದ್ವಿಜರೆಂದು ಕರೆದಿದೆ. ಉಪನಯನದಿಂದ ಪುನರ್ಜಾತನಾದವನು ದ್ವಿಜ. ನಾಲ್ಕನೆಯವನಿಗೆ ಉಪನಯನ ಸಂಸ್ಕಾರವಿಲ್ಲದ್ದರಿಂದ ಅವನು ಶೂದ್ರ, ಅಸಂಸ್ಕಾರಿ. ಇವನನ್ನು ಜಾತಿ ಶೂದ್ರನೆಂದು ಹೇಳುತ್ತಾರೆ.

ಆದರೆ ಶ್ರುತಿಯಲ್ಲಿ ಕುಲಗೋತ್ರಗಳನ್ನು ಅರಿಯದ ಅಸಂಸ್ಕಾರಿ 'ಸತ್ಯಕಾಮಜಾಬಾಲ'ನಿಗೆ ಸತ್ಯಸಂಧತ್ವ ಮುಂತಾದ ಲಕ್ಷಣವನ್ನು ಗುರ್ತಿಸಿ ಗುರು ಅವನಿಗೆ ಉಪನಯನಮಾಡಿ ವೇದಾಧ್ಯಯನ ಮಾಡಿಸಿದ.

"ಕವಷಐಲೂಷ (ಋ.ಮಂ.೫.೩೦) ಎಂಬ ಶೂದ್ರಿಯ ಮಗನನ್ನು ಋಷಿಗಳು ಯಜ್ಞಶಾಲೆಯಿಂದ ಹೊರಹಾಕಿದರು. ಆದರೂ ಅವನಲ್ಲಿ ಸಹಜ

ಸಂಸ್ಕಾರವಿದ್ದುದರಿಂದ ಅವನು ವೇದಮುಕ್ಕಗಳಿಗೆ ಋಷಿಯಾದ. ಇನ್ನು ಗಾರ್ಗಿ ಮೈತ್ರೇಯಿ ಅಪಾಲಾ ಮುಂತಾದ ಸುಸಂಸ್ಕಾರಿ ಸ್ತ್ರೀಯರೂ ಸಹ ಯಾಜ್ಞ್ಯವಲ್ಕ್ಯನಂತಹ ಮಹರ್ಷಿಂಯೊಡನೆ ಬ್ರಹ್ಮವಾದಿನಿಯರಾಗಿ ಉನ್ನತ ದರ್ಜೆಗೇರಿದ್ದಾರೆ. ಆದ್ದರಿಂದ ಯಾಜುಷ ಶ್ರುತಿಯು ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರ ಮತ್ತು ಅತಿ ಶೂದ್ರರೆನಿಸಿದಸೇವಕರಿಗೂ ಸಹ ವೇದಾಧ್ಯಯನವಮಾಡಿಸಬೇಕು೧. ಎಂದು ಸಾರಿದೆ.

"ಹಾಗಾದರೆ ವೇದವಿದ್ಯೆಗೆ ಯಾರು ಅನಧಿಕಾರಿಗಳು ?

"ಪಾಣಿನಿಮಹರ್ಷಿಗಳು ತಮ್ಮ ಶಿಕ್ಷೆಯಲ್ಲಿ ಯಾರನ್ನು

ಗೀತೀ ಶಿಘ್ರೀ ಶಿರಃಕಂಪೀ ತಥಾ ಲಿಖಿತಪಾಠಕಃ ।

ಅನರ್ಥಜ್ಞಃ ಅಲ್ಪಕಂಠಶ್ಚ ಷಡೇತೇ ಪಾಠಕಾಧಮಾಃ ॥

ಎಂದಿದ್ದಾರೆಯೋ ಅಂಥವರು ಅನಧಿಕಾರಿಗಳು ಮತ್ತು ಭಗವಂತನು ಗೀತೆಯಲ್ಲಿ—(೧೮-೬೭, ೬೮)

"ಭಗವಂತನಿಗಾಗಿ ಪರಿತಪಿಸದವನು ಅವನಲ್ಲಿ ಭಕ್ತಿಯಿಲ್ಲದವನು ಭಗವಂತನ ವಿಷಯವನ್ನು ಕೇಳಬಯಸದವನು, ಮತ್ತು ಭಗವಂತನನ್ನು ವಿರೋಧಿಸುವವನು ಇವರೆಲ್ಲ ಖಂಡಿತ ಬ್ರಹ್ಮವಿದ್ಯೆಗೆ ಅನಧಿಕಾರಿಗಳು.

"ಹಾಗಾದರೆ ಅನ್ವರ್ಥಕ ಶೂದ್ರತ್ವವು ಯಾವುದು ?"

"ಶುಚಾ ದ್ರವತೀತಿ ಶೂದ್ರಃ" 'ಶುಕ್' ಎಂದರೆ ದುಃಖ, ದುಃಖದಿಂದ ದ್ರವಿಸಿದ ಮನಸ್ಸುಳ್ಳವನು ಶೂದ್ರ. ಈ ಬಗೆಗೆ ಬ್ರಹ್ಮಸೂತ್ರದಲ್ಲಿ 'ಅಪಶೂದ್ರಾಧಿಕರಣವು' ವಿಚಾರ ಮಾಡಿದೆ—

---

೧ ಯಥೇಮಾಂ ವಾಚಂ ಕಲ್ಯಾಣೀಮಾವಧಾನಿ ಜನೇಭ್ಯಃ ।
ಬ್ರಹ್ಮರಾಜನ್ಯಾಭ್ಯಾಗ್ಂ ಶೂದ್ರಾಯ ಚಾರ್ಯಾಯ ಚ
ಸ್ವಾಯ ಚಾರಣಾಯ ।
ಪ್ರಿಯೋ ದೇವಾನಾಂ ದಕ್ಷಿಣಾಯೈ ದಾತುರಿಹ ಭೂಯಾಸ
ಮಯಂ ಮೇ ಕಾಮಃ ಸಮೃಧ್ಯತಾಮುಪಮಾದೋ ನಮತು ॥
(ಯಜು, ೨೬, ಮಂ. ೨)

"ಜಾನಶ್ರುತಿ ಎಂಬುವನು ಒಬ್ಬ ರಾಜ. ಅವನು ತುಂಬಾ ಧರ್ಮಿಷ್ಠ. ಅವನಿಗೆ ತಾನು ಪುಣ್ಯ ಕೆಲಸಮಾಡಿದವನು ಎಂಬ ಅಭಿಮಾನವೂ ಇತ್ತು. ಅವನಿಗೆ ಬ್ರಹ್ಮಜ್ಞಾನದ ಹಿರಿಮೆಯನ್ನು ತಿಳಿಸಲು ಕೆಲವರು ಋಷಿಗಳು ರಾತ್ರಿಹಂಸ ರೂಪದಿಂದ ಅವನ ಅರಮನೆಯ ಮೇಲೆ ಹಾದು ಹೋಗುವಾಗ ಹಿಂದಿದ್ದ ಹಂಸ ಹೇಳಿತು—

"ಎಲೈ ಸಂಜೆಗಣ್ಣ, ಮುಂದೆ ಜಾನಶ್ರುತಿಯ ಅರಮನೆಯಿದೆ. ಅಲ್ಲಿ ಅವನ ಧರ್ಮಜ್ವಾಲೆ ಹರಡಿದೆ. ನೀನು ಅಲ್ಲಿಹೋದರೆ ಆ ಜ್ವಾಲೆಯಿಂದ ನಿನ್ನ ರೆಕ್ಕೆಸುಟ್ಟೀತು!" ಎಂದು, ಅದಕ್ಕೆ ಅದು ಉತ್ತರಿಸಿತು—"ಅದೆಂತಹ ಧರ್ಮಜ್ವಾಲೆ! ಅದು ರೈಕ್ವನ ಬ್ರಹ್ಮತೇಜಸ್ಸಿನ ಮುಂದೆ ಎಷ್ಟರದು!" ಎಂದು ಹಳಿಯಿತು. ಈ ಮಾತು ಕೇಳಿ ರಾಜನಿಗೆ ದುಃಖವಾಗಿ ಅವನ ಮನಸ್ಸು ದ್ರವಿ (ಕರಗಿತು)ಸಿತು!

ಮುಂಜಾನೆ ರಾಜ ರೈಕ್ವನನ್ನು ಹುಡುಕಿಸಿ ಅವನ ದರ್ಶನಕ್ಕೆ ಹೋದ. ಆಗ ಬ್ರಹ್ಮಜ್ಞ ರೈಕ್ವ ಜಾನಶ್ರುತಿಯನ್ನು "ಹೇ ಶೂದ್ರ" ಎಂದು ಕರೆದ. ಜಾತಿಯಿಂದ ಕ್ಷತ್ರಿಯನಾದ ರಾಜನನ್ನು 'ಶೂದ್ರ' ಎಂದದ್ದು "ದುಃಖಿ" ಎಂಬ ಅರ್ಥದಲ್ಲಿ. ರೈಕ್ವನಿಗೆ ಶರಣಾಗಿ ರಾಜ ರೈಕ್ವನಿಂದ ಬ್ರಹ್ಮೋಪದೇಶ ಪಡೆದ. ಇದು ಅನ್ವರ್ಥಕ ಶೂದ್ರತ್ವ!"

"ಪಂಡಿತರೆ, ಇದುವರೆಗೆ ನೀವು ಹೇಳಿದ್ದು ವರ್ಣಧರ್ಮದಲ್ಲಿರುವ ಶೂದ್ರತ್ವದ ವಿಚಾರವಾಯಿತು. ಇನ್ನು ವೀರಶೈವದಲ್ಲಿ ಶೂದ್ರತ್ವವಿಲ್ಲವೆ?"

"ಇಲ್ಲ! ವೀರಶೈವವು ಅತಿವರ್ಣಾಶ್ರಮಧರ್ಮ. "ಅತಿವರ್ಣಾಶ್ರಮ" ಎಂದರೆ ಅಲ್ಲಿ ವರ್ಣಾಶ್ರಮಗಳಿಲ್ಲವೆ?"

ಇವೆ. ಆದರೆ ಅವು ಅಪ್ರಾಕೃತ! ಅತಿಶಯಿತವಾದ ವರ್ಣಾಶ್ರಮಗಳು. ಎಂದರೆ—

ಬ್ರಾಹ್ಮಣಃ ಕ್ಷತ್ರಿಯೋ ವಾಪಿ ವೈಶ್ಯಃ ಶೂದ್ರ ಏವ ವಾ।
ಯಸ್ತು ಲಿಂಗಾಂಗಸಂಯುಕ್ತಸ್ಸ ಏವಾತ್ಯಾಶ್ರಮೀ ಭವೇತ್ ॥

ಪ್ರಾಕೃತರಲ್ಲಿ ಯಾವುದೇ ವರ್ಣ ಅಥವಾ ಆಶ್ರಮಿಯಾದರೂ ಅವನು ಶಿವದೀಕ್ಷೆ ಪಡೆದ ಪಕ್ಷದಲ್ಲಿ ಅತ್ಯಾಶ್ರಮಿ ಎನಿಸುತ್ತಾನೆ. ಆದ್ದರಿಂದಲೇ ಶಿವಾಗಮಗಳಲ್ಲಿ—

ವಂಶಾವಲಿ ಪ್ರಯಾತಾನಾಂ ಲಿಂಗಧಾರಣಶಾಲಿನಾಂ।
ಜ್ಞಾನಿನಾಂ ಶಿವಭಕ್ತಾನಾಂ ಶೂದ್ರತ್ವಂ ನೈವ ವಿದ್ಯತೇ ॥

ಎಂದು ಹೇಳಿದೆ.

ಆದ್ದರಿಂದ ವೀರಶೈವವು ಭವಿ ಮತ್ತು ಭಕ್ತ ಎಂಬ ಎರಡು ವರ್ಗಗಳನ್ನು ಮಾತ್ರ ಒಪ್ಪಿದೆ. ಶಿವದೀಕ್ಷೆಯು ಭಕ್ತರಿಗೆ ಮಾತ್ರ. ಶಕ್ತಿಪಾತವಾಗದ ಅವರು ಭವಿಗಳು. ಅವರಿಗೆ ಶಿವದೀಕ್ಷಾಧಿಕಾರವಿಲ್ಲ.

ಶ್ರೀಪತಿಯು ಪ್ರಬಂಧಸಾರವನ್ನು ಗ್ರಹಿಸಿದ ಭೈರಣ್ಣ ಹೇಳಿದ— "ಸ್ವಾಮಿ, ನಿಮ್ಮ ಭಾಷ್ಯದ ಸ್ವರೂಪವನ್ನು ಕೇಳಿ ತುಂಬಾ ಸಂತೋಷವಾಯಿತು. ಕೃತಜ್ಞ. ನಾನು ಗುರುದೇವನಲ್ಲಿ ನಿಮ್ಮ ಪ್ರಬಂಧದ ಸ್ವರೂಪವನ್ನು ನಿವೇದಿಸುತ್ತೇನೆ!" ಎಂದು ಹೇಳಿ ಭೈರಣ್ಣ ಮುನ್ನಡೆದ.

ಮರುದಿನ ಶ್ರೀಪತಿ ಮಂಚಣ್ಣನ ಜೊತೆ ವಿದ್ಯಾಪೀಠಕ್ಕೆ ಭೇಟಿಯಿತ್ತು ಕುಲಸಚಿವರನ್ನು ಕಂಡ. ತಾನು ವಿದ್ಯಾಪೀಠಕ್ಕೆ ಕೊಡಬೇಕಾಗಿದ್ದ ಪ್ರಬಂಧವನ್ನು ಕೊಟ್ಟು ದಾಖಲೆ ಪಡೆದ. ಅಲ್ಲಿಂದ ಹಿಂದಿರುಗಿ ಬರುವಾಗ ದಾರಿಯಲ್ಲಿ ಮಂಚಣ್ಣ ವಿಶ್ವನಾಥಾಲಯದ ಕಡೆ ತಿರುಗಿದ್ದನ್ನು ಗಮನಿಸಿದ ಶ್ರೀಪತಿ—

"ಭಾವ, ಕೊಠಡಿಗೆ ಹೋಗಿ ಬರುತ್ತೇನೆ. ನೀನು ದೇವಾಲಯದ ಕಾಯಕ ಮುಗಿಸಿ ಮನೆಗೆ ಹೋಗಬಹುದು!" ಎಂದ.

"ಮಧ್ಯಾಹ್ನಕ್ಕೆ ಮನೆಗೆ ಬಂದುಬಿಡು! ಇಬ್ಬರೂ ಕೂಡಿಯೇ ಪ್ರಸಾದ ಸ್ವೀಕರಿಸೋಣ!" ಎಂದ ಮಂಚಣ್ಣ ಕಳಕಳಿಯಿಂದ.

"ಭಾವಾ, ನನಗಾಗಿ ನೀವು ಕಾಯುವುದುಬೇಡ! ನಾನು ಪ್ರಾಧ್ಯಾಪಕರನ್ನು ಕಂಡು ಬರುತ್ತೇನೆ!" ಎಂದ ಶ್ರೀಪತಿ ವಿದ್ಯಾಗುರುಗಳಾದ ಸೂರ್ಯಪ್ರಕಾಶಶಾಸ್ತ್ರಿಗಳ ಮನೆಯ ಕಡೆ ಕಾಲು ಹಾಕಿದ.

ಅನಿರೀಕ್ಷಿತವಾಗಿ ಮನೆಗೆ ಬಂದ ಶ್ರೀಪತಿಯನ್ನು ಶಾಸ್ತ್ರಿ ದಂಪತಿಗಳು ವಾತ್ಸಲ್ಯದಿಂದ, ಬರಮಾಡಿಕೊಂಡರು. ಶಾಸ್ತ್ರಿಗಳ ಧರ್ಮಪತ್ನಿ ಜಾನಕಮ್ಮನವರು. ಜ್ಞಾನವಯೋ ವೃದ್ಧರಾದ ಆ ದಂಪತಿಗಳಿಗೆ ಶ್ರೀಪತಿ ದೀರ್ಘದಂಡ ಪ್ರಣಾಮ ಮಾಡಿದ. ಜಾನಕಮ್ಮನವರು ಭಟ್ಟರ ಮತ್ತು ಮನೆಯವರ ಕುಶಲ ಪ್ರಶ್ನೆ ಮಾಡಿದರು. ಶ್ರೀಪತಿ ತಾನು ಕಾಶ್ಮೀರಕ್ಕೆ ಹೋಗಿ ಬಂದ ಎಲ್ಲ ವೃತ್ತಾಂತವನ್ನೂ ಗುರುವಿಗೆ ನಿವೇದಿಸಿದ.

ಕಾಶ್ಮೀರದಲ್ಲಿ ಗುರುದೇವನ ಕೃಪೆಯಿಂದ "ಅಗಸ್ತ್ಯ ಸೂತ್ರ ವೃತ್ತಿ"ಯು ದೊರೆತದ್ದು ಮತ್ತು ಅದರ ಆಧಾರದ ಮೇಲೆ ತಾನು ತನ್ನ ಪ್ರಬಂಧವನ್ನು ಬರೆದದ್ದು ಹಾಗೂ ಸದರಿ ಪ್ರಬಂಧವನ್ನು ಈ ದಿನ ವಿದ್ಯಾಪೀಠಕ್ಕೆ ತಲುಪಿಸಿದವರೆಗಿನ ಎಲ್ಲ ವೃತ್ತಾಂತವನ್ನೂ ಶಾಸ್ತ್ರಿಗಳಿಗೆ ನಿವೇದಿಸುದುದಲ್ಲದೆ ಶ್ರೀಪತಿ 'ಅದರ ಸಂಪೂರ್ಣ ಯಶಸ್ಸು ತಮಗೇ ಸೇರಿದ್ದೆಂದು ವಿಜ್ಞಾಪಿಸಿದ.

ಪ್ರಬಂಧವು ವಿದ್ಯಾಪೀಠಕ್ಕೆ ಕಳುಹಿಸಿದ ಸುದ್ದಿ ತಿಳಿದು ಮೊದಲು ಆನಂದತುಂದಿಲರಾದವರು ಸೂರ್ಯಪ್ರಕಾಶಶಾಸ್ತ್ರಿ ದಂಪತಿಗಳು. ಜಾನಕಮ್ಮನವರು ಹೇಳಿದರು—

"ಶ್ರೀಪತಿ ಈ ದಿನ ನೀನು ನಮ್ಮಲ್ಲಿಯೇ ಪ್ರಸಾದ ತೆಗೆದುಕೊಳ್ಳಬೇಕು.!" ಎಂದು, ಶ್ರೀಪತಿ—

"ವಿದ್ಯಾಪೀಠದಿಂದ ಹಿಂದಿರುಗಿದವನು ಇನ್ನೂ ಮನೆಗೇ ಹೋಗಿಲ್ಲ!" ಎಂದಾಗ ಜಾನಕಮ್ಮನವರು—

"ಅವರು ಯಾವಾಗಲೂ ಇದ್ದೇ ಇರುತ್ತಾರೆ! ಆದರೆ ನಮ್ಮದು ಆಕಸ್ಮಿಕವಲ್ಲವೆ!" ಎಂದರು.

ಪ್ರಸಾದ ಬಡಿಸಿದ ಜಾನಕಮ್ಮನವರ ಕೈಗುಣವನ್ನು ಕಂಡದ್ದು ಶ್ರೀಪತಿ ಇದೇ ಮೊದಲು. ಅವರ ವಾತ್ಸಲ್ಯ ಮಮತೆ ಮತ್ತು ಶಾಸ್ತ್ರಿಗಳ ಜೊತೆ ಈ ಮೂರೂ ಸೇರಿತ್ತು. ಶ್ರೀಪತಿ ಮಾತನಾಡುತ್ತಾ ಕಂಠಪೂರ್ತಿ ಪ್ರಸಾದ ಗಿಟ್ಟಿಸಿದ.

ಗುರುಗಳನ್ನು ಬೀಳ್ಕೊಂಡು ಶ್ರೀಪತಿ ತನ್ನ ಕೋಣೆಗೆ ಹಿಂದಿರುಗಿದ. ರಾತ್ರಿ ಊಟದ ಯೋಚನೆಯೇ ಇಲ್ಲವೆಂದು ನಿರ್ಧರಿಸಿದ ಶ್ರೀಪತಿ ಹಾಸಿಗೆಯ ಮೇಲೆ ಕಾಲುಚಾಚಿ ದಿಂಬುರುಳಿದ.

ತನ್ನಲ್ಲಿ ವತ್ತೆ ಇಟ್ಟಿದ್ದ ಅಪೂರ್ವವಸ್ತುವನ್ನು ಮಾಲಿಕನಿಗೆ ಹಿಂದಿರುಗಿಸಿದವನಂತೆ ಅವನ ಮನಸ್ಸು ಹಗುರವಾಗಿತ್ತು. ಅದು ತನ್ನ ಹಿಂದಿನ ಜೀವನದ ಕತೆಯ ಸುರುಳಿಯನ್ನು ಬಿಚ್ಚಿ ತನ್ನ ಹನ್ನೆರಡು ವರ್ಷಗಳ ಕತೆಯ ಹಾಳೆಗಳನ್ನು ತಿರುವಿಹಾಕುತ್ತಿತ್ತು. ವಿದ್ಯಾಭ್ಯಾಸವು ಮುಗಿದ ಮೇಲೆ ಭೈರಣ್ಣನ ಜೊತೆ ಕಾಶ್ಮೀರ ಪ್ರಯಾಣ; ಗುರುದೇವನ ಸಂದರ್ಶನ, ವಿದ್ವತ್ ಸಭೆಯಲ್ಲಿನ ಪಂಡಿತರ ಭಾಷಣಗಳು, ಗುರುದೇವನಿಂದ ಬೀಳ್ಕೊಂಡು ಹಿಮಗಿರಿಧಾಮಗಳ ಬೇಟಿ, ಮುಂತಾದುವನ್ನು ನೆನೆಯುತ್ತಾ ಅದು ಈಗ ರುದ್ರ ಗುಹೆಯಲ್ಲಿರುವ ಗುರುದೇವನ ಪಾದಕಮಲದಲ್ಲಿ ಮರಿದುಂಬಿಯಾಗಿ ತನ್ಮಯವಾಗಿ ವೈಮರೆಯಿತು.

ಮಧ್ಯಾಹ್ನ ಪ್ರಸಾದಕ್ಕೂ ಬಾರದ ಸಂಜೆ ಎಂಟೊಂಬತ್ತು ಗಂಟೆಯಾದರೂ ಶ್ರೀಪತಿಯ ಸುಳಿವಿಲ್ಲದುದನ್ನು ಗಮನಿಸಿದ ಶ್ರೀದೇವಿ ಹಣ್ಣು ಹಾಲುಗಳನ್ನು ಶಂಭುಭಟ್ಟರ ಮೂಲಕ ಶ್ರೀಪತಿಯ ಕೋಣೆಗೆ ಕಳುಹಿಸಿದ್ದಳು. ಭಟ್ಟರು ಕೋಣೆಯ ಬಾಗಿಲು ತೆರೆದು ನೋಡಿದಾಗಲೂ ಶ್ರೀಪತಿಗೆ ಎಚ್ಚರವಾಗಿರಲಿಲ್ಲ. ಅವರು ಶ್ರೀಪತಿಯನ್ನು ಎಬ್ಬಿಸುವ ಗೋಜಿಗೆ ಹೋಗದೆ ಹಾಲು-ಹಣ್ಣುಗಳನ್ನು ಮೇಜಿನ ಮೇಲಿರಿಸಿ ವಸ್ತ್ರಮುಚ್ಚಿ ಕದ ಮುಂದು ಮಾಡಿಕೊಂಡು ಮನೆಗೆ ಹಿಂದಿರುಗಿದ್ದರು.

ರಾತ್ರಿ ಹನ್ನೊಂದು ತಾಸಿಗೆ ನಿದ್ದೆಯಿಂದ ಎಚ್ಚೆತ್ತ ಶ್ರೀಪತಿ ಮನೆಗೆ ಹೋಗಲು ಯೋಚಿಸಿದ. ಆದರೆ ಮೇಜಿನ ಮೇಲಿದ್ದ ಹಾಲು ಬಿಸಿಯಾಗಿತ್ತು. ಮನೆಯಿಂದ ಅದನ್ನು ತಂದವರು ಹಿಂದಿರುಗಿ ಇನ್ನೂ ಬಹಳ ಹೊತ್ತಾಗಿರಲಾರದು ಎಂದು ಊಹಿಸಿದ. ಹಾಸಿಗೆಯಿಂದೆದ್ದು ನಿತ್ಯಾಹ್ನಿಕವನ್ನು ಸಂಕ್ಷೇಪವಾಗಿ ಮುಗಿಸಿ ಹಣ್ಣು ತಿಂದು, ಹಾಲು ಕುಡಿದ. ಆದರೆ ನಿದ್ದೆಯ ಮಂಪರು ಮತ್ತೆ ಕವಿದು ಬಂದದ್ದರಿಂದ ಶ್ರೀಪತಿ ಬಾಗಿಲನ್ನು ಭದ್ರಪಡಿಸಿಕೊಂಡು ಮತ್ತೆ ಪವಡಿಸಿದ. ಆದರೆ ಅಲ್ಲಿಂದ ಮುಂದೆ ಬಂದ

ನಿದ್ದೆ ಅರೆಸಿದ್ದೆ, ಅದು ಶ್ರೀಪತಿಯನ್ನು ಸ್ವಪ್ನಲೋಕಕ್ಕೆ ಕೊಂಡೊಯ್ದಿತು. ಬಗೆಬಗೆಯ ಬಗೆಹರಿಯದ ಕನಸುಗಳು !.

ಬ್ರಾಹ್ಮ ಮುಹೂರ್ತದಲ್ಲಿ ಹಾಸಿಗೆ ಬಿಟ್ಟು ಎದ್ದ ಶ್ರೀಪತಿ ನಿತ್ಯ ಕರ್ಮಗಳನ್ನು ಮುಗಿಸಿ ಗಂಗಾತೀರದಲ್ಲಿ ವಿಹರಿಸತೊಡಗಿದ. ತೀರದಲ್ಲಿ ಸೊಂಪಾಗಿ ಬೆಳೆದಿದ್ದ ಪುಷ್ಪವಾಟಿಕೆಯ ಕುಸುಮಸೌರಭ ಅವನನ್ನು ಆಕಡೆ ಎಳೆಯಿತು. ಪುಷ್ಪವಾಟಿಕೆಯನ್ನು ಪ್ರವೇಶಿಸಿದ ಶ್ರೀಪತಿ ಅಲ್ಲಲ್ಲಿ ಸುತ್ತಾಡಿದ.

ಅಲ್ಲೊಂದು ಹಾಸು ಬಂಡೆಯ ಮೇಲೆ ಮಡಿ ಮಾಡಿದ ಒದ್ದೆ ಬಟ್ಟೆಯ ಗಂಟುಗಳಿದ್ದವು. ಯಾರೋ ನದಿಗೆ ಬಂದು ಬಟ್ಟೆ ಮಡಿ ಮಾಡಿ ಇಟ್ಟಿರಬೇಕೆಂದು ಲೆಕ್ಕ ಹಾಕಿದ. ಪುಷ್ಪವಾಟಿಕೆಯ ಮತ್ತೊಂದು ತುದಿ ಯಲ್ಲಿ ಕೆಲವರು ವಟುಗಳು ಹೂ ಬಿಡಿಸುತ್ತಿದ್ದುದು ಕಾಣಿಸಿತು. ಅವರ ಹುಡುಗ ಮಾತುಗಳನ್ನು ಗಮನಿಸದೆ ಶ್ರೀಪತಿ ನದಿಯಕಡೆ ಮುಖ ಮಾಡಿ ಕೊಂಡು ಕುಳಿತು ಕಲರವ ಮಾಡುತ್ತಾ ತೆರೆತೆರೆಯಾಗಿ ಹರಿಯುತ್ತಿರುವ ಹೊಳೆಯನ್ನು ಗಮನಿಸುತ್ತಿದ್ದ. ಅದರಂತೆ ತನ್ನ ಜೀವನ ಪ್ರವಾಹವೂ ಕಲರವದಿಂದ ಹರಿವುದು ಯಾವಾಗ ಎಂದು ಲೆಕ್ಕ ಹಾಕುತ್ತಿದ್ದ. ಅಷ್ಟರಲ್ಲಿ–

"ಏನು, ನಿಮ್ಮ ಮೂಗು 'ಇಕೋ ಯಣಚಿ' ಇದ್ದ ಹಾಗಿದೆಯಲ್ಲ"! ಎಂದು ವಟುಗಳಲ್ಲಿ ಒಬ್ಬ ಹೂಬಿಡಿಸುತ್ತಾ ತನ್ನಲ್ಲಿ ತಾನೇ ನಗತೊಡಗಿದ್ದ.

ಅವನನ್ನು ಕಂಡ ಮತ್ತೊಬ್ಬ ವಟು,

"ಏನು ಕಾಂತಣ್ಣ, ಬಹಳ ಖುಷಿಯಾಗಿದ್ದೀಯ !" ಎಂದ.

"ಮಲ್ಲಣ್ಣ, ನೆನ್ನೆ ತರಗತಿಯಲ್ಲಿ ನಮ್ಮ ಉಪಾಧ್ಯಾಯರು ಹೇಳಿದ ಕತೆ ನೆನಪಾಗಿ ನಗುಬಂತು !" ಎಂದ ಕಾಂತ ನಸು ನಗುತ್ತಾ.

"ಅದು ಯಾವ ಕತೆ? ಹೇಳು ಕಾಂತು ಕೇಳೋಣ !"

ಮಲ್ಲಣ್ಣನ ಮಾತು ಕೇಳಿ ವಟುಗಳೆಲ್ಲ ಕಾಂತನ ಕಡೆ ತಿರುಗಿದರು. ಕಾಂತು ಕತೆ ಹೇಳತೊಡಗಿದ—

"ಒಂದೆಡೆ ಪಂಡಿತರ ಸಭೆ ನೆರೆದಿತ್ತಂತೆ ! ಅಲ್ಲಿ ಸೇರಿದ್ದ ಪಂಡಿತರಲ್ಲಿ ಕೆಲಕೆಲವರು ತಮ್ಮ ತಮ್ಮ ಶಾಸ್ತ್ರಗಳಲ್ಲಿ ಬರುವ ವಾದಘಟ್ಟಗಳನ್ನು

ಎತ್ತಿಕೊಂಡು ವಾಕ್ಯಾರ್ಥ ನಡೆಸಿದ್ದರು. ಪಾಪ, ಅವರಲ್ಲಿ ವ್ಯಾಕರಣ ಪಂಡಿತರನ್ನು ಕೇಳುವವರೇ ಇರಲಿಲ್ಲ! ಅಷ್ಟಕ್ಕೂ ವ್ಯಾಕರಣವು ಒಂದು ಶಾಸ್ತ್ರ ಎಂಬ ಕಲ್ಪನೆಯೂ ಅವರಿಗೆ ಇದ್ದಂತೆ ಕಾಣಲಿಲ್ಲ! ಆಗ ತಮ್ಮ ಶಾಸ್ತ್ರಕ್ಕೆ ಬಂದ ಅಪಖ್ಯಾತಿಯನ್ನು ಗಮನಿಸಿದ ಆ ವ್ಯಾಕರಣ ಪಂಡಿತರು ತನ್ನ ಎದುರಿಗಿದ್ದವರನ್ನು ಕುರಿತು—

"ಏನ್ರಿ, ನಿಮ್ಮ ಮೂಗು 'ಇಕೋ ಯಣಚಿ' ಇದ್ದ ಹಾಗೆ ಇದೆಯಲ್ಲಾ!" ಎಂದರು.

"ಹಾ, ಹಾಗೆಂದರೆ ಏನು? ಬಿಡಿಸಿ ಹೇಳಿ; ನನಗೆ ಅರ್ಥವಾಗಲಿಲ್ಲ!" ಎಂದರು ಎದುರಿಗಿದ್ದ ಪಂಡಿತರು ಕುತೂಹಲದಿಂದ—

"ಇದು ವ್ಯಾಕರಣದ ಒಂದು ಸೂತ್ರ! ಪಾಣಿನಿ ಮಹರ್ಷಿಗಳು ಹೇಳಿದ್ದು!" "ಇಕಃ ಸ್ಥಾನೇ ಯಣ್‌ಸ್ಸ್ಯಾತ್ ಅಚಿ ಸಂಹಿತಾಯಾಂ ವಿಷಯೇ" ಎಂಬುದು ಇದರ ವೃತ್ತಿ". "ವಾಪ್ಯಶ್ವಃ" ಎಂಬುದು ಉದಾಹರಣೆ! ಇಕ್-ಯಣ್-ಅಚ್ ಎಂಬುವು ಪ್ರತ್ಯಾಹಾರಗಳು. ಇಕ್ ಎಂದರೆ ಇ-ಉ-ಋ-ಲೃ ಎಂಬ ವರ್ಣಗಳಿಗೆ ಸಂಜ್ಞೆ, ಈ ವರ್ಣಗಳ ಮುಂದೆ ಅಚ್ (ಅ-ಆ-ಇ.... ಅಂ ಅಃ) ಎಂಬ ವರ್ಣಗಳು ಪರವಾದಾಗ ಆ ಇಕ್ ವರ್ಣಗಳಿಗೆ ಕ್ರಮವಾಗಿ ಯಣ್ (ಯ-ವ-ರ-ಲ)ಗಳು ಆದೇಶವಾಗಿ ಬರುತ್ತವೆ. ಉದಾ:- 'ವಾಪಿ+ಅಶ್ವಃ ಎಂಬಲ್ಲಿ ಇದು ಸಮನ್ವಯವಾಗಿ ವ್ಯಾಪಶ್ವಃ' ಎಂಬ ರೂಪವು ಸಿದ್ಧಿಸುತ್ತದೆ ಎಂದು ಹೇಳುತ್ತಿರುವಾಗ ಎಲ್ಲ ಪಂಡಿತರ ಗಮನವೂ ಆ ಕಡೆ ಬಿತ್ತು. ಅವರೆಂದರು—

"ಓಹೋ! ಹಾಗಾದರೆ ವ್ಯಾಕರಣವೂ ಒಂದು ಶಾಸ್ತ್ರ! ಅಲ್ಲಿಯೂ ವಾಕ್ಯಾರ್ಥಕ್ಕೆ ಎಡೆ ಉಂಟು!" ಎಂದು ಮನಗಂಡರು.

ಕತೆ ಕೇಳಿದ ಮಲ್ಲಣ್ಣ ಹೇಳಿದ—"ತಮ್ಮ ಶಾಸ್ತ್ರದ ಅಸ್ತಿತ್ವ ಮತ್ತು ಆ ಶಾಸ್ತ್ರದ ವೈಶಿಷ್ಟ್ಯವನ್ನು ಎತ್ತಿ ತೋರಿಸಲು ಆ ಪಂಡಿತರು ಹಾಗೆ ಮಾಡಿದ್ದು ಸರಿ! ನಿನ್ನ ಮಾತು ಕೇಳಿ ನನ್ನ ಉಪಾಧ್ಯಾಯರು ತರ್ಕಶಾಸ್ತ್ರದ ಬಗೆಗೆ ಹೇಳಿದ್ದ ಕತೆಯೊಂದು ನೆನಪಾಯಿತು. ಅದೂ ಇದರಂತೆ ಸ್ವಾರಸ್ಯವಾಗಿದೆ." ಎಂದು.

ಎಲ್ಲ ವಟುಗಳೂ ಮಲ್ಲಣ್ಣನ ಕಡೆ ನೋಡ ತೊಡಗಿದರು ಕುತೂಹಲ ಕೆರಳಿ. ಕಾಂತು—"ಅಣ್ಣ, ಆ ಕತೆನೂ ಹೇಳಣ್ಣ ಕೇಳ್ಳೋಣ!" ಎಂದು ಒತ್ತಾಯಿಸಿದ.

"ಒಬ್ಬ ಗುರುವಿಗೆ ಮೂವರು ಶಿಷ್ಯರಿದ್ದರಂತೆ! ಅವರು ಕ್ರಮವಾಗಿ ಅಲಂಕಾರ, ಛಂದಸ್ಸು ಮತ್ತು ತರ್ಕ ಶಾಸ್ತ್ರಗಳನ್ನು ಕಲಿಯಲು ಮನೆಗೆ ಬರುತ್ತಿದ್ದರು.

ಗುರು ಮೊದಲು ಬಂದ ಅಲಂಕಾರ ಮತ್ತು ಛಂದಸ್ಸುಗಳ ವಿದ್ಯಾರ್ಥಿಗಳಿಗೆ ಅರ್ಧ ಅರ್ಧ ಗಂಟೆ ಮಾತ್ರ ಪಾಠ ಹೇಳಿ ಕಳುಹಿಸುತ್ತಿದ್ದರು. ಕಡೆಗೆ ಬಂದ ತರ್ಕ ಶಾಸ್ತ್ರದ ಹುಡುಗನಿಗೆ ಎರಡು ಗಂಟೆ ಪಾಠ ಹೇಳುತ್ತಿದ್ದರು. ಇದನ್ನು ಕಂಡ ಪಂಡಿತರ ಮಗಳು ಕೇಳಿದಳು—

"ಅಪ್ಪಾಜಿ, ನೀವು ಶಿಷ್ಯರಿಗೆ ಪಾಠ ಹೇಳುವುದರಲ್ಲಿ ಪಂಕ್ತಿ ಭೇದ ಮಾಡಬಹುದೇ ?" ಎಂದಳು.

"ನಾನು ಅಂಥ ಪಕ್ಷಪಾತ ಮಾಡಿದ್ದೇನಮ್ಮಾ? ಎಂದರು ಪಂಡಿತರು.

"ಅಪ್ಪಾಜಿ, ನಿಮ್ಮ ಶಿಷ್ಯರಲ್ಲಿ ಮೊದಲು ಬಂದ ಆ ಇಬ್ಬರಿಗೆ ಅರ್ಧರ್ಧ ಗಂಟೆ ಮಾತ್ರ ಪಾಠ ಹೇಳುತ್ತೀರಿ! ಕಡೆಗೆ ಬಂದವನಿಗೆ ಎರಡು ಗಂಟೆ ಪಾಠ ಮಾಡುತ್ತೀರಿ! ಇದು ಪಕ್ಷಪಾತವಲ್ಲವೆ ?" ಎಂದಳು.

"ನಿಜ ಮರಿ, ಇದಕ್ಕೆ ಕಾರಣವಿಲ್ಲದಿಲ್ಲ! ಇದಕ್ಕೆ ಕಾರಣ ನಿನಗೇ ತಿಳಿಯುತ್ತದೆ! ನಾಳೆ ಆ ಹುಡುಗರು ಪಾಠಕ್ಕೆ ಬಂದಾಗ ನೀನು, "ಭಟ್ಟರ ಹೊಟ್ಟೆಗೆ ಓತಿಕ್ಯಾತ ಹೊಕ್ಕಿದೆ" ಎಂದು ಹೇಳು, " ಎಂದರು. ಮರುದಿನ ಬೆಳಗ್ಗೆ—

ಮೊದಲು ಬಂದವನು ಅಲಂಕಾರ ಶಾಸ್ತ್ರದ ವಿದ್ಯಾರ್ಥಿ. ಅವನು ಗುರು ಪುತ್ರಿ ಹೇಳಿದ ಮಾತನ್ನು ಕೇಳಿ "ಭಟ್ಟರ ಹೊಟ್ಟೆಗೆ ಓತಿಕ್ಯಾತ !" "ಈ ಮಾತು ಎಷ್ಟು ಸುಂದರ ಶೈಲಿಯಲ್ಲಿದೆ! ಎಂದು ಸಮಾಧಾನಪಟ್ಟು ಹಿಂದಿರುಗಿದ. ಅನಂತರ ಛಂದಶ್ಯಾಸ್ತ್ರದವನು ಬಂದ. ಗುರುಪುತ್ರಿ ಅವನಿಗೂ ಅದೇ ಮಾತು ಹೇಳಿದಳು. ಕೇಳಿದ ವಿದ್ಯಾರ್ಥಿ "ಆಹಾ! ಈ ಮಾತು ಎಷ್ಟು ಪ್ರಾಸ ಬದ್ಧವಾಗಿದೆ!"ಎಂದು ಸಂತಸ ಪಟ್ಟು ಹಿಂದುರುಗಿದ.

ಕಡೆಗೆ ಬಂದವನು ತರ್ಕದ ವಿದ್ಯಾರ್ಥಿ. ಗುರು ಪುತ್ರಿ ಹೇಳಿದ ಸುದ್ದಿ ಕೇಳಿ ಅವನು ಖಿನ್ನನಾದ ! ಅವನು ಹಿಂದಿರುಗಲಿಲ್ಲ ! ಪ್ರಶ್ನಿಸಿದ—

"ಅಕ್ಕ, ನಿನ್ನ ಮಾತು ನಂಬುವುದಕ್ಕೆ ಆಗುವುದಿಲ್ಲ ! "

"ಏಕೆ ಆಗುವುದಿಲ್ಲ ! ಎಂದಳು ಗುರು ಪುತ್ರಿ."

ಅವನು ಹೇಳಿದ "ಏಕೆಂದರೆ ನೀವು ನಗುಮುಖದಿಂದ ಇದ್ದೀರಿ ! ಓತಿಕ್ಯಾತ ಎಂದರೆ ಬೇಲಿಯ ಮೇಲೆ ಓಡಾಡುವ ಹಲ್ಲಿಯಂತಹ ಪ್ರಾಣಿ. ಅದು ಹೊಟ್ಟೆಹೊಕ್ಕರೆ ಯಾರಾದರೂ ಬದುಕಿರಲು ಸಾಧ್ಯವೆ ? ಒಮ್ಮೆ ಹಾಗಾಗಿದ್ದರೆ ನಿಮ್ಮ ಮುಖದಲ್ಲಿ ಈ ನಗೆ ಅಲೆಯನ್ನು ಕಾಣಲು ಸಾಧ್ಯವಾಗುತ್ತಿತ್ತೆ ? ಈ ಕಾರಣದಿಂದ ನಿಮ್ಮ ಮಾತು ತರ್ಕಬದ್ಧವಲ್ಲ !" ಎನ್ನುತ್ತಿದ್ದಂತೆ ಗುರು ಒಳಗಿನಿಂದ ಬಂದು ಆ ವಿದ್ಯಾರ್ಥಿಯ ವಿಚಾರಶಕ್ತಿಗೆ ಮೆಚ್ಚಿ ಬೆನ್ನು ಚಪ್ಪರಿಸಿ ಭೇಷ್ !" ಎಂದರು. ಮುಂದುವರೆದು ಗುರು— "ನೋಡು ಮರಿ, ತರ್ಕ ಎಂದರೆ ವಿಚಾರ, ಊಹೆ, ಯುಕ್ತಿಯುಕ್ತವಾದ ಮಾತು ! ಅದು ಯಾರಿಗೆ ಮಾನ್ಯವಲ್ಲ ! ಮಾನವ ಪ್ರತಿಯೊಂದು ಮಾತನ್ನು ವಿಚಾರವೆಂಬ ಒರೆಗೆ ಹಚ್ಚಬೇಕು. ಚಿನ್ನವನ್ನು ಒರೆಗೆ ಹಚ್ಚುವಂತೆ ಸಾಮಾನ್ಯ ಜನ "ಎತ್ತು ಈಯಿತು"! ಎಂದರೆ "ಕೊಟ್ಟಡಿಗೆಗೆ ಕಟ್ಟು" ಎನ್ನುತ್ತಾರೆ. ಆದರೆ ವಿಚಾರಪರರು "ಎತ್ತು ಈಯಲು ಸಾಧ್ಯವೆ? ಎಂದು ವಿಚಾರ ಮಾಡುತ್ತಾರೆ. ಇದಕ್ಕೆ "ಸಾಮಾನ್ಯ ಪ್ರತಿಭೆ" ಎಂದು ಹೆಸರು. ದೂರದಲ್ಲಿ ಹೊಗೆ ಕಂಡರೆ "ಅಲ್ಲಿ ಬೆಂಕಿ ಇದೆ ಎಂದು ಊಹಿಸುವಂತೆ ! ಆದ್ದರಿಂದ ಈ ಶಾಸ್ತ್ರ ಪಾಠ ಮಾಡಲು ಹೆಚ್ಚು ಕಾಲಾವಕಾಶ ಬೇಕಾಗುತ್ತದೆ. "

ಅಷ್ಟರಲ್ಲಿ "ಆದಕ್ಕಾಗಿಯೇ ತರ್ಕ ಮತ್ತು ವ್ಯಾಕರಣಗಳು ಎಲ್ಲ ಶಾಸ್ತ್ರಗಳಿಗೂ ಅಗತ್ಯ ಎನ್ನುವುದು" ಎನ್ನುತ್ತಾ ಶ್ರೀಪತಿ ಅಲ್ಲಿಗೆ ಬಂದು ಹುಡುಗರನ್ನು ಬೆನ್ನು ಚಪ್ಪರಿಸಿ ಪ್ರೋತ್ಸಾಹಿಸಿದ.

ಶ್ರೀಪತಿಯನ್ನು ಕಂಡ ವಟುಗಳು ಅಚ್ಚರಿಗೊಂಡರು ! ಆದರೆ ಇತರ ವಟುಗಳು ಶ್ರೀಪತಿಯನ್ನು ಬಿಡಲಿಲ್ಲ ಅವರು ಕೇಳಿದರು—

"ಏನಣ್ಣ, ಶಾಸ್ತ್ರಗಳಲ್ಲಿ ನೀವು ತರ್ಕ ಮತ್ತು ವ್ಯಾಕರಣಗಳೆರಡನ್ನು ಮಾತ್ರ ಹೊಗಳುತ್ತೀರಿ! ಆದರೆ ಆ ಶಾಸ್ತ್ರಗಳ ಬಗೆಗೆ ಹೀಯಾಳಿಕೆಯ ಮಾತುಗಳೂ ಇವೆ ಎಂದು ನಮ್ಮ ಉಪಾಧ್ಯಾಯರು ಇಂಥವೇ ಕತೆಗಳನ್ನು ಹೇಳುತ್ತಿರುತ್ತಾರೆ!

"ಏನು ಹೇಳುತ್ತಾರೆ? ಹೇಳು ಕೇಳೋಣ!"

"ಒಮ್ಮೆ ಗುರುಶಿಷ್ಯರು ಪ್ರಯಾಣ ಬೆಳಸಿದ್ದರು. ದಾರಿಯಲ್ಲಿ ಒಂದು ಮರ ಒಣಗಿ ನಿಂತಿತ್ತು. ಗುರು ತರ್ಕದ ವಿದ್ಯಾರ್ಥಿಯನ್ನು ಕುರಿತು "ಈ ಮರವನ್ನು ವರ್ಣಿಸು" ಎಂದರು. ತರ್ಕದವ ಹೇಳಿದ "ಶುಷ್ಕೋ ವೃಕ್ಷಃ ತಿಷ್ಠತ್ಯಗ್ರೇ!" ಎಂದ. ಅಲಂಕಾರದವ ಹೇಳಿದ "ನೀರಸ ತರುರಿಹ ಪುರತೋ ಭಾತಿ"! ಎಲ್ಲರೂ ಹರ್ಷೋದ್ಗಾರ ಮಾಡಿದರು.

ಶ್ರೀಪತಿ ಕಡೆಗೆ ಹೇಳಿದ– "ಅಪ್ಪ, ಪ್ರತಿಯೊಬ್ಬ ಉಪಾಧ್ಯಾಯರೂ ತಮ್ಮ ತಮ್ಮ ಶಾಸ್ತ್ರದ ಹಿರಿಮೆಯ ಬಗೆಗೆ ಒಂದೊಂದು ಕತೆ ಹೇಳುವುದು ಸ್ವಾಭಾವಿಕ. ಆದರೆ ಮಾನವನಿಗೆ ಇರಬೇಕಾದುದು "ಸಾಮಾನ್ಯ ಪ್ರಜ್ಞೆ" ಅದಕ್ಕೆ ಓದು ಮುಖ್ಯವಲ್ಲ; "ಸಮಯ ಪ್ರಜ್ಞೆ!" ಎಂದು ವಟುಗಳನ್ನು ಸಮಾಧಾನಪಡಿಸಿ ಶ್ರೀಪತಿ ಮನೆಯ ದಾರಿ ಹಿಡಿದ. ಈ ಪ್ರಕರಣದಿಂದ ಶ್ರೀಪತಿಯ ಮನಸ್ಸು ಪ್ರಸನ್ನವಾಗಿತ್ತು.

* * * *

ಈ ವರ್ಷ ವಿದ್ಯಾಪೀಠಕ್ಕೆ ಪರಿಶೀಲನೆಗಾಗಿ ಬಂದಿದ್ದ ವಿಶೇಷ ಪ್ರಬಂಧಗಳಲ್ಲಿ ಶ್ರೀಪತಿಯ ಪ್ರಬಂಧಕ್ಕೆ ಅಗ್ರಮಾನ್ಯತೆ ದೊರೆತಿತ್ತು. ವಿಶೇಷ ಪ್ರಬಂಧಗಳನ್ನು ಪರಿಶೀಲಿಸುವ ವಿದ್ಯಾಪೀಠದ ಪ್ರಾಧ್ಯಾಪಕ ಸಮಿತಿಯು ಫಲಿತಾಂಶಗಳನ್ನು ಪ್ರಕಟಿಸುವ ವೇಳೆಗೆ ಸಭಾಂಗಣದಲ್ಲಿ ವಿದ್ಯಾಪೀಠದ ಅಧ್ಯಾಪಕರು ವಿದ್ಯಾರ್ಥಿಗಳು ಕಿಕ್ಕಿರಿದು ನೆರೆದಿದ್ದರು. ಅನೇಕರು ಹೂವಿನ ಹಾರಗಳನ್ನು ತಂದು ಶಂಭು ಭಟ್ಟರ ಮನೆಯಲ್ಲಿ ಶ್ರೀಪತಿಗೆ ಹಾಕಿ ಸಿಹಿ ಹಂಚಿ ಅಭಿನಂದಿಸುತ್ತಿದ್ದರು. ಬಂದವರಿಗೆಲ್ಲ ಲಘು ಉಪಾಹಾರ ಏರ್ಪಟ್ಟಿತ್ತು. ಈ ಸಂಭ್ರಮದಲ್ಲಿ ಹೆಚ್ಚಿನ ಓಡಾಟ ಕನಕಲತೆ, ಸರ್ವಮಂಗಳೆ ಮತ್ತು ಅವರ ಗೆಳತಿಯರದು ಎಂದು ಬೇರೆ ಹೇಳಬೇಕಾಗಿಲ್ಲವಷ್ಟೆ!

ಅತಿಥಿಗಳ ಅಭಿಮಾನ ಮತ್ತು ವಾತ್ಸಲ್ಯಗಳನ್ನು ಕೃತಜ್ಞತೆಯಿಂದ ನೆನೆದು ಅವರನ್ನು ಅಭಿನಂದಿಸಿದರು ಶಂಭುಭಟ್ಟರು. ಅದೇ ವರ್ಷ ವಿದ್ಯಾಪೀಠದಲ್ಲಿ ಏರ್ಪಡಲಿರುವ ಘಟಿಕೋತ್ಸವದ ನೀತಿಯನ್ನು ಮೊದಲೇ ತಿಳಿದು ಭಟ್ಟರು ತಮ್ಮ ತೀರ್ಥರೂಪರಿಗೆ ಅಕ್ಕ ಭಾವಂದಿರಿಗೆ ಮತ್ತು ದೂರದ ಆಪ್ತರಿಗೆ ಸುದ್ದಿ ತಿಳಿಸಲಾಗಿದ್ದುದರಿಂದ ಅವರೆಲ್ಲ ಸಕಾಲಕ್ಕೆ ವಾರಾಣಸಿಗೆ ಆಗಮಿಸಿದ್ದರು.

ಘಟಿಕೋತ್ಸವದಲ್ಲಿ ಅಗ್ರಾಸನವನ್ನು ಅಲಂಕರಿಸಿದ್ದವರು ವಿದ್ಯಾಪೀಠದ ಕುಲಾಧಿಪತಿಗಳಾದ ಪೂಜ್ಯ ಜಗದ್ಗುರುಗಳವರು. ಅವರು ಶ್ರೀಪತಿಗೆ "ಮಹೋಪಾಧ್ಯಾಯ" ಪ್ರಶಸ್ತಿಯನ್ನು ಸುವರ್ಣ ಪದಕ ಮತ್ತು ಖಿಲ್ಲತ್ತುಗಳೊಂದಿಗೆ ನೀಡಿ ಆಶೀರ್ವದಿಸಿದರು. ಸಭೆಯಲ್ಲಿ ಹರ್ಷೋದ್ಗಾರಗಳು ಕರತಾಡನಗಳು ಮೊಳಗಿದವು.

ಘಟಿಕೋತ್ಸವದ ತರುವಾಯ ಶ್ರೀಪತಿ ತನ್ನ ತಾಯಿ-ತಂದೆ ಮತ್ತು ಅಜ್ಜಿ ತಾತಂದಿರನ್ನೂ ಒಡಗೊಂಡು ಜಗದ್ಗುರುಗಳನ್ನು ಸಂದರ್ಶಿಸಿ ಅವರಿಗೆ ಕೃತಜ್ಞತಾ ಪೂರ್ವಕವಾದ ಪ್ರಣಾಮಗಳನ್ನು ಸಲ್ಲಿಸಿದ. ಜಗದ್ಗುರುಗಳು ಶ್ರೀಪತಿಯ ವಿದ್ಯಾಭ್ಯಾಸಕ್ರಮ, ಆತ ಸಾಧಿಸಿದ ಅಭ್ಯಾಸದ ಆದರ್ಶ ನೀತಿಗಳ ಬಗೆಗೆ ಪ್ರಶಂಸಿಸಿ, ಶ್ರೀಪತಿ ಕೇವಲ ತನ್ನ ಮಾತಾಪಿತರಿಗೆ ಬಂಧು ಬಾಂಧವರಿಗೆ ಮಾತ್ರ [illegible] ಇಡೀ ವಿದ್ಯಾಪೀಠಕ್ಕೇ ಗೌರವ ತಂದಿರುವನೆಂ[illegible]ದು ಅನರ್ಘ್ಯ ವಿದ್ವತ್ ರತ್ನಗಳಲ್ಲಿ ಒಂದೆಂದೂ [illegible] ಕಣ್ಣುಗಳಲ್ಲಿ ಆನಂದ ಬಾಷ್ಪ ತುಳುಕಿದವು. ತಾಯಿ ಭಾಗೀರಥಿ ಇದೆಲ್ಲವೂ ಕನಕದುರ್ಗೆಯ ಪ್ರಸಾದ" ಎಂದು ಭಾವಿ[illegible]ಯಿಗೆ ಭಕ್ತಿ ಪ್ರಣಾಮಗಳನ್ನು ಮಾನಸಿಕವಾಗಿ ಅರ್ಪಿಸಿದಳು.

ಕುಲಪತಿಗಳು ಶ್ರೀಪತಿಯನ್ನು ತಮ್ಮ ಕಾರ್ಯಾಲಯಕ್ಕೆ ಬರಮಾಡಿಕೊಂಡು—

"ವಿದ್ಯಾಪೀಠವು ಇಂದಿನಿಂದಲೇ ವೇದಾಂತ ವಿಭಾಗದಲ್ಲಿ ಶ್ರೀಪತಿ ಯನ್ನು ಅಧ್ಯಾಪಕನನ್ನಾಗಿ ನೇಮಿಸಿರುವ ಆಜ್ಞಾಪತ್ರವನ್ನು ನೀಡಿ ಅಭಿ ನಂದಿಸಿದರು. ಮಾತ್ರವಲ್ಲದೆ ಉಪಕುಲಪತಿಗಳು "ಈ ವರ್ಷದ ಕಡೆಯಲ್ಲಿ ವೇದಾಂತ ಪ್ರಾಧ್ಯಾಪಕ ಶ್ರೀ ಸೂರ್ಯಪ್ರಕಾಶ ಶಾಸ್ತ್ರಿಗಳು ನಿವೃತ್ತರಾಗು ತ್ತಾರೆ. ಆ ಸ್ಥಾನಕ್ಕೆ ನಿಮ್ಮನ್ನು ನೇಮಿಸಲಾಗುತ್ತದೆ." ಎಂದು ಆಶ್ವಾ ಸನೆ ನೀಡಿ ಹಸ್ತಲಾಘವವನ್ನಿತ್ತು ಬೀಳ್ಕೊಟ್ಟರು.

೭

ಮರುದಿವ ಸಂಜೆ ಸ್ವದೇಶಕ್ಕೆ ಮರಳಲಿದ್ದ ಹಿರಿಯರನ್ನು ಉದ್ದೇಶಿಸಿ ಶಂಭು ಭಟ್ಟರು ವಿನಂತಿಸಿದರು—

'ಶ್ರೀಪತಿ ಬೆಜವಾಡದಿಂದ ಉನ್ನತ ವಿದ್ಯಾರ್ಜನೆಗಾಗಿ ನನ್ನೊಡನೆ ಇಲ್ಲಿಗೆ ಬಂದು ಇಂದಿಗೆ ಹನ್ನೆರಡು ವರ್ಷವಾಯಿತು. ಆತ ನಮ್ಮ ಮನೆ ಯಲ್ಲಿ ಆಶ್ರಯ ಪಡೆದು ತನ್ನ ವಿದ್ಯಾರ್ಜನೆಯನ್ನು ಮುಗಿಸಲೆಂದು ಬಯ ಸಿದ್ದೆವು. ಆದರೆ ಶ್ರೀಪತಿ ಅದಕ್ಕೆ ಒಪ್ಪಲಿಲ್ಲ. ಬದಲಾಗಿ ಅವನು ತನ್ನ ಅಭ್ಯಾಸಕ್ಕೆ ಏಕಾಂತ ಸ್ಥಳವು ಆಗತ್ಯವೆಂದು ನಿರ್ಧರಿಸಿ ವಿದ್ಯಾರ್ಥಿ ನಿಲಯ ದಲ್ಲಿ ಆಶ್ರಯ ಪಡೆದು ಎಂಟು ವರ್ಷಗಳ ಕಾಲ ವಿದ್ಯಾ ಪೀಠದ ಪ್ರಾಯಃ ಎಲ್ಲ ಶಾಸ್ತ್ರ ವಿಭಾಗಗಳಲ್ಲಿಯೂ ತಾನು ವಿದ್ಯಾರ್ಜನೆ ಮಾಡಿದ್ದಲ್ಲದೆ ಅನಂತರ ಈಗ್ಗೆ ನಾಲ್ಕು ವರ್ಷಗಳ ಹಿಂದೆ ವಿಶೇಷಾಧ್ಯಯನವನ್ನು ಆರಂಭಿಸಿ ವಿದ್ಯಾಪೀಠದ ಪುಸ್ತಕ ಭಂಡಾರ ಮತ್ತು ಕಾಶ್ಮೀರದ ಪುಸ್ತಕ ಭಂಡಾರಗ ಳಲ್ಲಿದ್ದ ಅಪೂರ್ವವೆನಿಸಿದ ಗ್ರಂಥ ರತ್ನಗಳನ್ನು ಓದಿ ಮುಗಿಸಿದ್ದಾನೆ. ಅಷ್ಟೇ ಅಲ್ಲದೆ ಶ್ರೀಪತಿಯಲ್ಲಿ ಆಕಾರಣ ವಾತ್ಸಲ್ಯವನ್ನು ಇಟ್ಟಿರುವ ಶ್ರೀಗಿರಿಯ ಜಗದ್ಗುರು ದೇಶಿಕೇಂದ್ರರು ಮತ್ತು ಕೇದಾರದ ಜಗದ್ಗುರು ಗಳವರ ಕೃಪೆಗೆ ಪಾತ್ರನಾಗಿ ಅವರಿಂದ ವೀರಶೈವ ಸಿದ್ಧಾಂತ ಪ್ರತಿಪಾದಕ ವಾದ ಅಗಸ್ತ್ಯ ಮಹರ್ಷಿ ಪ್ರಣೀತ 'ಸೂತ್ರ ವೃತ್ತಿ' ಮತ್ತು 'ಅಧಿಕರಣ ಭಾಷ್ಯ' ಗಳನ್ನು ಪಡೆದು ವಿಶೇಷ ಪ್ರಬಂಧವನ್ನು ಬರೆದು ಮುಗಿಸಿ ಈಗ ತಾನೆ 'ಮಹೋಪಾಧ್ಯಾಯ' ಪ್ರಶಸ್ತಿ ಮತ್ತು ವಿದ್ಯಾಪೀಠದಲ್ಲಿ ಅಧ್ಯಾ

ಪಕತ್ವದ ಆಜ್ಞಾಪತ್ರವನ್ನು ಪಡೆದಿರುವುದು ಎಲ್ಲರಿಗೂ ಅವಿತಾನಂದ ವನ್ನುಂಟುಮಾಡಿದೆ.

ಈ ದಿಸೆಯಲ್ಲಿ ಪ್ರತಿಭಾವಂತನಾದ ಮಗನನ್ನು ನನ್ನೊಡನೆ ಕಾಶಿಗೆ ಕಳುಹಿಸಿ ನಮಗೆ ಯಶಸ್ಸನ್ನು ಗಳಿಸಿಕೊಟ್ಟ ನನ್ನ ಅಕ್ಕ–ಭಾವಂದಿರಿಗೆ ನನ್ನ ಹೃತ್ಪೂರ್ವಕ ವಂದನೆಗಳನ್ನು ಸಮರ್ಪಿಸುವುದು ನನ್ನ ಕರ್ತವ್ಯ ಎಂದು ಅವರಿಗೆ ವಂದಿಸಿದ.

ಆರಾಧ್ಯರು "ಅಪ್ಪ, ಈ ಸಂತೋಷಕ್ಕೆ ಕಾರಣನಾದವನು ನೀನು. ನಾವು ನಿನ್ನನ್ನು ಅಭಿನಂದಿಸುವುದಕ್ಕೆ ಬದಲಾಗಿ ನೀನೆ ನಮ್ಮನ್ನು ಅಭಿನಂದಿಸಿದ್ದು ಆಶ್ಚರ್ಯ! ನಿಜವಾಗಿ ಹೇಳಬೇಕೆಂದರೆ ಚಿರಂಜೀವಿಯ ಜೀವನ ಪ್ರಗತಿಯ ಮುಂಬೆಳಗು ನೀನು! ನೀನು ಮತ್ತು ಮಂಚಣ್ಣಗಳು ಅವನನ್ನು ಮುನ್ನಡೆಸಿ ಲೋಕದ ಗೌರವಕ್ಕೆ ಪಾತ್ರನನ್ನಾಗಿ ಕಡೆದು ರೂಪಿಸಿದ ರೂವಾರಿಗಳು! ನೀವು ಮಾಡಿರುವ ಉಪಕಾರವನ್ನು ಮರೆಯಲಾದೀತೆ!" ಎಂದರು ವಾತ್ಸಲ್ಯದಿಂದ.

ಶ್ರೀಪತಿ ಎಲ್ಲ ಹಿರಿಯರಿಗೂ ಸಾಷ್ಟಾಂಗ ಪ್ರಣಾಮ ಮಾಡಿದ. ಮುಂದುವರೆದು ಶಂಭುಭಟ್ಟರು—

"ಭಾವಾ, ನಿಜವಾಗಿ ಹೇಳಬೇಕಾದರೆ ಇದಕ್ಕೆಲ್ಲ ಕಾರಣರು ನಾವಲ್ಲ! ಎಲ್ಲವೂ ಭಗವಾನ್ ವಿಶ್ವೇಶ್ವರನ ಸಂಕಲ್ಪದಂತೆ ನಡೆಯುತ್ತಿರುವಾಗ ಇದಕ್ಕೆ 'ನಾನು ಕಾರಣ, ನೀನು ಕಾರಣ' ಎಂದು ಹೇಳಿಕೊಳ್ಳುವುದು ಕೇವಲ ಅಭಿಮಾನದ ಮಾತು!

ನಮ್ಮ ಮಂಚಣ್ಣ ಮತ್ತು ಕನಕಲತೆಯರು ಸಹ ನಿಮ್ಮ ವಾತ್ಸಲ್ಯದ ಕೂಸುಗಳು. ಅವರ ಶ್ರೇಯಸ್ಸೂ ನಿಮಗೆ ಸೇರಿದ್ದು. ಕನಕಲತೆ ನಿಮ್ಮಲ್ಲಿಗೆ ಬಂದಿದ್ದಾಗ ಅವಳಿಗೆ ಎಂಟು ವರ್ಷ, ಈಗ ಅವಳು ವಿಶ್ವಾರಾಧ್ಯ ಗುರುಕುಲದಲ್ಲಿ ಹತ್ತು ವರ್ಷಗಳ ಅಭ್ಯಾಸ ಮಾಡಿ ಸಾಹಿತ್ಯ ಮತ್ತು ಲಲಿತ ಕಲಾವಿಜ್ಞಾನಗಳಲ್ಲಿ ಗುರುಕುಲಕ್ಕೆ ಮೊದಲನೆಯವಳಾಗಿ ಉತ್ತೀರ್ಣಳಾಗಿದ್ದಾಳೆ. ಅವಳ ಭವಿಷ್ಯವನ್ನು ರೂಪಿಸುವ ಹೊಣೆಯೂ ನಿಮಗೇ

ಸೇರಿದ್ದೆಂದು ಬೇರೆ ಹೇಳಬೇಕಾಗಿಲ್ಲ! ಎಂದು ನುಡಿದ ಭಟ್ಟರು ಕನಕಲತೆಯನ್ನು ಕರೆದು ಹಿರಿಯರಿಗೆಲ್ಲ ವಂದಿಸುವಂತೆ ಹೇಳಿದರು.

ಆದರೆ ಕನಕಾ ನಾಚಿಕೆಯಿಂದ ಭಾಗೀರಥಿಯ ಹಿಂದೆ ನಿಂತು ತಲೆ ತಗ್ಗಿಸಿ ಸೆರಗಿನ ತುದಿಯನ್ನು ಹುರಿಮಾಡುತ್ತಿದ್ದಳು. ಹೊರಗೆ ಬರಲು ಹಿಂದೆಗೆಯುತ್ತಿದ್ದ ಅವಳನ್ನು ಭಾಗೀರಥಿಯು ರಟ್ಟೆ ಹಿಡಿದು ಹೊರಕ್ಕೆ ಎಳೆತಂದು ಮೊದಲು ಜ್ಞಾನ ವಯೋವೃದ್ಧರಾದ ದೇಶಿಕರಿಗೆ ವಂದಿಸುವಂತೆ ಮಾಡಿದಳು. ದೇಶಿಕರೆಂದರು "ಕನಕಾ, ನಿನಗೆ ಹದಿನೆಂಟು ಮೀರಿದ ವಯಸ್ಸು, ಶ್ರೀಪತಿಗೆ ಇಪ್ಪತ್ತೈದು ವರ್ಷ. ಶಾಸ್ತ್ರವು "ಪಂಚವಿಂಶೇ ತತೋ ವರ್ಷೇ ಪುಮಾನ್ನಾರೀ ತು ಷೋಡಶೇ" ಎಂದು ವಿಧಿಸಿದೆ. ನಾವು ಯುಕ್ತ ವಯಸ್ಕರಾದ ನಿಮಗೆ "ಕಲ್ಯಾಣ ಮಸ್ತು" ಎಂದು ಹರಸುತ್ತೇವೆ. ಎಂದರು ಹಸನ್ಮುಖರಾಗಿ.

ಕನಕಾ ದೇಶಿಕರಿಗೆ ವಂದಿಸಿ ಒಳಕ್ಕೆ ಧಾವಿಸುತ್ತಿರುವಾಗ ಶ್ರೀದೇವಿ—

"ಏ ಏನಿದು! ಅಣ್ಣ ಮಾವ ಭಾವ ಮುಂತಾದ ಹಿರಿಯರಿಗೆ ವಂದಿಸದೆ ಹೀಗೆ ಓಡಿ ಬರುವುದೆ?" ಎಂದು ಆಕ್ಷೇಪಿಸಿದಳು.

ಕನಕಾ ಗಂಭೀರವಾಗಿ ಬಂದು ಎಲ್ಲ ಹಿರಿಯರಿಗೂ ವಂದಿಸಿದಳು. ಆರಾಧ್ಯರು ಹೆಂಡತಿಯ ಕಡೆ ತಿರುಗಿ—"ಏನು ಕಾಶಿಗೆ ಬಂದು ಸೊಸೆಯನ್ನು ಗೆದ್ದು ಬಿಟ್ಟೆ"? ಎಂದು ನಗೆಯಾಡಿದರು.

ಭಾಗು ಹೇಳಿದಳು— "ಎಲ್ಲವೂ ಕನಕದುರ್ಗೆಯ ಕೃಪೆ!" ಎಂದು ತಾನೂ ಹಿರಿಯರಿಗೆಲ್ಲ ವಂದಿಸಿದಳು.

ಭಟ್ಟರು ಎದ್ದು ನಿಂತು ಕೈ ಜೋಡಿಸಿ ಕಾಶ್ಮೀರದಲ್ಲಿಯೇ ಶ್ರೀ ಗುರು ದೇವನು ಕನಕೆಯನ್ನು ಕುರಿತು—"ನೀನು ಶ್ರೀಪತಿಯ ಕೈಹಿಡಿದು

"ಲೋಪಾಮುದ್ರಾ ಆಗಸ್ತ್ಯರಂತೆ, ಅರುಂಧತೀ ವಶಿಷ್ಠರಂತೆ ಆದರ್ಶ ದಂಪತಿಗಳಾಗಿ ಲೋಕಕ್ಕೆ ಬೆಳಕಾಗಿರಿ!" ಎಂದು ಹರಸಿದರು" ಎಂದಾಗ ಎಲ್ಲರೂ ಕರತಾಡನ ಮಾಡಿ ಹರ್ಷೋದ್ಗಾರ ಮಾಡಿದರು.

ಸಭೆಯಲ್ಲಿ ಭಾಗವಹಿಸಿದ್ದ ಕುಲ ಬಾಂಧವರು—

"ಹೇಗೂ ಹಿರಿಯರೆಲ್ಲ ನೆರೆದಿದ್ದೀರಿ. ಇದೇ ವೈಶಾಖ ಶುದ್ಧದಲ್ಲಿ ಶುಭ ಲಗ್ನಗಳಿವೆ. ಮದುವೆಯ ಮಂಗಲ ಕಾರ್ಯವನ್ನು ನೆರವೇರಿಸಿ ನೂತನ ವಧೂ–ವರರನ್ನು ಹರಸಿ ಹಿಂದಿರುಗುವುದು ಶ್ರೇಯಸ್ಕರ" ಎಂದು ಸಲಹೆ ಮಾಡಿದರು.

ಎಲ್ಲರ ಹಾರೈಕೆಯಂತೆ ಅದೇ ವೈಶಾಖ ಶು|| ೧೦ ಸೋಮವಾರ ೧೦ ಗಂಟೆಗೆ ಅತ್ರಿ ಗೋತ್ರದ ವೇ|| ಶಂಭು ಭಟ್ಟರ ಪುತ್ರಿ ಚಿ|| ಸೌ|| ಕನಕಲತಾ ಮತ್ತು ಕೌಶಿಕ ಗೋತ್ರದ ವೇ|| ಗುರುಲಿಂಗಾರಾಧ್ಯರ ಪುತ್ರ 'ಮಹೋಪಾಧ್ಯಾಯ' ಶ್ರೀಪತಿ ಪಂಡಿತರ ಲಗ್ನ ನಿಶ್ಚಯವಾಯಿತು.

* * * *

ಶಂಭು ಭಟ್ಟರ ಮನೆಯಲ್ಲಿ ಮಗಳ ವಿವಾಹ ಮಂಗಳ ಮಹೋತ್ಸವವು ಅದ್ಧೂರಿಯಾಗಿ ನಡೆಯಿತು. ಗಂಗೋತ್ರಿಯಿಂದ ಜ|| ದೇಶಿಕೇಂದ್ರರು ಕೇದಾರದ ಜಗದ್ಗುರುಗಳು ಶುಭಾಶೀರ್ವಾದ ಕಳುಹಿಸಿದ್ದರು. ಕಾಶಿಯ ಜಗದ್ಗುರು ಜ್ಞಾನ ಪೀಠಾಧೀಶ್ವರರು ನೂತನ ದಂಪತಿಗಳನ್ನು ಹರಸಿದ್ದರು.

ವಿವಾಹ ಮಂಗಳ ಕಾರ್ಯವನ್ನು ಮುಗಿಸಿಕೊಂಡು ಬಂಧು ಬಾಂಧವರು ಸ್ವಸ್ಥಳಗಳಿಗೆ ಹಿಂದಿರುಗಿದ್ದರು. ಶ್ರೀಪತಿಯ ತಂದೆ-ತಾಯಿ ಅಜ್ಜಿ, ತಾತಂದಿರು ಒಂದುವಾರ ವಾರಾಣಾಸಿಯಲ್ಲಿ ವಾಸ್ತವ್ಯ ಮಾಡಿ, ಬೀಗರಿಂದ ಬೀಳ್ಕೊಂಡು, ನೂತನ ದಂಪತಿಗಳು ಒಮ್ಮೆ ಜನ್ಮ ಸ್ಥಳಕ್ಕೆ ಬಂದು ಹೋಗಲು, ಕರೆಯಿತ್ತು ಹಿಂದಿರುಗಿದರು.

## ೮

ಮೊದಲೇ ನಿರ್ಧಾರವಾಗಿದ್ದಂತೆ ಶಿಕ್ಷಣ ವರ್ಷವು ಪ್ರಾರಂಭವಾದೊಡನೆಯೇ ಶ್ರೀಪತಿ ವಿದ್ಯಾಪೀಠದ ವೇದಾಂತ ವಿಭಾಗದ ಅಧ್ಯಾಪಕನಾಗಿ ನೇಮಿತನಾಗಿದ್ದ.

ಶ್ರೀಪತಿಯ ಪ್ರಭಾವ ವಿದ್ಯಾಪೀಠದಲ್ಲಿ ದಿನೇ ದಿನೇ ಬೆಳೆಯತೊಡಗಿತ್ತು. ತರಗತಿಯಲ್ಲಿ ಶ್ರೀಪತಿ ಪಂಡಿತರು ವಿಚಾರ ಪರಿಪ್ಲುತವಾದ ವಿಷಯಗಳನ್ನು ಮನಂಬುಗುವಂತೆ ವಿದ್ಯಾರ್ಥಿಗಳಿಗೆ ಬೋಧಿಸುತ್ತಿದ್ದುದ

ರಿಂದ ಪ್ರಭಾವಶಾಲಿಗಳಾದ ವಿದ್ಯಾರ್ಥಿಗಳು ವೇದಾಂತ ದರ್ಶನ ತರಗತಿಗೆ ಹೆಚ್ಚು ಹೆಚ್ಚಾಗಿ ಸೇರತೊಡಗಿದ್ದರು.

ಸೂರ್ಯಪ್ರಕಾಶ ಶಾಸ್ತ್ರಿಗಳು ತಮಗೆ ಸಹೋಪಾಧ್ಯಾಯನಾಗಿ ಬಂದಿದ್ದ ಶ್ರೀಪತಿಯನ್ನು ಆಗಾಗ್ಗೆ ಬಳವಮಾಡಿಕೊಂಡು ಅನೇಕ ಶಾಸ್ತ್ರ ರಹಸ್ಯಗಳನ್ನು ಬೋಧಿಸುತ್ತಿದ್ದರು. ನಿವೃತ್ತರಾಗಲಿದ್ದ ಶಾಸ್ತ್ರಿಗಳು ತಾವು ಸಂಗ್ರಹಿಸಿದ್ದ ಅಪೂರ್ವಗ್ರಂಥರತ್ನಗಳನ್ನು ನೆಚ್ಚಿನ ಶಿಷ್ಯನಿಗೆ ನೀಡಿ ಹರಸಿದ್ದರು. ಅದು ಸೂರ್ಯ ಮುಳುಗುವಾಗ ತನ್ನ ತೇಜಸ್ಸನ್ನು ತೇಜೋಮಯ ವಸ್ತುಗಳಲ್ಲಿ ನಿಕ್ಷೇಪಿಸಿದಂತಿತ್ತು.

ವಿದ್ಯಾಪೀಠದಿಂದ ನಿವೃತ್ತರಾದ ಶಾಸ್ತ್ರಿಗಳನ್ನು ಬೀಳ್ಕೊಡುವ ಸಮಾರಂಭದಲ್ಲಿ ಅವರು—

"ತಮ್ಮ ನೆಚ್ಚಿನ ಶಿಷ್ಯನೊಬ್ಬ ತನಗೆ ಉತ್ತರಾಧಿಕಾರಿಯಾಗಿ ಬಂದಿರುವುದು ನನಗೆ ಅತ್ಯಂತ ಸಂತೋಷವನ್ನು ಸಂತೃಪ್ತಿಯನ್ನು ಉಂಟುಮಾಡಿದೆ. ಶ್ರೀಪತಿಯ ಅಧ್ಯಾಪಕತ್ವದಲ್ಲಿ ವೇದಾಂತ ದರ್ಶನವು ಇತೋಪ್ಯತಿಶಯುವಾಗಿ ಬೆಳೆದು ಬೆಳಗಲಿ !" ಎಂದು ಹಾರೈಸಿದರು.

ವಿದ್ಯಾಪೀಠದ ವಿದ್ವತ್ ಸಂಘದ ಕಾರ್ಯಕರ್ತರು ಶ್ರೀಪತಿಯನ್ನು ಸಂಧಿಸಿ 'ಇದುವರೆಗೆ ವಿದ್ವತ್ ಸಂಘದ ಅಧ್ಯಕ್ಷರಾಗಿದ್ದ ಸೂರ್ಯಪ್ರಕಾಶ ಶಾಸ್ತ್ರಿಗಳು ನಿವೃತ್ತರಾಗಿರುವುದರಿಂದ ಇಂದು ಅವರ ಸ್ಥಾನದಲ್ಲಿ ಪ್ರಾಧ್ಯಾಪಕರಾಗಿರುವ ಶ್ರೀಪತಿ ಪಂಡಿತರೇ ಇನ್ನು ಮುಂದೆ ವಿದ್ವತ್ ಸಂಘದ ಅಧ್ಯಕ್ಷರಾಗಿರಬೇಕೆಂದು ವಿನಂತಿಸಿದ್ದರು. ಆದರೆ ಶ್ರೀಪತಿಯು ಆದಕ್ಕೆ ಒಪ್ಪದೆ ವಿದ್ಯಾಪೀಠದಲ್ಲಿ ಶಾಸ್ತ್ರಾನುಭವ ಬಲ್ಲಿದರಾದ ಹಿರಿಯರೊಬ್ಬರನ್ನು ಆ ಸ್ಥಾನಕ್ಕೆ ಆರಿಸಬೇಕೆಂದು ವಿನಂತಿಸಿದ್ದ. ಆದರೆ ಕಾರ್ಯಕರ್ತರು ಅವರ ವಿನಂತಿಗೆ ಕಿವಿಗೊಡದೆ ಎಲ್ಲ ವಿದ್ವಾಂಸರ ಅಪೇಕ್ಷೆಯಂತೆ ಶ್ರೀಪತಿಯನ್ನೇ ಸಂಘದ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿದ್ದರು.

ವಿದ್ವತ್ ಸಂಘವು ವಿದ್ಯಾಪೀಠದಲ್ಲಿ ತುಂಬಾ ಪ್ರಭಾವ ಶಾಲಿಯಾಗಿ ಜಾಗತಿಕ ಸಂಘವೆನಿಸಿತ್ತು. ಪ್ರತಿ ಅನಧ್ಯಯನ ಕಾಲದಲ್ಲಿ ವಿದ್ಯಾರ್ಥಿಗಳಿಂದ ಚರ್ಚಾಗೋಷ್ಠಿ, ನಾಟಕವಾಚನ, ಅಭಿನಯ, ಪ್ರಬಂಧ ರಚನೆ,

ಅಂತ್ಯಾಕ್ಷರಿ ಮುಂತಾದ ಸ್ಪರ್ಧೆಯ ಕಾರ್ಯಕ್ರಮಗಳನ್ನು ಏರ್ಪಡಿಸಿ ವಿದ್ಯಾರ್ಥಿಗಳ ಸರ್ವತೋಮುಖ ಪ್ರಗತಿಗೆ ಮಾರ್ಗದರ್ಶನ ಮಾಡುತ್ತಿತ್ತು. ಸ್ಥಳ ಮತ್ತು ಪರಸ್ಥಳಗಳಿಂದ ವಿದ್ಯಾಪೀಠಕ್ಕೆ ಉದ್ದಾಮಪಂಡಿತರನ್ನು ಅನುಭಾವಿಗಳನ್ನು ಬರಮಾಡಿಕೊಂಡು ವಿವಿಧ ಕಾರ್ಯಕ್ರಮ ಏರ್ಪಡಿಸಿ ಅವರನ್ನು ಗೌರವಿಸುವುದು ವಿದ್ವತ್‌ಸಂಘದ ಹೊಣೆಗಾರಿಕೆಯಲ್ಲಿ ಸೇರ್ಪಡೆಯಾಗಿತ್ತು.

೧೮

# ಅಭಿನಂದನ ಅನುತಾಪ

## ೧

ಆಚಾರ್ಯ ರಾಮಾನುಜರು ಭಾರತದ ಸುಪ್ರಸಿದ್ಧ ಮತಾಚಾರ್ಯರಲ್ಲಿ ಒಬ್ಬರು. ಅವರು ತಮ್ಮ ಇಳಿವಯಸ್ಸಿನಲ್ಲಿಯೂ ಕಾಶ್ಮೀರ ಯಾತ್ರೆಯನ್ನು ಕೈಗೊಂಡಿದ್ದರು. ಕಾಶ್ಮೀರದಲ್ಲಿ ಅವರು ಕೆಲವು ದಿನವಿದ್ದು ಅಲ್ಲಿಂದ ಹಿಂದಿರುಗಿ ಬರುವಾಗ್ಗೆ ಕಾಶಿಯ ಮಹಾನಗರ ಪಾಲಿಕೆಗೆ ಭೇಟಿ ಕೊಡುವರೆಂಬ ಸುದ್ದಿ ಎಲ್ಲೆಡೆ ಹರಡಿತ್ತು.

ಆಚಾರ್ಯರು ಕಾಶಿಗೆ ಆಗಮಿಸಿದಾಗ ಅವರನ್ನು ಮಹಾವಿದ್ಯಾಪೀಠಕ್ಕೆ ಬರಮಾಡಿಕೊಂಡು ಉಚಿತರೀತಿಯಲ್ಲಿ ಸತ್ಕರಿಸಬೇಕೆಂದು ಕೆಲವರು ವಿದ್ವಾಂಸರು ವಿದ್ವತ್‌ಸಂಘದ ಅಧ್ಯಕ್ಷರಿಗೆ ಸೂಚನೆ ಕಳಿಸಿದ್ದರು. ಈ ದಿಸೆಯಲ್ಲಿ ಸಂಘದ ಅಧ್ಯಕ್ಷರು ಕುಲಪತಿಗಳ ಅಧ್ಯಕ್ಷತೆಯಲ್ಲಿ ಎಲ್ಲ ವಿದ್ವಾಂಸರ ಮತ್ತು ವಿದ್ಯಾರ್ಥಿ ಮುಖಂಡರ ಸಭೆಯನ್ನು ಕರೆದರು. ಮಹಾವಿದ್ಯಾಪೀಠದ ಸಭಾಂಗಣದಲ್ಲಿ ನೆರೆದಿದ್ದ ಸಭೆಯಲ್ಲಿ ಕುಲಪತಿ ಸಭೆ ಕರೆದ ಉದ್ದೇಶವನ್ನು ಸ್ಪಷ್ಟಪಡಿಸಿ ಸೂಕ್ತ ಸಲಹೆ ನೀಡಲು ವಿನಂತಿಸಿದರು.

ಸಭೆಯ ಪ್ರಾರಂಭದಲ್ಲಿ ವಿದ್ಯಾರ್ಥಿ ಮುಖಂಡ ಸದಾಶಿವ ಎದ್ದು ನಿಂತು

"ಸ್ವಾಮಿ, ಆಚಾರ್ಯ ರಾಮಾನುಜರು ಕಾಶಿಗೆ ಆಗಮಿಸಿದಾಗ ಅವರನ್ನು ಪ್ರತಿಭಟಿಸಬೇಕು" ಎಂದು ನಗರದ ಜೈನ ಶೈವ ಬೌದ್ಧ ಸಮಾಜಗಳ ಪ್ರಮುಖರು ಕರಪತ್ರಗಳನ್ನು ಹಂಚುತ್ತಿದ್ದಾರೆ " ಎಂದು ಹೇಳುತ್ತಿದ್ದಂತೆ ಸಭಾಧ್ಯಕ್ಷರು " ಈ ಪ್ರತಿಭಟನೆಗೆ ಕಾರಣವೇನು? ಎಂದು ಕೇಳಿದರು.

"ಸ್ವಾಮಿ, ಆಚಾರ್ಯ ರಾಮಾನುಜರು ಸುಪ್ರಸಿದ್ಧ ಶೈವಕ್ಷೇತ್ರ ವೆನಿಸಿದ ತಿರುಪತಿಯನ್ನು ವೈಷ್ಣವಕ್ಷೇತ್ರವನ್ನಾಗಿ ಪರಿವರ್ತಿಸಿದ್ದಾರೆ. ಆದರಿಂದ ಅವರ ಬಗೆಗೆ ಇಡಿಯ ಭಾರತವರ್ಷದಲ್ಲಿ ತುಂಬಾ ಅಸಮಾಧಾನ ವು ಏರ್ಪಟ್ಟಿದೆ. ಈ ಕಾರಣದಿಂದ ಕಂಚಿಯ ಸಾರ್ವಭೌಮ ಚೋಳರಾಜನ ಅವಕೃಪೆಗೆ ಪಾತ್ರರಾದ ಅವರು ತಮಿಳು ನಾಡನ್ನು ಬಿಟ್ಟು ತಲೆಮರೆಸಿ ಕೊಂಡು ಕರ್ನಾಟಕಕ್ಕೆ ಬಂದಿದ್ದಾರಂತೆ! ಆದ್ದರಿಂದ ಇಂಥ ವಿವಾದಕ್ಕೆ ಕಾರಣರಾದವರು ಎಷ್ಟೇ ದೊಡ್ಡವರಾಗಿದ್ದರೂ ಅವರನ್ನು ಪ್ರಶಾಂತ ವಾಗಿರುವ ನಮ್ಮ ವಿದ್ಯಾಪೀಠಕ್ಕೆ ಕರೆಸುವುದು ಸರಿಯಲ್ಲವೆಂದು ನನ್ನ ಅಭಿಪ್ರಾಯ!" ಎಂದು ತನ್ನ ಮಾತು ಮುಗಿಸಿದ.

ಅನಂತರ ಜೈನ ಶಾಸ್ತ್ರಪ್ರಾಧ್ಯಾಪಕ "ನಿರ್ಗ್ರಂಥಿ ಪಂಡಿತರು ಮೇಲೆದ್ದು - "ಸ್ವಾಮಿ, ಆಚಾರ್ಯರಾಮಾನುಜರು ಕರ್ನಾಟಕಕ್ಕೆ ಬಂದ ಮೇಲೆ ಅಲ್ಲಿ ತೊಂಡನೂರಿನ ರಾಜ ಬಿಟ್ಟಿದೇವನ ಮೇಲೆ ಪ್ರಭಾವ ಬೀರಿ ಆತನಿಗೆ ಶ್ರೀವೈಷ್ಣವ ದೀಕ್ಷೆಕೊಟ್ಟು "ವಿಷ್ಣುವರ್ಧನ" ಎಂದು ಹೆಸರಿಟ್ಟಿ ದ್ದಾರಂತೆ.!"

ಎಂದು ಹೇಳುತ್ತಿದ್ದಂತೆ ಮಧ್ಯೆ ಬಾಯಿಹಾಕಿ ಚಾರ್ವಾಕ ದರ್ಶನದ ವಿಜ್ಞಾನ ಸಿದ್ಧರು —"ಸ್ವಾಮಿ, ಇದೇ ಕಾರಣಕ್ಕಾಗಿ ಅವರು ಧರ್ಮಪತ್ನಿ ಯಿಂದಲೂ ವಿರಸ ಹೊಂದಿ ಅವಳನ್ನು ತ್ಯಜಿಸಿ ಸಂನ್ಯಾಸ ಸ್ವೀಕರಿಸಿದ್ದಾ ರಂತೆ!" ಎಂದರು.

"ಅಷ್ಟೇ ಅಲ್ಲದೆ ಮಂತ್ರ ತಂತ್ರಶಾಸ್ತ್ರ ನಿಪುಣರಾದ ಅವರು ಗ್ರಹ ಚೇಷ್ಟೆಯಿಂದ ನರಳುತ್ತಿದ್ದ ರಾಜಕುಮಾರಿಯ ಮಾನಸಿಕ ಕಾಹಿಲೆಯನ್ನು ವಾಸಿಮಾಡಿದ್ದರಿಂದ ಅವರು ರಾಜಸತ್ತೆಯ ಬಲದಿಂದ ಅನೇಕ ಜೈನ ಬಸದಿ ಗಳನ್ನು ವೈಷ್ಣವಾಲಯಗಳನ್ನಾಗಿ ಪರಿವರ್ತಿಸುತ್ತಿದ್ದಾರಂತೆ! ಆ ರಾಜನ ಕಿರುಕುಳ ಸಹಿಸಲಾರದೆ ಅನೇಕ ಜೈನರು ಮತ್ತು ಶೈವರು ಆನಾಡನ್ನೇ ತ್ಯಜಿಸುತ್ತಿದ್ದಾರಂತೆ!

ಈ ಕಾರಣದಿಂದ ಪ್ರಶಾಂತವಾದ ನಮ್ಮ ವಿದ್ಯಾಪೀಠಕ್ಕೆ ಅವರನ್ನು ಕರೆಸುವುದು ಸೂಕ್ತವೆನಿಸುವುದಿಲ್ಲ ಎಂದುವಿನಂತಿಸುತ್ತೇನೆ" ಎಂದರು.

ಬೌದ್ಧ ಧರ್ಮದ " ಶಾಂತಭಿಕ್ಷು " ಪಂಡಿತರು ಸಹ ಜೈನ ಪಂಡಿತರನ್ನು ಬೆಂಬಲಿಸಿ ಮಾತನಾಡಿದರು.

ಕಡೆಯಲ್ಲಿ ಸಭಾಧ್ಯಕ್ಷರು—" ವಿದ್ವತ್ ಸಂಘದ ಅಧ್ಯಕ್ಷ ಶ್ರೀಪತಿಯವರು ತಮ್ಮ ಅಭಿಪ್ರಾಯವನ್ನು ಸೂಚಿಸಬೇಕು " ಎಂದರು.

ಶ್ರೀಪತಿಯು ಎಲ್ಲರಿಗೂ ವಂದಿಸಿ—" ಸ್ವಾಮಿ, ಆಚಾರ್ಯ ರಾಮಾನುಜರಿಗೆ ಎಷ್ಟೇ ಪ್ರತಿಭಟನೆಗಳಿದ್ದರೂ ಅವರಿಗೆ ಪದ್ಧತಿಯಂತೆ ಪೌರಸನ್ಮಾನವು ಏರ್ಪಟ್ಟಿದೆ. ಹೊಸದಾಗಿ ಒಂದು ಸಿದ್ಧಾಂತವು ಬಂದಾಗ ಅದು ಇತರ ಮತೀಯರ ಮೇಲೆ ವಿರುದ್ಧ ಪರಿಣಾಮವನ್ನು ಉಂಟು ಮಾಡುತ್ತದೆ. ಆಗ ಘರ್ಷಣೆ ಸ್ವಾಭಾವಿಕ. ಆದರೆ ವಿದ್ಯಾಪೀಠವು ಎಲ್ಲ ಮತಾಚಾರ್ಯರಿಗೂ ಸತ್ಕಾರಮಾಡಿರುವ ವಿಚಾರಗಳು ವಿದ್ಯಾಪೀಠದ ವರದಿಗಳಲ್ಲಿವೆ. ಎಲ್ಲ ಮತಾಚಾರ್ಯರ ದರ್ಶನಗಳನ್ನು ನಾವು ಇಲ್ಲಿ ಪಾಠ ಮಾಡುತ್ತಿದ್ದೇವೆ. ವಿದ್ಯಾಪೀಠವು ಜ್ಞಾನಭಾರತಿ ಶಾರದೆಯ ಪವಿತ್ರ ಮಹಾಮಂದಿರ. ಇಲ್ಲಿ ನಾವು ಜ್ಞಾನಸುಧೆಯನ್ನು ಅವರಿವರೆನ್ನದೆ ಎಲ್ಲರಿಗೂ ನೀಡುತ್ತಿದ್ದೇವೆ. ಯಾವುದೇ ವಿಭೂತಿಮತ್ ಸತ್ತ್ವದಿಂದ ಚಿಮ್ಮಿ ಬರುವ ಹೊಸ ಹೊಸ ಬೆಳಕನ್ನು ನಾವು ತಡೆಯುತ್ತಿಲ್ಲ. ತಡೆದಿಲ್ಲ ! ಅಂದಮೇಲೆ ಅವರಿಗೆ ಹೊಳೆದಿರುವ ನೂತನ ಸಿದ್ಧಾಂತವನ್ನು ಒಳಗೊಂಡಿರುವ ವಿಶಿಷ್ಟಾದ್ವೈತಪರವಾದ ಶ್ರೀಭಾಷ್ಯವು ನಾಳೆ ಪಠ್ಯವಾಗಿ ವಿದ್ಯಾಪೀಠದಲ್ಲಿ ನಿಯುಕ್ತವಾದರೆ ನಾವು ಅದನ್ನು ಪರಿಗ್ರಹಿಸದಿರಲು ಸಾಧ್ಯವೆ ?

ಈ ಸಂದರ್ಭದಲ್ಲಿ ವಿದ್ವಾಂಸರಲ್ಲಿ ಬಳಕೆಯಲ್ಲಿರುವ ಒಂದು ಸುಭಾಷಿತವನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ.

ಗುಣದೋಷೌ ಬುಧೋ ಗೃಹ್ಣನ್ ಇಂದುಕ್ಷ್ವೇಡಾವಿವೇಶ್ವರಃ ।
ಶಿರಸಾ ಶ್ಲಾಘತೇ ಪೂರ್ವಂ ಪರಂ ಕಂಠೇ ನಿಯಚ್ಛತಿ ॥

ಆ ಸುಭಾಷಿತಕಾರನು ಸಹೃದಯನಾದ ವಿದ್ವಾಂಸನನ್ನು ಪರಶಿವನಿಗೆ ಹೋಲಿಸಿದ್ದಾನೆ—ಪರಮೇಶ್ವರನು ಗುಣ ಮತ್ತು ದೋಷಗಳಿಗೆ ಪ್ರತೀಕವಾದ ಚಂದ್ರ ಮತ್ತು ಕಾಳಕೂಟ ವಿಷಗಳೆರಡನ್ನೂ ಸ್ವೀಕರಿಸಿದ. ಅವೆರಡರಲ್ಲಿ ಗುಣಶಾಲಿಯಾದ ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿ ಅವನ ಪ್ರಕಾಶ

ವನ್ನು ಎಲ್ಲೆಡೆಗೂ ಹಬ್ಬಿಸಿದ. ಅನಂತರ ವಿಷವನ್ನೂ ಸ್ವೀಕರಿಸಿ ಅದನ್ನು ನ್ನ ಕಂಠದಲ್ಲಿ ಅಡಸಿಗಿಟ್ಟ.

ಅದರಂತೆ ಬುಧರೆನಿಸಿದ ಸಹೃದಯ ವಿದ್ವಾಂಸರು ಪರರ ಗುಣ ಮತ್ತು ದೋಷಗಳೆರಡನ್ನೂ ಸ್ವೀಕರಿಸಬೇಕು. ಪರರ ಗುಣವನ್ನು ಶಿರಸ್ಸಿನಲ್ಲಿ ಧರಿಸಿ ಶ್ಲಾಘಿಸಬೇಕು. ದೋಷವನ್ನು ಕಂಠದಲ್ಲಿ ಅಡಗಿಸಬೇಕೇ ಹೊರತು ಅದನ್ನು ಹೊರಗೆಡಹಬಾರದು ಎಂದು.

ಎರಡನೆಯದಾಗಿ ಶ್ರೀ ರಾಮಾನುಜರ ಪ್ರೇರಣೆಯಿಂದ ಕಟ್ಟಿಸಿರುವ ಬೇಲೂರಿನ ಚನ್ನಕೇಶವ ದೇವಾಲಯದ ದ್ವಾರದಲ್ಲಿ ಜೈನರಿಗೂ ಶ್ರೀ ವೈಷ್ಣವರಿಗೂ ನಡೆದ ಒಂದು ಜಾತಿ ವಿವಾದದ ಸಂದರ್ಭದಲ್ಲಿ ಹೊರಡಿಸಿದ ರಾಜಾಜ್ಞೆಯೊಂದು ಈ ರೀತಿ ಇದೆ ಎಂದು ಕೇಳಿದ್ದೇನೆ.

ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನಃ
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ ||
ಅರ್ಹಂಶ್ಚೇತಿ ಜೈನಶಾಸನಪರಾಃ ಕರ್ಮೇತಿ ಮೀಮಾಂಸಕಾಃ
ಸೋಽಯಂ ನೋ ವಿದಧಾತು ವಾಂಛಿತಫಲಂ ಶ್ರೀ ಕೇಶವಃ ಸರ್ವದಾ||

ಎಂದಾಗ ಸಭೆ ಮಂತ್ರಮುಗ್ಧವಾಗಿತ್ತು. ಅಧ್ಯಕ್ಷರು ತಲೆದೂಗಿ ಹೇಳಿದರು. "ಶ್ರೀಪತಿ ಪಂಡಿತರ ವಿಚಾರಧಾರೆ ಸರ್ವಸಮ್ಮತವಾಗಿದೆ. ನಾವು ಶ್ರೀಮದಾಚಾರ್ಯರನ್ನು ಗೌರವದಿಂದ ಬರಮಾಡಿಕೊಂಡು ಸತ್ಕರಿಸುವಲ್ಲಿ ಎಲ್ಲರ ಸಮ್ಮತಿ ಇದೆ. ಎಂದು ಭಾವಿಸುತ್ತೇನೆ. "ಎಂದು ಹೇಳಿ ಸಭೆಯನ್ನು ಮುಕ್ತಾಯಗೊಳಿಸಿದರು.

* * * *

ಆಚಾರ್ಯ ರಾಮಾನುಜರು ಕಾಶೀ ಮಹಾಕ್ಷೇತ್ರಕ್ಕೆ ಆಗಮಿಸಿದರು. ಅವರನ್ನು ನಗರಪಾಲಿಕೆ ಮಹಾವೈಭವದಿಂದ ಸ್ವಾಗತಿಸಿ ಸನ್ಮಾನಿಸಿತು. ಭಗವತ್ಪಾದರಿಗೆ ವಿಶ್ವೇಶ್ವರಾಲಯದ ಅತಿಥಿ ಗೃಹದಲ್ಲಿ ಬಿಡಾರವು ಏರ್ಪಟ್ಟಿತ್ತು.

ಆಚಾರ್ಯರ ಪರಿವಾರದಲ್ಲಿ ಮುಖ್ಯರಾದವರು ಶ್ರೀವತ್ಸಾಂಕರು. "ಕೂರೇಶ" ಎಂದು ಪ್ರಸಿದ್ಧರಾದ ಅವರು ಶ್ರೀಮದಾಚಾರ್ಯರ ಮುಖ್ಯ ಶಿಷ್ಯರು. ಅವರು ಗುರುಮುಖದಿಂದ ತಾವು ಕೇಳಿದ ಶ್ರೀಭಾಷ್ಯದ ಮುಖ್ಯ ಪ್ರಮೇಯಗಳನ್ನು ಸಂಕಲಿಸಿ ಅದನ್ನು "ಶ್ರುತಪ್ರಕಾಶ" ಎಂದು ಪ್ರಸಿದ್ಧ ಪಡಿಸಿದ್ದರು.

ಶ್ರೀಪತಿಯು ಕೂರೇಶರನ್ನು ಭೇಟಿಮಾಡಿ "ಶ್ರೀಮದಾಚಾರ್ಯರನ್ನು ಮಹಾ ವಿದ್ಯಾಪೀಠಕ್ಕೆ ಬರಮಾಡಿಕೊಂಡು ಸತ್ಕರಿಸಬೇಕು "ಎಂದು ವಿನಂತಿಸಿದ. ಕೂರೇಶರು ಇದನ್ನು ಸಂತೋಷದಿಂದ ಅಂಗೀಕರಿಸಿದರು.

ಮಹಾ ವಿದ್ಯಾಪೀಠದ ಸಭಾಭವನದಲ್ಲಿ ವಿದ್ವತ್ ಸಂಘದ ಆಶ್ರಯದಲ್ಲಿ ಕಾರ್ಯಕ್ರಮವು ಏರ್ಪಟ್ಟಿತ್ತು. ಕುಲಪತಿಗಳು ಅಧ್ಯಕ್ಷತೆ ವಹಿಸಿದ್ದರು. ವಿದ್ಯಾಪೀಠದ ಪ್ರಾಧ್ಯಾಪಕರು ವಿದ್ಯಾರ್ಥಿಗಳು ಮತ್ತು ನಗರ ನಿವಾಸಿಗಳು ಆಗಮಿಸಿದ್ದರು. ಶ್ರೀಮದಾಚಾರ್ಯರನ್ನು ಪೂರ್ಣಕುಂಭ ಗೌರವದೊಡನೆ ವೇದಘೋಷ ಪೂರ್ವಕವಾಗಿ ಬರಮಾಡಿಕೊಳ್ಳಲಾಯಿತು. ಕುಲಪತಿಗಳು ಸ್ವಾಗತ ಬಯಸಿದರು.

ಕೂರೇಶರು ಪ್ರಾರಂಭದಲ್ಲಿ "ಶ್ರೀಮದಾಚಾರ್ಯರು ಕಾಶ್ಮೀರಯಾತ್ರೆ ಕೈಗೊಂಡುದರ ಉದ್ದೇಶವನ್ನು ವಿವರಿಸಿ, ಅವರು ಬ್ರಹ್ಮಸೂತ್ರಗಳ ಮೇಲೆ ತಾವು ವಿಶಿಷ್ಟಾದ್ವೈತ ಪರವಾಗಿ ಬರೆಯುತ್ತಿರುವ ಭಾಷ್ಯಕ್ಕೆ ತಕ್ಕ ಆಧಾರಗಳನ್ನು ಸಂಗ್ರಹಿಸುವುದಕ್ಕಾಗಿ ಕಾಶ್ಮೀರಕ್ಕೆ ತೆರಳಿ ಸಫಲರಾಗಿದ್ದಾರೆ" ಎಂದಾಗ ಸಭೆ ಕರತಾಡನ ಮಾಡಿತು.

ಮುಂದುವರೆದು ಕೂರೇಶರು "ಅಲ್ಲಿಂದ ಹಿಂದಿರುಗಿ ಬರುವಾಗ ವಾರಾಣಸಿಯ ಈ ವಿದ್ಯಾನಿಕೇತನದಲ್ಲಿ ತಮ್ಮೆಲ್ಲರನ್ನು ಸಂಧಿಸುವ ಅವಕಾಶವು ದೊರಕಿರುವುದಕ್ಕಾಗಿ ಆಚಾರ್ಯರು ತುಂಬಾ ಸಂತೃಪ್ತರಾಗಿದ್ದಾರೆ" ಎಂದು ಪರಿಚಯಿಸಿದರು.

ವಿದ್ಯಾಪೀಠದ ಅನೇಕ ಪಂಡಿತರು ಆಚಾರ್ಯರ ಶಾಸ್ತ್ರ ಪ್ರೌಢಿಮೆ, ಭಕ್ತಿಪಾರವಶ್ಯ, ಪತಿತಪಾವನತ್ವ ಮತ್ತು ಭೂತಕಾರುಣ್ಯಗಳನ್ನು ಕೊಂಡಾಡಿದರು.

ಕುಲಪತಿಗಳು ಅನರ್ಘ್ಯವಾದ ಉಡುಗೊರೆಯನ್ನು ಫಲಪುಷ್ಪಗಳೊಂದಿಗೆ ಆಚಾರ್ಯರಿಗೆ ಸಮರ್ಪಿಸಿದರು. ಮಹಾಸಭೆ ಕರತಾಡನದೊಡನೆ ಜಯಕಾರ ಮಾಡಿತು.

ಕಡೆಯಲ್ಲಿ ಆಚಾರ್ಯರು—

"ಕುಲಪತಿಗಳೆ, ವಿದ್ವಾಂಸರೆ, ನನ್ನ ಜೀವನಯಾತ್ರೆಯಲ್ಲಿ ಇದೊಂದು ಮಹಾಸುದಿನ. ಈ ಮಹಾವಿದ್ಯಾಪೀಠವೊಂದು 'ಪವಿತ್ರ ಜ್ಞಾನ ತೀರ್ಥ' ವೆಂದು ಭಾವಿಸುತ್ತೇನೆ. ನಮ್ಮ ನೆಚ್ಚಿನ ಕೂರೇಶರು ಸೂಚಿಸಿರುವಂತೆ ನಾವು ಬರೆಯುತ್ತಿರುವ ಬ್ರಹ್ಮಸೂತ್ರ ಭಾಷ್ಯಕ್ಕೆ ಆಧಾರವಾದ ಬೋಧಾಯನ ವೃತ್ತಿಯು ನಮ್ಮ ಭಾಗದಲ್ಲೆಲ್ಲಿಯೂ ದೊರೆಯಲಿಲ್ಲ. ಅದು ಕಾಶ್ಮೀರದ ಪುಸ್ತಕ ಭಂಡಾರದಲ್ಲಿರುವುದಾಗಿ ಕೇಳಿ ಈ ಇಳಿವಯಸ್ಸಿನಲ್ಲಿಯೂ ಕಾಶ್ಮೀರಯಾತ್ರೆ ಕೈಗೊಳ್ಳುವುದು ಅನಿವಾರ್ಯವಾಯಿತು. ಈಗ ಸುಮಾರು ಒಂದು ತಿಂಗಳ ಕಾಲ ಅಲ್ಲಿದ್ದು ಅದನ್ನು ಪ್ರತಿಮಾಡಿಸಿಕೊಂಡು ತಂದಿದ್ದೇವೆ. ಭಾಷ್ಯದ ಅನೇಕ ಪ್ರಮೇಯಗಳು ಈಗಾಗಲೇ ಶ್ರುತ ಪ್ರಕಾಶದ ಮೂಲಕ ತಮಗೆ ವೇದ್ಯವೇ ಆಗಿದೆ. ಪ್ರಕೃತ ದೊರೆತಿರುವ ವೃತ್ತಿಯ ನೆರವಿನಿಂದ ಶ್ರೀಭಾಷ್ಯವು ಪೂರ್ಣವಾಗಿ ಪ್ರಕಟವಾಗುತ್ತದೆ. ಸಹೃದಯರಾದ ತಾವು ಅದನ್ನು ಪರಿಶೀಲಿಸಿ ನನ್ನ ಶ್ರಮವನ್ನು ಸಾರ್ಥಕಪಡಿಸಬೇಕು ಎಂದು ಆಶಿಸುತ್ತೇನೆ." ಎಂದರು.

ಸಂಘದ ಅಧ್ಯಕ್ಷ ಶ್ರೀಪತಿಯು ವಂದನಾರ್ಪಣೆ ಮಾಡಿದ. ಮಹಾವಿದ್ಯಾಪೀಠವನ್ನು ಬೀಳ್ಕೊಡುವಾಗ ಕೂರೇಶರು "ಒಮ್ಮೆ ಸಪರಿವಾರವಾಗಿ ತಿರುಪತಿ ಕ್ಷೇತ್ರಕ್ಕೆ ಆಗಮಿಸಬೇಕು" ಎಂದು ಕರೆ ನೀಡಿದರು.

೨

# ತಿರುಪತಿ ಕ್ಷೇತ್ರಯಾತ್ರೆ

ಈಗ ಕನಕಾ ಮೂರು ತಿಂಗಳ ಗರ್ಭಿಣಿ, ಅವಳ ಮನಸ್ಸಿನಲ್ಲಿ ಬಗೆ ಬಗೆಯ ಬಯಕೆಗಳು ಮೂಡುವುದು ಸಹಜ. ಅವುಗಳಲ್ಲಿ ತೀರ್ಥಯಾತ್ರೆ ಮಾಡಿ ಬರಬೇಕೆಂಬುದೂ ಒಂದು. 'ಕಾಕತಾಳೀಯ' ವೆಂಬಂತೆ ಅದೇ ವೇಳೆಗೆ ತಿರುಪತಿಗೆ ಬರಲು ಕೂರೇಶರು ಕರೆ ನೀಡಿದ್ದಾರೆ. ಮೇಲಾಗಿ ಮದುವೆಗೆ ಬಂದಿದ್ದ ಅತ್ತೆ ಮಾವಂದಿರು ಸ್ವಸ್ಥಳಕ್ಕೆ ಹಿಂದಿರುಗುವಾಗ ಒಮ್ಮೆ ದಂಪತಿಗಳು ಬೇಜವಾಡಕ್ಕೆ ಬರಬೇಕೆಂದು ಕರೆಕೊಟ್ಟಿದ್ದರು. ಈ ಮಧ್ಯೆ ಆಚಾರ್ಯ ರಾಮಾನುಜರು ತಿರುಪತಿಯಲ್ಲಿ ನಡೆಯಿಸಿರುವ ಚಟು ವಟಿಕೆಗಳನ್ನು ಕರ್ಣಾಕರ್ಣಿಕೆಯಿಂದ ಕೇಳುತ್ತಿದ್ದವುಗಳನ್ನು ಕಣ್ಣಾರೆ ಕಾಣಬೇಕೆಂಬ ತವಕ ಶ್ರೀಪತಿಗೂ ಮೂಡಿತ್ತು. ಒಟ್ಟಿನಲ್ಲಿ ಶ್ರೀಪತಿಯ ಪರಿಸ್ಥಿತಿ 'ರೋಗಿ ಬಯಸಿದ್ದೂ ಹಾಲು ಅನ್ನ ವೈದ್ಯ ಹೇಳಿದ್ದೂ ಹಾಲು ಅನ್ನ!' ಎಂಬಂತೆ ಆಗಿ ತಿರುಪತಿಯ ಪ್ರಯಾಣ ನಿಶ್ಚಿತವಾಗಿತ್ತು.

ಪ್ರಯಾಣ ಸಿದ್ಧವಾದ ಮೇಲೆ ಜೊತೆಗೆ ಯಾರು ಯಾರು ಹೊರಡ ಬೇಕು ಎಂಬ ಪ್ರಶ್ನೆ ಮುಂದೆ ಬಂತು. ಶ್ರೀ ದೇವಿ ಭಟ್ಟರನ್ನು ಕುರಿತು ಹೇಳಿ ದಳು. —"ನೋಡಿ, ಕನಕಾಗೆ ಈಗ ಮೂರು ತಿಂಗಳು. ಅವಳ ಇಷ್ಟ ದಂತೆ ತೀರ್ಥಯಾತ್ರೆ ಮಾಡಿದರೂ ಅವಳನ್ನು ಬಳಲಿಸಬಾರದು. ಎತ್ತರ ಹತ್ತಬಾರದು. ಎತ್ತರದಿಂದ ಆಳವಾದ ಪ್ರಪಾತಗಳನ್ನು ನೋಡಬಾರದು. ಇದರ ಜೊತೆಗೆ ಅವಳಿಗೆ ನೆರವಾಗಲು ವಿಶಾಲಾಕ್ಷಿಯನ್ನೂ ಕರೆದೊಯ್ಯು ವುದು ಅಗತ್ಯ ಎಂದಳು. ವಿಶಾಲಾಕ್ಷಿಯು ಇದನ್ನು ತಂದೆಗೆ ತಿಳಿಸಿದಾಗ ಆಚಾರ್ಯ ಶರಭಾರಾಧ್ಯರು ತಿರುಪತಿಗೆ ಹೊರಡಲು ತಾವೂ ಸಿದ್ಧರಾದರು. ಹೀಗಾಗಿ ಶಂಭುಭಟ್ಟರು ಶ್ರೀಪತಿ ವಿಶಾಲಾಕ್ಷಿ ಮತ್ತು ಶರಭಾರಾಧ್ಯರು ಪ್ರಯಾಣಿಸುವುದೆಂದು ಗೊತ್ತಾಯಿತು.

ಭಟ್ಟರು ತೀರ್ಥಯಾತ್ರೆಗೆಂದು ಕುದುರೆಗಾಡಿಯನ್ನು ಗೊತ್ತು ಪಡಿಸಿದರು. ಪ್ರಯಾಣಕ್ಕೆ ಆಗತ್ಯವಾದ ಸಾಮಾಗ್ರಿಯನ್ನು ಶ್ರೀ ದೇವಿಯ

ಸೂಚನೆಯಂತೆ ವಿಶಾಲಾಕ್ಷಿ ಸಿದ್ಧಪಡಿಸಿದಳು. ಮೂವರೂ ವಿದ್ಯಾಪೀಠದಲ್ಲಿ ರಜೆ ಪಡೆದು ಬಂದರು.

ಶಂಭುಭಟ್ಟರ ಮುಂದಾಳತ್ವದಲ್ಲಿ ಪ್ರಯಾಣಿಸಿದ ಯಾತ್ರಾತಂಡ ಮೊದಲು ಭೇಟಿಕೊಟ್ಟದ್ದು ಮುದಿಗೊಂಡಕ್ಕೆ. ಅನಿರೀಕ್ಷಿತವಾಗಿ ಪತ್ನೀ ಸಮೇತ ಮನೆ ಬಾಗಿಲಿಗೆ ಬಂದ ಮೊಮ್ಮಗನನ್ನು ಕಂಡು ದೇಶಿಕ ದಂಪತಿಗಳಿಗೆ ಆದ ಆನಂದಕ್ಕೆ ಪಾರವಿಲ್ಲ. ಅದರಲ್ಲಿಯೂ ಕನಕಾ ಗರ್ಭಿಣಿ ಎಂಬ ಸುದ್ದಿ ತಿಳಿದಮೇಲೆ ಅಜ್ಜಿ - ತಾತಂದಿರಿಗೆ " ಕೈಲಾಸ ಒಂದೇ ಜೋಟು ಎತ್ತರ " ಎಂಬಷ್ಟು ಸಂತೋಷವಾಗಿತ್ತು. ಈ ಸಂತೋಷದ ಫಲವಾಗಿ ಮುದ್ದುಲಿಂಗೇಶ್ವರನ ಸನ್ನಿಧಿಯಲ್ಲಿ ಹಾಲು ತುಪ್ಪ ಒಬ್ಬಟ್ಟು ಸಂತರ್ಪಣೆ ಏರ್ಪಟ್ಟಿತ್ತು. ಸ್ವಾಮಿಗೆ ರುದ್ರಾಭಿಷೇಕ ಸಹಸ್ರಬಿಲ್ವಾರ್ಚನೆ ಸಾಂಗವಾಗಿ ನೆರವೇರಿತು.

ಮರುದಿನ ಮುಂಜಾನೆ ನಿತ್ಯಕೃತ್ಯಗಳನ್ನು ಮುಗಿಸಿ ಪ್ರಯಾಣಿಸಿದ ಯಾತ್ರಾತಂಡ ಸಂಜೆಗೆ ವಿಜಯವಾಡ ತಲುಪಿತು. ಸೂಚನೆಯೇ ಇಲ್ಲದೆ ಬಾಗಿಲಿಗೆ ಬಂದ ಮಗ – ಸೊಸೆಯರನ್ನು ಕಂಡು ಭಾಗೀರಥಿಗೆ ಎಲ್ಲಿಲ್ಲದ ಸಡಗರ. ಈ ಸಂಭ್ರಮದಲ್ಲಿಯೂ ಅವಳು ಪದ್ಧತಿಯಂತೆ ಅಕ್ಕ ಪಕ್ಕದ ಮನೆಯ ಮುತ್ತೈದೆಯರನ್ನು ಕರೆದು ಆರತಿಮಾಡಿ ಮನೆತುಂಬಲು ಮಾಡಿಕೊಳ್ಳುವುದನ್ನು ಮರೆಯಲಿಲ್ಲ. ಶ್ರೀಪತಿ ಕುಮುದಿನಿಯನ್ನು ಎತ್ತಿಕೊಂಡು ರಮಿಸುತ್ತಿದ್ದ. ಅವಳು ಅತ್ತಿಗೆಯನ್ನು ಅರೆಕ್ಷಣ ಅಗಲಿ ಇರುತ್ತಿರಲಿಲ್ಲ.

ಶಂಭುಭಟ್ಟರು ಭಾವನವರಿಗೆ ತಾವು ತಿರುಪತಿ ಯಾತ್ರೆಗೆ ಹೊರಡುವ ಸಂದರ್ಭ ಒದಗಿದ್ದನ್ನು ವಿವರಿಸಿದರು. ಗುರುಲಿಂಗಾರಾಧ್ಯರಿಗೆ ತಿರುಪತಿಯಲ್ಲಿ ಈಚೆಗೆ ನಡೆದಿರುವ ವಿದ್ಯಮಾನಗಳನ್ನುಕುರಿತು ಅಸಮಾಧಾನವಿದ್ದರೂ ಅವರು ಮಗ ಮತ್ತು ಸೊಸೆಯ ಜೊತೆ ತಾವೂ ತಿರುಪತಿಗೆ ಹೊರಡಲು ಸಿದ್ಧರಾದುದಲ್ಲದೆ ಶಿವಶಂಕರನೂ ಜೊತೆಗಿರುವುದು ಅಗತ್ಯ ಎಂದು ಭಾವಿಸಿ ಅವನನ್ನೂ ಹೊರಡಿಸಿದರು. ಶಿವಶಂಕರನ ದೇವಾಲಯದ ಕಾಯಕವನ್ನು ತಾನೇ ವಹಿಸಿಕೊಂಡಳು ಭಾಗೀರಥಿ.

ಮರುದಿನ ಭಗವಾನ್ ಮಲ್ಲಿಕಾರ್ಜುನ ಮತ್ತು ಕನಕದುರ್ಗೆಯರಿಗೆ ವಿಶೇಷ ಪೂಜೆ ಸಂತರ್ಪಣೆಗಳು ವಿಜೃಂಭಣೆಯಿಂದ ನೆರವೇರಿದವು. ಆ ದಿನ ಅಲ್ಲಿಯೇ ವಿಶ್ರಾಂತಿ ಪಡೆದು ನಾಳೆ ಮುಂಜಾನೆ ತಿರುಪತಿಗೆ ಹೊರಡುವುದೆಂದು ಆರಾಧ್ಯರು ಸೂಚಿಸಿ ಮತ್ತೊಂದು ಗಾಡಿಯನ್ನು ಗೊತ್ತು ಮಾಡಿದರು. ಆ ದಿನ ಮಧ್ಯಾಹ್ನ ಎಲ್ಲರೂ ಕಿರಾತಾರ್ಜುನ ಗುಡ್ಡವನ್ನು ಏರಿ ಅಲ್ಲಿನ ಐತಿಹಾಸಿಕ ಸಂದರ್ಭಗಳನ್ನು ಮೆಲುಕು ಹಾಕುತ್ತಾ ಮನೆಗೆ ಹಿಂದಿರುಗಿದರು. ಮರುದಿನ ಮುಂಜಾನೆ ತಿರುಪತಿ ಹಾದಿ ಹಿಡಿದರು.

೩

ತಿರುಪತಿಯನ್ನು ತಲುಪಿದ ಕೂಡಲೇ ಶಂಭು ಭಟ್ಟರು ತಾವು ಸಪರಿವಾರವಾಗಿ ಬಂದಿರುವ ಸುದ್ದಿಯನ್ನು ಬೆಟ್ಟದ ಮೇಲಿರುವ ರಾಮಾನುಜ ಕೂಟ(ಮಠ)ಕ್ಕೆ ಬರೆದು ಕಳುಹಿಸಿದ್ದರು. ಮಠದ ಕಾರ್ಯ ಬಾರಿಯು ಕೂರೇಶರ ಸೂಚನೆಯಂತೆ ಈ ಯಾತ್ರಿಕರ ತಂಡಕ್ಕೆ ದಂಡಿಗೆಗಳನ್ನು ಒದಗಿಸಿ ಅವರನ್ನು ಬೆಟ್ಟದ ಮೇಲಕ್ಕೆ ಬರಮಾಡಿಕೊಂಡರು.

ಮೇಲಕ್ಕೆ ಬಂದ ಯಾತ್ರಿಕರನ್ನು ಕೂರೇಶರು ಬೇಟಿ ಮಾಡಿ ಕುಶಲ ಪ್ರಶ್ನೆಮಾಡಿ ಅವರಿಗೆ ಅನುಕೂಲವಾದ ಅತಿಥಿಗೃಹ, ಪಾಕಸಾಮಗ್ರಿ ಮುಂತಾದ ಸೌಕರ್ಯಗಳನ್ನು ಒದಗಿಸಿದರು. ಶ್ರೀಪತಿ ಅವರಿಗೆ ಕೃತಜ್ಞತೆ ಸೂಚಿಸಿ ಪೂಜ್ಯ ಆಚಾರ್ಯರ ಸಂದರ್ಶನ ಮಾಡಿಸಲು ಸೂಚಿಸಿದರು. ಆದರೆ ಕೂರೇಶರು— "ಸ್ವಾಮಿ, ಆಚಾರ್ಯರು ನನ್ನನ್ನು ಅತಿಥಿ ಸೇವೆಗೆ ನೇಮಿಸಿ ಅವರು ಕಾರ್ಯಗೌರವ ನಿಮಿತ್ತ ತೊಂಡನೂರಿಗೆ ದಯಮಾಡಿಸಿದ್ದಾರೆ. ನೀವು ಇಲ್ಲಿರುವ ನಾಲ್ಕಾರು ದಿನಗಳೊಳಗಾಗಿ ಅವರು ಬಂದರೂ ಬರಬಹುದು" ಎಂದರು ವಿನಯದಿಂದ.

"ನಿಮ್ಮಿಂದ ನಮಗೆ ಆಗಬೇಕಾದ ಮತ್ತೊಂದು ಸಹಾಯವೆಂದರೆ ಈ ಕ್ಷೇತ್ರದ ಇತಿವೃತ್ತವನ್ನು ಚೆನ್ನಾಗಿ ಬಲ್ಲವರೊಬ್ಬರನ್ನು ನಮ್ಮಲ್ಲಿಗೆ ಕಳುಹಿಸಿ ಕೊಡುವುದು." ಎಂದ ಶ್ರೀಪತಿ ಕೃತಜ್ಞತೆ ಸೂಚಿಸಿ. ಅದಕ್ಕಾಗಿ ಕೂರೇಶರು "ಶ್ರೀನಿವಾಸ" ಎಂಬ ಪಂಡಿತರನ್ನು ಕಳುಹಿಸಿದರು. ಪಂಡಿತರು ನಮ್ಮ ಯಾತ್ರಿಕರಿಗೆ ಕ್ಷೇತ್ರ ಪರಿಚಯ ಮಾಡ ತೊಡಗಿದರು.

ತಿರುಪತಿಯ ಸ್ಥೂಲ ಪರಿಚಯ—

"ತಿರುಪತಿ ಬೆಟ್ಟವು ದಕ್ಷಿಣ ಭಾರತದ ಪೂರ್ವ ಘಟ್ಟಗಳ ಸಾಲಿನ ಒಂದು ಭಾಗ. ತೆಲುಗಿನಲ್ಲಿ ಇದಕ್ಕೆ "ನಲ್ಲಮಲಕೊಂಡಲು" ಎಂಬ ಹೆಸರಿದೆ. 'ಶೇಷಾಚಲ' ಎಂಬುದು ಇದರ ಸಂಸ್ಕೃತ ರೂಪ.

ಇದು ತಮಿಳುನಾಡಿನ ಕೆಳ ತುದಿಯಲ್ಲಿರುವ 'ಆನೆಮಲೆ' ಎಂಬಲ್ಲಿ ಪ್ರಾರಂಭವಾಗಿ 'ನೀಲಗಿರಿ' ಶ್ರೇಣಿಗೆ ತೆಕ್ಕೆಯಾಗಿ ಅಲ್ಲಿಂದ ಮೇಲೆ ಹಬ್ಬುತ್ತಾ ತಮಿಳುನಾಡು ಕರ್ನಾಟಕ ಆಂಧ್ರಪ್ರದೇಶದ ಕರ್ನೂಲು ಪ್ರಾಂತದಲ್ಲಿರುವ ಶ್ರೀಶೈಲದವರೆಗೆ ಹಬ್ಬಿದೆ.

ಪಶ್ಚಿಮ ಘಟ್ಟಗಳಂತೆ ಇದು ಅಖಂಡವಾಗಿಲ್ಲ. ಅಷ್ಟು ಎತ್ತರದ ಬೆಟ್ಟಗಳೂ ಇಲ್ಲಿ ಇಲ್ಲ. ಈ ಬೆಟ್ಟಗಳ ಸರಾಸರಿ ಎತ್ತರ ಸುಮಾರು ೨೦೦೦ ಅಡಿಗಳು. ಅಲ್ಲಲ್ಲಿ ದೊಡ್ಡ ನದಿಗಳು ಹಾಯ್ದು ಹೋಗುವಷ್ಟು ಅವಕಾಶವುಂಟು.

ಶ್ರೀಶೈಲವು ಸುಪ್ರಸಿದ್ಧ ಶೈವಕ್ಷೇತ್ರ. ಇಲ್ಲಿರುವ ಮಲ್ಲಿಕಾರ್ಜುನ ಲಿಂಗವು ಭಾರತದ ಸುಪ್ರಸಿದ್ಧ ಹನ್ನೆರಡು ಜ್ಯೋತಿರ್ಲಿಂಗಗಳಲ್ಲಿ ಒಂದು. ಪ್ರಾಯಃ ಶ್ರೀಶೈಲವು ಶೇಷಾಚಲದ ಶಿರಸ್ಸೆಂದೂ ತಿರುಪತಿಯು ಪುಚ್ಛ ಸ್ಥಾನದಲ್ಲಿರುವುದರಿಂದ ಈ ದೇವರು "ವೆನುಕಟೇಶ್ವರ" (ಹಿಂಭಾಗದ ಈಶ್ವರ) ನೆನಿಸಿ ಕೊಂಡಿದ್ದು ಈಗ ಅದು "ವೆಂಕಟೇಶ್ವರ" ಆಗಿದೆ.

"ತಿರುಮಲೆ"ಎನಿಸಿರುವ ಈ ಶೈಲ ಸಮುಚ್ಚಯವು ಚಿತ್ತೂರು ಪ್ರಾಂತದ 'ತಲಕೋಟ' ಎಂಬುದರಿಂದ ಆರಂಭವಾಗಿ 'ಅವಚಾರಿವಂಕ' ಎಂಬ ತಿರುವಿನವರೆಗೆ ಇರುವ ಬೆಟ್ಟಸಾಲಿನ ಪ್ರದೇಶ. ಇದು ತಿರುಮಲೆಯನ್ನು ಒಳಗೊಂಡಿದೆ. ಸುಮಾರು ಹನ್ನೆರಡು ಮೈಲಿ ವಿಸ್ತಾರವುಳ್ಳ ಇದು ಏಳು ಬೆಟ್ಟಗಳ ಒಂದು ಕೂಟ. ಅಥವಾ ಇವು ಒಂದೇ ಬೆಟ್ಟದ ಏಳು ಶಿಖರಗಳು ಎಂದೂ ಹೇಳಬಹುದು. ಈ ಬೆಟ್ಟ(ಶಿಖರ)ಗಳನ್ನು ಇಂದು ಶೇಷಾಚಲ, ವೃಷಭಾಚಲ, ಗರುಡಾಚಲ, ಅಂಜನಾದ್ರಿ, ನಾರಾಯಣಾದ್ರಿ, ವೃಷಾದ್ರಿ (ಸಿಂಹಾಚಲ) ಮತ್ತು ವೆಂಕಟಾದ್ರಿ ಎಂದು ಕರೆಯುತ್ತಾರೆ.

ಪುರಾಣ ಪ್ರಸಿದ್ಧವಾದ ಈ ಸಮುಚ್ಚಯದಲ್ಲಿ ಸ್ವಾಮಿಪುಷ್ಕರಿಣಿ, ತುಂಬುತೀರ್ಥ ಮುಂತಾದ ಅನೇಕ ತೀರ್ಥಗಳಿವೆ.

ಕೆಲವರ ದೃಷ್ಟಿಯಲ್ಲಿ ಈ ಏಳು ಶಿಖರಗಳು ಶೇಷನ ಏಳು ಹೆಡೆಗಳೆಂದೂ ಅದರಿಂದಲೇ ಇದು ಶೇಷಾಚಲದ ಮುಖವೆನಿಸುವುದರಿಂದ ಶ್ರೀಶೈಲವು ಪುಚ್ಛವೆಂದು ಹೇಳುವವರೂ ಇದ್ದಾರೆ.

ಪ್ರಕೃತ ಗುಡಿ ಇರುವುದು ನಾರಾಯಣಾದ್ರಿಯ ತಗ್ಗಿನಲ್ಲಿ, ಅದರ ಎತ್ತರ ಸುಮಾರು ೨೮೨೦ ಅಡಿಗಳು, ಇದರ ಸುತ್ತಲೂ ಸು. ೩೦೦೦ ಅಡಿ ಎತ್ತರದ ಬೇರೆ ಬೇರೆ ಶಿಖರಗಳಿವೆ.

"ಪೆರುಮಲೆ" ಎಂಬ ತಮಿಳು ಶಬ್ದವು ಲಿಪಿಕಾರನ ಹಸ್ತದೋಷದಿಂದ 'ತಿರುಮಲೆ' ಎನಿಸಿರಬೇಕು ಎಂದು ವಿದ್ವಾಂಸರು ಊಹಿಸುತ್ತಾರೆ.

ದೊರೆತಿರುವ ಶಾಸನಗಳಲ್ಲಿ 'ತಿರುಮಲೆ' ಶಬ್ದವು ರಾಜೇಂದ್ರ ಚೋಳನ (ಕ್ರಿ.ಶ.೧೦೧೪) ಶಾಸನದಲ್ಲಿ ಕಂಡು ಬರುತ್ತದೆ. ಇದರಲ್ಲಿ ದೇವರ ಮುಂದೆ 'ನಂದಾದೀಪ' ಬೆಳಗಿಸಲು ೨೩ ಪೊನ್ನುಗಳನ್ನು ದೇವರ ಭಂಡಾರಕ್ಕೆ ಸಲ್ಲಿಸಿದ ವಿಚಾರವಿದೆ. ಆದರಲ್ಲಿ ದೇವರನ್ನು 'ತಿರುವೇಂಗಡ ದೇವರು' ಎಂದು ಕರೆಯಲಾಗಿದೆ.

'ವೇಂಗಡ' ಪದಕ್ಕೆ ವೇದ ಮೂಲವನ್ನು ಹುಡುಕಲು ಹೊರಟ ಕೆಲವರು ಸಂಸ್ಕೃತ ಪಂಡಿತರು ಅಲ್ಲಿ ಬರುವ "ಅರಾಯಿ ಕಾಣೇ ವಿಕಟೇ. ಗಚ್ಛ ಗಿರಿಂ"(ಋ.ಮಂ.೧೦.೧೫೫-೧)ಎಂಬಲ್ಲಿರುವ 'ವಿಕಟೇ'ಗಿರಿಂ'ಎಂಬುದನ್ನು ವೆಂಕಟಗಿರಿ' ಎಂದು ಅರ್ಥೈಸುವ ಸಾಹಸವನ್ನೂ ಮಾಡಿದ್ದಾರೆ.

ಎರಡನೆಯದಾಗಿ 'ವೇಂಗಡ' ಎಂಬ ತಮಿಳು ಪದಕ್ಕೆ "ವೇಂ ಪ್ರಾಹುಃ ಸರ್ವಪಾಪಾನಿ ಕಟಸ್ತದ್ದಾಹ ಉಚ್ಯತೆ" ಎಂಬ ವ್ಯುತ್ಪತ್ತಿಯಿಂದ ಎಲ್ಲ ಪಾಪಗಳನ್ನು ಸುಡುವ ಬೆಟ್ಟ ಎಂದೂ ಕೆಲವು ಪಂಡಿತರು ನಿರ್ವಚಿಸಿದ್ದಾರೆ.

ಇನ್ನು ಈ ಬೆಟ್ಟದಲ್ಲಿ ಈ ಮೂರ್ತಿಯು ಮೂಡಿದ್ದು ಯಾವಾಗ ? ಎಂಬ ಐತಿಹಾಸಿಕ ಪ್ರಶ್ನೆಗೆ ಶಾಸನಾಧಾರಿತ ಉತ್ತರವು ಯಾವುದೂ ಇಲ್ಲ. ಕೇವಲ ಪ್ರತೀತಿಗಳ ಬೆನ್ನಮೇಲೆ ನಿಂತಿರುವ ಹೇಳಿಕೆಗಳ ಪ್ರಕಾರ ಈ ದೇವರು ಶಿಲ್ಪಿಯಿಂದ ಕಡೆದು ಪ್ರತಿಷ್ಠಿಸಿದುದಲ್ಲ. ಇದು ಉದ್ಭವ ಮೂರ್ತಿ"

ಮೊದಲು ಇದು ಒಂದು ಹುತ್ತದಲ್ಲಿ ನಡುವಿನವರೆಗೆ ಹೂತಿತ್ತು. ಅದನ್ನು ಮೊದಲು ಕಂಡವನು 'ರಂಗದಾಸ' ಎಂಬ ಶೂದ್ರ ಭಕ್ತ. ಅವನು ಕುರಿ ಕಾಯಲು ಕಾಡಿಗೆ ಬಂದಿದ್ದವನು. ಅವನು 'ಗೋಪೀನಾಥ' ಎಂಬ ವೈಖಾನಸ ಬ್ರಾಹ್ಮಣನಿಗೆ ಈ ವಿಷಯ ತಿಳಿಸಿದ. ಇವರಿಬ್ಬರೂ ಸೇರಿ ದೇವರನ್ನು ಹೊರತೆಗೆದರು*. ಗೋಪೀನಾಥ ವೈಖಾನಸಾಗಮದ ಪದ್ಧತಿಯಂತೆ ದೇವರನ್ನು ಪೂಜಿಸ ತೊಡಗಿದ. ಅದರಂತೆಯೇ ಇಂದಿಗೂ ಅಲ್ಲಿ ವೈಖಾನಸಾಗಮೋಕ್ತವಾಗಿ ಪೂಜಾದಿಗಳು ನಡೆದು ಬಂದಿವೆ. ಶ್ರೀರಾಮಾನುಜರು ಪಾಂಚರಾತ್ರಾಗಮಾನುಯಾಯಿಗಳು. ಆದರೂ ಅವರು ಪೂರ್ವದ ಪದ್ಧತಿಯನ್ನು ಬದಲಿಸುವ ಗೋಜಿಗೆ ಹೋಗಿಲ್ಲ.

ಇಲ್ಲಿ ಮೊದಲು ಗುಡಿ ಇರಲಿಲ್ಲ. ಆಳ್ವಾರರು ತಮ್ಮ 'ಪಾಶುರ'ಗಳಲ್ಲಿ 'ಈ ದೇವರು ಮೊದಲು ಬಯಲಿನಲ್ಲಿ ನಿಂತಿತ್ತು.' ಎಂದು ವರ್ಣಿಸಿದ್ದಾರೆ.

"ಸುತ್ತಲೂ ದಟ್ಟವಾದ ಕಾಡಿದ್ದು ದೇವರು ನಿಂತೆಡೆಯಲ್ಲಿ ಮಾತ್ರ ಕಾಡನ್ನು ಕಡಿದು ತಾನೇ ಎಡೆ ಮಾಡಿಕೊಂಡು ನೆಲದ ಮೇಲೆ ತನ್ನ ತಾವರೆ ಅಡಿಯನ್ನು ಮೂಡಿ ನಿಂತಿದ್ದಾನೆ. ಅದು ನಮ್ಮ ಮೇಲೆ ಅವನು ತೋರಿರುವ ಕೃಪೆ" ಎಂದು ಒಂದಡೆ ಹಾಡಿದ್ದಾರೆ, ಮತ್ತೊಬ್ಬ ಆಳ್ವಾರರು—

"ಕಾಡಿನಲ್ಲಿ ಎತ್ತರವಾಗಿ ನಿಂತಿರುವ ಈ ಮೂರ್ತಿಯನ್ನು ಎಲ್ಲ ಕಡೆಗಳಿಂದಲೂ ಕಾಣಬಹುದು. ಯಾರಾದರೂ ಯಾವಾಗಲಾದರೂ ಎಲ್ಲಿಂದಾದರೂ ದೈವವನ್ನುಕಂಡು ಭಕ್ತರು ತಾವೇ ಅಡಿಗಳ ಮೇಲೆ ಹೂಗಳನ್ನೇರಿಸಿ ಸಂತೋಷಪಡಬಹುದು" ಎಂಬುದು ಆಳ್ವಾರರ ದೃಷ್ಟಿ.

ರಂಗದಾಸನು ದೇವರಿಗೆ ಪುಷ್ಪ ಕೈಂಕರ್ಯವನ್ನು ಕೈಗೊಂಡಿದ್ದ. ಇದರ ಫಲವಾಗಿ ಅವನು ಪುನರ್ಜನ್ಮ ಪಡೆದು 'ತೊಂಡಮಾನ್' ಎಂಬ

---

* ಈ ಮೂರ್ತಿಯನ್ನು ಕೃತಯುಗದಲ್ಲಿ ಶಂಖನೆಂಬರಾಜನು ಮಾಡಿಸಿದ್ದನಂತೆ! ಅದರಲ್ಲಿ ದೇವರ? (ಶಕ್ತಿಯನ್ನು ತುಂಬಿ ದಿವ್ಯ ಮಂಗಳ ವಿಗ್ರಹವನ್ನಾಗಿಸಿದನಂತೆ) ಕಲಿಯುಗದಲ್ಲಿ ಅದು ಅರ್ಧ ಮಣ್ಣಿನಲ್ಲಿ ಹೂತಿತ್ತು. ಅದನ್ನು ಇವರು ಹೊರ ತೆಗೆದರು.

ಹೆಸರಿನ ಚಕ್ರವರ್ತಿಯಾದನಂತೆ ! ಅವನು ದೇವರಿಗೆ ಗುಡಿ, ಗೋಪುರ, ಮಂಟಪ, ವಿಮಾನಗಳನ್ನು ಕಟ್ಟಿಸಿದನೆಂದು ಪ್ರತೀತಿ.

ತೊಂಡಮಾನ್ ಚಂದ್ರವಂಶದ ರಾಜ. ನಾರಾಯಣವರ (ವನಂ) ದಲ್ಲಿ ಆಳುತ್ತಿದ್ದ. ಅದು ತೊಂಡ ಮಂಡಲಕ್ಕೆ ಸೇರಿತ್ತು. ತೊಂಡಮಾನನ ತಮ್ಮ ಆಕಾಶ ರಾಜ. ಆತ ಪುತ್ರಕಾಮೇಷ್ಟಿಯಾಗ ಮಾಡಿ 'ಪದ್ಮಾವತಿ' ಯನ್ನು ಪಡೆದ. ಅವಳು ಲಕ್ಷ್ಮಿಯ ಅವತಾರ. ಅವಳನ್ನು ವಿಷ್ಣುವಿನ ಅರ್ಚಾವತಾರವೆನಿಸಿದ ವೇಂಕಟೇಶ್ವರ ಮದುವೆಯಾಗುತ್ತಾನೆ. ಈ ಮದುವೆ ನಡೆದದ್ದು ಬೆಟ್ಟದ ಕೆಳಗೆ ಮಂಗಾಪ್ಪುರದಲ್ಲಿರುವ 'ವೇಂಕಟೇಶ್ವರ ಕಲ್ಯಾಣ ಗುಡಿ' ಯಲ್ಲಿ ಎಂದು ಪ್ರತೀತಿ.

ತಿರುಚ್ಚಾನೂರು, ಬೆಟ್ಟಕ್ಕೆ ಸುಮಾರು ಹತ್ತು ಮೈಲಿ ದೂರದಲ್ಲಿದೆ. ಹಿಂದೆ ಅಲ್ಲಿ ತಿರುಪತಿ ( ನಗರ ) ಇರಲಿಲ್ಲ. ಚಂದ್ರಗಿರಿಯೂ ಇರಲಿಲ್ಲ. ಬೆಟ್ಟಕ್ಕೆ ಹತ್ತಿರದ್ದು ಅದೊಂದೇ. ಆಗ್ಗೆ ಬೆಟ್ಟದ ಗುಡಿಯ ಆಡಳಿತ ನೋಡು ತ್ತಿದ್ದವರು ಈ ಊರಿನವರು. 'ತಿರುಚ್ಚೋಕಿನೂರು' 'ಎಂದರೆ ಯೋಗಿಯ ಊರು.' ಯೋಗಿ ಎಂದರೆ ಶಿವ. ಮೊದಲಿನಿಂದ ಇದು ಶೈವಕ್ಷೇತ್ರ. ಇಲ್ಲಿ ದೊರೆತಿರುವ ಒಂದು ಶಾಸನ ಪಲ್ಲವ ಮಲ್ಲನ ಮಗ ನಂದಿವರ್ಮ ಬರೆ ಯಿಸಿದ್ದು. ( ಸು ೭೭೯ - ೮೩೦ )

ಬೆಟ್ಟದ ದೇವರ ಪ್ರತಿನಿಧಿ ಎನಿಸುವ ಮೂರ್ತಿಯನ್ನು ಬೆಟ್ಟದ ಕೆಳಗೆ ಊರಿನಲ್ಲಿ ಇರಿಸಿಕೊಂಡರೆ ಬಹುಮಂದಿಯ ಬಯಕೆ ನೆರವೇರುವು ದೆಂದು, ತಿರುಚ್ಚಾನೂರಿನಲ್ಲಿ ( ಕ್ರಿ. ಶ. ೮೨೬ ) ' ವೇಂಗಡದತ್ತು ಪೆರು ಮಾನಡಿ' ಗಳನ್ನು ಸ್ಥಾಪಿಸಲಾಯಿತು.

## ವೈಷ್ಣವ ಸಂಪ್ರದಾಯ

ವೈಷ್ಣವ ಸಂಪ್ರದಾಯಕ್ಕೆ ಮೂವರು ಆಚಾರ್ಯರು. ಅವರು ನಾಥಮುನಿ ( ೮೨೩ ) ಯಾಮುನ ( ೯೧೮ - ೧೦೩೮ ) ರಾಮಾನುಜ (೧೦೧೭-೧೧೩೭) ಎಂದು.

ನಾಥ ಮುನಿಗಳಿಗೆ ಮೊದಲಿದ್ದವರು 'ನಮ್ಮಾಳ್ವಾರರು'. ಅವರು ರಚಿಸಿದ 'ತಿರುವಾಯ್‌ಮೋಳಿ' ಯ ಪಾಶುರಗಳನ್ನು ಹಾಡಿದಾಗ ನಾಥ ಮುನಿಗಳಿಗೆ ತಿರುಪತಿಗೆ ಹೋಗಿ ಬರುವ ಆಶೆಯಾಯಿತು.

ನಾಥಮುನಿಗಳು ನೆಲೆಸಿದ್ದುದು ಶ್ರೀರಂಗ. ನಾಥಮುನಿಗಳ ಶಿಷ್ಯರಾದ 'ಮಣಿಕ್ಕಾಲ್ - ನಂಬಿ' ಯ ಪ್ರಭಾವದಿಂದ ಯಾಮುನರು ನಾಥ ಮುನಿಗಳ ತರುವಾಯ ಆಚಾರ್ಯರಾದರು. ಯಾಮುನರು ನಾಥಮುನಿಗಳ ಮೊಮ್ಮಗನೇ! 'ತಿರುವಾಯ್‌ಮೋಳಿ ಯಾಮುನರಿಗೂ ಮೆಚ್ಚುಗೆಯಾಯಿತು. ಯಾಮುನರಿಂದ ತಿರುವಾಯ್‌ಮೋಳಿ ಕೇಳುತ್ತಿದ್ದವರಲ್ಲಿ ತಿರುಮಲೆ ನಂಬಿಯೂ ಒಬ್ಬರು. ವೇಂಗಡದ ವರ್ಣನೆಯ ಘಟ್ಟ ಬಂದಾಗಲೆಲ್ಲ ತಿರುಮಲೆನಂಬಿ ಭಾವಪರವಶರಾಗುತ್ತಿದ್ದರು. ಅವರು ವೇಂಗಡ ಬೆಟ್ಟದಲ್ಲೇ ನೆಲೆಸಿ ದೇವರ ಕೈಂಕರ್ಯಗಳನ್ನು ನಡೆಸುವುದಾಗಿ ನಿರ್ಧರಿಸಿದರು.

ತಿರುಮಲೆ ನಂಬಿಯ ಸೋದರಿ ಭೂಪ್ಪಿರಾಟ್ಟಿ. ಆಕೆಯ ಮಗ ರಾಮಾನುಜರು. ರಾಮಾನುಜರು ಬಾಲ್ಯದಲ್ಲಿ ಒಂದು ವರ್ಷಕಾಲ ಬೆಟ್ಟದ ಮೇಲಿದ್ದರು. ಮುಂದೆ ಅವರು ಯಾಮುನರ ಕರೆಯ ಮೇರೆಗೆ ಶ್ರೀರಂಗಕ್ಕೆ ಬಂದರು ಮತ್ತು ಶ್ರೀ ವೈಷ್ಣವ ಧರ್ಮದ ಆಚಾರ್ಯರಾದರು.

ಅವರು ಆಚಾರ್ಯರಾದ ಮೇಲೆ ಎರಡನೆಯ ಸಲ ತಿರುಪತಿಗೆ ಬಂದಾಗ ಅವರನ್ನು ಗುಡಿಯ ಮರ್ಯಾದೆಗಳಿಂದ ಬರಮಾಡಿಕೊಳ್ಳಲಾಯಿತು.

ಆಗ್ಗೆ ಬೆಟ್ಟದ ದೇವರು ವೈಷ್ಣವವೋ, ಶೈವವೋ ಎಂಬ ವಿಷಯ ವಿವಾದಕ್ಕೆ ಆಸ್ಪದವಾಗಿತ್ತು. ಮೂರ್ತಿಯ ಶಿಲ್ಪದಲ್ಲಿ ಖಚಿತವಾದ ಯಾವ ಸಂಕೇತವೂ ಇಲ್ಲದಿದ್ದುದು ಇದಕ್ಕೆ ಕಾರಣವೆನಿಸಿತ್ತು.

## ಶ್ರೀ ರಾಮಾನುಜರು ಬೆಟ್ಟದ ಮೇಲೆ ಕೈಕೊಂಡ ಕೆಲಸಗಳು

ಮೂರ್ತಿಯನ್ನು ಶೈವರು ಶಿವ ( ಸುಬ್ರಹ್ಮಣ್ಯ ) ನೆಂದೂ, ವೀರಶೈವರು ವೀರೇಶನೆಂದೂ ವೈಷ್ಣವರು ವಿಷ್ಣುವೆಂದೂ ಭಾವಿಸಿದ್ದರು. ಆಗ್ಗೆ ಅಲ್ಲಿಯ ರಾಜ 'ಘಟ್ಟಿಗ ಯಾದವರಾಯ'. ಆತ ರಾಮಾನುಜರನ್ನು ಬರಮಾಡಿಕೊಂಡ. ರಾಮಾನುಜರು ಎರಡೂ ಕಡೆಯ ವಾದಗಳನ್ನು ಕೇಳಿ ಒಂದು ಪರಿಹಾರ ಸೂಚಿಸಿದರು.

ನಿತ್ಯಾರ್ಚನೆ ಮುಗಿದ ಮೇಲೆ ರಾತ್ರಿ ದೇವರ ಮುಂದೆ ಶೈವ ಆಯುಧಗಳಾದ ತ್ರಿಶೂಲ–ಡಮರುಗಗಳನ್ನು ವೈಷ್ಣವ ಆಯುಧಗಳಾದ ಶಂಖ-ಚಕ್ರಗಳನ್ನು ಇರಿಸಿ ಗುಡಿಯ ಬಾಗಿಲು ಭದ್ರಪಡಿಸುವುದು. ಮತ್ತು ರಾತ್ರಿಯೆಲ್ಲಾ ಕಾಯುವುದು. ಬೆಳಿಗ್ಗೆ ಬಾಗಿಲು ತೆರೆದು ನೋಡಿ, ದೇವರು ಯಾವ ಆಯುಧಗಳನ್ನು ಧರಿಸಿರುವನೋ ಅದರ ಆಧಾರದ ಮೇಲೆ ನಿರ್ಧರಿಸುವುದು ಎಂದು

ಅದರಂತೆ ಮಾಡಲಾಯಿತು. ಬೆಳಿಗ್ಗೆ ದೇವರ ಕೈಗಳಲ್ಲಿ ಶಂಖ-ಚಕ್ರಗಳಿದ್ದವು. ಶ್ರೀನಿವಾಸ ಪಂಡಿತರು ಈ ಕತೆ ಹೇಳುತ್ತಿರುವಾಗ ಗುರುಲಿಂಗಾರಾಧ್ಯರು—

" ಸ್ವಾಮಿ, ತಾವು ಅನ್ಯಥಾ ಭಾವಿಸದಿದ್ದರೆ ಒಂದು ಸಂದೇಹ ಮೂಡಿದೆ. " ಎಂದರು ಕೈ ಮುಗಿದು.

"ಅಡ್ಡಿ ಇಲ್ಲ; ಹೇಳಿ! ಯಾವ ಸಂದೇಹ ಬಂದರೂ ಕೇಳಿ, ತಿಳಿದಷ್ಟು ಸಮಾಧಾನ ಮಾಡುತ್ತೇನೆ.!" ಎಂದರು ಪಂಡಿತರು ಕೈ ಜೋಡಿಸಿ.

"ಈ ಮೂರ್ತಿಯು 'ಶಿಲ್ಪಿಯು ಶಿಲೆಯಲ್ಲಿ ಕಡೆದು ಪ್ರತಿಷ್ಠಿಸಿದುದಲ್ಲ. ಇದು ಉದ್ಭವ ಮೂರ್ತಿ ಎಂದು ತಾವು ಹೇಳಿದಿರಿ. ಆದರೆ ಉದ್ಭವ ಮೂರ್ತಿ ಎಂಬ ಮಾತು ಜ್ಯೋತಿರ್ಲಿಂಗಗಳಿಗೆ ಅನ್ವಯಿಸುತ್ತದೆ. ಏಕೆಂದರೆ ಜ್ಯೋತಿರ್ಲಿಂಗಗಳು ಕರಚರಣಗಳನ್ನು ಬಿಡಿಸಿದ ಪ್ರತಿಮೆಗಳಲ್ಲ. ಅವು ಪರಶಿವ ಬ್ರಹ್ಮದ ಪ್ರತೀಕ. ಆದರೆ ಇಲ್ಲಿರುವ ಪ್ರತಿಮೆಯಲ್ಲಿ ಕರಚರಣಾದಿಗಳನ್ನು ಸುಂದರವಾಗಿ ಬಿಡಿಸಿದೆ. ಶಿಲ್ಪಿಯಿಲ್ಲದೆ ಅವು ಶಿಲೆಯಲ್ಲಿ ತಾನಾಗಿ ಮೂಡಿರುವುದು ಅಸಂಭವ ! ಮೇಲಾಗಿ ಉದ್ಭವ ಮೂರ್ತಿಯು ನೆಲದಿಂದ ಸಜೀವ (ಹುಟ್ಟು) ಶಿಲೆಯಲ್ಲಿ ಮೂಡಿ ಬಂದಿರುತ್ತದೆ. ಆದರೆ ನೀವು ಹೇಳಿದ್ದರಲ್ಲಿ ಈ ಮೂರ್ತಿ ಹುತ್ತದಲ್ಲಿ ನಡುವಿನ ವರೆಗೆ ಹೂತಿತ್ತು. ಅದನ್ನು " ರಂಗದಾಸ " ಮತ್ತು ' ಗೋಪೀನಾಥರು ' ಹೊರಗೆ ತೆಗೆದು ನಿಲ್ಲಿಸಿದರು ಎಂದು. ಅಂದ ಮೇಲೆ ಇದು ಉದ್ಭವ ಮೂರ್ತಿಯಾದೀತೆ ?"

ಎರಡನೆಯದಾಗಿ ಮೂರ್ತಿಯಲ್ಲಿ ಮೊದಲು ಯಾವ ಖಚಿತ ಸಂಕೇತವೂ ಇರಲಿಲ್ಲ. ಆದ್ದರಿಂದ ಸಂದೇಹಕ್ಕೆ ಕಾರಣವಾಗಿತ್ತು. ಆದರೆ ಶ್ರೀ

ರಾಮಾನುಜರ ಸಲಹೆಯಂತೆ ಮಾಡಿ ಬೆಳಿಗ್ಗೆ ದೇವರ ಗುಡಿಬಾಗಿಲು ತೆಗೆದಾಗ ದೇವರ ಕೈಗಳಲ್ಲಿ ಶಂಖ - ಚಕ್ರಗಳಿದ್ದವು ಇತ್ಯಾದಿ. ಆದರೆ ಅವೈಜ್ಞಾನಿಕವಾದ ಈ ಮಾತು ನಿಲ್ಲುವುದಿಲ್ಲ ! ಏಕೆಂದರೆ ಜನ ಭಾವಿಸಿರುವಂತೆ ದೇವರು ಶೈವ ಅಥವಾ ವೈಷ್ಣವ ಆಗಿದ್ದಿದ್ದರೆ ಅದು ತಾನು ಹುಟ್ಟುವಾಗಲೇ ತನ್ನ ದಿವ್ಯಆಯುಧಗಳನ್ನು ಕೈಗಳಲ್ಲಿ ಮೂಡಿಸಿ ಕೊಂಡೇ ಉದ್ಭವಿಸುವುದು ಕಷ್ಟವಾಗುತ್ತಿರಲಿಲ್ಲ. !"

ಆಚಾರ್ಯರು ಅಪೇಕ್ಷೆ ಪಟ್ಟಿದ್ದರೆ " ಅಶರೀರವಾಣಿ " ಯ ಮೂಲಕವಾದರೂ ರಾಜಸಭೆಗೆ ವಾಸ್ತವಾಂಶ ತಿಳಿಸಬಹುದಾಗಿತ್ತು. ಹಾಗಿಲ್ಲದೆ ಯಾರೂ ಇಲ್ಲದಾಗ ಮಾನವನಿರ್ಮಿತ ಆಯುಧಗಳನ್ನು ಧರಿಸುವ ಪ್ರಮೇಯವೇನಿತ್ತು? " ಎಂದರು ಆರಾಧ್ಯರು ತಮ್ಮ ಆಶಯ ವ್ಯಕ್ತಪಡಿಸಿ.

ಪಂಡಿತರು ಉತ್ತರಿಸಿದರು — "ಸ್ವಾಮಿ, ನೀವು ಇದನ್ನು 'ಅವೈಜ್ಞಾನಿಕ ' ವೆಂದಿರಿ! ಆದರೆ ಶ್ರೀ ವೈಷ್ಣವರು ಈ ಸಂದೇಹಕ್ಕೆ ಹೇಳುವ ಉತ್ತರ ಕೇಳಿ— "ಆಚಾರ್ಯರರದು ಶೇಷಾವತಾರವಲ್ಲವೆ ? ಆದ್ದರಿಂದ ರಾತ್ರಿ ಎಲ್ಲರೂ ಮಲಗಿದ ಮೇಲೆ ಅವರು ಸರ್ಪದ ರೂಪು ತಳೆದು ದೇವರ ಅಭಿಷೇಕದ ನೀರು ಬರುವ ಜಲಹರಿ (ಕಿಂಡಿ) ಯಲ್ಲಿ ಒಳನುಗ್ಗಿ ದೇವರ ಕೈಗಳಿಗೆ ಶಂಖ ಚಕ್ರ ಏಕೆ ಅಳವಡಿಸಿರಬಾರದು" ! ಎಂದು.

' ಬೇಷ್ ! ಇದು ಒಪ್ಪತಕ್ಕ ಮಾತು ! ಇದು ವೈಜ್ಞಾನಿಕವೂ ಆದೀತು ! ಏಕೆಂದರೆ ಆಚಾರ್ಯರು ಶೇಷಾವತಾರವೆಂದೂ ಒಪ್ಪೋಣ ? ಇದೊಂದು ಆಚಾರ್ಯರ ಅದ್ಭುತ ಪವಾಡವೆಂದರೂ ತಡೆಯುತ್ತದೆ! ಆದರೆ ಇಂಥ ಪವಾಡ ಕಲ್ಪನೆಯಿಂದ ಆಚಾರ್ಯರ ಘನತೆಗೆ ಗೌರವ ಬರುವುದೆಂಬ ವಿಷಯದಲ್ಲಿ ನಮಗಂತೂ ಸಂದೇಹ' ! ಎಂದರು ಆರಾಧ್ಯರು ಕಡ್ಡಿ ಮುರಿದಂತೆ !

ಇದರಿಂದ ಪಂಡಿತರ ಮುಖವು ಖಿನ್ನವಾಯಿತು ! ಅವರು ಮುಂದೆ ಮಾತನಾಡಲಿಲ್ಲ. ಅಷ್ಟರಲ್ಲಿ ಶಿವಶಂಕರ ಪಾಕವು ಸಿದ್ಧವಾಗಿದೆ. ಎಲ್ಲರೂ ಭೋಜನಶಾಲೆಗೆ ಬಂದು ಪ್ರಸಾದ ಸ್ವೀಕರಿಸಬೇಕು" ಎಂದು ಕರೆ ನೀಡಿದ.

ಶ್ರೀಪತಿ ಮೇಲೆದ್ದು ಸದ್ಯಃ ಪ್ರಸಾದಕ್ಕೆ ಹೋಗಿ ಬರೋಣ.! ಸಂಜೆ ಮತ್ತೆ ಸೇರೋಣ! ಎಂದು ತೀರ್ಪಿತ್ತು. ಎಲ್ಲರ ಜೊತೆ ಶ್ರೀನಿವಾಸ ಪಂಡಿತರೂ ಅಲ್ಲಿಯೇ ಪ್ರಸಾದ ಸ್ವೀಕರಿಸಿ ವಿಶ್ರಮಿಸಿದರು.

ಸಂಜೆ ೬ ಗಂಟೆಗೆ ಎಲ್ಲರೂ ಮತ್ತೆ ಸೇರಿದಾಗ ಶರಭಾರಾಧ್ಯರು– "ಸ್ವಾಮಿ, ಇಲ್ಲಿ ಶ್ರೀಮದಾಚಾರ್ಯರು ಕೈಗೊಂಡ ಕೆಲಸಗಳು ಯಾವುವು? ವಿವರಿಸಬೇಕು" ಎಂದು ಪಂಡಿತರನ್ನು ಪ್ರಶ್ನಿಸಿದರು.

ಪಂಡಿತರು— ಶ್ರೀರಾಮಾನುಜರು ಬೆಟ್ಟದ ಗುಡಿಯಲ್ಲಿ ಮತ್ತು ಈ ಕ್ಷೇತ್ರದಲ್ಲಿ ಕೈಗೊಂಡ ಕೆಲಸಗಳು ಬಹುಮುಖವಾದುವು. ಅವುಗಳಲ್ಲಿ ಕೆಲವು ಹೀಗಿವೆ.—

೧ ದೈವವನ್ನು ವಿಷ್ಣುವಿನ ಅರ್ಚಾಮೂರ್ತಿ ಎಂದು ನಿರ್ಧರಿಸಿದ್ದು.
೨ ದೇವರ ಕೈಗಳಿಗೆ ಶಂಖ-ಚಕ್ರಗಳನ್ನು ತೊಡಿಸಿದ್ದು!
೩ ಮೂರ್ತಿಯ ವಕ್ಷಃ ಸ್ಥಳದಲ್ಲಿ 'ಅಲರ್ ಮೇಲ್ ಮಂಗೈ' ಎಂಬ ವ್ಯೂಹಲಕ್ಷ್ಮಿಯ ಪ್ರತೀಕವನ್ನು ಅಳವಡಿಸಿದ್ದು.
೪ ಗರ್ಭಗುಡಿಯ ಮೇಲಿರುವ 'ಆನಂದನಿಲಯ' ವೆಂಬ ವಿಮಾನದ ನಾಲ್ಕೂ ಕಡೆ ಆಗಮಕ್ಕೆ ಅನುಸಾರವಾಗಿ ವರಾಹ, ನರಸಿಂಹ, ವೈಕುಂಠನಾಥ ಮತ್ತು ವೆಂಕಟೇಶ್ವರರನ್ನು, ನಿಲ್ಲಿಸಿದುದು.
೫ ಶುಕ್ರವಾರದ ಅಭಿಷೇಕ (ತಿರುಮಂಜನ) ವನ್ನು ವ್ಯವಸ್ಥೆ ಮಾಡಿದ್ದು.
೬ ಮೂರ್ತಿಯ ಹಣೆಗೆ ಊರ್ಧ್ವಪುಂಡ್ರ ಹಚ್ಚುವುದನ್ನು ಬಳಕೆಗೆ ತಂದದ್ದು.
೭ ಉಗ್ರ ಶ್ರೀನಿವಾಸ ರೆಂಬ ಉತ್ಸವ ಮೂರ್ತಿಗೆ ಬದಲಾಗಿ ಮಲಯಪ್ಪನೆನಿಸಿಕೊಳ್ಳುವ ಈಗಿನ ಉತ್ಸವ ಮೂರ್ತಿಯನ್ನು ದೇವಿಯೊಡನೆ ಬೆಳಕಿಗೆ ತಂದುದು.
೮ ದೇವರ ನಿತ್ಯಾರ್ಚನೆಯನ್ನು ನಿರ್ವಹಿಸಲು ಶ್ರೀ ವೈಷ್ಣವ ಸಂನ್ಯಾಸಿಯೊಬ್ಬನನ್ನು ನೇಮಿಸಿದ್ದು.

೯ ತಿರುಚ್ಚಾನೂರಿನಲ್ಲಿ ನಡೆಯುತ್ತಿದ್ದ 'ಬ್ರಹ್ಮೋತ್ಸವ' ವನ್ನು ಬೆಟ್ಟದ ಮೇಲೆ ನಡೆಯುವಂತೆ ಏರ್ಪಡಿಸಿದ್ದು.

೧೦ ನಂದನವನವನ್ನು ಪ್ರೋತ್ಸಾಹಿಸಿ ಸ್ವಾಮಿಯ ಪೂಜೆಗಾಗಿ ಪುಷ್ಪವಾಟಿಕೆಯ ವ್ಯವಸ್ಥೆ ಮಾಡಿಸಿದ್ದು ಇತ್ಯಾದಿ.

ಶಿಲಪ್ಪದಿಕಾರ ಎಂಬ ಗ್ರಂಥ ಮತ್ತು ಆಳ್ವಾರರ ಸ್ತುತಿಗಳಲ್ಲಿ ಇದು ವಿಷ್ಣುವಿನ ಅರ್ಚಾವತಾರ ಎಂಬ ಪ್ರಸ್ತಾಪವಿದ್ದರೂ ಅದು ಆಚಾರ್ಯರಿಂದ ದೃಢಪಟ್ಟಿತು.

ಮೇಲೆ ಹೇಳಿದ ಪಟ್ಟಿಯನ್ನು ಕೇಳಿದ ಆರಾಧ್ಯರು ಮತ್ತೆ ಏನನ್ನೋ ಕೇಳಬೇಕೆಂದಿದ್ದರಾದರೂ ಶ್ರೀಪತಿ ಶ್ರೀನಿವಾಸ ಪಂಡಿತರನ್ನು ಕುರಿತು— "ಸ್ವಾಮಿ, ತಾವು ಕ್ಷೇತ್ರದ ಬಗೆಗೆ ಒಳ್ಳೆಯ ವಿಚಾರಗಳನ್ನು ತಿಳಿಸಿ ಕೊಟ್ಟುದಕ್ಕೆ ನಾವು ಕೃತಜ್ಞರಾಗಿದ್ದೇವೆ. ಮೇಲಾಗಿ ಬೆಟ್ಟದ ದೇವರು ಶೈವವಾಗಲಿ ಅಥವಾ ವೈಷ್ಣವವಾಗಲಿ ಆ ಬಗೆಗೆ ನಮಗೆ ಯಾವ ಅಭಿನಿವೇಶವೂ ಇಲ್ಲ. 'ಹರಿ-ಹರ', ಶಂಕರ–ನಾರಾಯಣ, ಉಮಾ–ಮಹೇಶ್ವರ ಶಿಲ್ಪಗಳು ಅವರಿಬ್ಬರೂ 'ಶಕ್ತಿವಿಶಿಷ್ಟ ಪರಬ್ರಹ್ಮ ಸ್ವರೂಪರು' ಎಂದು ನಿರ್ಧರಿಸಿವೆ. ಶ್ರುತಿಯು'ಪುರುಷಂ ಕೃಷ್ಣಪಿಂಗಲಂ' ಎಂದು ಸಮರ್ಥಿಸಿದೆ.'ಶಕ್ತಿ-ಶಿವರು ವಾಕ್ ಮತ್ತು ಅರ್ಥಗಳಂತೆ' ಇರುವಾಗ ನಾವು ಅವರಿಬ್ಬರಲ್ಲಿ ಭೇದವೆಣಿಸುವುದು ವ್ಯರ್ಥವಷ್ಟೇ ಅಲ್ಲ; ಅದುಪಾಪಕರವೂ ಹೌದು! ಎಂದ ಮೇಲೆ ಈ ಬಗೆಗೆ ಏಕೆ ತಲೆ ಕೆಡಿಸಿಕೊಳ್ಳ ಬೇಕು ?" ಎಂದಾಗ ಎಲ್ಲರೂ ಸಮಾಧಾನದಿಂದ ಈ ವಿಚಾರಕ್ಕೆ ಪೂರ್ಣವಿರಾಮ ಹಾಕಿದರು.

ಪಂಡಿತರ ಮಾರ್ಗದರ್ಶನದಲ್ಲಿ ಎಲ್ಲರೂ ಬೆಟ್ಟದ ಮೇಲಿನ ಪ್ರೇಕ್ಷಣೀಯ ಸ್ಥಳಗಳನ್ನು ನೋಡಿ ಬಂದರು. ಕನಕಲತಾ–ವಿಶಾಲಾಕ್ಷಿಯರು ಅಲ್ಲಿರುವ ತೀರ್ಥಗಳಲ್ಲಿ ಗಂಗಾಪೂಜೆ ಸಲ್ಲಿಸಿದರು.

ಗುರುವಾರ ಸಂಜೆ "ಗುಡಿಯಲ್ಲಿ 'ತಿರುಮಂಜನ ಸೇವೆ' ಸಂಕಲ್ಪವಿರುವವರು ಬ್ರಾಹ್ಮ ಮುಹೂರ್ತದಲ್ಲಿ ಶುಚಿರ್ಭೂತರಾಗಿ ಗರ್ಭಗುಡಿಯ ಮುಂದೆ ಪೂಜಾಸಾಮಗ್ರಿಗಳೊಂದಿಗೆ ಸಿದ್ಧರಾಗಿರಬೇಕು." ಎಂದು ದೇವಾಲಯ ಸಮಿತಿ ಸೂಚಿಸಿತು.

ಶ್ರೀಪತಿ ದಂಪತಿಗಳು ತಮ್ಮ ಪರಿವಾರದೊಂದಿಗೆ ಸಕಾಲದಲ್ಲಿ ಸೂಚಿಸಿದ ಸ್ಥಳದಲ್ಲಿ ಹಾಜರಾದರು. ಸ್ವಾಮಿಗೆ ಧರಿಸಿದ್ದ ಅಲಂಕಾರಗಳನ್ನೆಲ್ಲ ತಿರುಮಂಜನಕ್ಕಾಗಿ ತೆಗೆದು ಮೂಲಮೂರ್ತಿಗೆ ಸುಗಂಧ ತೈಲಮಜ್ಜನ ಮಾಡಿಸಿತ್ತು. ನಂದಾದೀಪಗಳ ಬೆಳಕಿನಲ್ಲಿ ಕಪ್ಪು ಶಿಲೆಯದಿವ್ಯಮೂರ್ತಿಯ ಸ್ವರೂಪವು ಉಜ್ವಲವಾಗಿ ಬೆಳಗುತ್ತಿತ್ತು. ಕಂಠ ಮತ್ತು ಕೈಗಳಲ್ಲಿ ನಾಗಾಭರಣ ಮತ್ತು ನಾಗವಲಯಗಳು ಮಾತ್ರ ಪರಿಶೋಭಿಸುತ್ತಿದ್ದವು. ಕೊಡಗಟ್ಟಲೆ ಹಾಲು, ಮೊಸರು, ತುಪ್ಪ, ಜೇನು, ಸಕ್ಕರೆ ಮುಂತಾದ ಅಭಿಷೇಕಗಳು ಆರಂಭವಾದವು. ಒಂದೆಡೆ ವೇದಘೋಷ, ಮಹಾನಾರಾಯಣೋಪನಿಷತ್ತು ಮಹಾನ್ಯಾಸಪೂರ್ವಕ ಶ್ರೀರುದ್ರಜಪ, ಶಾಂತಿಸೂಕ್ತಗಳ ಪಠನವು ಸುಸ್ವರವಾಗಿ ಕೇಳಿ ಬರುತ್ತಿತ್ತು. ಆಳ್ವಾರರ ದ್ರಾವಿಡ ಪ್ರಬಂಧ ಪಾರಾಯಣವು ಮತ್ತೊಂದು ಕಡೆ ಕೇಳಿಬರುತ್ತಿತ್ತು. ವಿಷ್ಣು ಸಹಸ್ರನಾಮ ಸ್ತೋತ್ರವು ಇನ್ನೊಂದು ಕಡೆ ಏರ್ಪಟ್ಟಿತ್ತು, ಅಭಿಷೇಕದ ಕಡೆಯಲ್ಲಿ ಗರ್ಭಗುಡಿ ಬಾಗಿಲ ಮುಂದೆ ಚೈನಾಂಬರ (ಪರದೆ) ಸರಿಯಿತು. ಅರ್ಚಕರು ಹಿಂಭಾಗದ ಕೈಗಳಿಗೆ ಕ್ರಮವಾಗಿ ಶಂಖ-ಚಕ್ರಗಳನ್ನು ಜೋಡಿಸಿ, ವಕ್ಷಃಸ್ಥಳದಲ್ಲಿ ಶ್ರೀವತ್ಸಲಾಂಛನವನ್ನು ಅಳವಡಿಸಿದರು. ಭಕ್ತರು ತಂದಿದ್ದ ತುಲಸೀ, ಬಿಲ್ವ, ಮುಂತಾದ, ನಾನಾ ವಿಧ ಪತ್ರ ಪುಷ್ಪ ಮಾಲಿಕೆಗಳನ್ನು ಸ್ವಾಮಿಗೆ ಧರಿಸಿದರು. ವಿಷ್ಣುಸಹಸ್ರನಾಮ, ರಾಜೋಪಚಾರ, ವಿಧಿಗಳನ್ನು ಸಾಂಗಗೊಳಿಸಿದ ಮೇಲೆ ಮಹಾನೈವೇದ್ಯ ಮಹಾಮಂಗಳಾರತಿಯಾಯಿತು. ತರುವಾಯ ವಿಶೇಷ ಪೂಜೆಯಲ್ಲಿ ಭಾಗ ವಹಿಸಿದ್ದ ಶ್ರೀಪತಿ ದಂಪತಿ ಮುಂತಾದವರಿಗೆ ಪ್ರಸಾದ ರೂಪವಾದ ಪುಷ್ಪ ಹಾರ ಹಾಕಿ ಆಶೀರ್ವದಿಸಲಾಯಿತು. ನೆರೆದಿದ್ದ ಭಕ್ತವೃಂದಕ್ಕೆ ತೀರ್ಥ ಪ್ರಸಾದವನ್ನು ಅರ್ಚಕರು ವಿತರಣೆ ಮಾಡುತ್ತಿದ್ದಂತೆ ಕಣ್ಣುಗಳಲ್ಲಿ ಆನಂದ ಬಾಷ್ಪಗಳನ್ನು ಸುರಿಸುತ್ತಾ ಎಲ್ಲರೂ ತಮ್ಮ ತಮ್ಮ ನಿವಾಸಗಳಿಗೆ ತೆರಳಿದರು.

ಅಷ್ಟರಲ್ಲಿ ಶಿವಶಂಕರ ಉಪಾಹಾರಕ್ಕೆ ಕರೆ ನೀಡಿದ. ಉಪಾಹಾರವು ಮುಗಿದ ಮೇಲೆ ಕನಕಾ ಹೇಳಿದಳು—"ಈಗಿನ್ನೂ ಏಳುವರೆ ಗಂಟೆ!

ನಾವು ಇಲ್ಲಿಂದ ಬೆಟ್ಟದ ಬುಡದಲ್ಲಿರುವ ಪದ್ಮಾವತೀ ದೇವಿಯ ಸೇವೆಯನ್ನು ಮಾಡಿಕೊಂಡು ಬರೋಣ !" ಎಂದಳು. ಆ ಮಾತು ಎಲ್ಲರಿಗೂ ಒಪ್ಪಿಗೆಯಾಯಿತು, ಅದೇ ವೇಳೆಗೆ ಪಂಡಿತರೂ ಅಲ್ಲಿಗೆ ಬಂದು "ಪೂಜೆ ಸಾಂಗವಾಯಿತೇ?" ಎಂದು ವಿಚಾರಿಸಿದರು. ಭಟ್ಟರು ಅವರಿಗೆ ಕೃತಜ್ಞತೆ ಸೂಚಿಸಿ ತಮ್ಮ ಮುಂದಿನ ಸಂಕಲ್ಪ ತಿಳಿಸಿದರು. ಅವರು ಕೂರೇಶರ ಅನುಮತಿ ಪಡೆದು ದಂಡಿಗೆಗಳ ವ್ಯವಸ್ಥೆ ಮಾಡಿದರು. ಎಲ್ಲರೂ ಬೆಟ್ಟವಿಳಿದು ಪದ್ಮಾವತೀ ದೇವಾಲಯಕ್ಕೆ ಬಂದರು.

## ಪದ್ಮಾವತೀ ಸನ್ನಿಧಿ

"ತೊಂಡ ಮಂಡಲದ ಅರಸ ಆಕಾಶರಾಜ, ಹೆಂಡತಿ ಧಾರಿಣೀ ದೇವಿ. ರಾಜನು ಪುತ್ರಕಾಮೇಷ್ಟಿ ಯಾಗಮಾಡಿ ಪದ್ಮಾವತಿಯನ್ನು ಪಡೆದ. ಅವಳು ಲಕ್ಷ್ಮಿಯ ಅವತಾರ. ವಿಷ್ಣುವಿನ ಅರ್ಚಾನವತಾರವೆನಿಸಿದ ವೆಂಕಟೇಶ್ವರ ಪದ್ಮಾವತಿಯನ್ನು ಮದುವೆಯಾದದ್ದು ಇದೇ ಮಂಗಾಪುರದ ಕಲ್ಯಾಣ ಮಂಟಪದಲ್ಲಿ" ಎಂದು ಮುಂತಾಗಿ ಹಿಂದೆಯೇ ಹೇಳಿದೆ.

ಬೆಟ್ಟಕ್ಕೆಯಾತ್ರೆ ಬಂದವರು ಯಾರೂ ಪದ್ಮಾವತಿಯನ್ನು ಸೇವಿಸದೆ ಹಿಂದಿರುಗುವುದಿಲ್ಲ. ಸಾಮಾನ್ಯವಾಗಿ ಶುಕ್ರವಾರ ಅಲ್ಲಿ ಜಾತ್ರೆಯಂತೆ ಸಹಸ್ರಾರು ಜನ ನೆರೆದಿರುತ್ತಾರೆ. ಕೆಲವರು ಶ್ರೀಮಂತ ಭಕ್ತರು ದೇವಿಗೆ ಕೋಟಿಕುಂಕುಮಾರ್ಚನೆ ಮಾಡಿಸುವ ಸಂಕಲ್ಪ ತಳೆದಿರುತ್ತಾರೆ. ದೇವಿಯ ಮುಂದೆ ಸಾಲುಸಾಲಾಗಿ ಮಡಿಯಿಂದ ಕುಳಿತ ವೈದಿಕರು ಕುರಂಗ ಮುದ್ರೆಯಿಂದ ದೇವಿಗೆ ಮಂತ್ರಪೂರ್ವಕವಾಗಿ ಅರ್ಪಿಸಿದ ಸಿಂಧೂರರಾಶಿಗಳು ಅಲ್ಲಿ ಗೋಚರಿಸುತ್ತವೆ. ಒಂದು ಕಡೆ ಹೋಮ, ಒಂದುಕಡೆ ಮಂತ್ರ ಪಾರಾಯಣ ಮುಂತಾದ ಕಾರ್ಯಕ್ರಮಗಳು ಎಡೆಬಿಡದೆ ನಡೆದಿದ್ದವು. ಶ್ರೀಪತಿ ಕನಕಲತೆಯರೂ ತಮ್ಮ ಸೇವೆಯನ್ನು ನೆರವೇರಿಸಿದರು.

## ಜಾತ್ರೆಯಲ್ಲಿ ಡೊಂಬರಾಟ

ದೇವಾಲಯಕ್ಕೆ ಕೊಂಚ ದೂರದಲ್ಲಿ ಡೊಂಬರಾಟ ನಡೆದಿತ್ತು. ಡೊಂಬನೊಬ್ಬ ತನ್ನ ಸಂಗಡಿಗರೊಡನೆ ಆಟ ಕಟ್ಟಿದ್ದ. ಡೋಲು ಬಾರಿ

ಸುತ್ತಾ ಅವನು "ಎಲೆಲೇ ! ಯಕ್ಷಣೀ ವಿದ್ಯೆ ತೋರಿಸ್ತೀನಿ ! ಇಂದ್ರಜಾಲ ತೋರಿಸ್ತೀನಿ ! ಮಹೇಂದ್ರ ಜಾಲ ನೋಡು ಬನ್ನಿ !"

ಎಂದು ಡೋಲು ಬಾರಿಸುತ್ತಾ ಜನರನ್ನು ಆಕರ್ಷಿಸುತ್ತಿದ್ದ. ಐದಾರು ಮಂದಿ ಹುಡುಗರು ಪಲ್ಟಿ ಹಾಕುತ್ತಿದ್ದರು. ಜಟ್ಟಿಗಳಿಬ್ಬರು ತೊಡೆತಟ್ಟಿ, ರೆಟ್ಟೆ ಚಪ್ಪರಿಸಿ, ಕುಡಿ ಮೀಸೆ ನಿವಿರಿಸಿ, ಕುಸ್ತಿ ಆರಂಭಿಸಿದ್ದರು.

ಮತ್ತೊಬ್ಬ ನುಣುಪಾದ ಬೆಣಚು ಕಲ್ಲುಗಳನ್ನು ಹಿಡಿಯಲ್ಲಿ ಹಿಡಿದು ಒಂದೊಂದನ್ನು ನುಂಗಿ ಮತ್ತೆ ಹೊರಕ್ಕೆ ತೆಗೆಯುತ್ತಿದ್ದ! ಮಗದೊಬ್ಬ ಹಗ್ಗ ಕಟ್ಟಿ ಅದರ ಮೇಲೆ ನಡೆಯ ತೊಡಗಿದ್ದ, ಜನ ಆಟದ ಸುತ್ತು ದಟ್ಟವಾಗಿ ಸೇರುತ್ತಿದ್ದರು.

ಮತ್ತೆ ಕೆಲವರು ಗೆಣೆಯೊಂದನ್ನು ನಿಲ್ಲಿಸಿ, ಅದರ ನಾಲ್ಕೂ ಕಡೆ ಕಬ್ಬಿಣದ ಗೂಟಗಳನ್ನು ಹುಗಿದು ಗೆಣೆಯ ಹಗ್ಗಗಳನ್ನು ಗೂಟಗಳಿಗೆ ಬಿಗಿದು ಕಟ್ಟುತ್ತಿದ್ದರು.

ಹೃಷ್ಟ ಪುಷ್ಟವಾದ ದೇಹದಾರ್ಢ್ಯ ಹೊಂದಿದ್ದ ಯುವತಿಯೊಬ್ಬಳು ಕಟ್ಟು ಮಸ್ತಾದ ತನ್ನ ಎದೆ ಬಿಗಿದು, ಚಡ್ಡಿ ತೊಟ್ಟು ಗೆಣೆಯ ಮೇಲೆ ಏರಲು ಪ್ರಯತ್ನಿಸುತ್ತಿದ್ದಳು.

ಈ ಸಡಗರವನ್ನು ಕಂಡ ನಮ್ಮ ಶ್ರೀನಿವಾಸ ಪಂಡಿತರು ಡೊಂಬನನ್ನು ಹತ್ತಿರ ಕರೆದು—"ಅಪ್ಪ, ನನಗೆ ಬುದ್ಧಿಬಂದಂದಿನಿಂದಲೂ ಇಲ್ಲಿ ಯಾವ ಡೊಂಬನೂ ಬಂದು ಗೆಣೆ ನೆಟ್ಟು ಆಟ ಕಟ್ಟಿದ್ದನ್ನು ಕಾಣೆ. ಆ ಬಗ್ಗೆ ನಡೆದ ಕತೆಗಳೆಷ್ಟೋ ಇವೆ! ಈ ಸುತ್ತು ಮುತ್ತೂ ಮಾಂತ್ರಿಕರು ತುಂಬಾ ಇದ್ದಾರೆ! ಎಲ್ಲಕ್ಕಿಂತ ಹೆಚ್ಚಾಗಿ ಇದು ಆಚಾರ್ಯ ರಾಮಾನುಜರು ನೆಲೆಸಿರುವ ಪವಿತ್ರ ಸ್ಥಳ ! ಮಂತ್ರ ತಂತ್ರ ಬಲ್ಲಿದರಾದ ಅವರ ಹೆಸರು ಕೇಳಿಯೇ ಡೊಂಬರು ಇಲ್ಲಿ ಸುಳಿಯುವುದಿಲ್ಲ !" ಎಂದು ಎಚ್ಚರಿಸಿದರು.

"ಸ್ವಾಮಿ, ಪೂಜ್ಯ ಆಚಾರ್ಯರ ಕ್ಷಮೆ ಬೇಡಿಯೇ ನಾವು ಆಟ ಆರಂಭಿಸುತ್ತಿದ್ದೇವೆ. ಆದರೆ ಇಲ್ಲಿ ಆಟ ಕಟ್ಟಬಾರದೆಂದು ದೇವಸ್ಥಾನದ

ನಿಯಮವೇನಾದರೂ ಇದೆಯೋ ? ಇದ್ದರೆ ಹೇಳಿ ನಾವು ಹೊರಟು ಹೋಗುತ್ತೇವೆ! ಏನೋ ಹೊಟ್ಟೆಪಾಡು!" ಎಂದ ಡೊಂಬ ಕೈ ಮುಗಿದು.

"ಅದೆಲ್ಲ ನನಗೆ ತಿಳಿಯದು, ನನ್ನ ಅನುಭವ ಹೇಳಿದೆ. ಇದರ ಮೇಲೆ ನಿನ್ನ ಇಷ್ಟ !" ಎಂದು ಹೇಳಿ ಸುಮ್ಮನಾದರು ಪಂಡಿತರು.

ಆದರೂ ಡೊಂಬ ತನ್ನ ಆಟ ಆರಂಭಿಸಿಯೇ ಬಿಟ್ಟ. ಎಲ್ಲ ಆಟಗಳೂ ಮುಗಿದ ಮೇಲೆ ಆ ಡೊಂಬ ಭಾಮೆ ಗೆಣೆ ಏರಲು ಕಂಭದ ಹತ್ತಿರ ಬಂದು ಅದನ್ನು ಕಣ್ಣಿಗೊತ್ತಿಕೊಂಡು ಮೇಲೇರಿದಳು. ಮೊದಲೆ ನುಣುಪಾದ ಗೆಣೆ, ಅದಕ್ಕೆ ಎಣ್ಣೆ ಬೇರೆ ಸವರಿರುವುದರಿಂದ ಅವಳು ಜಾರಿ ಜಾರಿ ಬೀಳುತ್ತಿದ್ದಳು. ಕಡೆಗೂ ಸಾಹಸಮಾಡಿ ಭಾಮೆ ಗಣೆ ಏರಿ ತುದಿ ಸೇರಿದಳು. ಜನ ಕುತೂಹಲದಿಂದ ಈ ಆಟ ನಿರೀಕ್ಷಿಸುತ್ತಿದ್ದರು. ಅವಳ ಆಟ ಕ್ಷಣ ಕ್ಷಣಕ್ಕೂ ರಂಗೇರುತ್ತಿತ್ತು ! ಸುತ್ತ ಮುತ್ತ ಅಂಗಡಿಗಳವರು ಅಂಗಡಿ ಕೆಲಸ ಮರೆತು ಡೊಂಬ ಭಾಮೆಯನ್ನು ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದರು. ಊರವರು ತಮ್ಮ ತಮ್ಮ ಕಾಯಕ ಸಹಿತ ಅಲ್ಲಿಗೆ ಬಂದು ಸೇರ ತೊಡಗಿದರು. ಗೋಡೆ ಕಟ್ಟುವವ ಗೋಡೆ ನಡೆಯಿಸಿಕೊಂಡೇ ಬಂದ! ಕುಂಬಾರ ಚಕ್ರ ತಿರುಗಿಸುತ್ತಲೇ ಅಲ್ಲಿಗೆ ಸಾಗಿ ಬಂದಿದ್ದ! ಇದರಂತೆ ಕಮ್ಮಾರರು, ಚಮ್ಮಾರರು ಮುಂತಾದವರೆಲ್ಲ ತಾವು ಕಲಿತ ಮಂತ್ರ ಶಕ್ತಿಬಲದಿಂದ ಅಲ್ಲಿ ಬಂದು ನೆರೆಯುತ್ತಿದ್ದರು.

ದೊಂಬ ಭಾಮೆ ಗೆಣೆ ಹತ್ತಿ ತಾನು ಕಲಿತ ವಿದ್ಯೆಗಳನ್ನು ಅದರ ಮೇಲೆಯೇ ಪ್ರದರ್ಶಿಸುತ್ತಿದ್ದಳು. ಕಡೆಯಲ್ಲಿ ಅವಳು ತನ್ನ ಹೊಕ್ಕುಳನ್ನು ಗೆಣೆಯ ತುದಿಗೆ ಒತ್ತಿ ಚಕ್ರದಂತೆ ತಿರುಗತೊಡಗಿದ್ದಳು. ಇದ್ದಕ್ಕಿದ್ದ ಹಾಗೆ ಗೆಣೆ 'ಚಟ ಚಟ' ಎಂದು ಶೀಳತೊಡಗಿತು. ಇದನ್ನು ತಿಳಿದ ಭಾಮೆ ಮೇಲಿನಿಂದ ನಡುವಿಗೆ ಕಟ್ಟಿದ್ದ ಲಾಡಿಯನ್ನು ಬೀಸಿದಳು; ಅದು ಶೀಳಿದ್ದ ಕಂಭವನ್ನು ಸುತ್ತಿಸುತ್ತಿ ಬಿಗಿಯಿತು. ಅಷ್ಟರಲ್ಲಿ ನೂರಾರು ಇಲಿಗಳು ಕಂಭವನ್ನು ಏರುತ್ತಾ ಕಂಭಕ್ಕೆ ಸುತ್ತಿದ್ದ ಲಾಡಿಯನ್ನು ಕಡಿಯತೊಡಗಿದವು! ಅದನ್ನು ಕಂಡ ಭಾಮೆ ಮೇಲಿನಿಂದ ಬೆಕ್ಕುಗಳನ್ನು ಬಿಟ್ಟಳು, ಅವು ಇಲಿಗಳನ್ನು ನುಂಗ ತೊಡಗಿದವು! ಏನಾಯಿತೋ ಏನೋ ಗೆಣೆಯಮೇಲೆ

ಗಿರ್ರನೆ ತಿರುಗುತ್ತಿದ್ದ ಭಾಮೆ ಕಣ್ಣು ಮುಚ್ಚಿ ತೆಗೆಯುವುದರೊಳಗೆ ಅಲ್ಲಿಂದ ಹಾರಿ ದೂರದ ಗದ್ದೆಯಲ್ಲಿ ಬಿದ್ದು ಅಸು ನೀಗಿದಳು!.

"ಹೋ! ಎಂದು ಜನ ಹೌಹಾರಿತು! ಡೊಂಬ ಖಿನ್ನನಾದ! ಅವನು ಮಾಂತ್ರಿಕರಿಗೆ ಕೈ ಮುಗಿದು ಜಾಗ ಖಾಲಿ ಮಾಡಿದ.

ಡೊಂಬರಾಟ ನೋಡಿ ಬಿಡಾರಕ್ಕೆ ಹಿಂದಿರುಗಿದ ಶರಭಾರಾಧ್ಯರು "ಸ್ವಾಮಿ, ತಾವು ಆ ಡೊಂಬನಿಗೆ ಮೊದಲೇ ಸೂಚನೆ ಕೊಟ್ಟದ್ದಿರಿ! ಆದರೂ ಅವನು ತಮ್ಮ ಎಚ್ಚರಿಕೆಯನ್ನು ಅಲಕ್ಷ್ಯ ಮಾಡಿ ಕಷ್ಟ-ನಷ್ಟಗಳಿಗೆ ಗುರಿಯಾದ! ನೀವು ಹೇಳಿದಂತೆ ಈ ಸುತ್ತು-ಮುತ್ತು ಇಷ್ಟೊಂದು ಜನ ಮಾಂತ್ರಿಕರು ಇರಲು ಕಾರಣವೇನು?" ಎಂದರು ಶ್ರೀನಿವಾಸ ಪಂಡಿತರನ್ನು ಕುರಿತು.

ಅವರು ಹೇಳಿದರು- "ಸ್ವಾಮಿ, ಇದು ಬಹು ದೊಡ್ಡ ಕತೆ. ನಮ್ಮ ತಂದೆಯವರಿಂದ ಕೇಳಿದ್ದೆ. ಈ ಬೆಟ್ಟ ಸಾಲಿಗೆ ಹೊಂದಿಕೊಂಡಂತೆ ಮುಂದೆ 'ಮಾಕಳಿ' (ಮಹಾಕಾಳಿ) ಎಂಬ ದುರ್ಗವಿದೆ. ಅದರಲ್ಲಿ ಅನೇಕ ಗುಹೆಗಳು. ಅವುಗಳಲ್ಲಿ ಕೆಲವರು ಬೈರಾಗಿಗಳು ನೆಲೆಸಿದ್ದರಂತೆ. ಅವರು ಪ್ರತಿದಿನ ಮುಂಜಾನೆ ಬೆಟ್ಟದ ಮಗ್ಗುಲಲ್ಲಿರುವ ಹಳ್ಳಿಗಳಿಗೆ ಭಿಕ್ಷಕೆ ಹೋಗುತ್ತಿದ್ದರು. ಅವುಗಳಲ್ಲಿ ಒಂದು ಹಳ್ಳಿಯ ಹೆಸರು 'ಗೆದರೆ' ಎಂದು.

ಆ ಊರಿನ ಗೌಡನ ಮಗಳು ತುಂಬಾ ಸ್ಪುರದ್ರೂಪಿ. ಬೈರಾಗಿ ಅವಳನ್ನು ಕಂಡು ಮೋಹಿತನಾಗಿದ್ದ. ಹೇಗಾದರೂ ಮಾಡಿ ಅವಳನ್ನು ತನ್ನಲ್ಲಿಗೆ ಆಕರ್ಷಿಸಲು ಅವನು ಸಮಯ ಕಾಯುತ್ತಿದ್ದ. ಒಂದು ದಿನ ಬೈರಾಗಿ ಭಿಕ್ಷಕ್ಕೆ ಬಂದಾಗ ಅವಳು ಹೊರ ಜಗುಲಿಯ ಮೇಲೆ ಕುಳಿತು ತಲೆ ಬಾಚುತ್ತಿದ್ದಳು. ಬೈರಾಗಿಯನ್ನು ಕಂಡ ಅವಳು ಭಿಕ್ಷೆ ತರಲು ಒಳಕ್ಕೆ ಹೋದಳು. ಅದೇ ಸಮಯವೆಂದು ಬೈರಾಗಿ ಜೋಳಿಗೆಯಿಂದ ಒಂದು ಸೊಪ್ಪು ತೆಗೆದು ಅಂಗೈಯಲ್ಲಿ ನಜಿಗಿ ಅವಳು ತಲೆಗೆ ಸವರಲು ಇಟ್ಟಿದ್ದ ಎಣ್ಣೆ ಬಟ್ಟಲಿಗೆ ಹಿಂಡಿ ಸುಮ್ಮನೆ ನಿಂತಿದ್ದ.

ಬೈರಾಗಿ ಅವಳಿಂದ ಭಿಕ್ಷೆ ಪಡೆದು ಮುನ್ನಡೆದ. ಅಷ್ಟರಲ್ಲಿ ಅವಳ ಅಣ್ಣ ಬಾಗಿಲಿಗೆ ಓಡಿ ಬಂದು 'ತಂಗಿ, ಗೊಬ್ಬರದ ಗಾಡಿಗಳಿಗೆ ಎರೆ ಹಾಕ

ಬೇಕು, ಎರೆಕೊಂಬಿಗೆ ಎಣ್ಣೆ ಹಾಕು !' ಎಂದ. ಅವಳು ಎಣ್ಣೆ ತರುವುದಕ್ಕಾಗಿ ಒಳಕ್ಕೆ ಹೋದಳು. ಆದರೆ ಅವಳು ಬರುವುದು ತಡವಾಯಿತೆಂದು ಭಾವಿಸಿದ ಅವನು ತಲೆಗೆ ಸವರಲು ಇಟ್ಟಿದ್ದ ಎಣ್ಣೆ ಬಟ್ಟಲನ್ನೇ ಎರೆಕೊಂಬಿಗೆ ಸುರಿದುಕೊಂಡು ಹೊರಟುಹೋದ. ಎರೆ ಹಚ್ಚಿದ ಗಾಡಿಗಳು ಆ ದಿನ ತುಂಬಾ ವೇಗವಾಗಿ ಓಡುತ್ತಿದ್ದವು. ಮಧ್ಯಾಹ್ನ ಊಟಕ್ಕೆ ಹೋಗುವಾಗ ಗಾಡಿಗಳಿಗೆ ಗೊಬ್ಬರ ತುಂಬಿ ಎತ್ತುಗಳನ್ನು ಬಿಚ್ಚಿ, ಎತ್ತುಗಳಿಗೆ ಮೇವು ಹಾಕಿ ಆಳುಗಳು ಮನೆಗೆ ತೆರಳಿದರು. ಅಷ್ಟರಲ್ಲಿ ಗಾಡಿಗಳು ತಮಗೆ ತಾವೇ ಬೆಟ್ಟದ ಗವಿಯ ದಾರಿ ಹಿಡಿದವು.

ಬೈರಾಗಿ ಗೌಡನ ಮಗಳು ಬರುವಳೆಂಮ ಹಾದಿ ಕಾಯುತ್ತಿದ್ದ. ಆದರೆ ಗಾಡಿಗಳು ಒಂದರ ಹಿಂದೆ ಒಂದು ಬರುತ್ತಿದ್ದುದನ್ನು ಕಂಡು, ಏನೋ ಅಚಾತುರ್ಯ ನಡೆದಿರಬೇಕೆಂದು ಗಾಬರಿಯಾದ ಬೈರಾಗಿ ಗವಿಯ ಮುಂಬಾಗಿಲು ಭದ್ರಪಡಿಸಿ ಹಿಂಬಾಗಿಲಿನಿಂದ ಅಲ್ಲಿಂದ ಕಂಬಿ ಕಿತ್ತ. ವೇಗವಾಗಿ ಬಂದ ಗಾಡಿಗಳು ಗವಿ ಬಾಗಿಲಿಗೆ ಡಿಕ್ಕಿ ಹೊಡೆದು ಮುರಿದುಬಿದ್ದವು.

ಅಷ್ಟರಲ್ಲಿ ಗಾಡಿಗಳವರು, ಮತ್ತು ಹಳ್ಳಿಯವರು ಈ ಸೋಜಿಗ ಕಂಡು ಗಾಡಿಗಳನ್ನು ಹಿಂಬಾಲಿಸಿದರು. ಗವಿ ಹತ್ತಿರ ಬಂದು ಗಾಡಿಗಳ ಪಾಡು ಕಂಡರು. ಬಾಗಿಲು ಒಡೆದು ಗವಿ ಹೊಕ್ಕಾಗ ಬೈರಾಗಿ ಮಾಯವಾಗಿದ್ದ.

ಗವಿಯಲ್ಲಿ ಅನೇಕ ಓಲೆಗರಿ ಕಟ್ಟುಗಳಿದ್ದವು. ಗೌಡನು ಬೈರಾಗಿ ಮಾಟ-ಮದ್ದು ಕಲಿತಿದ್ದನೆಂದು ಊಹಿಸಿ, ಅವುಗಳನ್ನು ಬೆಂಕಿಗೆ ಹಾಕಿಸಿದ. ಆದರೆ ಅವು ಬೆಂಕಿಯಿಂದ ಹಾರಿ ಹಾರಿ ಹೊರಕ್ಕೆ ಬೀಳುತ್ತಿದ್ದವಂತೆ! ಅನೇಕರು ಅವುಗಳಲ್ಲಿ ಕೆಲವನ್ನು ಕದ್ದು ಮನೆಗೆ ತಂದು ಓದಿ ಮಾಂತ್ರಿಕರಾದರು. ಅವರಲ್ಲಿ ಕೆಲವರು ಇಲ್ಲಿಗೂ ಬಂದು ನೆಲೆಸಿದ್ದಾರೆ! ನಮ್ಮ ಆಚಾರ್ಯರೂ ಕಾಶ್ಮೀರಕ್ಕೆ ಹೋಗಿ ಮಂತ್ರವಿದ್ಯೆ ಕಲಿತು ಬಂದವರು! ಶಂಕರಾಚಾರ್ಯರೂ ಈ ವಿದ್ಯೆಯಲ್ಲಿ ಬಲ್ಲಿದರಂತೆ! ”

ಶ್ರೀನಿವಾಸ ಪಂಡಿತರು ನಿರ್ವಂಚನೆಯಿಂದ ಹೇಳಿದ ವಿಚಾರವನ್ನು ಕೇಳಿ ಆರಾಧ್ಯರು ಆಶ್ಚರ್ಯಚಕಿತರಾದರು. ಕನಕ, ವಿಶಾಲಾಕ್ಷಿಯರು

ಪಂಡಿತರನ್ನು ಮಿಕ ಮಿಕ ನೋಡತೊಡಗಿದರು. ಶಂಭು, ಶ್ರೀಪತಿಗಳು ಕೈ-ಕಾಲು ತೊಳೆಯಲು ಹೋಗಿದ್ದರು.

ಶಿವಶಂಕರ ಪಾಕ ಸಿದ್ಧಪಡಿಸಿ ನಿದ್ದೆ ಮಾಡುತ್ತಿದ್ದ. ಗುರುಲಿಂಗಾರಾಧ್ಯರು ಅವನನ್ನು ಎಬ್ಬಿಸಿ, ಎಲ್ಲರೂ ಪ್ರಸಾದ ತೆಗೆದುಕೊಂಡು ವಿಶ್ರಮಿಸಿದರು.

ಸಂಜೆ ಏಳು ಗಂಟೆಯ ಮೇಲೆ ಕನಕಲತೆ ವಿಶಾಲಾಕ್ಷಿಯ ಜೊತೆ ವಿಹಾರ ಹೊರಟು 'ಸ್ವಾಮಿಪುಷ್ಕರಿಣಿ'ಯ ಮುಂದಿರುವ ವಿಹಾರವಾಟಿಕೆಯಲ್ಲಿ ಒಂದು ಲತಾ ಮಂಟಪದ ಹಾಸುಗಲ್ಲಿನ ಮೇಲೆ ಕುಳಿತು ಬೆಳಗಿನ ಡೊಂಬರಾಟದ ವಿಚಾರ ಮಾತನಾಡುತ್ತಿದ್ದಳು. ಅಷ್ಟರಲ್ಲಿ ಜಟಾಧಾರಿಯೊಬ್ಬ ತಮ್ಮ ಮುಂದೆ ಹಾದುಹೋದುದನ್ನು ಅವರು ಗಮನಿಸಿದರು.

ತಲೆ ಜಡೆಗಟ್ಟಿತ್ತು,ಕಿವಿಗಳಲ್ಲಿ ನಾಗಕುಂಡಲಗಳು ತೂಗುತ್ತಿದ್ದವು. ರುದ್ರಾಕ್ಷಿ-ಭದ್ರಾಕ್ಷಿ ಹಾರಗಳು ಕೊರಳಲ್ಲಿ. ಕಂಕುಳಲ್ಲಿ ಜೋಳಿಗೆ, ಕೈಯಲ್ಲೊಂದುನಾಗಬೆತ್ತ ಹಿಡಿದಿದ್ದ.ಹಣೆಯಲ್ಲಿ ಕುಂಕುಮಾಕ್ಷತೆಗಳು.ಅವನನ್ನು ಕಂಡ ಕನಕೆಯ ಎದೆ ಧಸಕ್ಕೆಂದಿತು! ಅವನು ಮುಂದೆ ಹೋದರೂ ಅವನ ಚಿತ್ರ ಅವಳ ಮುಂದೆ ಸುಳಿಯುತ್ತಿತ್ತು! ಕಣ್ಣು ಮಂಜಾಯಿತು!

"ವಿಶಾಲಾ, ಮನೆಗೆ ಹೋಗುವ ನಡೆ" ಎಂದು ಮೇಲೆದ್ದಳು ಕನಕಾ. ಅವಳ ಸ್ಥಿತಿ ಕಂಡು ವಿಶಾಲೆಯೂ ಹೆದರಿ ಮೇಲೆದ್ದಳು. ಮುಂದಡಿಯಿಟ್ಟ ಕನಕಾ ಎಡವಿ ಬಿದ್ದಳು.ತಕ್ಷಣ ವಿಶಾಲಾ ಅವಳನ್ನು ರೆಟ್ಟೆ ಹಿಡಿದು ಎಬ್ಬಿಸಿ ನಿಧಾನವಾಗಿ ಇಬ್ಬರೂ ತಟ್ಟಾಡುತ್ತಾ ಬಿಡಾರ ಸೇರಿದರು. ಕನಕೆಯ ಸ್ಥಿತಿ ಕಂಡು ಆರಾಧ್ಯರೂ ಓಡಿ ಬಂದರು. ವಿಶಾಲಾಕ್ಷಿಯ ಸಹಾಯದಿಂದ ಕನಕಾ ಹಾಸಿಗೆಯ ಮೇಲೆ ವಿಶ್ರಮಿಸಿದಳು. ವಿಶಾಲಾಕ್ಷಿ ಅಲ್ಲಿ ನಡೆದದ್ದನ್ನು ವಿವರಿಸಿದಳು! ಅಷ್ಟರಲ್ಲಿ ಕೂರೇಶರೊಡನೆ ನಾಳಿನ ತಮ್ಮ ಪ್ರಯಾಣದ ಕಾರ್ಯಕ್ರಮ ಚರ್ಚಿಸುತ್ತಿದ್ದ ಶಂಭು-ಶ್ರೀಪತಿಗಳೂ ಅಲ್ಲಿಗೆ ಬಂದರು.

ವಿಷಯ ತಿಳಿದ ಕೂರೇಶರು ಶ್ರೀನಿವಾಸ ಪಂಡಿತರನ್ನು ಕರೆಸಿ, ಕೂಡಲೇ "ವೈದ್ಯರೊಬ್ಬರನ್ನು ಬರಮಾಡು" ಎಂದರು.

ಪಂಡಿತರು ವೈದ್ಯನ ಜೊತೆಗೆ ಒಬ್ಬ ಮಾಂತ್ರಿಕನನ್ನೂ ಕರೆತಂದರು. ವೈದ್ಯರು ಕನಕೆಯ ನಾಡಿ ಹಿಡಿದು ಪರೀಕ್ಷಿಸಿ, "ಕೊಂಚ ಹೆದರಿದ್ದಾಳೆ, ನಾಡಿ ಸರಿಯಾಗಿದೆ. ರಾತ್ರಿ ನಿದ್ದೆ ಮಾಡಲಿ, ಬೆಳಗಿನ ಹೊತ್ತಿಗೆ ಸರಿಯಾಗುತ್ತೆ" ಎಂದು ಹೇಳಿ ಹಿಂದಿರುಗಿದರು.

ಅನಂತರ ಹತ್ತಿರಕ್ಕೆ ಬಂದ ಮಾಂತ್ರಿಕ ನಾಡಿ ನೋಡುವ ವೇಳೆಗೆ ಮೈ ಬಿಸಿಯಾಗಿತ್ತು. ಆತ ಹೇಳಿದ, "ಸ್ವಾಮಿ, ಇವರು ಹೆದರಿರುವುದು ನಿಜ. ಇದು ಗ್ರಹ ಚೇಷ್ಟೆ. ಅವರು ಬಿದ್ದ ಜಾಗದಲ್ಲಿ ಗ್ರಹಸಂಚಾರ ವಿಡೆ. ಇದಕ್ಕೆ ನಾಡಿದ್ದು ಭಾನುವಾರ ಒಂದು ಯಂತ್ರಧಾರಣ ಮಾಡೋಣ" ಎಂದು ಹೇಳಿ ಹೋದ.

ಜ್ವರ ಏರತೊಡಗಿತ್ತು, ಮೈ ನಡುಗುತ್ತಿತ್ತು. ರಾತ್ರಿಯೆಲ್ಲ ಕನವರಿಕೆ, ಯಾರೂ ನಿದ್ದೆ ಮಾಡಲಿಲ್ಲ. ಒಂದು ದಿನ ಕಳೆವುದು ಅವರಿಗೆ ವರ್ಷವಾದಂತೆ ಆಗಿತ್ತು. ಭಾನುವಾರ ಮುಂಜಾನೆ ಮಾಂತ್ರಿಕ ಬಂದ. ಅವನೊಂದು ಯಂತ್ರವನ್ನು ಸಿದ್ಧಪಡಿಸಿಕೊಂಡೇ ತಂದಿದ್ದ. ಪ್ರಯಾಸದಿಂದ ಕನಕೆಯನ್ನು ಬಿದ್ದ ಸ್ಥಳಕ್ಕೆ ಕರೆದೊಯ್ದು, ಪೂಜೆ ಸಲ್ಲಿಸಿ, ನಿಂಬೆ ಹಣ್ಣು ಕತ್ತರಿಸಿ ಮಾಂತ್ರಿಕ ಯಂತ್ರವನ್ನು ಮಂತ್ರಿಸಿ ಕನಕೆಯ ಎಡ ರಟ್ಟೆಗೆ ಧರಿಸಿದ್ದಲ್ಲದೆ, ನೀರು ಮಂತ್ರಿಸಿ ಮುಖಕ್ಕೆ ಮೂರು ಸಲ ಎರಚಿದ. "ಎಲ್ಲಾ ಸರಿಹೋಗುತ್ತೆ, ಹೆದರಬೇಕಾದ ಅಗತ್ಯವಿಲ್ಲ!" ಎಂದು ಹೇಳಿ ಮೂಗು ಹಿಡಿದು ಸ್ವರನಾಡಿ ಗುರುತಿಸಿ, ನೆಲಕ್ಕೆ ಮೂರು ಸಲ ಚಿಟಿಕೆ ಹೊಡೆದು ಹೊರಬಿದ್ದ.

ಕನಕಾ ಮೂರು ದಿನದಲ್ಲಿ ಚೇತರಿಸಿಕೊಂಡಳು. ಶಂಭುಭಟ್ಟರು ಪ್ರಾತಃಕಾಲ ತಮ್ಮ ಪ್ರಯಾಣ ನಿರ್ಧರಿಸಿದ್ದರು. ಕೂರೇಶರು ಮತ್ತು ಪಂಡಿತರು ಎಲ್ಲರನ್ನೂ ಬೀಳ್ಕೊಟ್ಟರು.

೪

ಶಂಭು ಭಟ್ಟರ ಯಾತ್ರಾತಂಡ ತಿರುಪತಿಯಿಂದ ಬೆಜವಾಡಕ್ಕೆ ಹಿಂದಿರುಗಿತ್ತು. ಕನಕೆಯ ದೇಹಸ್ಥಿತಿ ಸುಧಾರಿಸುತ್ತಿತ್ತು. ತನ್ನ ನೆಚ್ಚಿನ ಸೊಸೆಗೆ ತಿರುಪತಿಯಲ್ಲಾದ ಘಟನೆಯನ್ನು ಕೇಳಿ ಭಾಗೀರಥಿ ವಿಹ್ವಲಳಾದಳು. ಗುರು ಲಿಂಗಾರಾಧ್ಯರು ಶ್ರೀನಿವಾಸ ಪಂಡಿತನ ಬಗೆಗೆ ಇನ್ನೂ ಖಾರವಾಗಿಯೇ ಇದ್ದರು.

ಕನಕೆ ಆಗಾಗ ಬೆಚ್ಚುತ್ತಿದ್ದಳು. ರಾತ್ರೆ ನಿದ್ದೆಯಲ್ಲಿಯೂ ಅವಳಿಗೆ ಕನವರಿಗೆ ಕಡಮೆಯಾಗಿರಲಿಲ್ಲ. ಆರಾಧ್ಯರು ಚಿಂತಾಕ್ರಾಂತರಾಗಿದ್ದರು. ಶ್ರೀಪತಿ ಗುರುಧ್ಯಾನದಲ್ಲಿ ತನ್ಮಯನಾಗಿದ್ದ.

ಸುಮಾರು ಅರ್ಧ ರಾತ್ರೆ ಕಳೆದಿರಬಹುದು. ಬಾಗಿಲು ತಟ್ಟಿದ ಶಬ್ದ! ಭಾಗೀರಥಿ ಬಂದು ಬಾಗಿಲು ತೆರೆದಳು. ಮನೆಯ ಮುಂದೆ ಜಟಾಧಾರಿಯಾದ ಅಪರಿಚಿತ ವ್ಯಕ್ತಿಯೊಬ್ಬ ನಿಂತಿದ್ದ.

ಹಣೆಯಲ್ಲಿ ಭಸ್ಮ ತ್ರಿಪುಂಡ್ರ. ಕಾವಿಯ ನಿಲುವಂಗಿ, ಅದರ ಮೇಲೆ ರುದ್ರಾಕ್ಷ ಮಾಲಿಕೆ. ಬಿಳಿಯ ಅಂಗವಸ್ತ್ರ ಕಂಠವನ್ನು ಬಳಸಿ, ಅದರ ತುದಿಗಳು ಎರಡೂ ಕಡೆ ಜೋತಾಡುತ್ತಿದ್ದವು. ಕಂಕುಳಿಗೊಂದು ಜೋಳಿಗೆ ಕೈಯಲ್ಲಿ ನಾಗಬೆತ್ತ ಮತ್ತು ಬಿಳಿಯ ಕೊಡೆಗಳು.

"ತಾಯಿ, ಶ್ರೀಪತಿಯವರಿದ್ದಾರೆಯೇ ?" ಕೇಳಿದ ಅಪರಿಚಿತ ವ್ಯಕ್ತಿ. ಗುರುಸ್ಮರಣೆಯಲ್ಲಿ ನಿರತನಾಗಿದ್ದ ಶ್ರೀಪತಿ ಎದ್ದು ಬಾಗಿಲಿಗೆ ಬಂದು ವಿಸ್ಮಿತನಾಗಿ—

"ಓಹೋ ಭೈರಣ್ಣ ! ಎಲ್ಲಿಂದ ಬರುತ್ತಿದ್ದೀಯೆ ? ಒಳಗೆ ಬಾ. ಗುರುದೇವ ವೀರಣ್ಣರು ಹೇಗಿದ್ದಾರೆ ?" ಎಂದು ಕೇಳಿದ ಆತ್ಮೀಯತೆಯಿಂದ.

ಒಳಗೆ ಬಂದ ಭಾಗೀರಥಿ, "ಭೈರಣ್ಣ ಯಾರು ?" ಎಂದು ಕನಕೆಯನ್ನು ಪ್ರಶ್ನಿಸಿದಳು.

ಕನಕಾ ಅತ್ತೆಗೆ ಭೈರಣ್ಣನನ್ನು ಸೂಕ್ಷ್ಮವಾಗಿ ಪರಿಚಯಿಸುತ್ತಿದ್ದಳು.

"ಅದನ್ನೆಲ್ಲ ಸಾವಕಾಶವಾಗಿ ವಿವರಿಸುತ್ತೇನೆ. ಈಗ ಒಬ್ಬ ವ್ಯಕ್ತಿಗೆ ಪ್ರಾಣದಾನ ಮಾಡು!" ಎಂದ ಕಳಕಳಿಯಿಂದ ಭೈರಣ್ಣ.

"ಪ್ರಾಣದಾನ ! ಯಾರಿಗೆ ? ವಿವರಿಸಿ ಹೇಳು" ಎಂದ ಶ್ರೀಪತಿ.

"ನನ್ನ ಜೊತೆ ಬಂದಿರುವ ವ್ಯಕ್ತಿಗೆ!"

"ಏನಾಗಿದೆ ? ಎಲ್ಲಿ ಆತ ?"

"ನೀನು ಅಭಯ ಕೊಟ್ಟರೆ ಅವನನ್ನು ಕರೆತರುತ್ತೇನೆ. ಆತ ಅಸ್ತವ್ಯಸ್ತನಾಗಿದ್ದಾನೆ!"

"ಎಲ್ಲಿದ್ದಾನೆ ? ನಡೆ, ಹೋಗೋಣ!"

"ನೀವು ಬರುವುದು ಬೇಡ. ನಾನೇ ಕರೆತರುತ್ತೇನೆ"

—ಎನ್ನುತ್ತಿದ್ದಂತೆ ಕನಕಾ ಬಾಗಿಲಿಗೆ ಬಂದಳು. ಭೈರಣ್ಣ ಇಬ್ಬರಿಗೂ ವಂದಿಸಿದ. ಕನಕಾ ಪ್ರತಿವಂದಿಸಿದಳು ಹಸನ್ಮುಖಳಾಗಿ.

"ಕಷ್ಟದಲ್ಲಿರುವ ಆತನನ್ನು ಕರೆದು ತಾ. ಏನೇ ಇರಲಿ ; ಅವನಿಗೆ ನನ್ನ ಅಭಯವುಂಟು!"

ಎನ್ನುತ್ತಿದ್ದಂತೆ ಭೈರಣ್ಣ ಅವಸರದಿಂದ ಹೊರಗೆ ಹೋಗಿ ಸ್ವಲ್ಪ ಹೊತ್ತಿನ ಮೇಲೆ ಮತ್ತೊಬ್ಬ ವ್ಯಕ್ತಿಯೊಡನೆ ಒಳಕ್ಕೆ ಬಂದ.

ಬಂದ ವ್ಯಕ್ತಿ ಗಡಗಡ ನಡುಗುತ್ತಿದ್ದ. ಮೈಯೆಲ್ಲ ಗಾಯಗಳು. ಅವುಗಳಿಂದ ಕೀವು-ರಕ್ತ ಒಸರುತ್ತಿತ್ತು. ಮುಖ ವಿಕಾರವಾಗಿತ್ತು. ಜಡೆಗಟ್ಟಿದ ತಲೆಗೂದಲು ಚದುರಿತ್ತು. ಹಣೆಯ ಮೇಲೆ ಕುಂಕುಮ ತಿಲಕ, ಕಿವಿಗಳಲ್ಲಿ ನಾಗಕುಂಡಲಗಳು, ಪಾದ ಮುಟ್ಟುವ ಕಾವಿಯ ನಿಲು ವಂಗಿ, ಜೋಳಿಗೆ ಬಗಲಲ್ಲಿ. ಕೈಯಲ್ಲೊಂದು ಕೊಡೆ. ಕ್ಷಣಕ್ಷಣಕ್ಕೂ ಆ ವ್ಯಕ್ತಿ "ಉರಿ ! ಮೈಯೆಲ್ಲ ಉರಿ ! ಗಾಯಗಳ ನೋವು ತಡೆಯಲಾರೆ" ಎನ್ನುತ್ತಿದ್ದ.

"ಈತನೇ ಆ ವ್ಯಕ್ತಿ" ಶ್ರೀಪತಿ–ಕನಕೆಯರಿಗೆ ಆತನನ್ನು ಪರಿಚಯಿಸಿದ ಭೈರಣ್ಣ.

ಆತ ಇಬ್ಬರಿಗೂ ದೀರ್ಘದಂಡ ಪ್ರಣಾಮ ಮಾಡಿದ.

'ಇವರನ್ನು ತಿರುಪತಿಯಲ್ಲಿ ಕಂಡಿದ್ದೆ' ಎಂದು ಕನಕೆ ಯೋಚಿಸುತ್ತಿದ್ದಳು.

"ಏನು ಸಮಾಚಾರ ? ಎಲ್ಲಿಂದ ಬರುತ್ತಿದ್ದೀರಿ ?" ಬಂದವರನ್ನು ಪ್ರಶ್ನಿಸಿದ ಶ್ರೀಪತಿ ಆತ್ಮೀಯವಾಗಿ. ಆತ ಬಿಕ್ಕಿ ಬಿಕ್ಕಿ ಅಳುತ್ತಾ—

"ಸ್ವಾಮಿ ಅದನ್ನೆಲ್ಲ ನಿಧಾನವಾಗಿ ಅರಿಕೆ ಮಾಡುತ್ತೇನೆ. ಮೊದಲು ನನ್ನ ನತದೃಷ್ಟ ಮಂಡೆಯ ಮೇಲೆ ನಿಮ್ಮ ಪವಿತ್ರ ಹಸ್ತವನ್ನಿಡಿ. ಮೈ ಉರಿ ತಣ್ಣಗಾಗಲಿ ! ಗಾಯಗಳ ನೋವು ಮಾಯಲಿ ! ನೀವು ಕೇಳಿದ ಎಲ್ಲ ಪ್ರಶ್ನೆಗಳಿಗೂ ಉತ್ತರಿಸುತ್ತೇನೆ"

—ಎಂದು ಹೇಳಿ ಆತ ತನ್ನ ಮಸ್ತಕವನ್ನು ಶ್ರೀಪತಿಯ ಪಾದಗಳ ಮೇಲಿಟ್ಟ. ಕಣ್ಣೀರಿನ ಕೋಡಿ ಹರಿದು ಶ್ರೀಪತಿಯ ಪಾದಗಳು ಒದ್ದೆಯಾದವು.

ಶ್ರೀಪತಿ ಮನಸ್ಸಿನಲ್ಲಿ ಗುರುವನ್ನು ನೆನೆದು ಅವನ ಮಸ್ತಕದ ಮೇಲೆ ತನ್ನ ಬಲಹಸ್ತವನ್ನಿಟ್ಟ. ಅದು ಉಗ್ರಜ್ವರತಪ್ತ ಹಣೆಯ ಮೇಲೆ ಮಂಜುಗಡ್ಡೆ ಇಟ್ಟಂತಾಯಿತು. "ಪುಣ್ಯಾತ್ಮಾ ! ಎಷ್ಟೋ ಹಿತವಾಗಿದೆ. ನಿಜವಾಗಿಯೂ ನಿಮ್ಮದು ಅಮೃತಹಸ್ತ! ಉರಿ ತಣ್ಣಗಾಯಿತು. ಗಾಯಗಳ ನೋವು ಮಾಯವಾಯಿತು! ನನಗೆ ಪ್ರಾಣದಾನ ಮಾಡಿದ ಪುಣ್ಯ ನಿಮ್ಮದು! ಈ ಉಪಕಾರವನ್ನು ಎಂದೆಂದಿಗೂ ಮರೆಯಲಾರೆ!" ಎಂದ ಆತ ಶ್ರೀಪತಿ ದಂಪತಿಗಳ ಪಾದ ಮುಟ್ಟಿ ಮತ್ತೆ ಪ್ರಣಾಮ ಮಾಡಿದ.

"ಎಲ್ಲಿಂದ ಬರುತ್ತಿದ್ದೀರಿ ? ಏನಾಯಿತು ?" ಮತ್ತೆ ಎಚ್ಚರಿಸಿದ ಶ್ರೀಪತಿ.

"ಸ್ವಾಮಿ, ತಿರುಪತಿಯಿಂದ ಬರುತ್ತಿದ್ದೇನೆ. ನೀವು ಅಲ್ಲಿರುವಾಗ ಹಾವಿರುವ ಹುತ್ತಕ್ಕೆ ಕೈಯಿಟ್ಟಂತೆ ನಾನು ಒಂದು ಅವಿವೇಕಕ್ಕೆ ಕರೆ

ಕೊಟ್ಟೆ. ಅದರ ಫಲ ಇದು. ಪರುಷ ಮುಟ್ಟಿದ ಕಬ್ಬಿಣದಂತೆ ನಿಮ್ಮ ಹಸ್ತ ಸ್ಪರ್ಶದಿಂದ ನನ್ನ ಪಾಪ ಶರೀರ ಪಾವನವಾಯಿತು. ಪುಟಕ್ಕಿಟ್ಟ ಚಿನ್ನದಂತೆ ಪರಿಶುದ್ಧವಾಯಿತು. ಇನ್ನು ಅದಕ್ಕೆ ಯಾವ ಬಗೆಯ ಕಿಲುಬೂ ಹತ್ತುವುದಿಲ್ಲ. ನಾನು ಇದುವರೆಗೆ ಎಸಗಿದ ಅಮಾನುಷ ಪಾಪಕೃತ್ಯಗಳು ನನ್ನನ್ನು ಪಶ್ಚಾತ್ತಾಪದ ಕುಲುಮೆಯಲ್ಲಿ ಸುಟ್ಟು ಭಸ್ಮ ವಾದವು. ಇನ್ನು ಯಾವ ಹೆದರಿಕೆಯೂ ನನಗಿಲ್ಲ.''

"ನಿನಗೆ ಯಾವ ಹೆದರಿಕೆಯೂ ಬೇಡ. ನಿನ್ನ ಕತೆಯನ್ನು ನಿರ್ಭಯವಾಗಿ ಹೇಳು'' ಎಂದ ಶ್ರೀಪತಿ ಅಭಯ ಹಸ್ತ ಚಾಚಿ.

ಈಗ ಎಲ್ಲರ ದೃಷ್ಟಿ ಆ ಅಪರಿಚಿತ ವ್ಯಕ್ತಿಯ ಮೇಲೆ ಕೇಂದ್ರೀಕೃತ ವಾಯಿತು.

"ಸ್ವಾಮಿ, ನಾನು ಸದ್ಯಕ್ಕೆ ತಿರುಪತಿಯಲ್ಲಿ ಒಬ್ಬ ಮಾಂತ್ರಿಕನಾಗಿ ಹೊಟ್ಟೆ ಹೊರೆಯುತ್ತಿದ್ದೇನೆ. ಅಲ್ಲಿರುವ ಪಂಡಿತರು ನನ್ನ ಮಿತ್ರರು. ಅವರು ನನ್ನನ್ನು ಇಂಥ ಕೆಲಸಗಳಿಗೆ ಆಗಾಗ ಬಳಸಿಕೊಳ್ಳುವುದುಂಟು.

ಆ ದಿನ ಡೊಂಬರಾಟ ನೋಡಲು ನಾನೂ ಅಲ್ಲಿಗೆ ಬಂದಿದ್ದೆ. ನಮ್ಮ ಪಂಡಿತರು ಅವನಿಗೆ ಬುದ್ಧಿ ಮಾತು ಹೇಳಿದರು. ಅದಕ್ಕೆ ಡೊಂಬ ಬೆಲೆ ಕೊಡಲಿಲ್ಲ. ಅವನಿಗೆ ತಕ್ಕ ಶಾಸ್ತಿಯೂ ಆಯಿತೆನ್ನಿ !"

—ಎಂದು ಹೇಳಿದ ಮಾಂತ್ರಿಕ ಕ್ಷಣ ಕಾಲ ಮೌನ ಧರಿಸಿದ. ಅನಂತರ ಪ್ರಶ್ನಿಸಿದ—

"ಸ್ವಾಮಿ, ನಿಮಗೂ ಆ ಪಂಡಿತರಿಗೂ ಏನಾದರೂ ವೈಮನಸ್ಯ ವಿತ್ತೆ ?" ಎಂದ ಸಂದೇಹ ಸೂಚಿಸಿ.

"ಇಲ್ಲ, ಇಲ್ಲ! ಅವರು ನಮ್ಮನ್ನು ತುಂಬಾ ಚೆನ್ನಾಗಿ ಜೋಪಾನ ಮಾಡಿದರು. ಇಲ್ಲದ ಸಲ್ಲದ ಅಪವಾದವನ್ನು ನಾವು ಯಾರ ಮೇಲೆಯೂ ಹೊರಿಸಲು ಇಷ್ಟಪಡುವುದಿಲ್ಲ."

—ಎಂದ ಶ್ರೀಪತಿ ಸಮಾಧಾನದಿಂದ.

ಅಷ್ಟರಲ್ಲಿ ಆರಾಧ್ಯರು ಮಧ್ಯೆ ಬಾಯಿ ಹಾಕಿ –"ಸ್ವಲ್ಪ ತಡೆ, ಶ್ರೀಪತಿ ! 'ವೈಮನಸ್ಯ' ಎಂದುದಕ್ಕೆ ನೆನಪಾಯಿತು. ಪಂಡಿತರು ಬೆಟ್ಟದ ಮೇಲೆ ಶ್ರೀಮದಾಚಾರ್ಯರು ಆರಂಭಿಸಿದ ಕೆಲವು ಕೆಲಸಗಳ ಬಗೆಗೆ ವಿವರಿಸುತ್ತಿರುವಾಗ ನಾನೊಂದು ವಿಷಯವನ್ನು ಕುರಿತು ವಿರೋಧಿಸಿದೆ. ಆಗ ಅವರು ತಲೆ ತಗ್ಗಿಸಿ ಮೌನ ತಳೆದರು ! ನನ್ನ ಮಾತು ಅವರಿಗೆ ಅಪ್ರಿಯವಾಗಿರಬೇಕೆಂದು ನಾನು ಆಗಲೇ ಊಹಿಸಿದೆ" ಎಂದರು.

"ಸರಿ, ಮುಂದೆ ಹೇಳಿ. ಆಮೇಲೆ ಏನಾಯಿತು ?" ಎಂದ ಶ್ರೀಪತಿ ಎತ್ತರಿಸಿದ ದನಿಯಲ್ಲಿ.

"ಸ್ವಾಮಿ, ಪಂಡಿತರ ಮೌನ ನನ್ನ ಕಾಯಕಕ್ಕೆ ಕರೆಕೊಟ್ಟಿತು. ಅದು ನನ್ನ ದುರ್ಗತಿಗೂ ಮೂಲವಾಯಿತು ! ನನ್ನ ಗತಿ ಹೀಗಾಯಿತು!" ಎಂದ ಮಾಂತ್ರಿಕ ತಡವರಿಸುತ್ತಾ.

"ಏನಾಯಿತು ? ಹೇಳಿ" ಎಂದ ಶ್ರೀಪತಿ ಮಾಂತ್ರಿಕನ ಕಡೆ ತಿರುಗಿ.

"ಅದೇ ದಿನ ಸಂಜೆ ತಾಯಿ ಕನಕಾ ಮತ್ತು ಅವರ ಜೊತೆಗಿದ್ದ ಮತ್ತೊಬ್ಬ ತಾಯಿ ಇಬ್ಬರೂ ವಿಹಾರಕ್ಕೆಂದು 'ಸ್ವಾಮಿಪುಷ್ಕರಿಣಿ'ಯ ಬಳಿ ಬಂದರು. ಸೂರ್ಯ ಮುಳುಗುವುದರಲ್ಲಿದ್ದ. ಮುತ್ಸಂಜೆ ಕತ್ತಲು ಕವಿಯುತ್ತಿತ್ತು. ಅವರು ತುಸು ಹೊತ್ತು ಅಲ್ಲಿ ಕುಳಿತಿದ್ದು, ಎದ್ದು ಬಿಡಾರದ ಕಡೆ ಕಾಲುಹಾಕಿದರು. ನನ್ನ ಕೈವಾಡದ ಫಲವಾಗಿ ಆ ತಾಯಿಯ ಕಣ್ಣು ಮಂಜಾಯಿತು. ತಲೆ ತಿರುಗಿದಂತಾಯಿತು. ತಡವರಿಸಿ ಮುಗ್ಗರಿಸಿ ಬಿದ್ದರು. ಜೊತೆಗಿದ್ದವರ ನೆರವಿನಿಂದ ಅವರು ಬಿಡಾರಕ್ಕೆ ಹಿಂದಿರುಗಿದರು ಎಂಬುದು ನಿಮಗೆ ತಿಳಿದದ್ದೆ ! ಅನಂತರ ನಾನು ಅವರು ಬಿದ್ದ ಸ್ಥಳಕ್ಕೆ ಹೋಗಿ, ಅಲ್ಲಿಯ ಸ್ವಲ್ಪ ಮಣ್ಣನ್ನು ವಸ್ತ್ರದಲ್ಲಿ ಕಟ್ಟಿ ಮನೆಗೆ ತಂದೆ. ಅದರಲ್ಲಿ ಒಂದು ಹೆಣ್ಣು ಪ್ರತಿಮೆ ತಯಾರಿಸಿದೆ. ಅದನ್ನು ವಸ್ತ್ರಭೂಷಣಗಳಿಂದ ಅಲಂಕರಿಸಿದೆ. ಮಾರುದಿನದಿಂದ ಮಾಟ ಕ್ರಮದಲ್ಲಿ ಮೂರು ದಿನಗಳವರೆಗೆ ಮಂತ್ರ-ತಂತ್ರಗಳಿಂದ ಅದಕ್ಕೆ ಪ್ರಾಣ ತುಂಬಲು ಪ್ರಯತ್ನಿಸುತ್ತಿದ್ದೆ.

ಆದರೆ ಅದೇ ರಾತ್ರಿ ಮಲಗಿದ ಮೇಲೆ ಸರಿಹೊತ್ತಿನಲ್ಲಿ ಒಂದು ಘಟನೆ ನಡೆಯಿತು. ಅಂಥ ಘಟನೆ ನನ್ನ ಜೀವನದಲ್ಲಿ ಎಂದೂ ಕಂಡಿರ ಲಿಲ್ಲ !

ಕಣ್ಣು ಕೋರೈಸುವ ಉಜ್ವಲ ಪ್ರಕಾಶ! ನೂರು ಸಿಡಿಲುಗಳು ಒಮ್ಮೆಯೇ ಸಿಡಿದಂತಹ ಭಯಂಕರ ಶಬ್ದ ! ಅದರ ಮಧ್ಯದಲ್ಲೊಂದು ಭೀಕರ ರೂಪು ಕಾಣಿಸಿತು. ಅದನ್ನು ಕಂಡು ಕಿಟ್ಟನೆ ಕಿರುಚಿದೆ !

ತಲೆ ತುಂಬಾ ಜಡೆಗಳು, ನೊಸಲ ಕಣ್ಣು, ಸುಲಿಪಲ್ಲು-ಕೋರೆ ದಾಡೆಗಳು, ತ್ರಿಶೂಲ-ಖಡ್ಗಗಳು ಹಿಂಗಡೆಯ ಕೈಗಳಲ್ಲಿ. ಎಡಗೈಯಿಂದ ನನ್ನ ಜುಟ್ಟು ಹಿಡಿದು ಸೆಳೆಬೆತ್ತದಿಂದ ನನ್ನ ಮೈಯಲ್ಲಿ ಬಾಸುಂಡೆ ಬರುವಂತೆ ಚೆನ್ನಾಗಿ ಥಳಿಸಿತು. ದಿಕ್ಕು ತಿಳಿಯದೆ ಆ ಉಗ್ರ ರೂಪಕ್ಕೆ ಶರಣಾದೆ. ಕಾಲು ಹಿಡಿದು ಪ್ರಾಣಭಿಕ್ಷೆ ಬೇಡಿದೆ. ಅದು ಹೇಳಿತು, 'ಛಿ, ಮೂಢ! ಕೂಡಲೇ ನೀನು ಶ್ರೀಪತಿ ದಂಪತಿಗಳಿಗೆ ಶರಣಾಗಿ ಅಭಯ ಕೇಳಿಕೊ ! ಇಲ್ಲದಿದ್ದರೆ ನಿನ್ನ ದುರ್ಗತಿಗೆ ಪರಿಹಾರವಿಲ್ಲ!' ಎಂದು ಆ ರೂಪು ಮರೆಯಾಯಿತು.

ಅನಂತರ ನಿಮ್ಮನ್ನು ಕಾಣಲು ಬಿಡಾರಕ್ಕೆ ಬಂದೆ. ಅದು ಖಾಲಿ ಯಾಗಿತ್ತು. ಬೆಂಕಿ ಹೊಕ್ಕಂತೆ ಮೈ ಉರಿಯುತ್ತಿತ್ತು ! ಗಾಯಗಳ ನೋವು ಹೇಳತೀರದು. ದಾರಿಕಾಣದೆ ಪರಿತಪಿಸುತ್ತಿದ್ದೆ. ಆಗ ಈ ಪುಣ್ಯಾತ್ಮ ಎಲ್ಲಿಂದಲೋ ಅಲ್ಲಿಗೆ ಬಂದು ಕಡು ದುಃಖದ ಕಗ್ಗಾಡಿನಲ್ಲಿ ದಾರಿಗಾಣದೆ ತಡಬಡಿಸುತ್ತಿದ್ದ ನನಗೆ ದಿಕ್ಕಾದ. ನಿಮ್ಮ ಬಳಿಗೆ ತಂದು ಬಿಟ್ಟ ! ನಿಮ್ಮ ಕೃಪೆಗೆ ಪಾತ್ರನಾದೆ. ಸತ್ತು ಬದುಕಿದೆ!" ಎಂದ ಮಾಂತ್ರಿಕನ ಮಾತು ಕೇಳಿ ಎಲ್ಲರೂ ಮೂಕವಿಸ್ಮಿತರಾದರು.

ಐದು ನಿಮಿಷ ಯಾರೂ ಮಾತನಾಡಲಿಲ್ಲ. ಅನಂತರ ಆರಾಧ್ಯರು

"ನಿನ್ನ ಸ್ಥಳ ಯಾವುದು ? ಹೆಸರೇನು ? ಏತಕ್ಕಾಗಿ ಇಲ್ಲಿಗೆ ಬಂದೆ?" ಕೇಳಿದರು ಸಹಜವಾಗಿ.

"ಸ್ವಾಮಿ, ನನ್ನ ಸ್ಥಳ ವಂಗದೇಶ. ನನ್ನ ಹೆಸರು ಕಾಳೀಪ್ರಸಾದ ಮಿಶ್ರ. ಜಾತಿಯಲ್ಲಿ ಬ್ರಾಹ್ಮಣ. ನಾನು ಶಾಕ್ತ ಪಂಥಕ್ಕೆ ಸೇರಿದವನು. ನನ್ನ ಗುರು 'ಮಹಾಕಾಳೀದತ್ತ ಮಿಶ್ರ' ಎಂದು.

ವಾಮಾಚಾರದಲ್ಲಿ ಅವರು ನಿಷ್ಣಾತರು. ಅವರ ಆರಾಧ್ಯ ದೈವ ಮಹಾಕಾಳಿ. ಅವಳಿಗೆ ಮಧು-ಮಾಂಸಾದಿ ಆಹಾರ ತುಂಬಾ ಇಷ್ಟ! ನಮ್ಮ ಇಷ್ಟಾರ್ಥ ಸಾಧಿಸಲು ಅವಳು ಬಯಸಿದ್ದನ್ನು ಒಪ್ಪಿಸಲೇಬೇಕು. ಏನೂ ದೊರೆಯದಿದ್ದಾಗ ನಮ್ಮ ಮೈ ರಕ್ತವನ್ನಾದರೂ ಬಸಿದು ಅವಳಿಗೆ ತರ್ಪಣ ಕೊಡಬೇಕು. ಅವಳು ಪ್ರಸನ್ನಳಾದರೆ ನಮ್ಮ ಭಾಗದ ಕಲ್ಪತರು ಫಲಿಸಿದಂತೆಯೇ !

ಮೊದಲು ಶುಶ್ರೂಷೆ ಮಾಡಿ ಗುರುವನ್ನು ಒಲಿಸಿಕೊಂಡೆ. ಪ್ರಸನ್ನರಾದ ಅವರು ತಮ್ಮಲ್ಲಿದ್ದ ವಿದ್ಯೆಯನ್ನೆಲ್ಲ ನನಗೆ ಧಾರೆ ಎರೆದರು."

"ಅಂಥ ಸ್ಥಳವನ್ನು ಬಿಟ್ಟು ಇಲ್ಲಿಗೇಕೆ ಬಂದೆ?"—ಕೇಳಿದರು ಆರಾಧ್ಯರು ಸೋಜಿಗಗೊಂಡು.

"ಸ್ವಾಮಿ, ಅದು ನನ್ನ ದುರ್ದೈವ. ನನಗೆ ಈ ತಂತ್ರಶಾಸ್ತ್ರವನ್ನು ಇನ್ನೂ ಹೆಚ್ಚು ಹೆಚ್ಚು ತಿಳಿಯಬೇಕೆಂಬ ಆಸೆ ಬಲವಾಗಿತ್ತು.

ಕಾಶ್ಮೀರ 'ತಂತ್ರಶಾಸ್ತ್ರದ ತವರು' ಎಂದು ಕೇಳಿದ್ದೆ. ಆಚಾರ್ಯ ಶಂಕರರು ಕೇವಲಾದ್ವೈತಿಗಳು. ಮಾಯೆಯನ್ನು 'ಅಭಾವ' ಎಂದು ತಿಳಿದಿದ್ದವರು. 'ಯಾ ಮಾ ಸಾ ಮಾಯಾ' ಎಂದು ನಿರ್ವಚಿಸಿ, ಅದನ್ನು 'ಮಿಥ್ಯೆ' ಎಂದು ತೆಗಳಿದ್ದವರು. ಅಂಥವರು ಕಾಶ್ಮೀರಕ್ಕೆ ಬಂದು ತಂತ್ರಶಾಸ್ತ್ರವನ್ನು ಅಭ್ಯಸಿಸಿ ಮಾಯೆಯನ್ನು 'ಶಿವಶಕ್ತಿ' ಎಂದೂ 'ಭಾವ' ರೂಪವೆಂದೂ ಹೇಳಿದ್ದಲ್ಲದೆ 'ಶಕ್ತಿಯ ನೆರವಿಲ್ಲದೆ ಶಿವನು ಏನನ್ನೂ ಮಾಡಲಾರ'* ಎಂಬ ನಿರ್ಧಾರಕ್ಕೆ ಬಂದರು.

---

* ಶಿವಃ ಶಕ್ತ್ಯಾಯುಕ್ತೋ ಯದಿ ಭವತಿ ಶಕ್ತಃ ಪ್ರಭವಿತುಂ || ನ ಚೇದೇವಂ...

—ಸೌಂದರ್ಯಲಹರೀ

ಅವರ ಶಿಷ್ಯ-ಪ್ರಶಿಷ್ಯರು ಅಲ್ಲಿ ಹೇರಳವಾಗಿದ್ದಾರೆ ಎಂದು ಕೇಳಿ ಅಲ್ಲಿಗೆ ಹೋದೆ. ಅಲ್ಲೊಬ್ಬ ಗುರುವನ್ನು ಆಶ್ರಯಿಸಿ ಗುರುಮುಖದಿಂದ ತಂತ್ರವಿದ್ಯೆಯನ್ನು ಅಭ್ಯಾಸ ಮಾಡಿ ಅರಗಿಸಿಕೊಂಡೆ"

—ಎಂದುದನ್ನು ಕೇಳಿದ ಆರಾಧ್ಯರಿಗೆ ಮಾಂತ್ರಿಕನ ಬಗೆಗೆ ಗೌರವ ಮೂಡಿತು. ಅವರೆಂದರು—

"ಅಪ್ಪ, ನೀನು ಸಾಮಾನ್ಯ ಮಾಂತ್ರಿಕನಲ್ಲ. ನೀನು ಅದನ್ನು ಗುರುಮುಖದಿಂದ ಕಲಿತು ಕಾರ್ಯರೂಪದಲ್ಲಿ ತಂದಿರುವೆ!"

"ಅನಂತರ ಅಲ್ಲಿಗೆ ಬಂದವರು ಶ್ರೀ ಗಿರಿಯ ದೇಶಿಕೇಂದ್ರರು. ಅವರು ರಾಜನ ಅತಿಥಿಗಳಾಗಿ ಬಂದು, ಸಭೆ-ಸಮಾರಂಭ ನಡೆಯಿಸಿದರು. ಅವರ ಕಾರ್ಯಗಳನ್ನು ನಿಯಂತ್ರಿಸಲು ನಮ್ಮ ಗುಂಪು ಪ್ರಯತ್ನಿಸಿತು. ಆದರೆ ಅವರ ಸೇವಕ ವೀರಣ್ಣನ ಪ್ರಭಾವದಿಂದ ಅದು ವಿಫಲವಾಯಿತು!"

"ಆ ವೀರಣ್ಣನ ಪರಿಚಯವುಂಟು ತಾನೆ ?" ಎಂದರು ಆರಾಧ್ಯರು ನಸುನಕ್ಕು.

"ಸ್ವಾಮಿ, ಅವರ ಬಗ್ಗೆ ತಮಗೇನಾದರೂ ಹೆಚ್ಚು ತಿಳಿದಿದ್ದರೆ ದಯಮಾಡಿ ಹೇಳಿ!" ಎಂದ ಮಾಂತ್ರಿಕ ದೈನ್ಯದಿಂದ.

"ಅಪ್ಪ, ಅವರೇ ಅಲ್ಲವೆ ನಿನಗೆ ಚಿತ್ತದ ರುಚಿ ಕಾಣಿಸಿದವರು!"

ಕೇಳಿ ಮಾಂತ್ರಿಕ ಬೆರಳು ಕಚ್ಚಿದ.

"ಅವರ ಕೃಪೆಗೆ ಪಾತ್ರನಾಗುವಂತೆ ಕೃಪೆ ಮಾಡಬೇಕು!"

"ಅದನ್ನು ಹಿಂದಿನಿಂದ ಯೋಚಿಸೋಣ. ಮುಂದೆ ಹೇಳಿ."

"ಅನಂತರ ಕಾಶ್ಮೀರಕ್ಕೆ ಬಂದವರು ಆಚಾರ್ಯ ರಾಮಾನುಜರು. ಅವರು ನನ್ನಲ್ಲಿ ಮೈತ್ರಿ ಬೆಳೆಸಿದರು. ಅವರಿಗೆ ನಾನು ಕಲಿತ ಮಂತ್ರ ವಿದ್ಯೆಯನ್ನು ನಿರ್ವಂಚನೆಯಿಂದ ಶ್ರುತಪಡಿಸಿದೆನಲ್ಲದೆ ಅವರ ಸ್ನೇಹಕ್ಕೆ ವಶನಾಗಿ ಇಲ್ಲಿಗೆ ಬಂದೆ. ಕೆಲದಿನ ಇಲ್ಲಿ ಅವರ ಸೇವೆ ಮಾಡಿ, ತರುವಾಯ ಇದೇ ಬೆಟ್ಟಸಾಲಿಗೆ ಸೇರಿದ 'ಮಹಾಕಾಳಿ ದುರ್ಗ' ಸೇರಿ, ಅಲ್ಲಿ ನೆಲೆಸಿದೆ."

"ಮಾಹಾಕಾಳೀ ದುರ್ಗದಲ್ಲಿ ಏನಾಯಿತು ?"

"ಅಲ್ಲಿ ನನ್ನ ದುರದೃಷ್ಟ ಇಮ್ಮಡಿಸಿತು !"

"ಹಾಗೆಂದರೆ!"

"ಸ್ವಾಮಿ, ಅಲ್ಲಿ ನಾನೊಬ್ಬ ಯುವತಿಯನ್ನು ಮೋಹಿಸಿದೆ !"

"ಏನು ಮೋಹಿಸಿದೆಯಾ ? ಅಥವಾ "ಪ್ರೇಮಿಸಿದೆಯಾ ?"

"ಪ್ರೇಮವಲ್ಲ ಸ್ವಾಮಿ, ಕಾಮ!"

"ಪ್ರೇಮ–ಮೋಹ–ಕಾಮ ಈ ಮೂರೂ ಪದಗಳ ಅರ್ಥ ವ್ಯತ್ಯಾಸವನ್ನು ಬಿಡಿಸಿ ಹೇಳು!"

"ಸ್ವಾಮಿ, ತಾವು ತಿಳಿಯದ ವಿಷಯವಲ್ಲ ಇದು! ಎರಡೂ ಕಡೆ ಒಲವು ಮೂಡಿ ಬಂದರೆ ಪ್ರೇಮ, ಅದು ಪವಿತ್ರ. ಅದು ಒಂದೆಡೆಯದಾದರೆ ಕಾಮವಾಗುತ್ತದೆ. ಕಾಮವು ಮಿತಿ ಮೀರಿದರೆ ಮೋಹವಾಗುತ್ತದೆ.!"

"ಆಮೇಲೆ ಏನಾಯಿತು!"

ಪ್ರೇಮ-ಕಾಮಗಳಲ್ಲದ ಮೋಹದ ಹಂತದಲ್ಲಿ ನಾನು ಅವಳನ್ನು "ವಶೀಕರಣ" ವಿದ್ಯೆಯಿಂಪ ಆಕರ್ಷಿಸಲು ಮಾಡಿದ ಪ್ರಯತ್ನ ವಿಫಲವಾಯಿತು. ಪ್ರಾಣ ಭೀತಿಯಿಂದ ತಲೆ ತಪ್ಪಿಸಿಕೊಂಡು ಮತ್ತೆ ಇಲ್ಲಿಗೇ ಓಡಿ ಬರುವಂತಾಯಿತು ! ಅಂದಿನಿಂದ ನಾನು ಆ ಪಂಡಿತರನ್ನು ಆಶ್ರಯಿಸಿ ಕ್ಷುದ್ರ ಜೀವನ ನಡೆಯಿಸುತ್ತಿದ್ದೇನೆ!

"ಸ್ವಾಮಿ, ಮಿಶ್ರರೆ, ನಿಮ್ಮ ಜೊತೆಗೆ ಆಚಾರ್ಯರೂ ಈ ವಾಮಾಚಾರದಲ್ಲಿ ಸಹಭಾಗಿಗಳು ತಾನೆ ?" ಎಂದರು ಆರಾಧ್ಯರು ನಿರ್ವಿಕಾರವಾಗಿ.

"ಛೆ, ಛೆ ! ಅವರು ಈ ವಿದ್ಯೆಯನ್ನು ಚೆನ್ನಾಗಿ ಬಲ್ಲರು. ಆದರೆ ಅವರು ಇದನ್ನು ಆತ್ಮರಕ್ಷಣೆ ಮತ್ತು ಪರೋಪಕಾರಕ್ಕಾಗಿ ಬಳಸುವವರೇ ಹೊರತು ಪರಪೀಡನೆಗೆ ಅವರು ಕೈ ಹಾಕಿದವರಲ್ಲ ! ಅವರ ದೈವಭಕ್ತಿ ಅವರಿಗೆ ಎಲ್ಲ ಸಿದ್ಧಿಯನ್ನೂ ದೊರಕಿಸಿಕೊಟ್ಟಿದೆ. ದೀನ-ದಲಿತರಲ್ಲಿ

ಅವರಿಗೆ ಅಪಾರ ಕರುಣೆ. ದೈವೀಗುಣ ಸಂಪನ್ನರಾದ ಅವರನ್ನು ಜನ ಓಲೈಸುತ್ತಿದ್ದಾರೆ."

"ಕೂರೇಶರು !"

"ಸ್ವಾಮಿ, ಕೂರೇಶರು ಎರಡನೆಯ ಆಚಾರ್ಯರು. ! ಆಚಾರ್ಯರಿಗೆ ಅವರು ಬಲಗೈಯಂತಿದ್ದಾರೆ. ಅವರಿಂದ ಕ್ಷೇತ್ರ ದಿನೇ ದಿನೇ ಬೆಳೆಯುತ್ತಿದೆ. ಇನ್ನು ಆ ಪಂಡಿತರ ವಿಷಯ ಬಿಡಿ ! ಆ ಬಗ್ಗೆ ತಾವೇ ಬಲ್ಲಿರಿ" ಎಂದು ಮಾಂತ್ರಿಕ ಕೈಮುಗಿದ.

"ಅಪ್ಪ, ತಂತ್ರವಿದ್ಯಾವಿಶಾರದನಾದ ನಿನ್ನಿಂದ ತಂತ್ರಶಾಸ್ತ್ರ ಪರಂಪರೆ ಮತ್ತು ಆ ಶಾಸ್ತ್ರದ ಸ್ವರೂಪವನ್ನು ಸಂಕ್ಷೇಪವಾಗಿ ತಿಳಿಯಬೇಕೆಂಬ ಕುತೂಹಲವುಂಟಾಗಿದೆ. ಆದ್ದರಿಂದ ತಂತ್ರಶಾಸ್ತ್ರ ಪರಿಚಯ ಮಾಡಿಕೊಡು."

—ಎಂದು ಆರಾಧ್ಯರು ಹೇಳುತ್ತಿದ್ದಂತೆ ಕನಕಾ ಹೊರ ಬಂದು

"ಉಪಾಹಾರ ಸಿದ್ಧವಾಗಿದೆ. ಭೈರಣ್ಣ-ಕಾಳಣ್ಣರು ಹಸಿದಿದ್ದಾರೆ. ಮೊದಲು ಉಪಾಹಾರ ಮಾಡಿರಿ. ಅನಂತರ ನಿಮ್ಮ ಜಿಜ್ಞಾಸೆ ಮುಂದುವರಿಯಬಹುದು" ಎಂದಳು.

"ಸ್ವಾಮಿ, ಕಾಳೀಪ್ರಸಾದ ಮಿಶ್ರರೆ, ನಿಮ್ಮನ್ನು ನಮ್ಮ ಕನಕಾ 'ಕಾಳಣ್ಣ' ಎಂದು ಕರೆದು ಒಳ್ಳೆಯ ಮೇಲ್ಪಂಕ್ತಿ ಹಾಕಿದ್ದಾಳೆ. ಏಕೆಂದರೆ ನಮ್ಮ ಕನ್ನಡದಲ್ಲಿ ಕಾಳಿಕಾದೇವಿಯನ್ನು 'ಕಾಳಮ್ಮ' ಎನ್ನುತ್ತೇವೆ. ಅದೇ ರೀತಿ ಕಾಳೀಪ್ರಸಾದರು 'ಕಾಳಣ್ಣ' ಆಗಬಾರದೇಕೆ ?" ಎಂದರು ಆರಾಧ್ಯರು ಆತ್ಮೀಯತೆಯಿಂದ ಮಾಂತ್ರಿಕನ ಕಡೆಗೆ ತಿರುಗಿ.

"ಸ್ವಾಮಿ, ಕನ್ನಡ ನಾಡಿಗೆ ಬಂದು, ಕನ್ನಡ ಸಂಪ್ರದಾಯವನ್ನು ನಾನೂ ಗೌರವಿಸಬೇಕಾದದ್ದೆ ತಾನೆ ! ತಾವು ನನ್ನನ್ನು ಹಾಗೆಯೇ ಕರೆಯಬಹುದು. ಭೈರಣ್ಣ ಮತ್ತು ನಾನು ಬಹುದೂರದಿಂದ ಬಂದಿದ್ದೇವೆ. ನಾನು ಭೈರಣ್ಣನ ಜೊತೆ ನದಿಗೆ ಹೋಗಿ, ಸ್ನಾನ ಮಾಡಿ, ಬಟ್ಟೆ ಶುಚಿ ಮಾಡಿಕೊಂಡು ಬಂದು, ಉಪಾಹಾರವನ್ನು ಸ್ವೀಕರಿಸುತ್ತೇವೆ.

ಆನಂತರ ಯಜಮಾನರು ಕೇಳುವ ಸಂದೇಹವನ್ನು ಪರಿಹರಿಸುತ್ತೇನೆ” ಎಂದು ಹೇಳಿದ ಕಾಳಣ್ಣ, ಭೈರಣ್ಣನ ಜೊತೆ ಕೃಷ್ಣಾನದಿ ದಾರಿ ಹಿಡಿದ.

೫

ಶುಚಿರ್ಭೂತನಾಗಿ ಭೈರಣ್ಣನ ಸಂಗಡ ಬಂದ ಕಾಳಣ್ಣ ಉಪಾಹಾರವನ್ನು ಮುಗಿಸಿದ. ಮನೆಯವರೆಲ್ಲ ತಂತ್ರ ಶಾಸ್ತ್ರದ ಪರಿಚಯವನ್ನು ತಿಳಿಯಲು ಸಿದ್ಧರಾಗಿದ್ದರು. ಕಾಳಣ್ಣ ಎಲ್ಲರಿಗೂ ವಂದಿಸಿ—

“ಸ್ವಾಮಿ, ಇದು ಬಹು ದೊಡ್ಡ ಶಾಸ್ತ್ರ. ಇದರ ಮೂಲ ‘ರುದ್ರಯಾಮಳ ಮಹಾತಂತ್ರ.’ ಇದರ ಪರಂಪರೆ ಮತ್ತು ಮುಖ್ಯಾಂಶವನ್ನು ಕುರಿತು ಕಾಶ್ಮೀರದ ಮಹಾವಿದ್ವಾಂಸರಾದ ‘ಅಭಿನವ ಗುಪ್ತರು’ ತಂತ್ರಾಲೋಕ, ತಂತ್ರಸಾರ, ತಂತ್ರಾವಟಧಾನಿಕಾ ಮತ್ತು ತಂತ್ರೋಚ್ಚಯ ಮುಂತಾದ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಅವರ ಪ್ರಕಾರ ಆ ಶಾಸ್ತ್ರ ಪರಂಪರೆ ಹೀಗಿದೆ—ಇದರಲ್ಲಿ ಮೊದಲು ಒಂಬತ್ತು ಕೋಟಿ ಶ್ಲೋಕಗಳಿದ್ದವು. ಭೈರವನು ಇವನ್ನೆಲ್ಲ ತಿಳಿದಿದ್ದ. ಆನಂತರ ಭೈರವಿಯು ಎಂಟು ಕೋಟಿ ಗ್ರಹಿಸಿದ್ದಳು. ಸ್ವಚ್ಛಂದ ಏಳು ಕೋಟಿ, ಲಾಕುಳ ಆರು ಕೋಟಿ, ಗಹನೇಶ ಐದು ಕೋಟಿ, ಅಬ್ಜಜ ನಾಲ್ಕು ಕೋಟಿ, ಶಕ್ರನು ಮೂರು ಕೋಟಿ, ಬೃಹಸ್ಪತಿ ಎರಡು ಕೋಟಿ ಕಲಿತದ್ದು. ಈಗ ಅವುಗಳ ಸಂಖ್ಯೆ ಒಂದು ಕೋಟಿಗೆ ಇಳಿದಿದೆ.

ಈ ಪರಂಪರೆಯಲ್ಲಿ ಬಂದ ಬೃಹಸ್ಪತಿ ತನ್ನಲ್ಲಿದ್ದ ಈ ಶಾಸ್ತ್ರವನ್ನು ದಕ್ಷ, ಸಂವರ್ತ, ವಾಮನ, ಭಾರ್ಗವ, ಬಲಿ, ವಿನತಾಭೂ ಮತ್ತು ವಸುಕುಮಾರ ಎಂಬುವರಿಗೆ ಉಪದೇಶಿಸಿದ.

ರಾವಣ ತನ್ನ ಗುರು ಶಕ್ರನಿಂದ ಕಲಿತ ಈ ವಿದ್ಯೆಯಲ್ಲಿ ಅರ್ಧವನ್ನು ವಿಭೀಷಣನಿಗೆ ಕೊಟ್ಟ. ಅವನಿಂದ ಶ್ರೀರಾಮ, ಲಕ್ಷ್ಮಣ,

ಅನಂತರ ಸಿದ್ಧರು, ದಾನವರು, ಗುಹ್ಯಕರು ಮತ್ತು ಯೋಗಿಗಳು ಕಲಿತರು.

ಕಾಶ್ಮೀರದಲ್ಲಿ ಬಳಕೆಯಲ್ಲಿರುವ ತಂತ್ರಗಳು ಒಟ್ಟು ಅರವತ್ತನಾಲ್ಕು. ಅವುಗಳಲ್ಲಿ ಮಾಯೆ, ಮಾಟ ಮತ್ತು ಶೂನ್ಯ ವಿಧಾನಗಳು ಉಕ್ತ ವಾಗಿವೆ."

"ಕಾಳಣ್ಣ, ನಮ್ಮ ಶ್ರೀಪತಿ ಕಾಶ್ಮೀರದಲ್ಲಿ ಕೆಲ ಕಾಲ ಇದ್ದು ಅಲ್ಲಿರುವ ತಂತ್ರಗ್ರಂಥಗಳನ್ನು ಆಮೂಲಾಗ್ರವಾಗಿ ನೋಡಿದ್ದವನು!" ಎಂದರು ಆರಾಧ್ಯರು ಸಹಜವಾಗಿ.

ಕಾಳಣ್ಣ ಹೇಳಿದ—"ಇದ್ದೀತು! ನಾನು ಶ್ರೀಪತಿಗೆ ತಂತ್ರಶಾಸ್ತ್ರದ ಪರಿಚಯವಿಲ್ಲವೆಂದು ಹೇಳುತ್ತಿಲ್ಲ. ಆದರೆ ಅದರಲ್ಲಿ ವಾಮಾಚಾರ ವಿಧಾನವನ್ನು ಗುರುಮುಖದಿಂದ ಅವರು ಅರಿತಿರಲಾರರೆಂದು ಭಾವಿಸು ತ್ತೇನೆ!" ಎಂದ ಕಾಳಣ್ಣನ ಮಾತಿಗೆ ಶ್ರೀಪತಿ—

"ನಿಜ ಕಾಳಣ್ಣ, ವಾಮಾಚಾರ ವಿಧಾನವನ್ನು ಗುರುಮುಖದಿಂದ ತಿಳಿಯುವ ಅಗತ್ಯವಾಗಲೀ, ಆಸಕ್ತಿಯಾಗಲಿ ನನಗೆ ಆಗ್ಗೆ ಇರಲಿಲ್ಲ!" ಎಂದ.

"ಈ ತಂತ್ರಗಳು ಸಾಮಾನ್ಯ ಜನರ ಐಹಿಕ ಸುಖ ಸಾಧನೆಗಾಗಿ ಏರ್ಪಟ್ಟವು. ಇವುಗಳಲ್ಲಿ ಆತ್ಮರಕ್ಷಣೆ ಮತ್ತು ಶತ್ರುನಾಶ ಎಂಬುವು ಮುಖ್ಯ.

ಇದರಲ್ಲಿ ಜಪ, ಬೀಜ, ಯಂತ್ರ, ಮುದ್ರಾ, ದೀಕ್ಷಾ, ಅಧಿದೇವತೆ, ಮುಂತಾದವುಗಳಿಗೆ ಸಂಬಂಧಿಸಿದ ಪೂಜಾಮಂತ್ರಗಳು ಉಕ್ತವಾಗಿವೆ.

ಪೂಜಾವಿಧಾನವು 'ವಾಮಾಚಾರ' ಮತ್ತು 'ದಕ್ಷಿಣಾಚಾರ' ಎಂಬ ಎರಡು ಕ್ರಮಗಳಲ್ಲಿದೆ. ಇವನ್ನು ವಾಮಾಚಾರದಲ್ಲಿ ಬಳಸಿದರೆ ಆತ್ಮ ರಕ್ಷಣೆ ಮತ್ತು ಶತ್ರುನಾಶಗಳು ಫಲಿಸುತ್ತವೆ. ದಕ್ಷಿಣಾಚಾರದಲ್ಲಿ ಉಪ ಯೋಗಿಸಿದರೆ ಆಧ್ಯಾತ್ಮ ಸಿದ್ಧಿ' ಎಂದು ಸೌಂದರ್ಯಲಹರಿಯಿಂದ ವೇದ್ಯ ವಾಗುತ್ತದೆ."

ಕಾಳಣ್ಣನ ವಿವರಣೆಯನ್ನು ಕೇಳಿ ಎಲ್ಲರೂ ಸೋಜಿಗಗೊಂಡರು.

"ಕಾಳಣ್ಣ, ನೀನು ಸಾಮಾನ್ಯ ಮಾಂತ್ರಿಕನಲ್ಲ ! ತಂತ್ರಶಾಸ್ತ್ರವನ್ನು ಆಳವಾಗಿ ಅಭ್ಯಾಸ ಮಾಡಿರುವೆ ಎಂಬುದು ನಿನ್ನ ಮಾತಿನಿಂದ ವೇದ್ಯವಾಗುತ್ತದೆ. ಇದನ್ನು ಕೇಳಿದ ಮೇಲೆ ನನಗೆ ಮತ್ತೊಂದು ಸಂದೇಹವುಂಟಾಗಿದೆ. ಏನೆಂದರೆ–ಮಾಯೆ, ಮಾಟ, ಶೂನ್ಯ ಮುಂತಾದುವು ತಂತ್ರ ಗ್ರಂಥಗಳಲ್ಲಿ ಹೇಳಿರುವುದು ಸರಿಯಷ್ಟೆ ? ಆದರೆ ಇದೇ ಅರ್ಥದಲ್ಲಿ 'ಇಂದ್ರಜಾಲ' ಮತ್ತು 'ಮಹೇಂದ್ರಜಾಲ' ಎಂಬ ವಿದ್ಯೆಗಳೂ ಬಳಕೆಯಲ್ಲಿವೆ. ಇವೆರಡಕ್ಕೆ ಇರುವ ವ್ಯತ್ಯಾಸವೇನು ? ಎಂಬುದನ್ನು ವಿವರಿಸಬೇಕು" ಎಂದರು ಆರಾಧ್ಯರು.

"ಸ್ವಾಮಿ, 'ಜಾಲ' ಎಂದರೆ ಬಲೆ. ಬೆಸ್ತನು ಬಲೆ ಬೀಸಿ ಮೀನುಗಳನ್ನು ಹಿಡಿಯುವುದಿಲ್ಲವೆ ? ಅದರಂತೆ ಇಂದ್ರನು ಬೀಸಿದ ಜಾಲ 'ಇಂದ್ರಜಾಲ.' 'ಮಹೇಂದ್ರಜಾಲ'ವೆಂದರೂ ಅದೇ ಅರ್ಥ.

ಇಂದ್ರ ಸುರರ ಮುಂದಾಳು. ಸುರ ವಿರೋಧಿಗಳು ಅಸುರರು. ಅವರಿಗೆ ದಸ್ಯು, ದಾನವ, ರಾಕ್ಷಸ ಮುಂತಾದ ಹೆಸರುಗಳಿವೆ.

ಈ ಸುರ ಮತ್ತು ಅಸುರರ ಹೋರಾಟ ಆರ್ಷಿಯಿಂದ ಇದ್ದದ್ದೆ ! ಒಮ್ಮೊಮ್ಮೆ ಇಂದ್ರನಿಗೆ ಅಸುರರನ್ನು ಋಜುಮಾರ್ಗದಿಂದ ಗೆಲ್ಲುವುದು ಸಾಧ್ಯವಾಗುತ್ತಿರಲಿಲ್ಲ. ಆಗ ಅವನು ವಕ್ರಮಾರ್ಗದಿಂದ ಅವರನ್ನು ವಂಚಿಸಿ, ಮೋಸದಿಂದ ಗೆಲ್ಲಬೇಕಾಗುತ್ತಿತ್ತು. ಅದೇ ಮಾಯೆ, ಮಾಟ, ಶೂನ್ಯವಿದ್ಯೆಗಳು ಹುಟ್ಟಲು ಕಾರಣ.

ಅಸುರರೂ ಈ ವಿದ್ಯೆಯನ್ನು ಅರಿಯದವರಲ್ಲ. ಅವರು ಪ್ರಯೋಗಿಸುವ ವಿದ್ಯೆಗೆ 'ಶಾಬರವಿದ್ಯೆ' ಅಥವಾ 'ಶಾಬರಮಂತ್ರ' ವೆಂದೇ ಹೆಸರು. ಗುಡ್ಡಗಾಡುಗಳಲ್ಲಿ ವಾಸಿಸುವ ಶಬರರು, ಭಿಲ್ಲರು ಮುಂತಾದವರೂ ಮಾಟ, ಮಾಯೆಗಳಲ್ಲಿ ಪರಿಣಿತರು.

ಅಥರ್ವವೇದ ಈ ದಿಸೆಯಲ್ಲಿ ಒಂದು ಮೈಲಿಗಲ್ಲು. ಅಥರ್ವನ್ ಮತ್ತು ಆಂಗೀರಸ ಎಂಬುವರು ಇದರ ಪ್ರವರ್ತಕರು. ಅಥರ್ವನ್

ಕಂಡ ತಂತ್ರಗಳು ಸದುದ್ದೇಶವುಳ್ಳವು. ಆದ್ದರಿಂದ ಅದಕ್ಕೆ 'ಬಿಳಿಯ (ಶುಕ್ಲ) ಇಂದ್ರಜಾಲ'ವೆಂದು ಹೆಸರು. ಅಂಗೀರಸನು ಕಂಡ ತಂತ್ರಗಳು ದುರುದ್ದೇಶಪೂರಿತ. ಆದ್ದರಿಂದಲೇ ಅವು 'ಕೃಷ್ಣ(ಕಪ್ಪು)ಇಂದ್ರಜಾಲ' ವೆನಿಸಿವೆ.

ಶುಕ್ಲೇಂದ್ರಜಾಲದ ಸೂಕ್ತಗಳಲ್ಲಿ ಇಂದ್ರ, ಅಗ್ನಿ, ವರುಣ, ಮಿತ್ರ, ಪೂಷನ್, ರುದ್ರ ಮುಂತಾದ ದೇವತೆಗಳನ್ನು ಹವಿಸ್ಸುಗಳಿಂದ ತೃಪ್ತಿ ಪಡಿಸಿ ಅವರಿಂದ ಆತ್ಮರಕ್ಷಣೆ, ಧನ-ಧಾನ್ಯ ಸಮೃದ್ಧಿ, ರೋಗನಿವಾರಣ ಮುಂತಾದ ಲೋಕಹಿತಕಾರಕವಾದ ಸಿದ್ಧಿಗಳನ್ನು ಪಡೆಯುತ್ತಿದ್ದರು.

ಕೃಷ್ಣೇಂದ್ರಜಾಲದಲ್ಲಿ ಆತ್ಮರಕ್ಷಣೆಯ ಜೊತೆಗೆ ಮಾಯೆ, ಮಾಟ ಮತ್ತು ಶೂನ್ಯ ವಿಧಾನಗಳಿಂದ ಶತ್ರುನಾಶ, ವಶೀಕರಣ ಮುಂತಾದು ವನ್ನು ಸಾಧಿಸುವ ವಿಧಾನಗಳಿವೆ.

ಋಗ್ವೇದದ ಒಂದು ಸೂಕ್ತದಲ್ಲಿ (೧೦-೧೪೫) ಸ್ಪವತಿಯನ್ನು ನಾಶಮಾಡಲು ಮೂಲಿಕೆಯೊಂದನ್ನು ಅಗೆದು ತಂದು ಕಟ್ಟಿಕೊಳ್ಳುವ ವಿಚಾರವಿದೆ. ಇದನ್ನು ಭಾಸಕವಿಯು ನಾಟಕವೊಂದರಲ್ಲಿ ನವವಧುವಿನ ವಿವಾಹದಲ್ಲಿ ಹಾಕುವ 'ಸಂಬಂಧ ಮಾಲಿಕೆ'ಗೆ 'ಸಪತ್ನೀಮರ್ದನ' ಮೂಲಿಕೆ ಕಟ್ಟುವ ವಿಚಾರವು ಇದನ್ನು ಸಮರ್ಥಿಸುತ್ತದೆ.

ಯಜುರ್ವೇದ(೫-೩)ದಲ್ಲಿ ಅಸುರರು ವಿಷವೃಕ್ಷದ ಕಾಷ್ಠದಿಂದ ಮಾಡಿದ ಬೊಂಬೆ ವಲಗಾ. ಅದಕ್ಕೆ ಎಲುಬು ಮತ್ತು ಕೇಶಗಳನ್ನು ಸುತ್ತಿ ಅದನ್ನು ನೆಲದಲ್ಲಿ ಒಂದು ಮೊಳ ಅಗೆದ ಗುಂಡಿಯಲ್ಲಿ ಹೂತಿಟ್ಟದ್ದ ವಿಷಯ ಬಂದಿದೆ. ಅದರ ಸುಳಿವನ್ನು ತಿಳಿದ ಸುರರು ಅದನ್ನು ಪತ್ತೆ ಹಚ್ಚಿ, ಆ ಬೊಂಬೆಯನ್ನು ಹೊರತೆಗೆದು ಅದನ್ನು ನಾಶಮಾಡಿದ ಮೇಲೆ ಅವರಿಗೆ ಅಸುರರನ್ನು ಗೆಲ್ಲುವುದು ಸಾಧ್ಯವಾಯಿತಂತೆ !

ರಾಮಾಯಣದಲ್ಲಿ ವಿಶ್ವಾಮಿತ್ರನು ರಾಮ-ಲಕ್ಷ್ಮಣರಿಗೆ ಕೊಟ್ಟ ಜೃಂಭಕಾದಿ ಅಸ್ತ್ರಗಳು, ಮಹಾಭಾರತದಲ್ಲಿ ಶಿವ-ಶಿವೆಯರು ಅರ್ಜುನನ

ತಪಸ್ಸಿಗೆ ಮೆಚ್ಚಿ ಕೊಟ್ಟ ಪಾಶುಪತಾಸ್ತ್ರ ಮತ್ತು ಅಂಜನಾದಿ ಅಸ್ತ್ರಗಳೂ ಇದೇ ಬಗೆಯ ಮಂತ್ರಾಸ್ತ್ರಗಳೇ !

ಆರಾಧ್ಯರು ಕೇಳಿದರು—"ಕಾಳಣ್ಣ, ಋಗ್ವೇದದಲ್ಲಿ ಮೂರ್ತಿಪೂಜೆ ಇಲ್ಲವೆಂದು ಪ್ರತೀತಿ. ಆದರೆ ಈ ವಾಮಮಾರ್ಗಿಗಳು ಕೃತ್ಯಾ (ವಲಗಾ) ಮಾಟ. ಶೂನ್ಯ, ಮಾರಣಾದಿಗಳಲ್ಲಿ ಗೊಂಬೆ ಮಾಡಿ, ಅದರಲ್ಲಿ ಕ್ಷುದ್ರ ಮಂತ್ರಗಳಿಂದ ಕ್ಷುದ್ರದೇವತೆ (ಕಿಂಕರ ಪಿಶಾಚಿ)ಯನ್ನು ಆವಾಹಿಸಿ, ಅವಕ್ಕೆ ಬಲಿ ಇತ್ತು, ಸಿದ್ಧಿ ಪಡೆವುದನ್ನು ನೋಡಿದರೆ ಈ ವಾಮಾ ಚಾರಕ್ಕೂ ದಕ್ಷಿಣಾಚಾರಕ್ಕೂ ಒಂದು ಬಗೆಯ ಹೋಲಿಕೆ ಕಾಣುತ್ತದೆ. ಅದರಂತೆ ದಕ್ಷಿಣಾಚಾರದಲ್ಲಿಯೂ ಕೂಡ ಶಿಲಾದಿಗಳಲ್ಲಿ ಇಷ್ಟದೇವತೆಯ ಮೂರ್ತಿ ಮೂಡಿಸಿ ಪ್ರಾಣಪ್ರತಿಷ್ಠೆ ಮಾಡಿ, ಹೋಮದಲ್ಲಿ ಹವಿಸ್ಸನ್ನಿತ್ತು, ಪೂಜಿಸಿ, ಇಷ್ಟಾರ್ಥ ಪಡೆಯುವ ಕ್ರಮಕ್ಕೂ ಇರುವ ವ್ಯತ್ಯಾಸವೇನು ?" ಎಂದು ಸಂದೇಹ ಸೂಚಿಸಿದರು ಆರಾಧ್ಯರು.

ಮಧ್ಯೆ ಪ್ರವೇಶಿಸಿದ ಶ್ರೀಪತಿ ಮಾತನಾಡಿದ—

"ನಿಮ್ಮ ಮಾತು ನಿಜ. ಇವುಗಳಲ್ಲಿ ಮೊದಲನೆಯದು ಅಮಂಗಳ ಕರವಾದ ಆಂಗೀರಸೋಪಜ್ಞ ಅಭಿಚಾರ. ಎರಡನೆಯದು ಮಂಗಳಕರ ವಾದ ಅಥರ್ವನ್ ಋಷಿ ಕಂಡ ಅಭಿಚಾರ. ಒಂದು ಉಗ್ರಪೂಜೆ. ಮತ್ತೊಂದು ಪ್ರಶಾಂತ ಉಪಾಸನೆ. ಮೊದಲನೆಯದು ಮನಸ್ಸನ್ನು ವಿಕ್ಷೇಪಗೊಳಿಸುತ್ತದೆ. ಎರಡನೆಯದು ಮನಶ್ಶಾಂತಿ ನೀಡುತ್ತದೆ. ಮೊದಲನೆಯದು ಲೋಕವಿಘಾತಕ ; ಎರಡನೆಯದು ಲೋಕಹಿತಕಾರಕ. ಆದ್ದರಿಂದಲೇ ಶಂಕರರು 'ಶಿವಶಕ್ತಿ'ಯನ್ನು ಒಪ್ಪಿದರಾದರೂ, ಅವರು ಉಗ್ರಪೂಜೆಗೆ ಬೆಲೆಕೊಡದೆ ಅವಳನ್ನು ಜಪ-ಹೋಮಾದಿಗಳಿಂದ ಆರಾಧಿ ಸಿದ್ದು ಸೌಂದರ್ಯಲಹರಿಯಲ್ಲಿ ಕಂಡಿದೆ.

ಇನ್ನು ರಕ್ತತರ್ಪಣದ ವಿಷಯದಲ್ಲಿ ಕಾಳಣ್ಣ ವಾಮಾಚಾರದಲ್ಲಿ ದೇವಿಗೆ ಮಧು-ಮಾಂಸಾದಿಗಳು ಇದ್ದೇ ಇರಬೇಕು ಎಂದು ಹೇಳಿದ. ಆದರೆ ಆ ಬಗ್ಗೆ ಇಲ್ಲಿರುವ ಭೈರಣ್ಣನೇ ನಿದರ್ಶನ. ಆತ ಕಾಪಾಲಿಕ.

ಮಾರ್ಗದಲ್ಲಿ ಮಾನವ ಶಿಶುವನ್ನೇ ಬಲಿಕೊಡಲು ಯತ್ನಿಸಿದಾಗ, ಅವರಿಗೆ ಆದ ಅನುಭವ ಅವರನ್ನೇ ಕೇಳು. ಇನ್ನು ನೀವು ತಿರುಪತಿಯಲ್ಲಿ ಮಣ್ಣಿನ ಪ್ರತಿಮೆ ಮಾಡಿ ಅದಕ್ಕೆ ಪ್ರಾಣ ತುಂಬಲು ಪ್ರಯತ್ನಿಸಿದಾಗ ಆದ ಅನುಭವ ನಿನಗೇ ತಿಳಿದಿದೆ. ಮುಖ್ಯವಾಗಿ ಅಲ್ಲಿ ನೀನು ಕಂಡ ಆ ಭೀಕರ ರೂಪು ಏನು ? ಅದರ ರಹಸ್ಯವನ್ನೂ ಭೈರಣ್ಣನಿಂದ ತಿಳಿದುಕೊ!

ಇನ್ನು ಯಜ್ಞಗಳಲ್ಲಿ ಮಾಡುವ ಪ್ರಾಣಿಹಿಂಸೆ, ಯಜ್ಞಲಂಪಟರು ತಮ್ಮ ಜಿಹ್ವಾಚಾಪಲ್ಯದಿಂದ ಕಲ್ಪಿಸಿದ ಜಾಲ. ಅಶ್ವಮೇಧ, ಗೋಮೇಧ ಅಜಮೇಧ ಯಜ್ಞಗಳು ರಾಷ್ಟ್ರದಲ್ಲಿ ಆಯಾ ಪ್ರಾಣಿಗಳನ್ನು ಸಮೃದ್ಧವಾಗಿ ಬೆಳೆಸಿ ರಾಷ್ಟ್ರವನ್ನು ಸುಖ ಸಮೃದ್ಧಿಯಿಂದ ಬೆಳಗಿಸುವ ಸದುದ್ದೇಶದಿಂದ ಕೂಡಿದವು. ಅದು ಬಿಟ್ಟು ಆ ಪ್ರಾಣಿಗಳನ್ನು ಕೊಲ್ಲುವ ಉದ್ದೇಶ ಆ ಯಜ್ಞಗಳಿಗಿಲ್ಲ. ಈ ದಿಸೆಯಲ್ಲಿ 'ಪುರುಷಮೇಧ' ಯಜ್ಞವೂ ಇದೆ. ಇದನ್ನುಎಲ್ಲರ ಒಳಿತಿಗಾಗಿ ದುಡಿಯುವ ಸಾಮಾಜಿಕ ಜೀವನವನ್ನೇ ವೇದವು ಯಜ್ಞರೂಪದಲ್ಲಿ ವರ್ಣಿಸಿದೆ. ಎಲ್ಲ ಮಾನವರ ತ್ಯಾಗವೂ ಇಲ್ಲಿ ಅತ್ಯಾವಶ್ಯಕ. ಅದೇ ಹವಿಸ್ಸಿನ ತ್ಯಾಗ. ಅದಕ್ಕೆ ಬದಲಾಗಿ ನರರನ್ನೇ ಬಲಿಗೊಡುವುದಾದರೆ ಆ ಯಜ್ಞದಿಂದ ಯಾವ ಪುರುಷಾರ್ಥ ಸಾಧಿಸಿದಂತಾದೀತು ? ಇದು ಜನತೆಯ ಮೌಢ್ಯದ ಸಂಕೇತ!"

ಎಂದ ಶ್ರೀಪತಿಯ ಮಾತು ಎಲ್ಲರಿಗೂ ಮಾನ್ಯವಾಯಿತು. ಕಾಳಣ್ಣ ಹೇಳಿದ—

"ಸ್ವಾಮಿ, ನನ್ನ ಅಜ್ಞಾನದ ಪೊರೆ ಹರಿಯಿತು. ಜ್ಞಾನೋದಯವಾಯಿತು. ಇನ್ನು ಈ ಭೈರಣ್ಣನ ಮಾರ್ಗದರ್ಶನದಲ್ಲಿ ಗುರುದೇವ ನನ್ನು ಸಂದರ್ಶಿಸಿ ನನ್ನ ಮುಂದಿನ ಜೀವನವನ್ನು ಸಾರ್ಥಕಪಡಿಸಿಕೊಳ್ಳುತ್ತೇನೆ!" ಎಂದು ದೀರ್ಘದಂಡ ಪ್ರಣಾಮ ಮಾಡಿ, ಭೈರಣ್ಣನ ಜೊತೆ ನಿರ್ಗಮಿಸಿದ.

* * * *

ಭಾಗೀರಥಿಯ ಅಪೇಕ್ಷೆಯಂತೆ ಚೊಚ್ಚಲ ಹೆರಿಗೆಗಾಗಿ ಕನಕಲತಾ ಬೆಜವಾಡದಲ್ಲಿಯೇ ಉಳಿದಳು. ಕುಮುದಿನಿಯ ಸಂತೋಷಕ್ಕೆ ಪಾರವೇ ಇರಲಿಲ್ಲ.

ಶಂಭು ಭಟ್ಟರು ಉಳಿದವರೊಡನೆ ಮುದಿಗೊಂಡಕ್ಕೆ ಬಂದು ಅಲ್ಲಿ ಒಂದೆರಡು ದಿನವಿದ್ದು ವಾರಾಣಸಿಗೆ ಹಿಂದಿರುಗಿದರು.

* * * *

ಹತ್ತನೇ ತಿಂಗಳಲ್ಲಿ ಕನಕಲತೆ ಪೂರ್ಣಚಂದ್ರನಿಗೆ ಸಮಾನವಾದ ಗಂಡುಮಗುವಿಗೆ ಜನ್ಮವಿತ್ತಳು. ಸುದ್ದಿ ತಿಳಿದ ಶ್ರೀಪತಿ ಅತ್ತೆ ಮಾವಂದಿರೊಡನೆ ಬೆಜವಾಡಕ್ಕೆ ಆಗಮಿಸಿದ. ಸೋಮಶಂಭು ದೇಶಿಕರು ಪರಿವಾರ ಸಮೇತ ಬಂದು ಮೊಮ್ಮಗನಿಗೆ 'ಗೋಕರ್ಣ' ಎಂದು ನಾಮಕರಣ ಮಾಡಿ ಹರಸಿದರು. ವಂಶೋದ್ಧಾರಕನಾದ ಈ ಶಿಶುವಿನಿಂದ ನಮ್ಮ ನಾಡು-ನುಡಿಗಳಿಗೆ ಅಮಿತ ಸೇವೆ ಸಲ್ಲಲಿ" ಎಂದು ಹಾರೈಸಿದರು.

೧೯

# ಜಲದ ಮೇಲೆ ಜ್ವಾಲೆ ನರ್ತನ

## ೧

ಗೋಕರ್ಣನಿಗೆ ಮೂರು ವರುಷ ತುಂಬಿ ಬಂದಿತ್ತು. ಮೊಮ್ಮಗನ ಲಾಲನೆ ಪೋಷಣೆಗಳಲ್ಲಿ ತೊಡಗಿದ್ದ ಶ್ರೀದೇವಿಗೆ ಮನೆ ಕೆಲಸಕ್ಕೆ ಬಿಡುವೇ ಸಿಗುತ್ತಿರಲಿಲ್ಲ.

ಮಂಚಣ್ಣನ ಮಗ ಗುರುಲಿಂಗದೇವ ಈಗ ಆರು ವರ್ಷದ ಅಣುಗ. ಗುರುಲಿಂಗನ ತರುವಾಯ ಅವನ ತಮ್ಮ 'ಶಿವಲಿಂಗನೂ' ಹುಟ್ಟಿದ್ದಾನೆ. ಅವನನ್ನು 'ಕುಮಾರ ಮಂಚಣ್ಣ' ಎಂದು ಕರೆಯುತ್ತಾರೆ. ಗುರುಲಿಂಗದೇವನಿಗೆ ಅಕ್ಷರಾಭ್ಯಾಸ ಸಂಸ್ಕಾರವೂ ಮುಗಿದಿತ್ತು, ಶಾಲೆಗೆ ಹೋಗುವ ಮುನ್ನ ಅಲ್ಲಿಂದ ಬಂದ ಮೇಲೆ ಅವನಿಗೆ ಗೋಕರ್ಣನೇ ಆಟದ ಗೆಳೆಯ. ಗುರುಲಿಂಗನ ಜೊತೆ ಆಟಗಳಲ್ಲಿ ಮಗ್ನನಾದ ಅವನಿಗೆ ಅನ್ನ-ನೀರುಗಳ ಪರಿವೆಯೇ ಇರುತ್ತಿರಲಿಲ್ಲ.

ಕನಕೆಗೆ ಗುರುದೇವನನ್ನು ಸಂದರ್ಶಿಸಿ ಬರುವ ಬಯಕೆ. ಒಂದು ದಿನ ಕನಸಿನಲ್ಲಿ ಕಾಣಿಸಿಕೊಂಡ ಶಿವಯೋಗಿಯೊಬ್ಬನು ಫಲ ಮಂತ್ರಾಕ್ಷತೆಗಳನ್ನು ಅವಳ ಮಡಿಲಿಗಿಟ್ಟು "ಸುಪುತ್ರಾಭಿವೃದ್ಧಿರಸ್ತು" ಎಂದು ಹರಸಿದಂತಾಯಿತು! ಎಚ್ಚೆತ್ತ ಕನಕಾ ಶ್ರೀಪತಿಗೆ ಈ ವಿಷಯ ತಿಳಿಸಿ, ತನ್ನ ಬಯಕೆಯನ್ನು ಅವನ ಗಮನಕ್ಕೆ ತಂದಿದ್ದಳು.

ಅದಕ್ಕೆ ಹಿಂದಿನ ರಾತ್ರಿ ಶ್ರೀಪತಿಗೂ ಗುರುದೇವನ ನೆನಪಾಗಿತ್ತು, ಮತ್ತು ಅವರ ದರ್ಶನ ಮಾಡಿ ಬರಬೇಕೆಂಬ ಹಂಬಲವುಂಟಾಗಿತ್ತು. ಅದರ ಜೊತೆಗೆ ಕನಕೆಯ ಬಯಕೆಯೂ ಸೇರಿ ಈಗ ಅವನ ಸಂಕಲ್ಪ ಮತ್ತಷ್ಟು ದೃಢವಾಯಿತು.

ಗುರುದೇವನ ನೆಲೆಯನ್ನು ಗುರುತಿಸಿ ಅಲ್ಲಿಗೆ ಹೋಗಿ ಬರುವ ಬಗೆಗೆ ಶ್ರೀಪತಿ ಚಿಂತಾಮಗ್ನನಾಗಿದ್ದ. ಇದೇ ಯೋಚನೆಯಲ್ಲಿ ಎರಡು ಮೂರು ತಿಂಗಳು ಕಳೆದಿತ್ತು. ಅಷ್ಟರಲ್ಲಿ ಕನಕೆಗೆ ತಾನು ಮೂರು ತಿಂಗಳ ಗರ್ಭಿಣಿ ಎಂಬ ಅನುಭವವಾಗಿತ್ತು.

ಒಂದು ದಿನ ಮುಂಜಾನೆ ಸಂಚಾರಕ್ಕೆಂದು ಮನೆಯಿಂದ ಹೊರ ಬಿದ್ದ ಶ್ರೀಪತಿಗೆ ಭೈರಣ್ಣ ಬರುತ್ತಿದ್ದುದು ಕಂಡು ಸೋಜಿಗವಾಯಿತು.

"ಏನು, ಭೈರಣ್ಣ ! 'ನೆನೆದವರ ಮನದಲ್ಲಿ' ಎಂಬಂತೆ ಪ್ರತ್ಯಕ್ಷ ವಾದೆಯಲ್ಲ! ಎರಡು ಮೂರು ತಿಂಗಳಿನಿಂದಲೂ ನಮಗೆ ನಿಮ್ಮ ಯೋಚನೆ ಯಾಗಿತ್ತು! ಈ ದಿನ ಅದು ಫಲಿಸಿತು; ಈಗ ಗುರುದೇವನ ಅನುಷ್ಠಾನ ಎಲ್ಲಿ ನಡೆದಿದೆ ? ಕಾಳಣ್ಣ ಏನಾದ? ಎಂದ ಸಹಜವಾಗಿ ಶ್ರೀಪತಿ.

"ಗುರುದೇವನ ಅನುಷ್ಠಾನ ಈಗ ನೇಪಾಳದ ಪಶುಪತಿನಾಥ ಕ್ಷೇತ್ರ ದಲ್ಲಿ ಸಾಂಗವಾಗಿ ನಡೆದಿದೆ, ಕಾಳಣ್ಣ ಗುರುದೇವನ ಅನುಗ್ರಹಕ್ಕೆ ಪಾತ್ರ ನಾಗಿ ಅವರಿಂದ ಶಿವದೀಕ್ಷೆ ಪಡೆದಿದ್ದಾನೆ. ವೀರಣ್ಣ ಮತ್ತು ಕಾಳಣ್ಣರೊಡನೆ ನಾನು ಸಹ ಗುರು ಸೇವೆಯಲ್ಲಿ ತೊಡಗಿದ್ದೇನೆ!"

"ತುಂಬಾ ಸಂತೋಷ ! ನೀವೇ ಧನ್ಯಾತ್ಮರು!"

—ಎನ್ನುತ್ತಿದ್ದಂತೆ ಇಬ್ಬರೂ ಮನೆ ಬಾಗಿಲಿಗೆ ಹಿಂದಿರುಗಿ ಬಂದಿದ್ದರು. ಭೈರಣ್ಣನನ್ನು ಗುರ್ತಿಸಿದ ಕನಕಾ ಹಸನ್ಮುಖಿಯಾಗಿ ಅವನನ್ನು ಸ್ವಾಗತಿ ಸಿದಳು. ಭೈರಣ್ಣ ಇಬ್ಬರಿಗೂ ವಂದಿಸಿದ.

ಅಷ್ಟರಲ್ಲಿ ಕನಕಾ ಇಬ್ಬರಿಗೂ ಉಪಾಹಾರ ತಂದಿತ್ತಳು. ಉಪಾಹಾರದ ತರುವಾಯ ಶ್ರೀಪತಿ—

"ಭೈರಣ್ಣ, ಗಂಗೋತ್ರಿಯಿಂದ ನಿರ್ಗಮಿಸಿದ ತರುವಾಯ ಮತ್ತೆ ಯಾವ ಯಾವ ಕ್ಷೇತ್ರಗಳಲ್ಲಿ ಗುರುದೇವನ ಅನುಷ್ಠಾನ ನಡೆಯಿತು ?"

"ಗಂಗೋತ್ರಿಯಿಂದ ಹೊರಟ ಗುರುದೇವನು ಹಿಮವತ್ಕೇದಾರ ಮತ್ತು ಬದರಿಕಾ ಕ್ಷೇತ್ರಗಳಲ್ಲಿ ಒಂದೊಂದು ವರ್ಷ ಅನುಷ್ಠಾನ ಮಾಡಿದರು. ಅನಂತರ ಅವರು ಉಭಯತ್ರ ಅಲ್ಲಲ್ಲಿಯ ಜಗದ್ಗುರುಗಳಿಂದ ಬೀಳ್ಕೊಂಡು ಕೈಲಾಸ ಪರ್ವತದ ಕಡೆ ಅಭಿಮುಖರಾದರು."

ಅಷ್ಟರಲ್ಲಿ ಕನಕಾ–"ಭೈರಣ್ಣ, ಬದರಿಕಾ ಕ್ಷೇತ್ರದವರೆಗೆ ನಾವು ಯಾತ್ರೆ ಮಾಡಿರುವುದು ನಿನಗೆ ತಿಳಿದೇ ಇದೆ. ಅಲ್ಲಿಂದ ಮುಂದೆ ಗುರುದೇವನು ಸಂಚರಿಸಿದ ಪವಿತ್ರ ಕ್ಷೇತ್ರಗಳನ್ನು ಸಂದರ್ಶಿಸಬೇಕೆನಿಸಿದೆ. ಆದ್ದರಿಂದ ಅವುಗಳನ್ನು ಪರಿಚಯಿಸಬೇಕು" ಎಂದಳು ಕೈಮುಗಿದು.

"ಆಗಬಹುದು ತಾಯಿ, ಅಗತ್ಯವಾಗಿ ಹೇಳುತ್ತೇನೆ" ಎಂದು ಭೈರಣ್ಣ ತನ್ನ ಮಾತನ್ನು ಮುಂದುವರಿಸಿದ.

## ಕೈಲಾಸ—ಮಾನಸಗಳು

"ಇವು ಪಶ್ಚಿಮ ಟಿಬೆಟ್ (ತ್ರಿವಿಷ್ಟಪ) ಪ್ರಾಂತದಲ್ಲಿವೆ. ಈ ಪ್ರಾಂತವು ಶುತುದ್ರು (ಸೆಟ್ಲೆಜ್), ಸಿಂಧೂ ಮತ್ತು ಅದರ ಉಪನದಿಗಳು ಇವುಗಳನ್ನು ಅನುಸರಿಸಿ ಬ್ರಹ್ಮಪುತ್ರಾ ನದಿಗಳ ಮಧ್ಯದ ದಿನ್ನೆಯಿಂದ ಪಶ್ಚಿಮಕ್ಕೆ 'ಕುನಾವರ್' ಎಂಬ ಸ್ಥಳದವರೆಗೂ ಹರಡಿದೆ.

ಇದು ಜಗತ್ತಿನಲ್ಲಿಯೇ ಎತ್ತರವಾದ ಪ್ರದೇಶ. ಇಲ್ಲಿಯದು ಕಠಿನವಾದ ವಾಯುಗುಣ. ಅಸಹ್ಯ ಚಳಿ, ರಭಸವಾಗಿ ಬೀಸುವ ಗಾಳಿ. ಇದರ ದಕ್ಷಿಣದಲ್ಲಿ ಹಿಮಾಲಯ ಪರ್ವತ ಶ್ರೇಣಿ ಅಡ್ಡಗೋಡೆಯಂತೆ ನಿಂತಿರುವುದರಿಂದ ಮುಂಗಾರು ಮಳೆಗಳು ಇಲ್ಲಿ ಸುಳಿಯುವುದಿಲ್ಲ. ಆದ್ದರಿಂದ ಚಳಿಗಾಲದಲ್ಲಿ ಹಿಮವು ಸಹ ಕಡಿಮೆ. ಉಷ್ಣಾಂಶವು ತೀರ ಕಡಿಮೆ ! ಇದರಿಂದ ಸಸ್ಯಗಳೂ ಕೂಡ ಬೆಳೆಯುವುದಿಲ್ಲ. ಪ್ರಾಣಿಗಳು ಅತಿ ವಿರಳ !

ಕೈಲಾಸ ಮತ್ತು ಮಾನಸ ಸರೋವರಗಳು ಇಲ್ಲಿನ ಪ್ರಾಮುಖ್ಯತೆಗೆ ಕಾರಣ. ಹಿಂದೂ ಮತ್ತು ಬೌದ್ಧ ಜನಾಂಗಗಳಿಗೆ ಇವು ಪವಿತ್ರ ಸ್ಥಳಗಳು.

ಮಾನಸ ಸರೋವರದ ಉತ್ತರಕ್ಕೆ ಸಿಂಧೂ, ಪೂರ್ವಕ್ಕೆ ಬ್ರಹ್ಮಪುತ್ರಾ, ದಕ್ಷಿಣಕ್ಕೆ ಕರ್ನಾಲಿ-ಗಂಗಾ ನದಿಗಳೂ, ಪಶ್ಚಿಮಕ್ಕೆ ಶುತುದ್ರು ನದಿಯೂ ಹುಟ್ಟುತ್ತವೆ.

ಸಂಶೋಧಕರ ದೃಷ್ಟಿಯಿಂದ ಇದು ಆಕರ್ಷಕವಾದ ಪ್ರದೇಶವೇ ! ಆದರೂ ಇಲ್ಲಿನ ಕಠಿನ ಹವೆ, ಮರುಭೂಮಿಯಂತಹ ನೆಲ, ಆಹಾರ ಪದಾರ್ಥಗಳು ಮುಖ್ಯವಾಗಿ ಸೌದೆಯ ಅಭಾವದಿಂದ ಇಲ್ಲಿ ವಾಸಿಸುವುದು ಕಷ್ಟ.

ಈ ಪ್ರದೇಶದ ಪ್ರಸಿದ್ಧವಾದ ಕಣಿವೆ 'ಲಿಪುಲೇಖ' ಎಂಬುದು. ಅದರ ಎತ್ತರ ೧೬,೭೮೦ ಅಡಿಗಳು. ಅದರ ಮುಂದೆ "ರಕ್ಷಸ್ಥಳ" ಮತ್ತು "ಮಾನಸ" ಎಂಬ ಪವಿತ್ರ ಸರೋವರಗಳಿವೆ. ಮಾನಸ ಕಣಿವೆಯ ಎತ್ತರ ೧೭,೭೯೦ ಅಡಿಗಳು. ಅದನ್ನು ದಾಟಿಹೋದರೆ ಬದರಿಕಾಕ್ಷೇತ್ರ ಸಿಗುತ್ತದೆ.

ಇವೆರಡು ಸರೋವರಗಳು ೧೫,೦೦೦ ಅಡಿಗಳ ಎತ್ತರದಲ್ಲಿ ಅಕ್ಕ-ಪಕ್ಕದಲ್ಲಿವೆ. ಪೂರ್ವಕ್ಕಿರುವುದು ಮಾನಸ, ಪಶ್ಚಿಮಕ್ಕೆ ರಕ್ಷಸ್ಥಳ, ಇವನ್ನು ಕ್ರಮವಾಗಿ ತಿಬೆಟ್ ಭಾಷೆಯಲ್ಲಿ 'ಮಾಬಾಂಗ್' ಮತ್ತು 'ಲಾಗಾಂಗ್' ಎಂದು ಕರೆಯುತ್ತಾರೆ. ಇವೆರಡರ ನಡುವೆ ಸಾಧಾರಣವಾದ ಒಂದು ದಿನ್ನೆ ಇದೆ.

ಎರಡೂ ಸರೋವರಗಳಿಗೆ ಪರಸ್ಪರ ಸಂಬಂಧವುಂಟು. ಮಾನಸ ಸರೋವರದಿಂದ ರಕ್ಷಸ್ಥಳಕ್ಕೆ ಅಲ್ಲಿಂದ ಶುತುದ್ರು ನದಿಯ ಮೂಲಕ್ಕೆ ಗುಪ್ತಗಾಮಿನಿಯಾಗಿ ನೀರು ಹರಿದಿರುವುದು ಕಂಡುಬರುತ್ತದೆ. ಗುರ್ಲ ಮತ್ತು ಮಾಂಧಾತಾ ಮುಂತಾದ ಪರ್ವತಗಳಿಂದ ಮಾನಸ ಸರೋವರಕ್ಕೆ ಯಥೇಚ್ಛವಾಗಿ ನೀರು ಹರಿದುಬರುತ್ತದೆ.

ಕೈಲಾಸವು ಶಿವನ ಆವಾಸಸ್ಥಾನ. ಅದನ್ನು ಸಂದರ್ಶಿಸುವುದು ಮತ್ತು ಅದರ ಪ್ರದಕ್ಷಿಣೆ ಮಾಡುವುದು ಪುಣ್ಯಪ್ರದ ಎಂಬ ನಂಬಿಕೆ ಇದೆ. ಕೆಲವರು ಬರಿಗಾಲಿನಿಂದಲೇ ಪ್ರದಕ್ಷಿಣೆ ಮಾಡುತ್ತಾರೆ. ಮತ್ತೆ ಕೆಲವರು ಸಾಧುಗಳು ಹಾಗೂ ಭಕ್ತರು ಹೆಜ್ಜೆಹೆಜ್ಜೆಗೂ ನಮಸ್ಕರಿಸುತ್ತಾ ಬೆಟ್ಟವನ್ನು ಸುತ್ತುತ್ತಾರೆ. ಇನ್ನೂ ಕೆಲವರು ಪರ್ವತದ ಸುತ್ತಲೂ ಉರುಳು ಸೇವೆ ಮಾಡುತ್ತಾರೆ.

ಒಂದು ಸಲ ಬೆಟ್ಟವನ್ನು ಸುತ್ತಿ ಬರುವುದಕ್ಕೆ ಎರಡೂವರೆ ದಿನ ಬೇಕು. ಬಳಸುವ ದಾರಿ ೨೯ ಮೈಲಿಗಳು. ಕಲ್ಲು ನೆಲ, ಒರಟುದಾರಿ. ಆಗಾಗ್ಗೆ ಮಂಜುಗಡ್ಡೆಗಳು ಅಡ್ಡವಾಗಿ ಬಿದ್ದಿರುವುದೂ ಉಂಟು. ಇದರಿಂದ ಪ್ರದಕ್ಷಿಣೆ ಕಷ್ಟಸಾಧ್ಯ !

ಕೈಲಾಸ ಶಿಖರವು ಶಂಖದ ಆಕಾರದಲ್ಲಿದೆ. ಅದರ ಎತ್ತರ ೨೧,೮೦೦ ಅಡಿಗಳು. ಯಾವಾಗಲೂ ಶಿಖರವನ್ನು ಹಿಮವು ಕವಿದಿರುವುದರಿಂದ ಅದಕ್ಕಿರುವ 'ರಜತಗಿರಿ' ಎಂಬ ಹೆಸರು ಸಾರ್ಥಕ. ಬಾರ್ಖಾ ಎಂಬ ಸ್ಥಳದಿಂದ ಶಿಖರದ ನೋಟ ಅತಿರಮ್ಯ !

ಪರ್ವತದ ಕೆಳಭಾಗವು ಗೋಡೆಗಳಂತೆ ಒಂದೇ ಸಮನೆ ನೇರವಾಗಿ ಎದ್ದಿದೆ. ಕೈಲಾಸಶಿಖರವು ಕೈಲಾಸಪರ್ವತಶ್ರೇಣಿಯ ಮೇಲಿಲ್ಲ. ಅದಕ್ಕಿಂತ ಸ್ವಲ್ಪ ದಕ್ಷಿಣಕ್ಕಿದೆ. ಈ ಪರ್ವತಶ್ರೇಣಿಗೂ ಕೈಲಾಸ ಪರ್ವತಕ್ಕೂ ನಡುವೆ ದೊಡ್ಡ ಕಣಿವೆಯೊಂದಿದೆ. ಅದರ ಎತ್ತರ ೧೮,೬೦೦ ಅಡಿಗಳು. ಕೈಲಾಸಪ್ರದಕ್ಷಿಣೆ ಮಾಡುವವರು ಈ ಕಣಿವೆ ದಾಟಬೇಕು.

ಕೈಲಾಸ ಪ್ರದಕ್ಷಿಣೆಯು ಬೆಟ್ಟದ ದಕ್ಷಿಣಭಾಗದಿಂದ ಪ್ರಾರಂಭವಾಗುತ್ತದೆ. ಪರ್ವತದ ನಾಲ್ಕೂ ಕಡೆ ನಾಲ್ಕು ವಿಹಾರ (ಆಶ್ರಮ)ಗಳಿವೆ. ಅವು ಕ್ರಮವಾಗಿ 'ಕಿಯಾಂಗ್ಡ' ಅಥವಾ 'ಗ್ಯಾಂಗ್ಟ', 'ನ್ಯಾಂದಿಪುಗೊಂಪ', 'ಡಿಥಿಪುಗೊಂಪ' ಮತ್ತು 'ಸುಂಟುಗೊಂಪ' ಎಂದು ಹೆಸರಾಗಿವೆ.

ಇವುಗಳಲ್ಲಿ ಮೊದಲನೆಯದು 'ಕಿಯಾಂಗ್ಡ' ಆಶ್ರಮವು ಬಂಧುರವಾಗಿದೆ. ಪ್ರದಕ್ಷಿಣೆಯು ದಕ್ಷಿಣದ'ಧರಾಚನ' ಎಂಬಲ್ಲಿಂದ ಆರಂಭವಾಗುತ್ತದೆ. ಅಲ್ಲಿಗೆ ಒಂದು ಮೈಲಿ ದೂರದಲ್ಲಿ 'ಕಿಯಾಂಗ್ಡ' ವಿಹಾರವಿದೆ. ಮುಂದೆ ಮೂರು ಮೈಲಿ ನಡೆದರೆ 'ನ್ಯಾಂದಿಪು' ವಿಹಾರವು ಸಿಗುತ್ತದೆ.

ಇದು ದೊಡ್ಡ ಬಂಡೆಯ ಮೇಲೆ ಕಟ್ಟಲ್ಪಟ್ಟಿದೆ. ಅದರ ಮುಂದೆ ಒಂದು ಹೊಳೆ ಅಡ್ಡವಾಗುತ್ತದೆ. ಅದನ್ನು ದಾಟಲು ಮರದ ಸೇತುವೆ

ಇದೆ. ಹೊಳೆಯ ನೀರು ಬಂಡೆಗಳ ಮೇಲೆ ಹರಿದು ಅಲ್ಲಲ್ಲಿ ಧುಮ್ಮಿಕ್ಕಿ, ಅನೇಕ ಜಲಪಾತಗಳನ್ನು ಕಲ್ಪಿಸಿದೆ.

'ನ್ಯಾಂದಿಪು'ದಿಂದ ಐದು ಮೈಲಿ ಮುನ್ನಡೆದರೆ ಕೈಲಾಸದ ಪಶ್ಚಿಮಕ್ಕೆ ಬರುತ್ತೇವೆ. ಹಿಮಾವೃತವಾದ ಅದರ ನೋಟ ಬಹುರಮ್ಯ. ಮೇಲ್ಭಾಗವು ಶ್ವೇತಛತ್ರಿಯ ಅಂಚಿನಂತೆ ಕಾಣುತ್ತದೆ. ಅಲ್ಲಿಂದ ಮುಂದೆ ಕೈಲಾಸದ ಉತ್ತರಕ್ಕೆ ಬರುತ್ತೇವೆ. ಅಲ್ಲಿ 'ಧಿಧಿಪುಗೊಂಪ' ಆಶ್ರಮವಿದೆ. ಕೈಲಾಸದ ಉತ್ತರಭಾಗವು ಹಿಮವು ಕವಿಯದಿರುವುದರಿಂದ ಕಪ್ಪು ಬಂಡೆಗಳ ನಗ್ನದೃಶ್ಯ! ವಿಹಾರದ ಕೆಳಭಾಗದ ಬಳಿ ಒಂದು ಬಂಡೆಯ ಮೇಲೆ "ಓಂ ಮಣಿ ಪದ್ಮೇಹಂ" ಎಂದು ಬರೆದಿದೆ. ಇದು ಟಿಬೆಟ್ ಜನರ ಪ್ರಾರ್ಥನೆ. 'ಧಿಧಿಪು ವಿ'ನಿಂದ ಮುಂದೆ ಸಿಕ್ಕುವುದು 'ಸುಂಟು' ಎಂಬ ವಿಹಾರ. ಕೈಲಾಸ ಮತ್ತು ಕೈಲಾಸಪರ್ವತ ಶ್ರೇಣಿಯ ಮಧ್ಯದಲ್ಲಿ 'ಡಾಮಾಲಾ' ಎಂಬ ಕಣಿವೆ ಇದೆ. ಕಣಿವೆಯ ಎತ್ತರ ೧೮,೫೫೦ ಅಡಿಗಳು. ಇಲ್ಲಿ ಸಸ್ಯಗಳಿಲ್ಲ. ಬರೀ ಕಲ್ಲು ದಾರಿ! ಆ ಕಣಿವೆಯ ಕಡೆಯಲ್ಲಿ 'ಗೌರೀಕುಂಡ'ವಿದೆ. ಅಲ್ಲಿಂದ ಮುಂದೆ ೬ ಮೈಲಿ ನಡೆದರೆ 'ಧರಾಚನ' ಸಿಕ್ಕುತ್ತದೆ. ಇಲ್ಲಿಗೆ ಕೈಲಾಸದ ಪ್ರದಕ್ಷಿಣೆ ಮುಗಿಯುತ್ತದೆ. ಅಲ್ಲಿಂದ ಮುಂದೆ ತೀರ್ಥಪುರಿ. ಅದರ ಹತ್ತಿರದ ಗುಡ್ಡವು ದೇವತೆಗಳ ಆವಾಸ ಎಂಬ ಪ್ರವಾದವಿದೆ. ಇದರ ಸಮೀಪದಲ್ಲಿ ಬಿಸಿನೀರಿನ ಊಟೆಗಳುಂಟು. ಅಲ್ಲಿ ಯಾತ್ರಿಕರು ಸುಖಸ್ನಾನ ಮಾಡು ತ್ತಾರೆ.

ಭೈರಣ್ಣ ಬಣ್ಣಿಸಿದ ಕೈಲಾಸ ಮತ್ತು ಮಾನಸ ಸರೋವರಗಳ ಪರಿಚಯದಿಂದ ಕನಕಾ ಮತ್ತು ಶ್ರೀಪತಿಗಳು ಪುಳಕಿತರಾದರು. ಕನಕಾ ಹೇಳಿದಳು—

"ಅಣ್ಣಾ, ಕೈಲಾಸ ಮತ್ತು ಮಾನಸ ಸರೋವರಗಳ ವರ್ಣನೆ ಕೇಳಿದ ಮೇಲೆ ಅವು ಕಣ್ಣೆದುರಿಗೆ ನಿಂತಂತಾಗಿದೆ. ಇಷ್ಟು ಕಠಿನವಾದ ಕೈಲಾಸ ಯಾತ್ರೆ ಮಾಡಲು ನಾನು ಅಸಮರ್ಥಳು !"

ಶ್ರೀಪತಿ "ನಾನು ಕನಸಿನಲ್ಲಿ ಕಂಡ ಕೈಲಾಸ–ಮಾನಸಗಳು ಇಂದು ನನಸಾದಂತೆ ಆಗಿದೆ!" ಎಂದ ಆತ್ಮೀಯವಾಗಿ.

೨

ಭೈರಣ್ಣ ತನ್ನ ಕಥನವನ್ನು ಮುಂದುವರಿಸಿದ—

"ನೇಪಾಳವನ್ನು ಕುರಿತು ಪಯಣಿಸಿದ ಗುರುದೇವನ ಆಗಮನದ ಸುಳಿವು ತಿಳಿದ ನೇಪಾಳದ ರಾಜ, 'ವಿಕ್ರಮಸಿಂಹ ಭೂಪಾಲನು' ಗುರುದೇವನನ್ನು ಗೌರವದಿಂದ ತನ್ನ ರಾಜಧಾನಿ ಖಟಮಂಡುವಿಗೆ ಬರಮಾಡಿಕೊಂಡ. ಅಲ್ಲಿ ಸುಪ್ರಸಿದ್ಧವಾದ ಪಶುಪತಿನಾಥ ದೇವಾಲಯ. ಅದರ ವಿಸ್ತಾರವಾದ ಭೂಭಾಗದಲ್ಲಿ ರುದ್ರಾಕ್ಷಿವನ. ಅಲ್ಲಿ ನಿರ್ಮಿತವಾದ ಪರ್ಣಶಾಲೆಯಲ್ಲಿ ಗುರುದೇವನ ಅನುಷ್ಠಾನಕ್ಕೆ ಸಕಲ ಸಿದ್ಧತೆಗಳನ್ನು ಏರ್ಪಡಿಸಲಾಗಿತ್ತು.

"ಪಶುಪತಿನಾಥ ಕ್ಷೇತ್ರವು ಸುಪ್ರಸಿದ್ಧವಾದ ಐದು ಕೇದಾರಗಳಲ್ಲಿ ಒಂದು. ಪುರಾಣದ ಪ್ರಕಾರ ಯುಧಿಷ್ಠಿರನು ತಮ್ಮಂದಿರೊಡನೆ ಕೇದಾರಕ್ಕೆ ಹೋದಾಗ ಪರಶಿವನು ವೃಷಭರೂಪದಿಂದ ಕಾಣಿಸಿಕೊಂಡ. ಆದರೆ ಗೋತ್ರವಧಾ ದೋಷದಿಂದ ಕಳಂಕಿತರಾದ ಅವರಿಗೆ ದರ್ಶನ ಕೊಡದೆ, ಆ ವೃಷಭವು ಭೂಮಿಯೊಳಕ್ಕೆ ಪ್ರವೇಶಿಸಿತೆಂದೂ, ಪಾಂಡವರಲ್ಲಿ ಬಲಿಷ್ಠನಾದ ಭೀಮನು ಅದರ ಪೃಷ್ಠಭಾಗವನ್ನು ಬಿಗಿಯಾಗಿ ಹಿಡಿದಿದ್ದರಿಂದ ತ್ರಿಕೋಣಾಕಾರವಾಗಿ ಹೊರಕ್ಕೆ ಕಾಣುವ ಲಿಂಗವು ಕೇದಾರನಾಥನೆನಿಸಿಸಿತೆಂದೂ, ಭೂಮಿಯನ್ನು ಹೊಕ್ಕ ವೃಷಭದ ಮುಖವು ನೇಪಾಳದಲ್ಲಿ ಕಾಣಿಸಿಕೊಂಡು, 'ಪಶುಪತಿನಾಥ'ನೆನಿಸಿತೆಂದೂ ಹೇಳಿಕೆ ಇದೆ. ವೃಷಭದ ಉಳಿದ ಶರೀರ ಭಾಗಗಳು ತುಂಗನಾಥ, ಮಡಮಹೇಶ್ವರ, ಕಪಾಲೇಶ್ವರಗಳಲ್ಲಿ ಕಾಣಿಸಿಕೊಂಡು ಕೇದಾರವೂ ಸೇರಿ ಪಂಚಕೇದಾರಗಳೆನಿಸಿರುವುವೆಂದು ಹಿಂದೆಯೇ ಹೇಳಲಾಗಿದೆ.

ಆದ್ದರಿಂದ ಕೇದಾರನಾಥ ಪೀಠಕ್ಕೂ, ಪಶುಪತಿನಾಥಕ್ಕೂ ನಿಕಟ ಸಂಬಂಧವಿದೆ. 'ಈ ದೃಷ್ಟಿಯಿಂದ ಪಶುಪತಿನಾಥವು ಕೇದಾರ ಪೀಠದ ಒಂದು ಶಾಖೆ'ಎಂಬುದನ್ನು ಕೇದಾರದ ರಾವಲರಿಂದ ಅರಿತೇ ಗುರುದೇವನು ಇದನ್ನು ತನ್ನ ಅನುಷ್ಠಾನಕ್ಕೆ ಆರಿಸಿಕೊಂಡದ್ದು."

—ಎಂಬ ಭೈರಣ್ಣನ ವರ್ಣನೆ ಕೇಳಿದ ಶ್ರೀಪತಿ ದಂಪತಿಗಳು ನೇಪಾಳದ ಪ್ರಯಾಣ ನಿರ್ಧರಿಸಿದರು. ಅತ್ತೆ-ಮಾವಂದಿರಿಗೆ ಕನಕೆಯ ಬಯಕೆ ತಿಳಿಸಿದಾಗ ಅವರು ಸಂತಸಗೊಂಡರು. ಈ ಬಯಕೆಯು ಅವಳು ಮತ್ತೆ ಗರ್ಭಿಣಿ ಎಂಬುದರ ಕುರುಹು, ಎಂದು ನಿರ್ಧರಿಸಿ ನೇಪಾಳ ಪ್ರಯಾಣಕ್ಕೆ ಸೂಕ್ತ ವ್ಯವಸ್ಥೆ ಮಾಡಿದರು.

೩

ಈ ಸಲ ಶಂಭುಭಟ್ಟರು ಶ್ರೀದೇವಿಯನ್ನು ಕನಕೆಯ ಜೊತೆ ಹೊರಡಲು ಪ್ರೇರಿಸಿದರು. ಭಟ್ಟರು ಮತ್ತು ಶ್ರೀಪತಿ ನೇಪಾಳಯಾತ್ರೆಯ ನಿಮಿತ್ತ ವಿದ್ಯಾಪೀಠದಿಂದ ರಜೆ ಪಡೆದು ಬಂದರು.

ಭೈರಣ್ಣನ ಮಾರ್ಗದರ್ಶನದಲ್ಲಿ ವಾರಾಣಸಿಯಿಂದ ಪ್ರಯಾಣಿಸಿದ ಈ ಯಾತ್ರಾತಂಡ ಪಾಟಲೀಪುತ್ರ (ಪಾಟ್ನಾ) ದ ಮಾರ್ಗವಾಗಿ ನೇಪಾಳದ ರಾಜಧಾನಿ ಖಟಮಂಡುವಿಗೆ ಬಂದುತಲಪಿತು.

ಭೈರಣ್ಣ ಈ ಯಾತ್ರಿಕ ತಂಡವನ್ನು ಮೊದಲು ಪಶುಪತಿನಾಥ ದೇವಾಲಯಕ್ಕೆ ಕರೆದೊಯ್ದು, ಅವರಿಗೆ ಸ್ವಾಮಿಯ 'ಧೂಳಿದರ್ಶನ' ಮಾಡಿಸಿ ಗುರುದೇವನ ಪರ್ಣಕುಟಿಗೆ ಆಗಮಿಸಿತು.

ಮುಂಜಾನೆಯ ಅನುಷ್ಠಾನವನ್ನು ಮುಗಿಸಿದ ಗುರುದೇವನು ಆಶ್ರಮದ ಮುಂದಿರುವ ಬಿಲ್ವವೃಕ್ಷದ ನೆರಳಿನಲ್ಲಿ ವೇದಿಕೆಯ ಮೇಲೆ ಹಾಸಿರುವ ವ್ಯಾಘ್ರಾಜಿನದ ಮುಂದೆ ಓಲೆಗರಿಯ ಹೊತ್ತಗೆಯೊಂದನ್ನು ಬಿಚ್ಚಿ ಓದುತ್ತಾ ನಿಂತಿದ್ದರು ತನ್ನ ಕರುವಿಗಾಗಿ ಪಾಲ್ದುಂಬಿದ ಕೊಡಗೆಚ್ಚಲಿನ ಕಾಮಧೇನುವಿನಂತೆ.

ದೂರದಲ್ಲಿ ಬರುತ್ತಿರುವ ಶ್ರೀಪತಿ ದಂಪತಿಗಳನ್ನು ಗುರುತಿಸಿದ ಗುರುದೇವನು ಆಸನವನ್ನು ಅಲಂಕರಿಸಿ ಹೊತ್ತಗೆಯನ್ನು ಮಗ್ಗುಲಿಗೆ ಸರಿಸಿ ಅವರ ಆಗಮನವನ್ನು ನಿರೀಕ್ಷಿಸತೊಡಗಿದರು.

ಅದೇ ಪ್ರಸನ್ನ ಗಂಭೀರ ಮುಖಮುದ್ರೆ. ಶುದ್ಧ ಸತ್ವಪ್ರಭೆಯಂತೆ ಜಡೆಗಟ್ಟಿದ ಬೆಳ್ಳಿ ಕೂದಲ ಸುರುಳಿ ಮುಂಡೆಯ ಮೇಲೆ ಕಿರೀಟದಂತೆ ಅಳ್ಳ

ಕವಾಗಿ ಬಿಗಿದು ಕಟ್ಟಿದೆ. ಮಸ್ತಕದ ಜ್ಞಾನಧಾರೆಗಳು ಲೋಕಕಲ್ಯಾಣಾರ್ಥವಾಗಿ ಎಳೆ ಎಳೆಯಾಗಿ ಇಳಿದು ಪ್ರವಹಿಸುತ್ತವೆಯೋ ಎಂಬಂತೆ ಮುಖಮಂಡಲದ ಎರಡೂ ಕಡೆ ಚುಬುಕದಲ್ಲಿ ಶೋಭಿಸುವ ಶುಭ್ರಶ್ಮಶ್ರುಜಾಲ. ಪ್ರಶಾಂತ ತೇಜಃಕಿರಣಗಳನ್ನು ಹೊರಸೂಸುವ ಮಂಗಳ ನೋಟದ ಕಂಗಳು. ಹೊಂಬಣ್ಣದ ಬೃಂಹಿಷ್ಠ ದೃಢಕಾಯವು ದೇದೀಪ್ಯಮಾನವಾಗಿ ವ್ಯಾಘ್ರಾಸನದ ಮೇಲೆ ಮಂಡಿಸಿತ್ತು.

ಕಾಶ್ಮೀರದಲ್ಲಿ ತಾವು ಕಂಡ ದಿವ್ಯ ವ್ಯಕ್ತಿತ್ವವೇ ಆದರೂ ಈಚೆಗೆ ಹಿಮಗಿರಿ ಗುಹೆಗಳಲ್ಲಿ ಆರು ವರ್ಷಗಳವರೆಗೆ ಎಸಗಿದ ಅಖಂಡ ತಪೋಭೂಯಿಷ್ಠವಾದ ತೇಜಃಪುಂಜದಿಂದ ಪ್ರಕಾಶಿಸುವ ಗುರುದೇವನನ್ನು ಕಂಡೊಡನೆಯೇ ಭಕ್ತಿ ಶ್ರದ್ಧೆಗಳಿಂದ ವಿನಮ್ರರಾದ ಶ್ರೀಪತಿದಂಪತಿಗಳು ಸಾಷ್ಟಾಂಗ ಪ್ರಣಾಮ ಮಾಡಿದರು. ಉಳಿದವರೂ ಅವರನ್ನು ಅನುಸರಿಸಿದರು.

ಅಭಯ-ಹಸ್ತವನ್ನು ಚಾಚಿದ ಗುರುದೇವನು ಶ್ರೀಪತಿಯ ಮುಂಡೆ ಹಿಡಿದು ಮೇಲೆತ್ತಿ ಬರಸೆಳೆದು ಗಾಢಾಲಿಂಗನ ಮಾಡಿದರು. ಕನಕೆಯ ಮಸ್ತಕದ ಮೇಲೆ ತಮ್ಮ ವರದ ಹಸ್ತವನ್ನಿಟ್ಟು 'ಬಾ ಮಗಳೆ, ಎಲ್ಲರೂ ಕುಶಲ ತಾನೆ!' ಎಂದರು ಅಮಿತವಾತ್ಸಲ್ಯದಿಂದ.

"ಗುರುದೇವ, ತಮ್ಮ ದರ್ಶನಾಭಿಲಾಷೆಯಿಂದ ತಹತಹಿಸುತ್ತಿದ್ದ ನಮ್ಮ ಮನೋಹಂಸಗಳು ಅಮೃತದ ಕಡಲು ಹೊಕ್ಕು ಸಂತೃಪ್ತವಾದಂತಾಗಿದೆ! ಎಂದು ಶ್ರೀಪತಿ ಹೇಳುತ್ತಿದ್ದಂತೆ ಕನಕಾ ಗುರುವಿನ ಅಡಿದಾವರೆಯ ಮೇಲೆ ಮಸ್ತಕವನ್ನಿಟ್ಟು ಮರಿದುಂಬಿಯಂತೆ ತನ್ಮಯಳಾದಳು.

ಇಷ್ಟರಲ್ಲಿ ಶಂಭು ಭಟ್ಟರು ಫಲ ಪುಷ್ಪಗಳಿಂದ ತುಂಬಿದ ಹರಿವಾಣದಲ್ಲಿ ಓಲೆಯ ಹೊತ್ತಗೆಯನ್ನಿಟ್ಟು ಶ್ರೀಪತಿಯ ಕೈಗಿತ್ತರು. ಶ್ರೀಪತಿ ಅದನ್ನು ಭಕ್ತಿ ನಮ್ರತೆಯಿಂದ ಗುರುವಿನ ಪಾದಪದ್ಮಗಳ ಮುಂದಿರಿಸಿದ.

ಗುರುದೇವನು ಪ್ರಸನ್ನವದನನಾಗಿ ಫಲಪುಷ್ಪಗಳನ್ನು ದಂಪತಿಗಳಿಗಿತ್ತು ಆಶೀರ್ವದಿಸಿ, ಓಲೆಗ್ರಂಥವನ್ನು ಕೈಗೆತ್ತಿಕೊಂಡು ಬಿಚ್ಚತೊಡಗಿದರು. ಶ್ರೀಪತಿ-"ಶ್ರೀಕರಭಾಷ್ಯದ ಪಂಚಪಾದಿಕಾಸಂಪುಟವದು!" ಎನ್ನುತ್ತಿದ್ದಂತೆ, ಗುರು "ಇದರ ಸೂಕ್ಷ್ಮಪರಿಚಯ ಭೈರಣ್ಣನ ಮೂಲಕ ನಮಗೆ ಆಗಿದೆ!"

ಎನ್ನುತ್ತಾ ಹೊತ್ತಿಗೆ ಬಿಚ್ಚಿ ಕಣ್ಣಾಡಿಸಿದರು, ಗುರುದೇವನ ನೇತ್ರ ಪ್ರಾಂತಗಳಿಂದ ಚಿಮ್ಮಿಬಂದ ಸುಖ ಬಾಷ್ಪಾಂಬುವಿನಿಂದ ಓಲೆಗಳು ಒದ್ದೆ ಯಾಗಿ ಪುನೀತವಾಗುತ್ತಿದ್ದವು. ಪರಮಾನಂದ ತುಂದಿಲರಾದ ಗುರು ಶ್ರೀಪತಿದಂಪತಿಗಳನ್ನು ದೃಷ್ಟಿಸುತ್ತಾ "ನಮ್ಮ ಸಂಕಲ್ಪದಲ್ಲಿ ಅರ್ಧ ಸಿದ್ಧಿ ಸಿತು !" ಎಂದರು ವಾತ್ಸಲ್ಯ ದೃಷ್ಟಿ ಬೀರುತ್ತಾ. ಅದನ್ನು ಕೇಳಿದ ಶ್ರೀಪತಿ ನಡುಗಿದ. ಕನಕಾ ಕರಗಿ ನೀರಾದಳು. ನಮ್ಮಿಂದ ಏನು ಅಪರಾಧವಾಗಿ ದೆಯೋ ಎಂಬ ಚಿಂತಾಗ್ನಿಯಲ್ಲಿ ಅವರು ಅರೆಬೆಂದು ಕಂಗಾಲಾದರು.

ಗುರು ಅಪ್ಪಣೆ ಮಾಡಿದರು—

"ನೀವು ಹೆದರುವ ಕಾರಣವಿಲ್ಲ! ನಾನು ಶ್ರೀಪತಿಗೆ ಆಶೀರ್ವದಿಸಿ ಕೊಟ್ಟ ಗ್ರಂಥ ಕುಸುಮಗಳು ಕಂಪು ಬೀರಿ ಅರಳಿ ಫಲ ಮುಖವಾಗಿ ನಮ್ಮ ಕೈ ಸೇರಿದುವಲ್ಲಾ ! ಎಂಬ ಸಂತೋಷ ನಮ್ಮದಾಗಿದೆ ! ಇದರಿಂದ ನಮ್ಮ ಸಂಕಲ್ಪ ಅರ್ಧ ಸಿದ್ಧಿಸಿತು" ಎಂದೆವು.

"ಅರ್ಧ ಸಿದ್ಧಿಸಿತು!" ಎಂಬ ವಾಕ್ ಪ್ರಹಾರದಿಂದ ಜರ್ಝರಿತನಾಗಿ ದ್ದೇನೆ! ಕೃಪೆಮಾಡಿ ಅದನ್ನು ಬಿಡಿಸಿ ಹೇಳಬೇಕು" ಎಂದು ಶ್ರೀಪತಿ ಮತ್ತೆ ಕೈಮುಗಿದ.

"ಹಾಗೆ ಭಾವಿಸಬಾರದು. ನಮ್ಮ ಸಂಕಲ್ಪವು ಇಮ್ಮುಖವಾದದ್ದು. ಮೊದಲನೆಯದು ನಮ್ಮ ಸಿದ್ಧಾಂತವು ಭಾಷ್ಯದ ರೂಪು ತಳೆದದ್ದು. ಅದು ಸಿದ್ಧಿಸಿರುವುದರಿಂದ ಹಾಗೆ ಹೇಳಿದೆವು" ಎಂದಾಗ ಕನಕಾ ನಡುಗಿ ಮ್ಲಾನ ಮುಖಿಯಾಗಿ ಕೈ ಮುಗಿದಳು.

ಗುರು ಕನಕೆಯನ್ನು ಬಳಿಗೆ ಕರೆದು, "ತಾಯಿ, ನಮ್ಮ ಸಂಕಲ್ಪದ ಉಳಿದ ಅರ್ಧವನ್ನು ತುಂಬಿ ಕೊಡುವ ಹೊಣೆ ನಿನ್ನದು!"

—ಎಂದಾಗ ಎಲ್ಲರ ಕಣ್ಮನಗಳು ಗುರುದೇವನ ಕಡೆ ತಿರುಗಿದವು ಭಕ್ತಿ ಯಿಂದ.

ಮುಂದುವರೆದು ಗುರುದೇವನು—"ತಾಯಿ, ನೀನು ಧರಿಸಿರುವ ಪುಣ್ಯಗರ್ಭವು ಲೋಕಾನುಗ್ರಹಕಾರಕನಾದ ಒಬ್ಬ ಶಿವಯೋಗಿಯದು. ಆರು ವರ್ಷಗಳಿಂದ ನಾವು ಹಿಮಗಿರಿಗುಹೆಗಳಲ್ಲಿ ಎಸಗಿದ ನವಕೋಟಿ ಮಹಾ

ಮಂತ್ರದ ಫಲವು ಅದರಲ್ಲಿ ನಿಕ್ಷೇಪವಾಗಿದೆ ! ಅದನ್ನು ನೀನು ಪೋಷಿಸಿ ಬೆಳೆಸಿ ಲೋಕಕಲ್ಯಾಣಕ್ಕಾಗಿ ಪೀಠಕ್ಕೆ ಒಪ್ಪಿಸಬೇಕು!" ಎಂದರು ಅನುಗ್ರಹ ದೃಷ್ಟಿ ಬೀರಿ.

ಮುಂದುವರೆದು ಅವರು— "ತಾಯಿ, ನಿನ್ನ ಹಿರಿಯ ಮಗನ ಹೆಸರೇನು ?"

"ಅವನನ್ನು 'ಗೋಕರ್ಣ' ಎಂದು ಕರೆಯುತ್ತಿದ್ದೇವೆ!"

"ಅವನು ವಂಶಭೂಷಣನಾಗಿ ಕೀರ್ತಿಶಾಲಿಯಾಗಲಿ ! ಈಗ ಅವತರಿಸಲಿರುವವನು ಪವಿತ್ರನಾದ ಈ ಪಶುಪತಿಕ್ಷೇತ್ರದಲ್ಲಿ ನಮ್ಮಿಂದ ಸಂಸ್ಕಾರ ಹೊಂದಿರುವುದರಿಂದ ಅವನು "ಪಶುಪತಿ" ಎಂಬ ಹೆಸರು ತಳೆದು ಶ್ರೀಗಿರಿ ಪೀಠವನ್ನು ಬೆಳಗಲಿ ! ಆಗ ನಮ್ಮ ಸಂಕಲ್ಪವು ಪೂರ್ಣವಾಗಿ ಫಲಿಸಿದಂತಾಗುತ್ತದೆ.!"

—ಎಂದ ಗುರುದೇವನ ಆಶೀರ್ವಾಣಿಯನ್ನು ಆಲಿಸಿದ ಎಲ್ಲರೂ ಕೃತಜ್ಞತೆಯಿಂದ ಗುರುವಿಗೆ ಕೈಮುಗಿದರು.

ಶ್ರೀಪತಿ ಬಿನ್ನೈಸಿದ-"ಪಶುಪತಿ ಕ್ಷೇತ್ರಕ್ಕೆ ಆಗಮಿಸಿದ ನಮ್ಮನ್ನು ಬರಮಾಡಿಕೊಂಡು ಹರಸಿ, ಆವಿರ್ಭವಿಸಲಿರುವ ಅಣುಗನಿಗೆ"ಪಶುಪತಿ" ಎಂದೇ ನಾಮಧೇಯವನ್ನು ಸೂಚಿಸಿದುದರ ಅಂತರ್ಯವೇನು ಎಂಬುದು ಅರ್ಥವಾಗಲಿಲ್ಲ. ಕೃಪೆಮಾಡಿ ಅದನ್ನು ಬಿಡಿಸಿ ಹೇಳಬೇಕು" ಎಂದು.

ನಿಜ, ಇದನ್ನು ನಿಮಗೆ ತಿಳಿಸಬೇಕೆಂಬುದೂ ನಮ್ಮ ಸಂಕಲ್ಪ ! ಶಿವಸಿದ್ಧಾಂತವು ಮೊದಲು ಉಗಮವಾದದ್ದು 'ನೇಪಾಳದಲ್ಲಿಯೇ ! ಇದು ಪಶುಪತಿರುದ್ರನು ತ್ರಿಪುರರನ್ನು ಸಂಹರಿಸಿದ ಪವಿತ್ರಕ್ಷೇತ್ರ. 'ನೇಪಾಳ'ಪದವು "ನೇತ್ರಫಾಲ" ಎಂಬುದರ ತದ್ಭವ. ತ್ರಿಪುರದಾಹದ ಕತೆ ಪುರಾಣಗಳಲ್ಲಿ ಅದ್ಭುತವಾಗಿ ವರ್ಣಿತವಾಗಿದೆ. ಆಗ ಪಶುಪತಿ ರುದ್ರನು ಗಗನತಲದಲ್ಲಿ ತೇಲುತ್ತಿದ್ದ ತ್ರಿಪುರಗಳನ್ನು ತನ್ನ ಮೂರು ಕಣ್ಣುಗಳ ತೀಕ್ಷ್ಣದೃಷ್ಟಿಯಿಂದ ನೋಡಿದನು. ಆಗ ಅವನ ಮೂರೂ ಕಣ್ಣುಗಳಿಂದ ಅನೇಕ

ನೇತ್ರ ಬಿಂದುಗಳು ನೆಲದ ಮೇಲೆ ಬಿದ್ದವು. ಅವುಗಳಿಂದ ೩೮ ಬಗೆಯ೧ ರುದ್ರಾಕ್ಷ ಸಸಿಗಳು ಹುಟ್ಟಿದವು೨.

"ರುದ್ರನಿಗೆ ಪಶುಪತಿ ಎಂದು ಹೆಸರು ಬರಲು ಕಾರಣವೇನು ?"

"ಪಶುಗಳು ಮತ್ತು ಮತ್ತೊಂದು ಅರ್ಥದಲ್ಲಿ ಇರುವೆಯಿಂದ ಚತುರ್ಮುಖನವರೆಗೆ ಇರುವ ಜೀವರು ಪಶುಗಳು. ಅವುಗಳಿಗೆ ಪತಿ" ಎನಿಸಿದವನು ಪಶುಪತಿ. ಸೃಷ್ಟಿಯ ಆರಂಭ ಕಾಲದಲ್ಲಿ ಮಾನವರು ಆಹಾರಕ್ಕಾಗಿ ಪರಿತಪಿಸುತ್ತಾ ಪಶುಪಕ್ಷಿಗಳನ್ನು ಅವೂ ಸಿಕ್ಕದಿದ್ದಾಗ ಮಾನವರನ್ನೇ ಕಿತ್ತು ತಿನ್ನುವ ಮೃಗ ವೃತ್ತಿಯಲ್ಲಿದ್ದರು. ಪಶುಗಳು ಕಾಡುಗಳಲ್ಲಿ ಮೇಯುದ್ದ ಕಾಡುದನಗಳೆನಿಸಿದ್ದವು. ಆಗ ರುದ್ರನು ಕಾಡು ಪಶುಗಳನ್ನು ಪಳಗಿಸಿ ಪಶುಪತಿಯಾದನು. ಪಶುಗಳಿಂದ ಹಾಲು ಕರೆದ ಬೆಣ್ಣೆ ತುಪ್ಪಗಳನ್ನು ಬಳಸುವಂತೆ ಏರ್ಪಡಿಸಿದ. ಮಾತ್ರವಲ್ಲದೆ ಕಾಡು ನೆಲವನ್ನು ಪಶುಗಳ ಸಹಾಯದಿಂದ ಹದಗೊಳಿಸಿ, ಕೇದಾರ (ಹೊಲ-ಗದ್ದೆ ) ಗಳನ್ನಾಗಿ ವಿಂಗಡಿಸಿದ. ಅಲ್ಲಿ ಭತ್ತ, ಗೋಧಿ, ಹೆಸರು, ಉದ್ದು ಮುಂತಾದ ದವಸ ಧಾನ್ಯಗಳನ್ನು ಬಿತ್ತಿ ಬೆಳೆದು ಮಾನವರನ್ನು ಶಾಕಾಹಾರಿಗಳನ್ನಾಗಿ ಪರಿವರ್ತಿಸಿದ. ಯಜುರ್ವೇದವು ರುದ್ರನನ್ನು "ಕೃಷ್ಟಾನಾಂ (ಕೃಷಿಕರ) ಪತಿ" ಎಂದು ಸ್ತುತಿಸಿದೆ. ಹಿಮಾಲಯದ ಕೇದಾರದಲ್ಲಿ ಆರಂಭವಾದ ಈ ಬೇಸಾಯವು ಪ್ರಪಂಚದಲ್ಲೆಲ್ಲಾ ಹರಡಿತು. "ಮಾಷಾಶ್ಚ ಮೇ ತಿಲಾಶ್ಚ ಮೇ ಗೋಧೂಮಾಶ್ಚ ಮೇ" ಮುಂತಾದ ಧಾನ್ಯಗಳನ್ನು ವೇದವು ಹೆಸರಿದೆ.

ಇನ್ನು ಸಸ್ಯಾಹಾರಿಗಳಾದ ಮಾನವರು ತಮ್ಮ ಮೃಗ ವೃತ್ತಿಯನ್ನು ಬಿಟ್ಟು ಸಾತ್ವಿಕ ವೃತ್ತಿಗಿಳಿದಾಗ ಅವರಿಗೆ 'ತಾನು ಯಾರು? ಏತಕ್ಕೆ ಬಂದೆ?

---

೧ ಪುರಾ ತ್ರಿಪುರಸಂಹಾರೇ ತ್ರಿನೇತ್ರೋ ಜಗತಾಂ ಪತಿಃ ।
ಉದಪಶ್ಯತ್ಪುರಾಂ ಯೋಗಮುನ್ಮೀಲಿತ ವಿಲೋಚನಃ ॥೪೬॥
ನಿಪೇತುಸ್ತಸ್ಯ ನೇತ್ರೇಭ್ಯೋ ಬಹವೋ ಜಲಬಿಂದವಃ ।
ತೇಭ್ಯೋ ಜಾತಾ ಹಿ ರುದ್ರಾಕ್ಷಾ ರುದ್ರಾಕ್ಷಾ ಇತಿ ಕೀರ್ತಿತಾಃ ॥೪೭॥
೨ ಅಷ್ಟತ್ರಿಂಶತ್ಪ್ರಭೇದೇನ ಭವಂತ್ಯುತ್ಪತ್ತಿ ಭೇದತಃ ॥೪೮॥
(ಸಿ. ಶಿ. ಪ. ೭)

ಸದ್ಗತಿ ಪಡೆಯಲು ದಾರಿಯಾವುದು ? ಎಂಬ ತಿಳಿವು ಮೂಡಿದಾಗ "ಪಾಶುಪತ ಸಿದ್ಧಾಂತವನ್ನು ಬೋಧಿಸಿ ಮಾನವರನ್ನು ದೇವತ್ವಕ್ಕೇರಿಸಿದ."

"ಪಾಶುಪತ" ಎಂದರೇನು ?"

"ಪಶು–ಪಾಶ–ಪತಿ ಎಂಬ ತತ್ತ್ವತ್ರಯವನ್ನು ಕುರಿತು ವಿಚಾರ ಮಾಡಿರುವ ದರ್ಶನಕ್ಕೆ "ಪಾಶುಪತದರ್ಶನ" ಎಂದು ಹೆಸರು. ತ್ರಿಕ ಸಿದ್ಧಾಂತವೆಂದರೂ ಇದೇ!

ಪಶು ಎಂದರೆ ಶಿವನ ಅಂಶವಾದ ಜೀವ. ಅವನು ಅನಾದಿಪಾಶ(ಅವಿದ್ಯೆ)ಕ್ಕೆ ವಶನಾಗಿ ಜನನ-ಮರಣಗಳ ಚಕ್ರಕ್ಕೆ ಸಿಕ್ಕಿ ತೊಳಲುತ್ತಿರುವಾಗ ಪುಣ್ಯ ವಿಶೇಷದಿಂದ ಶಿವನ ಕೃಪೆ (ಶಕ್ತಿಪಾತ) ಅವನ ಮೇಲೆ ಬೀಳುತ್ತದೆ. ಸುಸಂಸ್ಕೃತನಾದ ಆ ಮಾನವನು ಗುರುಕೃಪೆಗೆ ಪಾತ್ರನಾಗಿ ಅವನಿಂದ ಶಿವದೀಕ್ಷೆ ಪಡೆದು"ಷಟ್‌ಸ್ಥಳ ಸೋಪಾನದಿಂದ ಮೇಲೇರಿ ಶರಣನೆನಿಸಿ ಕಡೆಗೆ ಶಿವನೇ ಆಗಿ ಮುಕ್ತನಾಗುವುದೇ ಪಾಶುಪತಸಿದ್ಧಾಂತ."

"ಕಾಶ್ಮೀರ ಶೈವ ಮುಂತಾದ ಸಿದ್ಧಾಂತಗಳಿಗೂ 'ಪಾಶುಪತ' ಎಂಬ ಹೆಸರಿದೆಯಲ್ಲವೆ ?"

"ಇದೆ, ನಿಜ; ಆದರೆ ಅಲ್ಲಿ ಷಟ್‌ಸ್ಥಲ ಸೋಪಾನದ ಸೌಲಭ್ಯವಿಲ್ಲದಿರುವುದರಿಂದ ಅವು ಪಂಡಿತ ಶ್ಲಾಘ್ಯಗಳಲ್ಲ"೧

"ಈಗ ಈ ಸಿದ್ಧಾಂತವನ್ನು 'ಪಾಶುಪತ' ಎಂದು ಕರೆಯದೆ ವೀರಶೈವ ಎನ್ನಲು ಕಾರಣವೇನು ?"

"ಮಾನವನ ಪ್ರಾರಂಭಯುಗದಲ್ಲಿ ಪಶುಪತಿ ರುದ್ರನಿಂದ "ನಂದಿ ಭೃಂಗಿ" ಮುಂತಾದ ಪ್ರಮಥರಿಗೆ ಉಪದಿಷ್ಟವಾದದ್ದು ಪಾಶುಪತ.' ಅನಂತರ ದಕ್ಷಯಾಗ ಕಾಲದಲ್ಲಿ ಅವತರಿಸಿದ ವೀರಭದ್ರನಿಂದ ಪಶುಪತಿ ಮತದ ಸಾರವು ಬೋಧಿಸಲ್ಪಟ್ಟು "ವೀರಶೈವ" ವೆನಿಸಿತು.೨ ಇದನ್ನು ಕೈಲಾಸ ಪ್ರಮಥರ ಬಳಿವಿಡಿದು ಬಂದ ರೇಣುಕ ದಾರುಕಾದಿ ಆಚಾರ್ಯರು ಪ್ರಚುರ ಪಡಿಸಿದರು.

---

೧ 'ಪಶುಪತಿ ಮತಸಾರೇ ಪಂಡಿತ ಶ್ಲಾಘನೀಯೇ' (ಸಿ. ಶಿ. ಪ. ೩೨)

೨ 'ವಿದಧತು ಮತಿಮಸ್ಮಿನ್ ವೀರಶೈವಾ ವಿಶಿಷ್ಟಾಃ' ( " )

'ಪಾಶುಪತಾಗಮ'ವು ಈ ಮತದ ಸ್ವರೂಪವನ್ನು ಸ್ಪಷ್ಟ ಪಡಿಸಿದೆ.೧

"ಗುರುದೇವ, ಪಾಶುಪತ ಅಥವಾ ವೀರಶೈವ ಸಿದ್ಧಾಂತವನ್ನು 'ಶಕ್ತಿ ವಿಶಿಷ್ಟಾದ್ವೈತ' ಎಂದು ಕರೆಯಲು ಕಾರಣವೇನು ? ಮತ್ತು ನೇಪಾಳ ದಲ್ಲಿ ಶಕ್ತಿಯ ಸ್ಥಾನವೇನು ?"

"ಇದೂ ಕೇಳಬೇಕಾದ ಪ್ರಶ್ನೆಯೇ ! ಏಕೆಂದರೆ ಇಡಿಯ ಭಾರತ ವರ್ಷದಲ್ಲಿರುವ ೫೧ ಶಕ್ತಿ ಪೀಠಗಳಲ್ಲಿ ಈ ನೇಪಾಳದಲ್ಲಿಯೇ ಮೂರು ಶಕ್ತಿ ಪೀಠಗಳಿವೆ. ಪಶುಪತಿದೇವಾಲಯದ ಸಮೀಪದಲ್ಲಿ "ಗುಹ್ಯೇಶ್ವರೀ" ಎಂಬ ಒಂದು ಶಕ್ತಿ ಪೀಠವಿದೆ. ಈ ಸುತ್ತು ಮುತ್ತು ಇರುವ "ವಿಂಧ್ಯವಾಸಿನೀ" ಮತ್ತು "ಮಹಾಕಾಳೀ" ಎಂಬುವು ಮುಖ್ಯ. ಇಲ್ಲಿಯ ಮಹಾಕಾಳಿಯು 'ಅಷ್ಟಭುಜಾ', ಹಾಗೂ 'ಕರಾಳಮುಖಿ' ಎನಿಸಿದ್ದಾಳೆ.

ಪಶುಪತಿ ರುದ್ರನ ತ್ರಿಪುರಸಂಹಾರ ಕಾಲದಲ್ಲಿ ಅವನಿಗೆ ಹೆಗಲೆಣೆ ಯಾಗಿದ್ದವಳು ಈ ಮಹಾ ಕಾಳಿಯೇ ! ಇವಳಿಗೆ 'ತ್ರಿಪುರಹಂತ್ರೀ' ಎಂಬ ಹೆಸರಿದೆ. ಅಷ್ಟೇ ಅಲ್ಲದೆ ರುದ್ರನ ೨೫ ಲೀಲೆಗಳಲ್ಲಿಯೂ ಶಕ್ತಿಯ ಸಂಬಂಧ ವಿದೆ. ಶಕ್ತಿಯ ನೆರವಿಲ್ಲದೆ ಶಿವನು ಸೃಷ್ಟ್ಯಾದಿಗಳನ್ನೂ ಮಾಡಲಾಗುತ್ತಿರ ಲಿಲ್ಲ ! ಚಂದ್ರಿ, ಉಮೆ, ವೃಷಭಿ, ತಾಂಡವಿ, ಪಾರ್ವತಿ, ಜಲಂಧರ ಹಂತ್ರಿ ಭದ್ರಕಾಳಿ ಮುಂತಾದ ಹೆಸರುಗಳು ಅವಳು ಸರ್ವಶಕ್ತಳು ಎಂದು ಸಾರುತ್ತವೆ. ಪಶುಪತಿ ರುದ್ರನು ಪಶುಗಳನ್ನು ಪಳಗಿಸಿ, ಕೃಷಿ ವ್ಯವಸಾ ಯಕ್ಕೆ ಇಳಿದಾಗ, ಅವನಿಗೆ ದೊರೆತ ರುದ್ರಾಣಿಯ ನೆರವು ಮರೆಯದಂತ ಹುದು. ದ್ಯಾಮವ್ವ ದುರಗವ್ವ ಕಾಳವ್ವ ಮುಂತಾದ ಕನ್ನಡ ಹೆಸರುಗಳು ಆ ರುದ್ರಶಕ್ತಿಯ ಸ್ವರೂಪವೇ ಆಗಿವೆ. ಆದ್ದರಿಂದಲೇ ಶಿವನು ಶಕ್ತಿ ವಿಶಿಷ್ಟನೆನಿಸಿರುವುದು. "ವಿಶ್ವಕ್ಕೆ ಅಧಿಕನಾದ ರುದ್ರನ ಶಕ್ತಿಗೆ ರುದ್ರಾಣಿ

---

೧ ಪಾಶುಪತಾಗಮ-'ಶಿವಾಗಮಸೌರಭ'-ಅನುಬಂಧ ೧.
ಶ್ರೀ ಜ.ಚ.ನಿ. ಅಧ್ಯಯನ ಸಂಸ್ಥೆ ಪ್ರಕಾಶನ, ಬೆಂಗಳೂರು ೧೯೮೬

ಎಂಬ ಹೆಸರಿದೆ. ಅವಳು ರುದ್ರ (ಬ್ರಹ್ಮ) ದ್ವೇಷಿಗಳನ್ನು ಮರ್ದಿಸುವಲ್ಲಿ ಯಾವಾಗಲೂ ರುದ್ರನಿಗೆ ನೆರವಾಗಿದ್ದಾಳೆ, ರುದ್ರನ ಬಾಹುಗಳಲ್ಲಿ ಬಾಣ ಗಳಲ್ಲಿ ಧನುಸ್ಸಿನಲ್ಲಿ ನೆಲೆಸಿ ಲೋಕ ರಕ್ಷಣೆಯ ಕಾಳಗದಲ್ಲಿ ರುದ್ರನಿಗೆ ಅರ್ಧಾಂಗಿನಿಯಾಗಿದ್ದಾಳೆ" ಎಂದು ಋಗ್ವೇದವು ಸ್ತುತಿಸಿದೆ[೧].

ಆಚಾರ್ಯರು ವಿವರಿಸಿದ ನೇಪಾಳ-ಪಶುಪತಿನಾಥ-ಮತ್ತು-ಮಹಾ ಕಾಳಿ ಮುಂತಾದ ಶಬ್ದಗಳ ಅರ್ಥ ವಿವರಣವನ್ನು ಗಮನಿಸಿದ ಶ್ರೀಪತಿ ಮೂಗಿನ ಮೇಲೆ ಬೆರಳಿಟ್ಟು ತಲೆದೂಗಿದ.

೪

ನೇಪಾಳದ ಮಹಾರಾಜ ವಿಕ್ರಮ ಸಿಂಹರು ಪ್ರತಿದಿನವೂ ಸಂಜೆ ತಮ್ಮ ಧರ್ಮಪತ್ನಿಯೊಂದಿಗೆ ಗುರುದೇವನು ನಡೆಸುತ್ತಿದ್ದ ಪ್ರವಚನಕ್ಕೆ ತಪ್ಪದೆ ಬರುತ್ತಿದ್ದರು. ಈ ದಿನ ಬರುವಾಗ ಅವರು ಅನೇಕ ಉತ್ತಮೋತ್ತಮ ವಾದ ರುದ್ರಾಕ್ಷಗಳಿಗೆ ಚಿನ್ನದ ಚಿಪ್ಪು ತೊಡಿಸಿ ಧಾರಣ ಯೋಗ್ಯವಾಗಿ ಮಾಡಿಸಿ ತಂದು ಗುರುವಿಗೆ ಒಪ್ಪಿಸಿ ಪ್ರಾರ್ಥಿಸಿದರು.

"ಗುರುದೇವ, ಇವು ಈ ನಾಡಿನಲ್ಲಿ ಯಥೇಚ್ಛವಾಗಿ ಬೆಳೆಯುತ್ತವೆ. ಇತರತ್ರ ಈ ಬೆಳೆ ಅಪರೂಪ, ಇದಕ್ಕೆ ಕಾರಣವೇನು ? ಅಪ್ಪಣೆ ಕೊಡಿಸ ಬೇಕು" ಎಂದು.

ಗುರುದೇವನು ಮಹಾರಾಜರಿಗೆ ತ್ರಿಪುರ ಸಂಹಾರದ ಕತೆಯನ್ನು ಶ್ರುತಪಡಿಸಿದುದಲ್ಲದೆ ಈ ರುದ್ರಾಕ್ಷಗಳಿಗೆ ಇರುವ ಮುಖ, ಗಾತ್ರ ಮುಂತಾದ ಲಕ್ಷಣಗಳನ್ನು ವಿವರಿಸಿ ಅವುಗಳನ್ನು ಧರಿಸುವುದರಿಂದ ಮಾನವನು ರುದ್ರ ಸಾರೂಪ್ಯವನ್ನು ಹೊಂದುವನೆಂಬುದನ್ನು ವಿವರಿಸಿದರು.

---

೧ ಅಹಂ ರುದ್ರಾಯ ಧನುರಾತನೋಮಿ
ಬ್ರಹ್ಮದ್ವಿಷೇ ಶರವೇ ಹಂತ ವಾ ಉ ।
ಅಹಂ ಜನಾಯ ಸಮುದಂ ಕೃಣೋಮ್ಯಹಂ
ದ್ಯಾವಾಪೃಥಿವೀ ಆವಿವೇಶ (ಋಗ್ವೇದ)
ಕಳಾತ್ಮ ಜೀವಿಕಾಳಿಕಾ ದೇವಿ (ಡಾ॥ ಜ.ಚ.ನಿ. ಕೃತ, ೧೯೪೬)

"ವೀರಶೈವದಲ್ಲಿ ರುದ್ರಾಕ್ಷವು ಅಷ್ಟಾವರಣಗಳಲ್ಲಿ ಒಂದು. ರುದ್ರಾಕ್ಷ ಧಾರಣವಿಲ್ಲದೆ ಶಿವದೀಕ್ಷೆ ಅಪೂರ್ಣ. ಆದ್ದರಿಂದ ರುದ್ರಾಕ್ಷಧಾರಣ ಕಡ್ಡಾಯ" ಎಂದರು.

"ಗುರುದೇವ, ರುದ್ರಾಕ್ಷಧಾರಣಕ್ಕೆ ಇಷ್ಟು ಮಹತ್ವ ಬರುವುದಕ್ಕೆ ತ್ರಿಪುರ ಸಂಹಾರದ ಕತೆಯೇ ಮೂಲವಲ್ಲವೇ!"

"ತ್ರಿಪುರ ಸಂಹಾರದ ಕತೆ ರುದ್ರಾಕ್ಷಧಾರಣಕ್ಕೆ ಒಂದು ಸಂಕೇತ. ವಾಸ್ತವವಾಗಿ 'ಪುರ' ಎಂದರೆ ಪಟ್ಟಣ. ಇದು ಮಾನವನ ದೇಹದ ಸಂಕೇತ. ಜೀವನಿಗಿರುವುದು ಮೂರು ಪುರಗಳು. ಸ್ಥೂಲ, ಸೂಕ್ಷ್ಮ, ಮತ್ತು ಕಾರಣ ಎಂದು. ಪಾಂಚಭೌತಿಕವಾದ ಶರೀರವು ಸ್ಥೂಲ. ಸ್ವಪ್ನದಲ್ಲಿ ಕಾಣುವ ಪೂರ್ಯಷ್ಟಕ ಶರೀರ(ಪಂಚ ತನ್ಮಾತ್ರ[೧]ಗಳು-ಮನಸ್ಸು-ಬುದ್ಧಿ-ಅಹಂಕಾರ) ಸೂಕ್ಷ್ಮ. ಅದಕ್ಕೂ ಹಿಂದಿರುವ ಭಾವನಾತ್ಮಕವಾದದ್ದು ಕಾರಣಶರೀರ. ತ್ರಿಪುರರು ಈ ಮೂರು ಪುರಗಳನ್ನೇ ಆತ್ಮ ಎಂದು ತಿಳಿದು "ದೇಹಾತ್ಮವಾದಿಗಳಾಗಿದ್ದರು." ಆದ್ದರಿಂದಲೇ ಅವರಲ್ಲಿ ಅಹಂಕಾರ-ಮಮಕಾರಗಳು ಹೆಚ್ಚಿ ದಾನವರೆನಿಸಿದ್ದರು. ಶಿವನು ತನ್ನ ಜ್ಞಾನನೇತ್ರದಿಂದ ಆ ದೇಹತ್ರಯವೆಂಬ ತ್ರಿಪುರಗಳನ್ನು ಸುಟ್ಟು ಅವರಲ್ಲಿ 'ಶಿವಾತ್ಮಭಾವ'ವನ್ನು ಮೂಡಿಸಿ ಅವರನ್ನು ಉದ್ಧರಿಸಿದ. ಅದರ ಸಂಕೇತವಾದ ರುದ್ರಾಕ್ಷಧಾರಣವು ದೇಹಾತ್ಮಭಾವವು ಶಿವಾತ್ಮಭಾವವಾದುದನ್ನು ನೆನಪಿಸುತ್ತದೆ. ಗುರುವು ತನ್ನ ದಿವ್ಯದೃಷ್ಟಿಯಿಂದ ಶಿಷ್ಯನನ್ನು ದೃಷ್ಟಿಸಿ ನೋಡಿ ಅವನಲ್ಲಿದ್ದ ದೇಹಾತ್ಮಭಾವವನ್ನು ಹೋಗಲಾಡಿಸಿ ಆತನಲ್ಲಿ ಶಿವಾತ್ಮಭಾವವನ್ನು ಮೂಡಿಸುವುದೇ ಶಿವದೀಕ್ಷೆ.

ಮಹಾರಾಜರು, ಎದ್ದು ನಿಂತು ಕೈ ಜೋಡಿಸಿಕೊಂಡು ಬಿನ್ನವಿಸಿದರು "ಗುರುದೇವ, ಇದುವರೆಗೆ ತಮ್ಮ ಪ್ರವಚನವನ್ನು ಕೇಳಿ ಪುನೀತರಾಗಿದ್ದೇವೆ. ಆದ್ದರಿಂದ ನಮಗೂ ಶಿವದೀಕ್ಷೆ ನೀಡಿ ಪಾವನರನ್ನಾಗಿಸಬೇಕು" ಎಂದು ಪ್ರಾರ್ಥಿಸಿದರು.

ಅದೇ ಸಮಯದಲ್ಲಿ ಗುರುದೇವನು ಮಹಾರಾಜರಿಗೆ ಸಭೆಯಲ್ಲಿ ಉಪಸ್ಥಿತರಿದ್ದ ಶ್ರೀಪತಿ ಮತ್ತು ಶಂಭುಭಟ್ಟರನ್ನು ಪರಿಚಯಿಸಿ,

---

೧ ಶಬ್ದ-ಸ್ಪರ್ಶ-ರೂಪ-ರಸ ಮತ್ತು ಗಂಧ ಇವು ಐದು ತನ್ಮಾತ್ರಗಳು.

ಶ್ರೀಪತಿಯು ಬರೆದಿರುವ "ಶ್ರೀಕರ ಭಾಷ್ಯ"ಪ್ರಬಂಧಕ್ಕೆ ಈ ವರ್ಷ ವಾರಾಣಸಿಯ ಮಹಾವಿದ್ಯಾಪೀಠವು ಪುರಸ್ಕರಿಸಿರುವ ಅಂಶವನ್ನು ಅವರ ಗಮನಕ್ಕೆ ತಂದರು.

ಮಹಾರಾಜರು, ತುಂಬಾ ಸಂತೋಷಪಟ್ಟು ಅವರನ್ನು ಅಭಿನಂದಿಸಿ "ಸ್ವಾಮಿ, ತಾವು ನಮ್ಮ ವಿಕ್ರಮ ವಿದ್ಯಾಪೀಠಕ್ಕೆ ಆಗಮಿಸಿ, ತಮ್ಮ ಮಹಾ ಪ್ರಬಂಧವನ್ನು ಪರಿಚಯಿಸಬೇಕು" ಎಂದು ವಿನಂತಿಸಿದರು.

ವಿದ್ಯಾಪೀಠದಲ್ಲಿ ಏರ್ಪಟ್ಟ ಕಾರ್ಯಕ್ರಮವು ಗುರುದೇವನ ನೇತೃತ್ವದಲ್ಲಿ ಕುಲಪತಿಗಳ ಅಧ್ಯಕ್ಷತೆಯಲ್ಲಿ ನೆರವೇರಿತು. ವಿದ್ಯಾಪೀಠದ ಪ್ರಾಚಾರ್ಯರು ಶ್ರೀಕರಭಾಷ್ಯದ ಪರಿಚಯದಿಂದ ಆನಂದತುಂದಿಲರಾಗಿ ಶ್ರೀಪತಿಯನ್ನು ಅಭಿನಂದಿಸಿದರು.

ಮಹಾರಾಜರ ಪ್ರಾರ್ಥನೆಯಂತೆ ಗುರುದೇವನು ರಾಜದಂಪತಿಗಳಿಗೆ ಅಧಿಕಾರಿವರ್ಗಕ್ಕೆ ಮತ್ತು ಆಸಕ್ತರಿಗೆ ಶಿವದೀಕ್ಷೆ ನೀಡಿ ಅನುಗ್ರಹಿಸಿದರು.

ಶಿವದೀಕ್ಷೆಯ ಅಂಗವಾಗಿ ಅರಮನೆಯಲ್ಲಿ ಗುರುದೇವನ ಮಹಾಪಾದಪೂಜೆ ಏರ್ಪಟ್ಟಿತ್ತು. ಈ ಸಮಾರಂಭದಲ್ಲಿ ಎಲ್ಲರೂ ತೀರ್ಥಪ್ರಸಾದ ಸ್ವೀಕರಿಸಿ ಗುರುಕೃಪೆಗೆ ಪಾತ್ರರಾದರು.

೫

## ನೇಪಾಳದ ಸುತ್ತ ಮುತ್ತ ಪ್ರೇಕ್ಷಣೀಯ ಗಿರಿಧಾಮಗಳು

ಕನಕಲತೆಯ ಅಪೇಕ್ಷೆಯಂತೆ ದರ್ಶನೀಯ ಸ್ಥಳಗಳನ್ನು ನೋಡಿ ಬರಲು ಮಹಾರಾಜರು ಸೂಕ್ತ ವ್ಯವಸ್ಥೆ ಮಾಡುವುದಾಗಿ ಭರವಸೆಯಿತ್ತರು. ಬಂಡಿ, ದಂಡಿ, ಕುದುರೆಗಳ ಸಹಾಯದಿಂದ ಆಯಾ ಸ್ಥಳಗಳನ್ನು ಸಂದರ್ಶಿಸಿ ಬರುವ ಹೊಣೆ ಹೊತ್ತವರು ಭೈರಣ್ಣ ಮತ್ತು ಕಾಳಣ್ಣರು.

ಖಟಮಂಡು ನಗರದ ಸಮೀಪದಲ್ಲಿರುವ ಮಂದಿರಗಳಲ್ಲಿ ಬುದ್ಧನಾಥ, ಮತ್ಸ್ಯೇಂದ್ರನಾಥ, ಗಣೇಶ ಮಂದಿರ ಮತ್ತು ಸೂರ್ಯದೇವಾಲಯಗಳು

ಮುಖ್ಯ. ನಗರಕ್ಕೆ ಪಶ್ಚಿಮದಲ್ಲಿ 'ಸಿದ್ಧಪೋಖರೀ' ಎಂಬ ಸರೋವರವಿದೆ. ಅದು 'ಶಿವಪುರೀ' ಎಂಬ ಪರ್ವತದ ಮೇಲಿದೆ. ಸರೋವರ ಮಧ್ಯದಲ್ಲಿ ನೀಲವರ್ಣದ ಅಂಡಾಕಾರವಾಗಿರುವ ದೊಡ್ಡ ಶಿವಲಿಂಗವಿದೆ. ಅದರ ಉತ್ತರಕ್ಕಿರುವ ಪರ್ವತ ಶಿಖರಗಳಿಂದ ಮೂರು ಜಲಧಾರೆಗಳು ಹರಿದು ಒಂದು ಸರೋವರದಲ್ಲಿ ಬೀಳುವ ದೃಶ್ಯ ನೋಡತಕ್ಕದ್ದು. ಇದು 'ತ್ರಿಶೂಲೀಗಂಗಾ' ಎಂಬ ನದಿಯಮೂಲ ! ಈ ಪರ್ವತದ ಶಿಖರದಲ್ಲಿ ಇಪ್ಪತ್ತೆರಡು ಬೇರೆ ಬೇರೆ ಸರೋವರಗಳಿವೆ. ಇಲ್ಲಿರುವ ವ್ಯಾಘ್ರಮೂರ್ತಿಯನ್ನು ಅಲ್ಲಿಯ ಜನ ದೇವರೆಂದು ಪೂಜಿಸುತ್ತಾರೆ. ಇದು ಆದಿಮಾನವನ ಕಾಲದಲ್ಲಿ ಹಾವು, ಚೇಳು, ವ್ಯಾಘ್ರ ಮುಂತಾದುವನ್ನು ಭಯದಿಂದ ಪೂಜಿಸುತ್ತಿದ್ದ ಪದ್ಧತಿಯನ್ನು ನೆನಪಿಸುತ್ತದೆ. ರಾಜಧಾನಿಗೆ ಎರಡು ಮೈಲಿ ದೂರದಲ್ಲಿ ಒಂದು ಪರ್ವತದ ಮೇಲೆ "ಸ್ವಯಂಭೂನಾಥ್" ಎಂಬ ಮಂದಿರವಿದೆ.

**ಗೌರೀಶಂಕರ (ಎವರೆಸ್ಟ್) ಶಿಖರ**–ಇದು ನೇಪಾಳದ ಗಿರಿಧಾಮಗಳಲ್ಲಿ ಸುಪ್ರಸಿದ್ಧವಾದುದು. ಎತ್ತರದಲ್ಲಿ ಇದು ಪ್ರಪಂಚದಲ್ಲಿಯೇ ಅತಿ ಉನ್ನತವಾದುದು. ಇದರ ಎತ್ತರ ೨೯,೦೨೮ ಅಡಿಗಳು, ಇದು ಪೂರ್ವ ನೇಪಾಳದ ಪೂರ್ವಹಿಮಾಲಯಪರ್ವತಶ್ರೇಣಿಗೆ ಸೇರಿದೆ. ಕಣ್ಣು ಕೋರೈಸುವ ಹಿಮರಾಶಿ, ಕೃಷ್ಣಶಿಲೆಯ ಗೋಡೆಗಳು, ೧೧,೦೦೦ ಅಡಿಗಳಿಗಿಂತ ಎತ್ತರವೂ ಕಡಿದೂ ಆದ ಶಿಲಾಪ್ರಪಾತಗಳು ಶಿಖರವನ್ನು ಮನೋಹರವನ್ನಾಗಿಸಿವೆ. ವರ್ಷದಲ್ಲಿ ಹೆಚ್ಚುಕಾಲ ಹಿಮವು ಕವಿದಿರುವುದರಿಂದ ಇದು ಸುಲಭಸಂಚಾರಕ್ಕೆ ಯೋಗ್ಯವಲ್ಲ.

**ಧವಲಗಿರಿ ಶಿಖರ**—ಗೌರೀಶಂಕರ ಶಿಖರವನ್ನು ಬಿಟ್ಟರೆ ಇದು ಎತ್ತರದಲ್ಲಿ ಅದಕ್ಕಿಂತ ಚಿಕ್ಕದು,೨೬,೮೫ಅಡಿಎತ್ತರ. ಇದು ರಾಜಧಾನಿಗೆ ಪಶ್ಚಿಮದಲ್ಲಿ ಮುಕ್ತಿನಾಥಕ್ಕೆ ಹೋಗುವ ಹಾದಿಯಲ್ಲಿದೆ. ಯಾವಾಗಲೂ ಹಿಮವು ಕವಿದಿರುವುದರಿಂದ ಇದಕ್ಕಿರುವ "ಧವಲಗಿರಿ" ಎಂಬ ಹೆಸರು ಅನ್ವರ್ಥಕ.

**ಅಪರ್ಣಾಶಿಖರ**—ಇದು ಧವಲಗಿರಿ ಶಿಖರಕ್ಕಿಂತ ಎತ್ತರದಲ್ಲಿ ಸ್ವಲ್ಪ ಚಿಕ್ಕದು. ನೇಪಾಳದ ದರ್ಶನೀಯ ಗಿರಿಧಾಮ.

ಇನ್ನು ನೇಪಾಳದ ದರ್ಶನೀಯ ಗಿರಿಧಾಮಗಳಲ್ಲಿ "ಮುಕ್ತಿನಾಥ" ಪರ್ವತವು ಬಹು ಮುಖ್ಯವಾದದ್ದು. 'ಮುಮುಕ್ಷುವಾದವನು ಇಲ್ಲಿ ತಪಸ್ಸು ಮಾಡಿ ಮುಕ್ತನಾಗುತ್ತಾನೆ' ಎಂಬ ನಂಬಿಕೆ ಇದೆ. ಅಲ್ಲಿಗೆ ಹೋಗುವ ದಾರಿ ದುರ್ಗಮ. ಅದಕ್ಕಾಗಿ ಶ್ರೀದೇವಿ ಮತ್ತು ಕನಕೆಯರು ದಂಡಿಗೆಗಳನ್ನು ಏರಿದರು. ಉಳಿದವರು, ಕುದುರೆಗಳನ್ನೇರಿದರು.

ದಾರಿಸಾಗುತ್ತಿದ್ದಂತೆ ಕನಕಾ ಭೈರಣ್ಣನನ್ನು ಕುರಿತು—

"ಅಣ್ಣಾ, ಮುಕ್ತಿನಾಥದ ವೈಶಿಷ್ಟ್ಯವೇನು ?" ಎಂದು ಕೇಳಿದಳು.

ಭೈರಣ್ಣ ಹೇಳಿದ—

"ತಾಯಿ, ಇದೂ ಸಹ 'ಅಮರನಾಥ' ಗವಿಯಂತೆ ಪ್ರಾಕೃತಿಕ ವೈಭವದಿಂದ ಕೂಡಿದೆಯೆಂಬುದು ನಿಮಗೇ ವೇದ್ಯವಾಗುತ್ತದೆ" ಎಂದು.

ರಾಜಧಾನಿಯಿಂದ ಪಶ್ಚಿಮಕ್ಕೆ "ಪೋಖರಾ" ಎಂಬ ಸುಂದರ ಗಿರಿಧಾಮವಿದೆ. ಇಲ್ಲಿಂದ ಯಾತ್ರಿಕರು ಐದು ದಿನಗಳವರೆಗೆ ಪಾದಯಾತ್ರೆಯಲ್ಲಿ ನಡೆದು ಮುಕ್ತಿನಾಥವನ್ನು ತಲುಪುತ್ತಾರೆ.

ನೌಡಾಂಡಾ (೪.೭೮೨ ಅಡಿ) 'ಚಂದ್ರಕೋಟಾ' (೫.೧೨೫) ಘೋರೇಪಾನೀ (೯.೩೦೦) ಶಿಕಾಹಾ (೬.೬೦೦) ತಾತೋಪಾನಿ(೩.೯೦೦) ಪೋಖರಾದಿಂದ ಇಲ್ಲಿಗೆ ೩೫ ಮೈಲಿ ದೂರ. ಘಾಸಾ (೬.೬೦೦) ಲೇತೇ (೮,೦೦೦)ಟುಕಚೆಬಾಜಾರ್, ಕಾಳಾಗಂಡಕೀ ಎಂಬುದು ಹೊಳೆ. ಧವಳಗಿರಿ ತಪ್ಪಲು ಮೂಲಕ "ಜೊಮ್‌ಸುಮ್" ಹತ್ತಿರ ಸಾಲಿಗ್ರಾಮಗಳು ಸಿಕ್ಕುತ್ತವೆ. ಅದಕ್ಕೆ 'ಸಾಲಿಗ್ರಾಮ ಕ್ಷೇತ್ರ'ವೆಂದೇ ಹೆಸರಿದೆ. ಇಲ್ಲಿಗೆ ಟಿಬೆಟ್ ಗಡಿ ಸಮೀಪ.

**ಜಲದ ಮೇಲೆ ಜ್ವಾಲೆ ನರ್ತನ**— ಶಿಖರದ ಒಂದು ಕಡೆ ಶಿಲಾ ನಿರ್ಮಿತ ಮಂದಿರ. ಅದರ ಒಳಹೊಕ್ಕರೆ ಒಂದು ವೇದಿಕೆ, ವೇದಿಕೆಯ ಹಿಂಭಾಗದ ದರೆಯಿಂದ ನೀರಿನ ಒರತೆಯೊಂದು ಹರಿದುಬಂದು ವೇದಿಕೆಯ ಹಿಂದೆ ಇಳಿದು ಕೆರೆಯಂತೆ ನಿಲ್ಲುತ್ತದೆ. ಆ ನೀರಿನ ಮೇಲೆ ಬೆಂಕಿಯ ಉಜ್ವಲ ಜ್ವಾಲೆಗಳು ಬೇರೆ ಬೇರೆ ಉರಿಯುತ್ತವೆ, ವೇದಿಕೆಗೆ ಎರಡು ಅಡಿಗಳ ದೂರದಲ್ಲಿ ಸುಮಾರು ಒಂದುವರೆ ಅಡಿ ಎತ್ತರದವರೆಗೆ ಜ್ವಾಲೆಗಳು

ಹಾರುತ್ತವೆ. ಈ ಜ್ವಾಲೆಗಳು ನೀಲವರ್ಣದಿಂದ ರಂಜಿಸುತ್ತವೆ. ಅವು ಗಾಳಿಯ ರಭಸಕ್ಕೆ ಅತ್ತಿತ್ತ ಅಲುಗಾಡುತ್ತಿರುವುದರಿಂದ ಜ್ವಾಲೆಗಳು ನರ್ತಿಸಿದಂತೆ ಸೋಜಿಗವನ್ನುಂಟು ಮಾಡುತ್ತವೆ.

ಹಿಮಾಲಯದ ನಡುಗಿಸುವ ಅಂಥ ಚಳಿಯಲ್ಲಿಯೂ ಕೂಡ ಇಲ್ಲಿ ಶರೀರವು ಬಿಸಿಯಾಗಿ ಬೆವರುತ್ತದೆ. ಕೆರೆಯ ನೀರು ಕ್ರಮ ಕ್ರಮವಾಗಿ ತಳಕ್ಕಿಳಿದು ಹರಿದು ಹೋಗುತ್ತದೆ.

ಇದನ್ನು ಸ್ಕಾಂದ ಪುರಾಣದಲ್ಲಿ "ಜಲರೂಪದಲ್ಲಿ ಹರಿಯುವ ವಿಷ್ಣುವಿನ ಮೇಲೆ ಜ್ವಾಲೆಯ ರೂಪದಿಂದ ನರ್ತಿಸುವ ರುದ್ರ ಎನ್ನಲಾಗಿದೆ. ಯಾತ್ರಿಕರು ಇದು "ಹರಿ–ಹರಮೂರ್ತಿ" ಅಥವಾ "ಹರಿ-ಹರಾಗ್ನಿ" ಎಂದು ಕರೆಯುತ್ತಾರೆ. ಇದು ಲೋಕಕಲ್ಯಾಣಾರ್ಥವಾಗಿ ಬ್ರಹ್ಮನು ನಿರಂತರವೂ ನಡೆಯಿಸಿರುವ ಹರಿ-ಹರಾಗ್ನಿಯ "ಮಹಾರುದ್ರಯಾಗ"ವೆಂದು ಬಣ್ಣಿಸುತ್ತಾರೆ.

* * * *

ಮುಕ್ತಿನಾಥದಿಂದ ಹಿಂದಿರುಗಿದ ಯಾತ್ರಾತಂಡವನ್ನು ಮಹಾರಾಜರು ಸತ್ಕರಿಸಿ ಬೀಳ್ಕೊಟ್ಟರು.

ಗುರುದೇವನ ಸಂದರ್ಶನಕ್ಕೆ ಹೋದಾಗ ಶ್ರೀಪತಿದಂಪತಿಗಳು "ಗುರುದೇವಾ, ತಮ್ಮ ಕೃಪಾಶೀರ್ವಾದದಿಂದ ನಮ್ಮ ಜೀವನ ಸಫಲವಾದಂತಾಗಿದೆ. ನಮಗಿನ್ನು 'ಯತಿವ್ರತ' ಅನುಗ್ರಹಿಸಬೇಕು ಎಂದು ಪ್ರಾರ್ಥಿಸಿದರು.

## ಯತಿವ್ರತ ಅಥವಾ ಶರಣವ್ರತ

"ಆಗಬಹುದು ! ಆದರೆ "ಯತಿವ್ರತ" ಎಂಬುದು ವೈದಿಕ ಸಂಪ್ರದಾಯದ ಪದ. ವೀರಶೈವದಲ್ಲಿ ಅದನ್ನು "ಶರಣವ್ರತ" ಎನ್ನುತ್ತೇವೆ. "ಶರಣಸ್ಥಲ" ಎಂದರೂ ಅದೇ ! "ಪ್ರಾಪಂಚಿಕಸುಖಂ ನಾಸ್ತಿ ಶರಣಸ್ಥಲಮುತ್ತಮಂ" ಎಂಬುದು ಅದರ ನಿರ್ವಚನ. ಭಗವದ್ಗೀತೆ ಇದನ್ನು "ಅನಾಸಕ್ತಿಯೋಗ" ಎನ್ನುತ್ತದೆ. ಆಶ್ರಮ ನಾಲ್ಕರಲ್ಲಿ ಗೃಹಸ್ಥಾಶ್ರಮವು ಶ್ರೇಷ್ಠ. ಪರಮೇಶ್ವರನು ಗೃಹಸ್ಥನೇ ಅಲ್ಲವೆ ! ಅಂಬಿಕೆಯೊಡನಿರುವ

ಅವನನ್ನು 'ಲೋಕಗುರು' ಎಂದು ಕರೆಯುವರಲ್ಲವೆ ? ಉಳಿದ ಮೂರು ಆಶ್ರಮದವರೂ ಗೃಹಸ್ಥನನ್ನು ಆಶ್ರಯಿಸಿಯೇ ತಮ್ಮ ಆಶ್ರಮಧರ್ಮ ಗಳಲ್ಲಿ ನಿರತರಾಗಿದ್ದಾರೆ.೧

ಗೃಹಸ್ಥನಿಗಿರುವುದು ಎರಡು ಗುರಿ,ಒಂದು ಸತ್ಸಂತಾನಾಭಿವೃದ್ಧಿ,ಎರಡನೆ ಯದು ಆ ಸಂತಾನವನ್ನು ಪೋಷಿಸಿ ಸುಸಂಸ್ಕೃತವನ್ನಾಗಿ ಬೆಳೆಸಿ, ಅವರನ್ನು ಒಳ್ಳೆಯ ಕಾಯಕದಲ್ಲಿ ನಿಯಮಿಸಿ ಲೋಕ ಸೇವೆಗೆ ಅಣಿಮಾಡಿ ಕೊಡು ವುದು.ಇದು ಶರಣವ್ರತದ ಗುರಿ.ಇದು ಸ್ತ್ರೀಪುರುಷರಿಬ್ಬರೂ ತಳೆಯಬೇಕಾದ ವ್ರತ. ಗೃಹಸ್ಥಜೀವನದ ಪೂರ್ವಭಾಗದಲ್ಲಿ ಸತ್ಸಂತಾನ, ಅದರ ಪೋಷಣ ಮತ್ತು ಸತ್ಕಾಯಕಗಳು ಸೇರಿವೆ. ಆದರ ಉತ್ತರಭಾಗದಲ್ಲಿ ದೈಹಿಕ ಸಂಬಂಧ ದಿಂದ ನಿವೃತ್ತರಾದ ದಂಪತಿಗಳು'ಶರಣ ಸತಿ ಲಿಂಗ ಪತಿ'ಯರಾಗಿ ಅನಾಸಕ್ತಿ ಯಿಂದ ಲೋಕದಲ್ಲಿ ಇದ್ದೂ ಇಲ್ಲದಂತೆ ತಮ್ಮ ಉಳಿದ ಆಯುಷ್ಯವನು 'ಉಂಡೂ ಉಪವಾಸಿ; ಬಳಸಿಯೂ ಬ್ರಹ್ಮಚಾರಿ' ಎನ್ನುವಂತೆ ಜೀವನ್ಮುಕ್ತ ರಾಗಿ, ನಿಜೈಕ್ಯಕ್ಕೆ ಪೂರ್ವಸಿದ್ಧತೆ ನಡೆಸಬೇಕು.

ಒಂದು ದೃಷ್ಟಿಯಿಂದ ನೀವು 'ಶರಣವ್ರತ' ಸ್ವೀಕರಿಸಲು ಅರ್ಹರೇ ಇದ್ದೀರಿ, ಆದರೆ ಅದು ಈಗಲ್ಲ! ಈಗ ಧರಿಸಿರುವ ಪುಣ್ಯಗರ್ಭವು ಫಲಮುಖ ವಾದ ಮೇಲೆ ಅದನ್ನು ಪೋಷಿಸಿ, ಅದು ಲೋಕವನ್ನು ಅನುಗ್ರಹಿಸುವ ಶಕ್ತಿ ಸಾಮರ್ಥ್ಯವನ್ನು ಪಡೆದ ಮೇಲೆ ನೀವು ಅದನ್ನು ಪೀಠಕ್ಕೆ ಒಪ್ಪಿಸಿ ಅನಂತರ ಶರಣವ್ರತ ಧರಿಸಬೇಕು.

ನಾವು ಇಲ್ಲಿಂದ ಮುಕ್ತಿನಾಥಕ್ಕೆ ತೆರಳಿ ಅಲ್ಲಿ ಆರು ವರ್ಷಗಳವರೆಗೆ ಅನುಷ್ಠಾನ ಮಾಡುತ್ತೇವೆ. ಅಲ್ಲಿಂದ ವಾರಾಣಸಿಗೆ ಹಿಂದಿರುಗುತ್ತೇವೆ. ಆಗ್ಗೆ ನಮ್ಮ ಅನುಷ್ಠಾನದ ಅಂಗವಾಗಿ 'ಮಹಾಸವನ'ವನ್ನು ನೆರವೇರಿಸಿ ಬಾಲಕನಿಗೆ ಶಿವದೀಕ್ಷೆ ನೀಡುತ್ತೇವೆ. ಅದೇ ಸಮಯಕ್ಕೆ ನಿಮಗೂ 'ಶರಣ ವ್ರತ'ವನ್ನು ಅನುಗ್ರಹಿಸಲಾಗುತ್ತದೆ"

---

೧ ಆಶ್ರಮೇಷು ಚ ಸರ್ವೇಷು ಗೃಹೀ ಸ್ಯಾದುತ್ತಮೋ ಗುರುಃ ।
ಅಹಂ ಹಿ ಸರ್ವಲೋಕಾನಾಂ ಗುರುರಂಬಿಕಯಾ ಸಹ ॥

ಶಿವಾಗಮ (ಕ್ರಿಯಾಸಾರ)

—ಎಂದು ಗುರು ಶ್ರೀಪತಿಗೆ 'ಗೌರೀಶಂಕರ' ರುದ್ರಾಕ್ಷವನ್ನು ನೀಡಿ ಆಶೀರ್ವದಿಸಿದರು. "ಗೌರೀಶಂಕರ ರುದ್ರಾಕ್ಷವು ಯಾವಾಗಲೂ ನಿನ್ನ ಕಂಠವನ್ನು ಅಲಂಕರಿಸಿರಲಿ. ಆರು ಮುಖದ ಕಂಠಮಾಲೆಗಳನ್ನು ಈರ್ವರೂ ಪೂಜಾಕಾಲದಲ್ಲಿ ಧರಿಸಬೇಕು" ಎಂದು ಆದೇಶಿಸಿದರು. ಸುವರ್ಣದ ರಕ್ಷೆಯಲ್ಲಿ ಬಿಗಿದ ಗೌರೀಶಂಕರ ರುದ್ರಾಕ್ಷಧಾರಣ ಮಾಡಿದ ಶ್ರೀಪತಿ ನೀಲಕಂಠನಾದ ಉಮಾಮಹೇಶ್ವರನಂತೆ ಶೋಭಿಸಿದನು.

ಎಲ್ಲರೂ ಗುರುವಿನಿಂದ ಫಲ ಮಂತ್ರಾಕ್ಷತೆಗಳನ್ನು ಸ್ವೀಕರಿಸಿ ಅಲ್ಲಿಂದ ಹಿಂದಿರುಗಿದರು.

## ೨೦

# ಚಿದ್ವಿಳಾಸ ಚಿದ್ವಿಮರ್ಶೆ!

## ೧

ನೇಪಾಳದಿಂದ ಹಿಂದಿರುಗಿದ ಮೇಲೆ ಶ್ರೀಪತಿ ದಂಪತಿಗಳ ದಿನಚರಿಯಲ್ಲಿ ಅದೆಷ್ಟೋ ಬದಲಾವಣೆಗಳು! ಶ್ರೀಪತಿ ವಿದ್ಯಾಪೀಠದ ಪಾಠ-ಪ್ರವಚನಗಳನ್ನು ಮುಗಿಸಿ ಮನೆಗೆ ಬರುವಾಗ, ಕುಳಿತಾಗ, ನಿಂತಾಗ, ತಾನು ಕೈಗೊಂಡಿರುವ ಭಾಷ್ಯರಚನೆಯನ್ನು ಕುರಿತು ಆಳವಾಗಿ ಚಿಂತಿಸುವ. ತನಗೆ ಹೊಸಹೊಸದಾಗಿ ಹೊಳೆದ ತರ್ಕ–ವಿತರ್ಕಗಳು, ಚಿಂತನ-ಮಂಥನಗಳು, ವಿಚಾರಲಹರಿಗಳು ಮೂಡಿ, ಭಾವದ ಮೂಸೆಯಲ್ಲಿ ಕರಗಿ ಪರಿಪಕ್ವವಾಗಿ ಕಿಟ್ಟ ಕಳೆದ ಅಪರಂಜಿಯಂತೆ ಹೊರಬೀಳುತ್ತಿದ್ದವು.

ಈಗ ಭಾಷ್ಯರಚನೆಯು ಅವಿರೋಧಾಧ್ಯಾಯದ (ದ್ವಿತೀಯ ಅಧ್ಯಾಯ) ಎರಡನೆಯ ಪಾದ ಆರಂಭವಾಗಿತ್ತು. ಅಲ್ಲಿ ನ್ಯಾಯ ವೈಶೇಷಿಕ ಜೈನ, ಬೌದ್ಧ ಮತ್ತು ಅವೈದಿಕ ಶೈವ ಪ್ರಭೇದಗಳ ನಿರಾಕರಣವು ಮುಗಿದಿತ್ತು. ಮುಂದಿನದು 'ಉತ್ಪತ್ತ್ಯಸಂಭವಾಧಿಕರಣ.'

ಅಲ್ಲಿ ಪಾಂಚರಾತ್ರಾಗಮೋಕ್ತ 'ವಿಶಿಷ್ಟಾದ್ವೈತ' ನಿರಾಕರಣವಿದೆ. ಪರಮಪುರುಷ ನಾರಾಯಣನೇ ಪರದೈವ. ಅವನಿಂದ 'ಕ್ಷೇತ್ರಜ್ಞ'ನೆಂಬ ಜೀವನ ಉತ್ಪತ್ತಿ. ಪಾಂಚರಾತ್ರಾಗಮದ ಪ್ರಕ್ರಿಯೆಯಂತೆ ಪರಮ ಕಾರಣನೆನಿಸಿದವನು ವಾಸುದೇವ. ಆ ವಾಸುದೇವನಿಂದ 'ಸಂಕರ್ಷಣ' ಎಂಬ ಜೀವನ ಉತ್ಪತ್ತಿ. ಸಂಕರ್ಷಣನಿಂದ 'ಪ್ರದ್ಯುಮ್ನ' ಎಂಬ ಮನಸ್ಸು ಹುಟ್ಟಿತು. ಆ ಮನಸ್ಸಿನಿಂದ 'ಅನಿರುದ್ಧ' ಎಂಬ ಅಹಂಕಾರ ಹುಟ್ಟಿತು. ಇದೇ ಸರ್ವೇಶ್ವರನ 'ವ್ಯೂಹಚತುಷ್ಟಯ.'

ಪಂಚ ಮಹಾಭೂತಗಳಂತೆ ಜೀವರಿಗೂ ಉತ್ಪತ್ತಿಯನ್ನು ಹೇಳಿದರೆ ಅವರಿಗೆ ನಾಶವನ್ನೂ ಒಪ್ಪಬೇಕಾಗುತ್ತದೆ. ಆಗ 'ನ ಜಾಯತೇ ಮ್ರಿಯತೇ ವಾ....' (ಭ. ಗೀ. ೨) ಮುಂತಾದ ಉಕ್ತಿಗಳ ಪಾಡೇನು ? ಮೇಲಾಗಿ ಆ ಜೀವನಿಗೆ 'ನಾರಾಯಣಸಾರೂಪ್ಯ' ಎಂಬ ನಿತ್ಯಮುಕ್ತಿ ಸಿದ್ಧಿಸೀತೆ ? ಇದೂ ಅಲ್ಲದೆ ಶ್ರುತಿಯು-'ದೇವ-ಜೀವರು ಅನಾದಿನಿತ್ಯರು, ಅವರಿಗೆ ಜನನ-ಮರಣಗಳಿಲ್ಲ...' ಎನ್ನುತ್ತದೆ.* ಆದ್ದರಿಂದ ಪಾಂಚ ರಾತ್ರಾಗಮೋಕ್ತ ವಿಶಿಷ್ಟಾದ್ವೈತದ ಪಾಡೇನು ?

ಇದೇ ಸಂದರ್ಭದಲ್ಲಿ ಶ್ರೀ ರಾಮಾನುಜರು ತಿರುಪತಿಯ 'ವೀರೇಶ' ನನ್ನು 'ವೆಂಕಟೇಶ್ವರ'ನನ್ನಾಗಿ ಪರಿವರ್ತಿಸಿದ ವಿಚಾರವನ್ನೂ ಸೂಚಿಸ ಲಾಗಿದೆ. 'ಮೂಲ ಮೂರ್ತಿಯಲ್ಲಿ ನಾಗಭೂಷಣಾದಿ ಲಕ್ಷಣಗಳಿವೆಯೇ ಹೊರತು ಶಂಖಚಕ್ರಾದಿ ಲಾಂಛನಗಳಿಲ್ಲ ! ಆದರೆ ವೀರೇಶನಿಗೆ ರಾಮಾ ನುಜರು ಕಲ್ಪಿಸಿದ ವಿಷ್ಣುತ್ವವು 'ಹಗ್ಗವನ್ನು ಹಾವು' ಎಂದು ಕರೆದಂತೆ ಭ್ರಾಂತಿಮೂಲ. ಮೇಲಾಗಿ ಮೂರ್ತಿಯ ಬಲಹಸ್ತದಡಿಯಲ್ಲಿ ಶಿವಲಿಂಗ ವಿರುವುದರಿಂದ, ಆ ಮೂರ್ತಿಗೆ 'ವೆಂಕಟ+ಈಶ್ವರ' ಎಂದದ್ದು ಸಾರ್ಥಕ' ಎಂದು ಮುಂತಾಗಿ** ಮುನ್ನಡೆದಿತ್ತು ಶ್ರೀಕರಭಾಷ್ಯ.

* * * *

* ಜ್ಞಾಜ್ಞೌ ದ್ವಾವಜಾವೀಶಾನೀಶೌ (ಶ್ವೇ. ೧. ೯., ನಾ. ಪ ೯ ೮)

** ಈ ದೇವರನ್ನು ವಿಷ್ಣುವೆಂದು ಕರೆದರೂ ಬಿಲ್ವಪತ್ರ ಪೂಜೆ ವಿಹಿತ ವಾಗಿದೆ. ಸಹಸ್ರನಾಮಾವಳಿಯಲ್ಲಿ 'ವಿರೂಪಾಕ್ಷ'ನಾಮವೂ ಸೇರಿದೆ. ಈ ದೇವರ ಭಕ್ತರು ಮನೆಗಳಲ್ಲಿ ಲಗ್ನವು ಏರ್ಪಟ್ಟಾಗ ಗುಗ್ಗುಳವನ್ನು ಆಚರಿಸುತ್ತಾರೆ. ಇದು ವೀರಭದ್ರನಿಗೆ ವಿಶೇಷ ವಾದದ್ದು.

೨

ಇನ್ನು ಕನಕಲತೆಗೆ ಬರುತ್ತಿದ್ದ ಬಯಕೆಗಳು ಮತ್ತೊಂದು ಬಗೆಯವು. ಅವಳಿಗೆ ಒಂಬತ್ತು ತಿಂಗಳು ತುಂಬಿ ಬಂದಿತ್ತು. ಮುಕ್ತಿನಾಥದಲ್ಲಿ ತಾನು ಕಂಡ ಪ್ರಾಕೃತಿಕ ವೈಚಿತ್ರ್ಯಗಳನ್ನು ಅವಳು ಮತ್ತೆ ಮತ್ತೆ ಮೆಲುಕು ಹಾಕುತ್ತಿದ್ದಳು.

ಒಂದು ದಿನ ರಾತ್ರಿ ಕನಸಿನ ಲೋಕದಲ್ಲಿ ಅವಳು ವಿಹರಿಸುತ್ತಿದ್ದಳು. ಎಲ್ಲೆಲ್ಲೂ ಕತ್ತಲು ಕವಿದಿತ್ತು. ಕಗ್ಗಾಡೊಂದರಲ್ಲಿ ಅವಳು ನಡೆಯುತ್ತಿದ್ದಳು. ಎಷ್ಟೋ ದೂರ ನಡೆದ ಮೇಲೆ ದೂರದಲ್ಲಿ ಬೆಳಕು ಕಂಡಿತು. ಆಗ ಮುದುಡಿದ ಅವಳ ಮನಸ್ಸು ಉಲ್ಲಸಿತವಾಯಿತು. ಹೋಮದ ಕಂಪು ಪರಿಸರವನ್ನು ಪರಿಮಳಿಸಿತ್ತು. ಸುರುಳಿ ಸುರುಳಿಯಾಗಿ ಮೇಲೇರುತ್ತಿದ್ದ ಹೋಮ ಧೂಮ ಸ್ವರ್ಗಕ್ಕೆ ಏರಿಸಿದ ಸೋಪಾನ ಪಂಕ್ತಿಯಂತೆ ಶೋಭಿಸುತ್ತಿತ್ತು. ಅಲ್ಲಲ್ಲಿ ಕಂಡ ಪರ್ಣಕುಟಿಗಳು ಅದೊಂದು ತಪೋವನವೆಂಬುದನ್ನು ದೃಢಪಡಿಸುತ್ತಿದ್ದವು.

ವೇದಘೋಷ ಕಿವಿಗಿಂಪಾಗಿ ಕೇಳಿಬರುತ್ತಿತ್ತು. ಋಷಿಕುಮಾರರು ಅಲ್ಲಲ್ಲಿ ಯೋಗಾಸನ ಹಾಕುತ್ತಿದ್ದರು. ಪರ್ವತ ಶಿಖರಗಳಿಂದ ಹರಿದು ಬರುತ್ತಿದ್ದ ಗಿರಿಝರಿಗಳು ಕಂದರದ ತತ್ತಳದಲ್ಲಿ ಹರಿಯುವ ನದಿಯೊಂದರಲ್ಲಿ ಬೆರೆತು ಕಲರವ ಮಾಡುತ್ತಾ ಮುನ್ನಡೆಯುತ್ತಿದ್ದವು.

ಪಂಚಪಂಚ ಉಷಃಕಾಲ, ಕೆಲವರು ಋಷಿಗಳು ಸ್ನಾನಾನ್ಹಿಕಗಳಲ್ಲಿ ತೊಡಗಿದ್ದರು. ಋಷಿಪತ್ನಿಯರು ಮನೆಯ ಸಾರಣೆ-ಕಾರಣೆಗಳಲ್ಲಿ ನಿರತರಾಗಿದ್ದರು. ಮತ್ತೆ ಕೆಲವರು ಮಡಿಯುಟ್ಟು ದೇವತಾರ್ಚನ ಸಾಮಗ್ರಿ ಸಿದ್ಧಪಡಿಸುತ್ತಿದ್ದರು. ಉಳಿದವರು ಕಂಕುಳಿಗೆ ಕೊಡಗಳನ್ನೇರಿಸಿ ದೇವತಾಭಿಷೇಕಕ್ಕೆ ಗಂಗೆ ತರಲು ಹೊರಟಿದ್ದರು. ಅವರು ಮೆಟ್ಟಿಲಿಳಿದು ಪಾತಾಳ ಗಂಗೆಯನ್ನು ಸಮೀಪಿಸುತ್ತಿದ್ದರು.

ಅವರು ಕೊಡಗಳಿಗೆ ನೀರು ತುಂಬಿ ಪೂಜಿಸಿದರು. ಆರತಿಗೆಂದು ಹಚ್ಚಿದ ಕರ್ಪೂರದ ಬಿಲ್ಲೆಯೊಂದು ನದಿ ನೀರಿನ ಮೇಲೆ ಬಿದ್ದು ಉರಿಯ ತೊಡಗಿತು. ಮುತ್ತೈದೆಯರು ತಲೆಯ ಮೇಲೆ ಹೊತ್ತಿದ್ದ ಕೊಡಗಳಲ್ಲಿಯೂ ಆ ಜ್ವಾಲೆ ಜ್ವಲಿಸಿದುದನ್ನು ಕಂಡ ಜನ ಸೋಜಿಗಗೊಂಡರು. ಮುತ್ತೈದೆಯರು ಮೆಟ್ಟಲೇರಿ ದೇವಾಲಯದ ಕಡೆ ಹೆಜ್ಜೆ ಹಾಕಿದರು. ದೇವಮಂದಿರ ದ್ವಾರದಲ್ಲಿ ನಿಂತಿದ್ದ ರುದ್ರಕನ್ನೆಯರು ಆರತಿ ಬೆಳಗಿದರು. ದೇವಾಲಯ ಪ್ರವೇಶಿಸುತ್ತಿದ್ದಂತೆ ಗಂಟೆ-ಜಾಗಟೆ-ಭೇರಿಗಳು ಮೊಳಗಿದವು. ಕೂಡಲೇ ದೇವಾಲಯದಲ್ಲಿ ಎಲ್ಲೆಡೆ ಲಕ್ಷ ದೀಪೋತ್ಸವದಂತೆ ಬೆಳಕು ತಾನೇ ತಾನಾಯಿತು. ಕೊಡಗಳ ಮೇಲಿನ ಜ್ವಾಲೆಗಳು ಅವುಗಳ ಜೊತೆಗೂಡಿ ದಾವಾನಲದಂತೆ ಪ್ರಜ್ವಲಿಸತೊಡಗಿದವು. ಆ ಉಜ್ವಲ ಪ್ರಕಾಶಕ್ಕೆ ಕಣ್ಣು ಕೋರೈಸಿತು. ಕನಕಾ ಕಣ್ಣುಮುಚ್ಚಿ ಕುಸಿದು ಕುಳಿತು ಮೈಮರೆತಳು.

ಕ್ಷಣಮಾತ್ರದಲ್ಲಿ ಆ ಬೆಳಗಿನ ಪುಂಜ 'ಚಿದ್ಬೆಳಗಾಗಿ ಚಿಮ್ಮಿತು!'

"ಓಂ ನಮಃ ಶಿವಾಯ!" ಮಂತ್ರಪುರಶ್ಚರಣದಲ್ಲಿ ನಿರತವಾಗಿದ್ದ ಶಿಶು ಪ್ರಜ್ವಲಿಸಿತು! ಅದನ್ನು ಎತ್ತಿಕೊಂಡ ದಿವ್ಯತೇಜಸ್ವಿನಿಯಾದ ಮುದುಕಿಯೊಬ್ಬಳು ಅದರ ಆರೈಕೆಯಲ್ಲಿ ತೊಡಗಿದ್ದಳು.

ಎಚ್ಚೆತ್ತ ಶ್ರೀಪತಿ ಮುದುಕಿಯನ್ನು ಗುರ್ತಿಸಿ—

"ಓಹೋ! ದುಗ್ಗವ್ವಾ, ಯಾವಾಗ ಬಂದೆ ?" ಎನ್ನುವಷ್ಟರಲ್ಲಿ ಕನಕೆಯೂ ಎಚ್ಚೆತ್ತಳು. ಮುದುಕಿ ಅವಳನ್ನು ಬಿಗಿದಪ್ಪಿ—

"ಮಗಳೆ, ನೀನಿಂದು ಹೆರಿಗೆಯ ಕುತ್ತಿನಿಂದ ಪಾರಾದೆ ! ಈ ಚಿದ್ಬೆಳಗು ಮಾತೃಕ್ಲೇಶಕಾರಕವಲ್ಲ ! ಆದ್ದರಿಂದಲೇ ಇಂಥವರನ್ನು 'ಅಯೋನಿಜ'ರೆನ್ನುವುದು. ಇವನೊಬ್ಬ ಕಾರಣಿಕ ! ಇದು ಪ್ರಾಕೃತ ಮಾಂಸಪಿಂಡವಲ್ಲ ! ಅಪೂರ್ವ ತಪೋಮಯ ಮಂತ್ರಪಿಂಡ ! ಜೋಪಾನ ಮಾಡಿ ಪೋಷಿಸಿರಿ !"

—ಎಂದು ಮಗುವನ್ನು ಕನಕೆಯ ಮಡಿಲಿಗಿಟ್ಟು ಮುದುಕಿ ಮನೆಯಿಂದ ಹೊರಗೆ ಅಡಿಯಿಟ್ಟು ಮರೆಯಾದಳು. ಶ್ರೀಪತಿ ದಂಪತಿಗಳು ತಮ್ಮ ಕಣ್ಣುಗಳನ್ನು ತಾವೇ ನಂಬದಾದರು !

ಅಷ್ಟರಲ್ಲಿ ಮನೆಯವರೆಲ್ಲ ಎದ್ದು ಬಂದರು. ಅವರನ್ನು ಕಂಡು ಅಚ್ಚರಿಗೊಂಡಿತೆಂಬಂತೆ ಶಿಶು ಕಣ್ಣು ಬಿಟ್ಟು ಕಿಲಕಿಲನೆ ನಗತೊಡಗಿತು ! 'ಅಗ್ನಿರ್ಮಾಣವಕಃ' ಎಂಬಂತೆ ದಿವ್ಯಕಳೆಯಿಂದ ಬೆಳಗುತ್ತಿದ್ದ ಶಿಶು ಶುಕ್ಲಪಕ್ಷದ ಚಂದ್ರನಂತೆ ಬೆಳೆಯತೊಡಗಿತು.

*          *          *          *

ಕೆಲದಿನದಿಂದ ಹಾಸಿಗೆ ಹಿಡಿದಿದ್ದ ದೇಶಿಕರು ಸುದ್ದಿ ತಿಳಿದೊಡನೆಯೇ ಎದ್ದು ಕುಳಿತರು. ಶ್ರೀಗಿರಿ ಮಲ್ಲಿಕಾರ್ಜುನನನ್ನು ನೆನೆದು "ಈ ಕಾರಣಿಕ ಶಿಶುವಿನ ಜನನದಿಂದ ನಮ್ಮ ಸಮಾಜ ತನಗೆ ಅಂಟಿರುವ ಕಂದಾಚಾರದ ಕಳಂಕ ತೊಡೆದು ಸದ್ಗುರುವಿನಿಂದ ಶಿವದೀಕ್ಷೆ ಪಡೆದು ಕೃತಾರ್ಥವಾಗಲಿ" ಎಂದು ಹಾರೈಸಿ ಕೈಮುಗಿದರು.

*          *          *          *

ಬೆಜವಾಡದಿಂದ ಆರಾಧ್ಯ ದಂಪತಿಗಳು ದೇಶಿಕರನ್ನು ಸಂದರ್ಶಿಸಿ, ವಾರಾಣಸಿಗೆ ಆಗಮಿಸಿದರು. ಮುಕ್ತಿನಾಥದಿಂದ ಭೈರಣ್ಣ–ಕಾಳಣ್ಣರು ಬಂದಿದ್ದರು. ಗುರುವಿನ ಆದೇಶದಂತೆ ಮಗುವಿಗೆ 'ಪಶುಪತಿ' ಎಂದು ನಾಮಕರಣವಾಯಿತು.

*          *          *          *

ಇದಾದ ಒಂದು ವಾರದಲ್ಲಿ 'ಸೋಮಶಂಭು ದೇಶಿಕರು' ಮುದಿಗೊಂಡದಲ್ಲಿ ಸಮಾಧಿಮರಣ ಹೊಂದಿದ ಸುದ್ದಿ ಸಿಡಿಲೆರಗಿದಂತೆ ಬಂದು ಮುಟ್ಟಿತು. ಎಲ್ಲರೂ ದಿಗ್ಮೂಢರಾದರು. "ಸಮಾಜಕ್ಕೆ ಶಿರೋಮಣಿಯಂತಿದ್ದ ಒಬ್ಬ ಜ್ಞಾನ-ವಯೋವೃದ್ಧರನ್ನು ಕಳೆದುಕೊಂಡ ನಾವು ತಬ್ಬಲಿಗಳು !" ಎಂದು ಎಲ್ಲರೂ ಕಣ್ಣೀರಿಟ್ಟರು.

ಕನಕಾ-ವಿಶಾಲೆಯರ ಹೊರತು ಎಲ್ಲರೂ ಮುದಿಗೊಂಡಕ್ಕೆ ತೆರಳಿ ಉತ್ತರಕ್ರಿಯೆಗಳನ್ನು ಪೂರೈಸಿ ಹಿಂದಿರುಗಿದರು.

೩

ಈಗ ಪಶುಪತಿಗೆ ಐದು ವರ್ಷ. ಗುರುಕೃಪೆಯಿಂದ ಅವನ ಮುಖದಲ್ಲಿ ಸಿದ್ಧಪುರುಷನ ಕಳೆ ಹೊಮ್ಮುತ್ತಿತ್ತು. ಆತ ಕಂಡದ್ದು, ಕೇಳಿದ್ದು ಮುಟ್ಟಿದ್ದು, ಮೆಟ್ಟಿದ್ದು ಮತ್ತು ನುಡಿದದ್ದೆಲ್ಲ ಪಾವನವೆನಿಸಿತ್ತು! ಮೇಲಾಗಿ ಆತ ಪಂಚಪರುಷ ಸಂಪನ್ನ. ವಾಕ್ಸಿದ್ಧಿಯು ಅವನಿಗೆ ಜನ್ಮತಃ ಮೂಡಿಬಂದಿತ್ತು. ಎಲ್ಲ ವಿದ್ಯೆಗಳೂ ಕೇಂದ್ರೀಕೃತವಾಗಿ ಹೊರ ಬರಲು ನಾನು ತಾನೆಂದು ಸಮಯ ಕಾಯುತ್ತಿದ್ದವು.

ಯಾವುದಕ್ಕೂ ಕಾಲ ಒದಗಿ ಬರಬೇಕು. ನೆಟ್ಟ ಬೀಜ ಬೆಳೆದು ಮರವಾಗಿ ಫಲ ಬಿಡಲು ಅದಕ್ಕೆಷ್ಟು ಸಂಸ್ಕಾರಗಳು ನಡೆಯಬೇಕು! ಧರಿಸಿದ ಗರ್ಭ ಹೊರಬರಬೇಕಾದರೆ ಒಂಬತ್ತು ತಿಂಗಳು ಕಾಯಬೇಕು. ಅದರಲ್ಲಿ ಗರ್ಭಸಂಸ್ಕಾರಗಳೆಷ್ಟು? ಹುಟ್ಟಿದ ಮೇಲೆ ಕಡೆಯವರೆಗೂ ಆಗಬೇಕಾದ ಸಂಸ್ಕಾರಗಳೆಷ್ಟು?

ಮಾನವ ಮತ್ತು ಪಶು-ಪಕ್ಷಿಗಳಿಗಿರುವ ಅಂತರ ಗುರ್ತಿಸಲು ಸಂಸ್ಕಾರವೊಂದು ಮೈಲಿಗಲ್ಲು. ಪಶು-ಪಕ್ಷಿಗಳಿಗೆ ತಿರ್ಯಕ್ ಜಂತುಗಳು ಎಂದು ಹೆಸರಿದೆ. 'ತಿರ್ಯಕ್' ಎಂದರೆ ಅಡ್ಡವಾಗಿ ಬೆಳೆದಿರುವುದು. ಮಾನವನಾದರೆ ಊರ್ಧ್ವಸೃಷ್ಟಿ. ಸಂಸ್ಕಾರವೇ ಇವೆರಡರ ಅಳತೆಗೋಲು.

ಸಂಸ್ಕಾರ ನೀಡುವಲ್ಲಿ ಗುರುವಿಗೆ ಪ್ರಾಧಾನ್ಯ. ಪ್ರಕೃತ ಪಶುಪತಿಗೆ ಅಕ್ಷರಾಭ್ಯಾಸ ಮತ್ತು ಶಿವದೀಕ್ಷಾ ಸಂಸ್ಕಾರಗಳು ಗುರುಮುಖದಿಂದ ತಾನೆ ಆಗಬೇಕು! ಗುರುದೇವನ ಆಗಮನಕ್ಕಾಗಿ ಎಲ್ಲರೂ ನಿರೀಕ್ಷಿಸುತ್ತಿದ್ದಾರೆ.

ಈ ದಿನ ಮಂಜಣ್ಣ ವಿಶ್ವೇಶ್ವರಾಲಯದಿಂದ ಬಂದು ಹೊಸ ಸುದ್ದಿ ತಂದು ಮುಟ್ಟಿಸಿದ್ದ. ಅದು ನೇಪಾಳದಿಂದ ಬಂದಿದ್ದ ಯಾತ್ರಿಕ ತಂಡದಿಂದ ತಿಳಿದದ್ದು. 'ನೇಪಾಳದ ಮಹಾರಾಜರು ಗುರುದೇವನನ್ನು ಬೀಳ್ಕೊಡುವ ಒಂದು ಮಹಾ ಸಮಾರಂಭವನ್ನು ಅಲ್ಲಿ ಏರ್ಪಡಿಸಿದ್ದರು. 'ಪ್ರಾಯಃ ಜಗದ್ಗುರುಗಳು ಇದೇ ಮಾಘ ಶು|| ಪ್ರತಿಪದೆಗೆ ವಾರಾಣಸಿ ತಲುಪುವರು' ಎಂದು.

ಮಾತು ಮುಗಿಯುತ್ತಿದ್ದಂತೆ ಭೈರಣ್ಣ ಕಾಣಿಸಿಕೊಂಡು, "ಗುರು ದೇವನು ತಾನು ಮುಕ್ತಿನಾಥದಲ್ಲಿ ಅನುಷ್ಠಿಸಿದ. ನವಕೋಟಿ ಶ್ರೀ ರುದ್ರ ಜಪದ ಅಂಗವಾಗಿ ಇಲ್ಲಿ 'ಅತಿರುದ್ರ ಮಹಾಸವನ' ಏರ್ಪಡಿಸಬೇಕು' ಎಂದು ಸಂಕಲ್ಪಿಸಿದ್ದಾರೆ" ಎಂದು.

ಸುದ್ದಿ ಕ್ರಮ ಕ್ರಮವಾಗಿ ಎಲ್ಲೆಡೆ ಹಬ್ಬಿತು. ನಗರಪಾಲಿಕೆ ಅವರನ್ನು ಸ್ವಾಗತಿಸಿ ಗೌರವಿಸುವಲ್ಲಿ ಪ್ರವೃತ್ತವಾಯಿತು. ಅದರ ಅಂಗ ವಾಗಿ ನಗರಾಲಂಕಾರ ಕಾರ್ಯಭರದಿಂದ ಸಾಗಿತು.

ಕಾಶಿಯ ಶ್ರೀಮನ್ಮಹಾರಾಜರು 'ಅತಿರುದ್ರ ಮಹಾಸವನ'ದ ವ್ಯವಸ್ಥೆಯ ಹೊಣೆ ಹೊತ್ತರು. ಜಂಗಮವಾಡಿ ಮಹಾಸಂಸ್ಥಾನ ಶ್ರೀ ಮಠವು ದಾಸೋಹದ ಭಾರ ವಹಿಸಿತ್ತು.

ನಿರೀಕ್ಷೆಯಂತೆ ಗುರುದೇವನು ವೀರಣ್ಣ-ಕಾಳಣ್ಣರೊಡನೆ ವಾರಾ ಣಸಿಯ ಗಡಿಗೆ ಆಗಮಿಸಿದಾಗ, ಜಗದ್ಗುರು ವಿಶ್ವಾರಾಧ್ಯ ಪೀಠದಿಂದ ಅಲಂಕೃತ ಅಂದಣವು ಸಿದ್ಧವಾಗಿ ಬಂದಿತ್ತು. ಉಭಯ ಜಗದ್ಗುರುಗಳು ಪರಸ್ಪರ ಹಸ್ತಲಾಘವವಿತ್ತು ಅಭಿವಂದಿಸಿದರು. ಶ್ರೀಮನ್ಮಹಾರಾಜರು ಉಭಯ ಜಗದ್ಗುರುಗಳಿಗೆ ಪುಷ್ಪಹಾರಗಳನ್ನು ಹಾಕಿ, ಫಲಪುಷ್ಪ ಅರ್ಪಿಸಿ ದರು. ನಗರಪಾಲಿಕೆಯ ಅಧ್ಯಕ್ಷರು ಮತ್ತು ಸದಸ್ಯರು ಪೂರ್ಣಕುಂಭ ಗೌರವದೊಡನೆ ಸ್ವಾಗತಿಸಿದರು. ವೇದಘೋಷ ಮಂಗಳವಾದ್ಯಗಳು ಮೊಳಗುತ್ತಿದ್ದಂತೆ ಉಭಯ ಜಗದ್ಗುರುಗಳು ಅಂದಣವನ್ನೇರಿದರು. ಜಯಕಾರಗಳು, ಕರತಾಡನ ಹರ್ಷೋದ್ಗಾರಗಳೊಂದಿಗೆ ನಗರದ ರಾಜ ಬೀದಿಗಳಲ್ಲಿ ಉತ್ಸವವು ನಂದೀಧ್ವಜ ನರ್ತನದೊಂದಿಗೆ ಮುನ್ನಡೆಯಿತು. ಪೇಟೆಯುದ್ದಕ್ಕೂ ತಳಿರು ತೋರಣ, ಹಸಿರುವಾಣಿ ಚಪ್ಪರಗಳಿಂದ ನಗರವು ನಂದನೋದ್ಯಾನದಂತೆ ಶೋಭಿಸಿ ನಾಗರಿಕರ ಸಂತಸವನ್ನು ಅಭಿ ವ್ಯಕ್ತ ಮಾಡುವಂತಿತ್ತು.

ಉತ್ಸವವು ಜಂಗಮವಾಡಿ ಅತಿಥಿಗೃಹವನ್ನು ತಲುಪಿತು. ಅಲ್ಲಿಯೇ ಗುರುದೇವನ ಬಿಡಾರವು ಏರ್ಪಟ್ಟಿತ್ತು. ಗುರುದೇವನು ಉತ್ಸವದಲ್ಲಿ

ಭಾಗವಹಿಸಿದ್ದ ಶ್ರೀಮನ್ಮಹಾರಾಜರು, ಅಧಿಕಾರಿಗಳು ಮತ್ತು ನಗರ ಪಾಲಿಕೆಯ ಸಕಲ ಸದಸ್ಯರನ್ನು ಫಲಮಂತ್ರಾಕ್ಷತೆಗಳಿಂದ ಹರಸಿ ಬೀಳ್ಕೊಟ್ಟರು.

## ಅತಿರುದ್ರ ಮಹಾಸವನ

ಮೊದಲೇ ನಿರ್ಧರಿಸಿದ್ದ ಕಾರ್ಯಕ್ರಮದಂತೆ ಮರುದಿನದಿಂದ 'ಅತಿರುದ್ರ ಮಹಾಸವನ'ವು ಆರಂಭವಾಯಿತು. ೧೧ ದಿನಗಳಲ್ಲಿ ಈ ಮಹಾಸವನವನ್ನು ಮುಗಿಸಬೇಕಾದರೆ ೧೨೧ ಜನ ಋತ್ವಿಜರು ಅಗತ್ಯ. ಅವರು ದಿನಕ್ಕೆ ೧೧ ಸಲದಂತೆ ೧೧ ದಿನ ಶ್ರೀ ರುದ್ರಪಠನ ಮಾಡಿದರೆ ಒಂದು ಅತಿರುದ್ರವಾಗುತ್ತದೆ. ಒಟ್ಟಿನಲ್ಲಿ ೧೪,೬೪೧ ಸಲ ಶ್ರೀರುದ್ರ ಪಠನವಾಗಬೇಕು. ರುದ್ರಜಪ ಸಂಖ್ಯೆಯ ದಶಾಂಶ ಹೋಮ ನಡೆಯ ಬೇಕೆಂಬುದು ಅತಿರುದ್ರ ಕಲ್ಪದ ನಿಗಮ.

ಇದಕ್ಕಾಗಿ ಭಾರತದಾದ್ಯಂತ ಶ್ರೇಷ್ಠ ದರ್ಜೆಯ ವೈದಿಕಾಗಮಿಕರು ಇಲ್ಲಿ ಭಾಗವಹಿಸಿದ್ದರು. ಮೊದಲನೆಯ ದಿನ ಗುರುದೇವನು ವಿಧ್ಯುಕ್ತವಾಗಿ ಸಂಕಲ್ಪ ಮಾಡಿ, ಸವನವನ್ನು ಆರಂಭಿಸಿ, ಆಚಾರ್ಯನಿಗೆ ವರಣವನ್ನು ಒಪ್ಪಿಸಿದರು.

ಈ ಮಹಾಸವನದ ಮುಕ್ತಾಯ ಸಮಾರಂಭದಲ್ಲಿ ಅಧ್ಯಕ್ಷತೆ ವಹಿಸಲು ಕೇದಾರದ ಜಗದ್ಗುರುಗಳು ಆಹ್ವಾನಿತರಾಗಿದ್ದರು. ಕಾಶೀ ನರೇಶನ ಕರೆಯಂತೆ ಕಾಶ್ಮೀರ ಮತ್ತು ನೇಪಾಳಗಳ ಭೂಪಾಲರು ತಮ್ಮ ಕುಟುಂಬ ಸಮೇತ ಉತ್ಸವದಲ್ಲಿ ಭಾಗವಹಿಸಿದ್ದರು. ಭಾರತಾದ್ಯಂತ ಅಸಂಖ್ಯಾತ ಜನಜಂಗುಳಿ ಅಲ್ಲಿ ನೆರೆದಿತ್ತು. ಇದಿಷ್ಟೂ ಜನರಿಗೆ ಅಗತ್ಯ ವಾದ ಬಿಡಾರಗಳು, ದಾಸೋಹ ವ್ಯವಸ್ಥೆಗೆ ಸಹಸ್ರಾರು ಮಂದಿ ಸ್ವಯಂ ಸೇವಕರು ನಡು ಕಟ್ಟಿ ನಿಂತಿದ್ದರು. ಹೋಮಧೂಮವು ದಿಗಂತಗಳನ್ನು ವ್ಯಾಪಿಸಿ ವಾತಾವರಣವನ್ನು ಪಾವನಗೊಳಿಸಿತ್ತು.

ಈ ಮಹಾಸವನದಲ್ಲಿ ಸೇವೆ ಸಲ್ಲಿಸಿದ ಆಚಾರ್ಯ, ಋತ್ವಿಕ್ ಪುರೋಹಿತರು ಭೂರಿ ಸಂಭಾವನೆ-ಉಡುಗೊರೆಗಳನ್ನು ಕಾಶೀ ನರೇಶ

ರಿಂದ ಪಡೆದು, ಸಂತೃಪ್ತರಾಗಿದ್ದರು. ಮಹಾಜನತೆ ಗುರುಕೃಪಾಶೀರ್ವಾದಕ್ಕೆ ಪಾತ್ರವಾಯಿತು.

೩

## ವಿದ್ವತ್ ಸಭೆ

ಮಹಾಸವನದ ತರುವಾಯ ಏರ್ಪಟ್ಟ ಕಾರ್ಯಕ್ರಮಗಳಲ್ಲಿ ವಿದ್ವತ್ ಸಭೆಯು ಮುಖ್ಯವಾದದ್ದು. ಈ ಕಾರ್ಯಕ್ರಮಗಳು ವಿಶ್ವೇಶ್ವರಾಲಯದ ಸಭಾಂಗಣದಲ್ಲಿ ನಡೆದುವು.

ಪ್ರತಿದಿನ ಶಿವಾಚಾರ್ಯರು ನಿತ್ಯಾಹ್ನಿಕಗಳನ್ನು ಮುಗಿಸಿ ಸಂಜೆಯ ಕಾರ್ಯಕ್ರಮಕ್ಕೆ ಚಿತ್ತೈಸುತ್ತಿದ್ದರು. ಮೊದಲನೆಯ ದಿನ ವಿದ್ಯಾಪೀಠದ ಕುಲಪತಿಗಳು ಅಗ್ರಾಸನ ವಹಿಸಿದ್ದರು. ಅನೇಕ ವಿದ್ವಾಂಸರು ಬೇರೆ ಬೇರೆ ವಿಷಯಗಳನ್ನು ಕುರಿತು ಉಪನ್ಯಾಸ ಮಾಡಿದರು. ಕಡೆಯಲ್ಲಿ ಪೂಜ್ಯ ಶಿವಾಚಾರ್ಯರು 'ಭಾರತೀಯ ಸಂಸ್ಕೃತಿವೈಶಿಷ್ಟ್ಯ' ಎಂಬ ವಿಷಯವನ್ನು ಕುರಿತು ಆಗಮ ಉಪನಿಷತ್ತುಗಳನ್ನು ಉದಾಹರಿಸಿ ಮಾಡಿದ ಭಾಷಣ ವಿದ್ವತ್ ಲೋಕದಲ್ಲಿ ವಿಶೇಷ ಕುತೂಹಲವನ್ನು ಕೆರಳಿಸಿತ್ತು. ವಿದ್ವಾಂಸರ ಅಪೇಕ್ಷೆಯಂತೆ ಮರುದಿನದಿಂದ ಒಂದೊಂದು ವಿಷಯವನ್ನು ಕುರಿತು ಜಗದ್ಗುರುಗಳಿಂದ ಪ್ರವಚನ ಏರ್ಪಡಬೇಕೆಂದು ನಿರ್ಧರಿಸಲಾಯಿತು.

ಎರಡನೆಯ ದಿನ ಶಿವಾಚಾರ್ಯರು 'ತಾರಕಬ್ರಹ್ಮ ಮಂತ್ರ' ಎಂಬ ವಿಚಾರವನ್ನು ಕುರಿತು ಪ್ರವಚನವನ್ನು ಆರಂಭಿಸಿದರು—

"ತಾರಕ ಮಂತ್ರವು ಯಾವುದು ?"

"ಪ್ರಣವ ಸಹಿತ ಶಿವಪಂಚಾಕ್ಷರ ಮಹಾಮಂತ್ರವೇ ತಾರಕ ಬ್ರಹ್ಮ ಮಂತ್ರ. ಪ್ರಣವ ಮತ್ತು ಅದರ ವಿಕಾಸವೆನಿಸಿದ ಶಿವಪಂಚಾಕ್ಷರಗಳಿಗೆ ಮೂಲ ತಾರ—ದಂಡ—ಕುಂಡಲ — ಅರ್ಧಚಂದ್ರ ಮತ್ತು ಬಿಂದು

(ದರ್ಪಣ) ಗಳು.೧ ಮಾನವನನ್ನು ಜೀವತ್ವದಿಂದ ತಾರಣ (ಮೋಕ್ಷ) ಮಾಡಿ ಶಿವತ್ವಕ್ಕೆ ಏರಿಸುವುದರಿಂದ ಇದನ್ನು 'ತಾರಕಬ್ರಹ್ಮಮಂತ್ರ' ವೆನ್ನುತ್ತಾರೆ. ಆತ್ಮಾರಾಮನೆನಿಸಿದ ಪರಶಿವಬ್ರಹ್ಮನ ಮಂತ್ರವನ್ನು ಶಿವನು ಪಾರ್ವತಿಗೆ ಉಪದೇಶಿಸಿದನು."

"ಸ್ವಾಮಿ, ಎಲ್ಲರೂ ತಿಳಿದಿರುವಂತೆ ರಾಮನೆಂದರೆ ದಶರಥರಾಮ! ಅವನ ನಾಮ ಮಂತ್ರವನ್ನೇ ಶಿವನು ಕಾಶಿಯಲ್ಲಿ ಜಪ-ಹೋಮಾರ್ಚನಾದಿಗಳಿಂದ ಸದಾ ಜಪಿಸುತ್ತಿದ್ದಾನೆ."

"ದಶರಥರಾಮನಿದ್ದುದು ತ್ರೇತಾಯುಗದಲ್ಲಿ. ಅವನಿಗಿಂತ ಹಿಂದೆಯೂ ರಾಮತಾರಕವನ್ನು ಎಲ್ಲರೂ ಜಪಿಸುತ್ತಿದ್ದರು. ಇದು ಸನಾತನವಾದ ಮಹಾಮಂತ್ರ.೨ ನೀವು ಹೇಳುವಂತೆ ದಶರಥರಾಮನೇ ರಾಮತಾರಕ ಮಂತ್ರಕ್ಕೆ ವಾಚ್ಯನಾದರೆ ಅವನೇ ಪರಬ್ರಹ್ಮವೆಂದಾಯಿತು. ಆಗ ಸೀತಾಪಹರಣದ ತರುವಾಯ ಅವನು ಅಜ್ಞಾನಿಯಂತೆ ಪರಿತಪಿಸಿದ್ದೇಕೆ? ಕನಕಮೃಗವು ಅಸಂಭವ! ಸ್ತ್ರೀಚಾಪಲ್ಯದಿಂದ ಸೀತೆ ಕೇಳಿದ ಮಾತ್ರಕ್ಕೆ ಮುಗ್ಧನಂತೆ ಆ ರಾಮನು ಕನಕಮೃಗವನ್ನು ಹಿಡಿತರಲು ಆಶ್ರಮ ಬಿಟ್ಟು ಹೋಗುತ್ತಿದ್ದನೆ?

ಇನ್ನು ರಾಮನ ಪರಿತಾಪವನ್ನು ಕಂಡು ಅಗಸ್ತ್ಯಮಹರ್ಷಿಯು ಶ್ರೀರಾಮನಿಗೆ ಶಿವದೀಕ್ಷೆ ಮಾಡಿದನು. ಶ್ರೀರಾಮನು ಈ ತಾರಕಮಂತ್ರ

---

೧ ನಕಾರಸ್ತಾರಕಾಕಾರೋ ಮಕಾರೋ ದಂಡ ಉಚ್ಯತೇ ।
ಶಿಕಾರಃ ಕುಂಡಲಾಕಾರಃ ವಾಕಾರಶ್ಚಾರ್ಧಚಂದ್ರಕಃ ।
ಯಕಾರೋ ದರ್ಪಣಾಕಾರಃ ಪ್ರಣವೋ ಜ್ಯೋತಿರಾತ್ಮಕಃ ॥
—ಶಿವರಹಸ್ಯ

೨ ಅಹಂ ದಿಶಾಮಿ ತೇ ಮಂತ್ರಂ ತಾರಕಂ ಬ್ರಹ್ಮಸಂಜ್ಞಿತಂ ।
ರಾಮ ರಾಮೇತಿ ಹ್ಯೇತತ್‌ಶ್ರೀ ರಾಮ ತಾರಕಮುಚ್ಯತೆ ।
ರಾಮಸ್ಯ ಮನುಂ ಕಾಶ್ಯಾಂ ಜಜಾಪ ವೃಷಭಧ್ವಜಃ ।
ಮನ್ವಂತರಸಹಸ್ರಂ ತು ಜಪ ಹೋಮಾರ್ಚನಾದಿಭಿಃ ॥

ವನ್ನು ಜಪಿಸಿದ ಮೇಲಲ್ಲವೆ ಶಿವನು ಒಲಿದು ಅವನಿಗೆ ಪಾಶುಪತಾಸ್ತ್ರವನ್ನು ಅನುಗ್ರಹಿಸಿದ್ದು ! ಆದರಿಂದ ಶ್ರೀರಾಮನು ರಾವಣವಧೆ ಮಾಡಿದ್ದು !"

"ಹಾಗಾದರೆ ರಾಮಶಬ್ದದ ಅರ್ಥವೇನು ?"

"ಯೋಗಿಗಳ ಹೃದಯದಲ್ಲಿ ರಮಿಸುತ್ತಿರುವುದರಿಂದ ಪರಬ್ರಹ್ಮನಿಗೆ 'ರಾಮ' ಎಂದು ಹೆಸರು ಬಂದಿದೆ.೧ ರಮುಕ್ರೀಡಾಯಾಂ ಎಂಬ ಧಾತ್ವರ್ಥವನ್ನು ಅನುಸರಿಸಿ ರಮು ಧಾತುವಿಗೆ 'ರಮಂತೇ ಯೋಗಿನೋ ಅಸ್ಮಿನ್' ಎಂಬ ಅರ್ಥದಲ್ಲಿ 'ಕರಣಾಧಿಕರಣಯೋಶ್ಚ' ಎಂಬ ಪಾಣಿನಿ ಸೂತ್ರದಂತೆ ಅಧಿಕರಣಾರ್ಥದಲ್ಲಿ 'ಘಞ್' ಪ್ರತ್ಯಯವು ಬಂದು 'ರಮು' ಮೇಲಿನ 'ಅ' ಕಾರವು ದೀರ್ಘವಾಗಿ 'ರಾಮ' ಶಬ್ದವು ಸಿದ್ಧವಾಗಿದೆ.

ಆದ್ದರಿಂದ ಯೋಗಿಗಳ ಹೃದಯದಲ್ಲಿ ರಮಿಸುವವನು ರಾಮನೆನಿಸಿದ ಪರಶಿವ!" ಎಂದಾಗ ಸಭೆ ಅವಾಕ್ಕಾಯಿತು !

ಜಗದ್ಗುರುಗಳ ಪ್ರವಚನವು ಪ್ರತಿದಿನವೂ ಗಹನವಾದ ಒಂದೊಂದು ಶಾಸ್ತ್ರ ಪ್ರಸ್ತಾಪವನ್ನು ಎತ್ತಿಕೊಂಡು ವಿಚಾರಪರಿಪ್ಲುತವಾಗಿ ಮುನ್ನಡೆದಿತ್ತು.

## ೪೬

## ಶಾಸ್ತ್ರಜಿಜ್ಞಾಸೆ

ಶಿವಾಚಾರ್ಯರ ಭಾಷಣಗಳನ್ನು ಕೇಳಿದ ಆರಾಧ್ಯಬ್ರಾಹ್ಮಣ ವಿದ್ವಾಂಸರು ಒಂದು ದಿನ ಶಂಭುಭಟ್ಟರ ಮನೆಯಲ್ಲಿ ಸಭೆ ಸೇರಿ ಶಾಸ್ತ್ರ ಜಿಜ್ಞಾಸೆ ನಡೆಸಿದ್ದರು. ಪ್ರಾರಂಭದಲ್ಲಿ ಭಟ್ಟರು ಸಭೆ ಕರೆದ ಉದ್ದೇಶವನ್ನು ಕುರಿತು–

---

೧ ರಮಂತೇ ಯೋಗಿನಾಮಂತೇ ಸತ್ಯಾನಂದಃ ಚಿದಾತ್ಮಕಃ ।
ಇತಿ ರಾಮಪದೇನಾಸೌ ಪರಬ್ರಹ್ಮಾಭಿಧೀಯತೇ ॥

—ಉಮಾಸಂಹಿತೆ

"ನಮ್ಮ ತಂದೆಯುವರು ಸೋಮಶಂಭು ದೇಶಿಕರು. ಅವರು ಶಾಸ್ತ್ರ ಮತ್ತು ಅನುಭವಗಳಿಗೆ ಹೆಸರಾಂತವರು. ಆವರು ಆರಾಧ್ಯಬ್ರಾಹ್ಮಣ ಸಮಾಜದಲ್ಲಿ ಬಹುಕಾಲದಿಂದ ಬಳಕೆಯಲ್ಲಿರುವ 'ಉಪನಯನ ಮತ್ತು ಶಿವದೀಕ್ಷೆ' ಅಥವಾ ಯಜ್ಞೋಪವೀತ ಮತ್ತು ಶಿವಲಿಂಗಧಾರಣ ಮಾಡಿ ಕೊಳ್ಳುವುದರ ಔಚಿತ್ಯವನ್ನು ಕುರಿತು (ಪು. ೭೦-೧೦೦) ತಾವು ನಡೆಯಿ ಸಿದ ಪ್ರವಚನ ಮತ್ತು ಈ ದಿಸೆಯಲ್ಲಿ ಶ್ರೀಶೈಲ ಜಗದ್ಗುರುಗಳವರ ಜೊತೆ ನೂರಾರು ವರ್ಷಗಳ ಹಿಂದೆ ಈ ಆರಾಧ್ಯ ಸಂಗಡವು ನಡೆಯಿಸಿದ ಶಾಸ್ತ್ರ ಜಿಜ್ಞಾಸೆಯನ್ನು ಸಭೆಯ ಗಮನಕ್ಕೆ ತಂದರು.

ಅನಂತರ ಶ್ರೀಪತಿ ಪಂಡಿತರು ಎದ್ದು ನಿಂತು—

"ಮಹಾಶಯರೆ, ನಮ್ಮ ಮಾವನವರು ಇದುವರೆಗೆ ನಿಮ್ಮಲ್ಲಿ ವಿನಂತಿಸಿದ ವಿಚಾರದಲ್ಲಿ ಅನೇಕ ವರ್ಷಗಳಿಂದ ನಾನೂ ಸಹ ಸಂಶೋಧನೆ ನಡೆಸಿದ್ದೇನೆ. ಮಾತ್ರವಲ್ಲದೆ ಈಗ ಇಲ್ಲಿಗೆ ದಯೆಮಾಡಿಸಿರುವ ಶಿವಾ ಚಾರ್ಯರು ನೀಡಿದ ಅಗಸ್ತ್ಯಸೂತ್ರವೃತ್ತಿ, ಮತ್ತು ನಮ್ಮ ಹಿಂದಿನವರು ರಚಿಸಿದ್ದ ಅಪೂರ್ವ ಗ್ರಂಥಗಳನ್ನು ಅನುಗ್ರಹಿಸಿದರು. ಅವುಗಳ ಆಧಾರದ ಮೇಲೆ ನಾನು ಶ್ರೀಕರಭಾಷ್ಯವನ್ನು ರಚಿಸಿದ್ದೇನೆ. ಅದರಲ್ಲಿ ಮೇಲೆ ಹೇಳಿದ ಎಲ್ಲ ವಿಚಾರಗಳನ್ನು ಶಾಸ್ತ್ರಮರ್ಯಾದೆಯಂತೆ ನಿರೂಪಿಸಿದ್ದೇನೆ. ಅದರ ಪ್ರಕಾರ ವರ್ಣಧರ್ಮವು ವಿಧಿಸಿರುವ ಉಪನಯನಕ್ಕಿಂತ ಅತಿ ವರ್ಣಾಶ್ರಮ ಎನಿಸಿದ ವೀರಶೈವದ ಶಿವದೀಕ್ಷೆ ಶ್ರೇಷ್ಠ. ಜನ್ಮಪ್ರಧಾನ ವಾದ ಪ್ರಾಕೃತ ಋಷಿಗೋತ್ರಗಳನ್ನು ಅನುಸರಿಸುವ ಪದ್ಧತಿಗಿಂತ ಅಪ್ರಾಕೃತ ಪ್ರಮಥ ಗೋತ್ರಗಳು ಶ್ರೇಷ್ಠ. ಆದ್ದರಿಂದ ಪ್ರಮಥಗೋತ್ರ ಪರಂಪರೆಯನ್ನು ಹೊಂದಿರುವ ಲಿಂಗಾಂಗಸಾಮರಸ್ಯಾತ್ಮಕ ವೀರಶೈವ ದೀಕ್ಷೆಯನ್ನು ಪಡೆಯುವುದರಿಂದ ನಾವು ಅಪ್ರಾಕೃತ ಅತಿವರ್ಣಾಶ್ರಮಿ ಗಳೆನಿಸುತ್ತೇವೆ. 'ಏಕೇನ ಜನ್ಮನಾ ಮುಕ್ತಿರ್ವೀರಾಣಾಂ ತು ಮಹೇ ಶ್ವರಿ' ಎಂಬ ಶಿವಾಗಮ ವಚನದಂತೆ ಮಾನವ ಜನ್ಮವು ಕೃತಾರ್ಥವಾಗು ತ್ತದೆ. ಆದ್ದರಿಂದ ನಾವು ಇದುವರೆಗೆ ನಡೆದು ಬಂದಿರುವ ಬಳಸುದಾರಿ ಯನ್ನು ಬಿಟ್ಟು ನೇರವಾದ ಹಾದಿ ಹಿಡಿಯೋಣ !" ಎಂದರು.

ಅವರು ಮಾತ್ರವಲ್ಲದೆ ಭೈರಣ್ಣನ ಮುಂದಾಳುತ್ವದಲ್ಲಿ ಭಾರತಾದ್ಯಂತ ನೆಲೆಸಿದ್ದ ಕಾಪಾಲಿಕರು ಮತ್ತು ಕಾಳಣ್ಣನ ನೇತೃತ್ವದಲ್ಲಿ ಕಾಶ್ಮೀರದಿಂದ, ಬಂಗಾಳದವರೆಗೆ ಹರಡಿದ್ದ ಶಾಕ್ತ ಪಂಥದ ಅನುಯಾಯಿಗಳು, ಉಜ್ಜಯಿನಿ ಮುಂತಾದ ಕಡೆಗಳಲ್ಲಿದ್ದ ಕಾಳಾಮುಖ, ಲಕುಲೀಶ ಮತ್ತು ಅವೈದಿಕ ಪಾಶುಪತ ಪಂಥಗಳ ನೂರಾರು ಮಂದಿ ವಿದ್ವಾಂಸರು ಶಿವಾಚಾರ್ಯರ ಅಮೃತ ಹಸ್ತದಿಂದ ಶಿವದೀಕ್ಷೆ ಪಡೆಯಲು ಸಿದ್ಧರಾದರು.

ಆಚಾರ್ಯರ ಆದೇಶದಂತೆ ಶಿವದೀಕ್ಷೆ ಪಡೆಯಬಯಸುವವರು ನಾಳೆಯಿಂದ ಒಂದು ವಾರದವರೆಗೆ ಇಲ್ಲಿ ಪೂಜ್ಯ ಶಿವಾಚಾರ್ಯರು ನಡೆಯಿಸಿಕೊಡುವ 'ಸಿದ್ಧಾಂತ ಶಿಖಾಮಣಿ ಪ್ರವಚನ'ದಲ್ಲಿ ಭಾಗವಹಿಸಬೇಕೆಂದು ಸೂಚಿಸಲಾಯಿತು.

## ಪ್ರವಚನ

"ಸಿದ್ಧಾಂತಶಿಖಾಮಣಿ ಎಂದರೇನು ?"

"ಅಂತೇ ಸಿದ್ಧಃ ಸಿದ್ಧಾಂತಃ" ಎಂಬ ಉಕ್ತಿಯಂತೆ ಆಧ್ಯಾತ್ಮ ವಿಚಾರ ಪಥದಲ್ಲಿ ವಾದ-ವಿವಾದಗಳು ಏರ್ಪಟ್ಟು ಕಡೆಗೆ ಸಿದ್ಧವಾದದ್ದು ಸಿದ್ಧಾಂತ. ಇಂಥ ಸಿದ್ಧಾಂತಗಳು ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಮುಂತಾಗಿ ಅನೇಕವಿವೆ. ಈ ಬಗೆಯ ಸಿದ್ಧಾಂತಗಳಲ್ಲಿ 'ಶಿಖಾಮಣಿ'(ತಲೆಮಣಿ)ಯಂತೆ ದೇದೀಪ್ಯಮಾನವಾದದ್ದು 'ಸಿದ್ಧಾಂತಶಿಖಾಮಣಿ.'

"ಇಲ್ಲಿ ಹೇಳಿರುವ ಸಿದ್ಧಾಂತಕ್ಕೆ ಆದ್ಯಪ್ರವರ್ತಕರು ಯಾರು ?"

"ಈ ಸಿದ್ಧಾಂತವು ಮೊದಲು ಶಿವನಿಂದ ಶಿವಾಗಮಗಳಲ್ಲಿ ಪ್ರಕಟವಾಯಿತು. ಅದನ್ನು ವೀರ, ನಂದಿ, ಭೃಂಗಿ, ವೃಷಭ ಮತ್ತು ಸ್ಕಂದರೆಂಬ ಪ್ರಮಥರು ಅನುಷ್ಠಾನ ಮಾಡಿ ಸಿದ್ಧಿಪಡೆದರು. ಅವರ ಬಳಿವಿಡಿದು ಬಂದ ರೇಣುಕಾದಿಗಳು ಈ ಸಿದ್ಧಾಂತವನ್ನು ತಾವೂ ಆಚರಿಸಿ ಆಚಾರ್ಯರಾದರು;ಮತ್ತು ಅವರು ವೀರಮಾಹೇಶ್ವರರಾದ್ದರಿಂದ ಇದನ್ನು ಲೋಕದಲ್ಲಿ ಪ್ರಚುರಪಡಿಸಿ ಕಾರ್ಯರೂಪಕ್ಕೆ ತಂದರು. ಅವರಲ್ಲಿ ಒಬ್ಬರಾದ ಆಚಾರ್ಯ ರೇಣುಕರು ಅಗಸ್ತ್ಯಮಹರ್ಷಿಗೆ ಬೋಧಿಸಿದ

ಭವಿಷ್ಯವನ್ನು ಕಾಣಲೆಂಬಂತೆ ತಾರೆಗಳು ಗಗನ ಮಂಡಲದಲ್ಲಿ ಮಿನುಗ ತೊಡಗಿದ್ದವು.

ನಗರದ ಜನ ಗುರುದೇವನನ್ನು ನೆನೆಯುತ್ತಾ ಅನನ್ಯ ಭಾವದಿಂದ ಆಕಾಶವನ್ನು ನೋಡತೊಡಗಿತ್ತು. ಅಷ್ಟರಲ್ಲಿ ಶಿವಾಚಾರ್ಯರ ಉಗ್ರ ತಪಸ್ಸಿನ ಉಜ್ವಲ ಸಾತ್ವಿಕ ಪ್ರಕಾಶವು ಪೂರ್ವದಿಗಂತದಲ್ಲಿ ಬೆಳಗತೊಡಗಿತು! ದಿಗ್ಭ್ರಾಂತರಾದ ಜನ ಅದನ್ನು ನೋಡುತ್ತಿದ್ದಂತೆ ಪೂರ್ಣಚಂದ್ರನುದಿಸಿ ಎಲ್ಲೆಡೆಯೂ ಬೆಳದಿಂಗಳು ಹರಡಿ ಹುಣ್ಣಿಮೆ ದಿನದ ಅನುಭವವನ್ನುಂಟುಮಾಡಿತು. ಗಗನ ತಲದಲ್ಲಿ ವೃತ್ತಾಕಾರವಾಗಿ ಬೆಳಗಿದ ತಪಃ ಪ್ರಕಾಶವು ಯಶಶ್ಚಂದ್ರಿಕೆಯಿಂದ ಸುತ್ತುವರಿದು 'ಚಂದ್ರಗುಂಡ'* ವೆನಿಸಿತು. ಅದು ಅನುಷ್ಠಾನದಿಂದ ಎಚ್ಚೆತ್ತು ಹೊರಬಂದ ಗುರುದೇವನಿಗೆ ವಂದಿಸಿ ಅವರಲ್ಲಿ ಅಡಗಿತು.

ಆರಾಧ್ಯಬ್ರಾಹ್ಮಣ ಸಮಾಜವು ಗುರುದೇವನನ್ನು ಅಗ್ನಿಪರೀಕ್ಷೆಗೆ ಗುರಿಪಡಿಸಿದ ತಮ್ಮ ಅವಿವೇಕಕ್ಕಾಗಿ ಪಶ್ಚಾತ್ತಾಪ ಪಟ್ಟು ಗುರುದೇವನಿಗೆ ಶರಣಾಗಿ ಕ್ಷಮೆ ಬೇಡಿತು.

೫೫

## ಶಿವದೀಕ್ಷಾ ಮಹಾಸಂಸ್ಕಾರ

ಫಾಲ್ಗುಣ ಶು॥ ಪಂಚಮಿ ಸೋಮವಾರ ಶಿವದೀಕ್ಷಾ ಮಹಾ ಸಂಸ್ಕಾರವು ನಡೆಯುವುದೆಂಬ ಸುದ್ದಿ ಎಲ್ಲೆಡೆ ಹರಡಿತ್ತು. ಈ ಸಮಾರಂಭದಲ್ಲಿ ಮುಖ್ಯವಾಗಿ ಭಾಗವಹಿಸಿದ್ದವರು ಆರಾಧ್ಯಬ್ರಾಹ್ಮಣರು.

* ಚಂದ್ರಗುಂಡಃ—'ಸುಡಿವೇಷ್ಟನೇ ಸುತ್ತಿನೊಳ್'

—ಕಾಶಕೃತ್ಸ್ನ ಶಬ್ದಕಲಾಪ ಧಾತುಪಾಠ (ಪು. ೨೬೯)

ಅವರು ಮಾತ್ರವಲ್ಲದೆ ಭೈರಣ್ಣನ ಮುಂದಾಳುತ್ವದಲ್ಲಿ ಭಾರತಾದ್ಯಂತ ನೆಲೆಸಿದ್ದ ಕಾಪಾಲಿಕರು ಮತ್ತು ಕಾಳಣ್ಣನ ನೇತೃತ್ವದಲ್ಲಿ ಕಾಶ್ಮೀರದಿಂದ, ಬಂಗಾಳದವರೆಗೆ ಹರಡಿದ್ದ ಶಾಕ್ತ ಪಂಥದ ಅನುಯಾಯಿಗಳು, ಉಜ್ಜಯಿನಿ ಮುಂತಾದ ಕಡೆಗಳಲ್ಲಿದ್ದ ಕಾಳಾಮುಖ, ಲಕುಲೀಶ ಮತ್ತು ಅವೈದಿಕ ಪಾಶುಪತ ಪಂಥಗಳ ನೂರಾರು ಮಂದಿ ವಿದ್ವಾಂಸರು ಶಿವಾಚಾರ್ಯರ ಅಮೃತ ಹಸ್ತದಿಂದ ಶಿವದೀಕ್ಷೆ ಪಡೆಯಲು ಸಿದ್ಧರಾದರು.

ಆಚಾರ್ಯರ ಆದೇಶದಂತೆ ಶಿವದೀಕ್ಷೆ ಪಡೆಯಬಯಸುವವರು ನಾಳೆಯಿಂದ ಒಂದು ವಾರದವರೆಗೆ ಇಲ್ಲಿ ಪೂಜ್ಯ ಶಿವಾಚಾರ್ಯರು ನಡೆಯಿಸಿಕೊಡುವ 'ಸಿದ್ಧಾಂತ ಶಿಖಾಮಣಿ ಪ್ರವಚನ'ದಲ್ಲಿ ಭಾಗವಹಿಸಬೇಕೆಂದು ಸೂಚಿಸಲಾಯಿತು.

## ಪ್ರವಚನ

"ಸಿದ್ಧಾಂತಶಿಖಾಮಣಿ ಎಂದರೇನು ?"

"ಅಂತೇ ಸಿದ್ಧಃ ಸಿದ್ಧಾಂತಃ" ಎಂಬ ಉಕ್ತಿಯಂತೆ ಅಧ್ಯಾತ್ಮ ವಿಚಾರಪಥದಲ್ಲಿ ವಾದ-ವಿವಾದಗಳು ಏರ್ಪಟ್ಟು ಕಡೆಗೆ ಸಿದ್ಧವಾದದ್ದು ಸಿದ್ಧಾಂತ. ಇಂಥ ಸಿದ್ಧಾಂತಗಳು ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಮುಂತಾಗಿ ಅನೇಕವಿವೆ. ಈ ಬಗೆಯ ಸಿದ್ಧಾಂತಗಳಲ್ಲಿ 'ಶಿಖಾಮಣಿ'(ತಲೆಮಣಿ)ಯಂತೆ ದೇದೀಪ್ಯಮಾನವಾದದ್ದು 'ಸಿದ್ಧಾಂತಶಿಖಾಮಣಿ.'

"ಇಲ್ಲಿ ಹೇಳಿರುವ ಸಿದ್ಧಾಂತಕ್ಕೆ ಆದ್ಯಪ್ರವರ್ತಕರು ಯಾರು ?"

"ಈ ಸಿದ್ಧಾಂತವು ಮೊದಲು ಶಿವನಿಂದ ಶಿವಾಗಮಗಳಲ್ಲಿ ಪ್ರಕಟವಾಯಿತು. ಅದನ್ನು ವೀರ, ನಂದಿ, ಭೃಂಗಿ, ವೃಷಭ ಮತ್ತು ಸ್ಕಂದರೆಂಬ ಪ್ರಮಥರು ಅನುಷ್ಠಾನ ಮಾಡಿ ಸಿದ್ಧಿಪಡೆದರು. ಅವರ ಬಳಿವಿಡಿದು ಬಂದ ರೇಣುಕಾದಿಗಳು ಈ ಸಿದ್ಧಾಂತವನ್ನು ತಾವೂ ಆಚರಿಸಿ ಆಚಾರ್ಯರಾದರು; ಮತ್ತು ಅವರು ವೀರಮಾಹೇಶ್ವರರಾದ್ದರಿಂದ ಇದನ್ನು ಲೋಕದಲ್ಲಿ ಪ್ರಚುರಪಡಿಸಿ ಕಾರ್ಯರೂಪಕ್ಕೆ ತಂದರು. ಅವರಲ್ಲಿ ಒಬ್ಬರಾದ ಆಚಾರ್ಯ ರೇಣುಕರು ಅಗಸ್ತ್ಯಮಹರ್ಷಿಗೆ ಬೋಧಿಸಿದ

ನೂರೊಂದು ಸ್ಥಲಗಳ ವಿವರಣವೇ 'ಸಿದ್ಧಾಂತಶಿಖಾಮಣಿ.' ಇದರ ಕರ್ತೃ ಶಿವಯೋಗಿ ಶಿವಾಚಾರ್ಯರು. (ಕ್ರಿ. ಶ. ಸು. ೮೦೦) ಅವರು ಸಾಮಾನ್ಯ ಕವಿಯಲ್ಲ; ಋಷಿಕವಿ! ಅವರ ಕೃತಿ ಉತ್ತಮ ಕಾವ್ಯವೂ ಹೌದು! ದರ್ಶನವೂ ಹೌದು!

ಇದರಂತೆ ದಾರುಕಾಚಾರ್ಯರು ದಧೀಚಿ ಮಹರ್ಷಿಗೆ ಬೋಧಿಸಿದ 'ದಾರುಕ ತಂತ್ರ', ಘಂಟಾಕರ್ಣ ಶಿವಾಚಾರ್ಯರು ಉಪಮನ್ಯು ಋಷಿಗೆ ಬೋಧಿಸಿದ 'ಘಂಟಾಕರ್ಣ ತಂತ್ರ', ಗಜಕರ್ಣ ಶಿವಾಚಾರ್ಯರು ದೇವಲ ಮುನಿಗೆ ಉಪದೇಶಿಸಿದ 'ಗಜಕರ್ಣ ತಂತ್ರ'ಗಳೂ ಇವೆ ಎಂದು ತಿಳಿದು ಬಂದಿದೆ.

ಅಗಸ್ತ್ಯ ಮಹರ್ಷಿಯು–

"ಎಲೈ ಗಣಾಧೀಶನೆ, ನೀವು ನನ್ನನ್ನು ಅನುಗ್ರಹಿಸುವುದಕ್ಕಾಗಿ ಇಲ್ಲಿಗೆ ಆಗಮಿಸಿದ್ದು ನನ್ನ ಪುಣ್ಯವಿಶೇಷ! ಶಿವಸಮ್ಮತವಾದ ಸಿದ್ಧಾಂತ ವನ್ನು ನಿಮ್ಮ ಮುಖದಿಂದ ಕೇಳಲು ಬಯಸಿದ್ದೇನೆ. ದಯಮಾಡಿ ಅಪ್ಪಣೆ ಕೊಡಿಸಬೇಕು" ಎಂದು ಪ್ರಾರ್ಥಿಸಿದ.

ಆಚಾರ್ಯರು "ಎಲೈ ಮಹರ್ಷಿಯೆ, ವೇದದ ಕೆಲ ಕೆಲವು ಅಂಶ ಗಳನ್ನು ಒಪ್ಪಿರುವ ಸಾಂಖ್ಯ, ಯೋಗ ಮತ್ತು ಪಾಂಚರಾತ್ರ ಮುಂತಾದುವು ಗಳಿಗಿಂತ ಪಾಶುಪತ ಶೈವವು ಶ್ರೇಷ್ಠ. ಏಕೆಂದರೆ ಅದು ವೇದಮಯ. ಆದರಲ್ಲಿಯೂ ಸಿದ್ಧಾಂತ, ಸೋಮ, ದಕ್ಷಿಣ, ಲಾಕುಳ ಎಂಬ ಪ್ರಭೇದ ಗಳಿವೆ. ಅವೆಲ್ಲವುಗಳಿಗಿಂತ ವೇದಸಮ್ಮತವಾದ ಸಿದ್ಧಾಂತಾಗಮವು ಪ್ರಶಸ್ತ. ಅದು ಕಾಮಿಕ ಮೊದಲು ವಾತುಲದವರೆಗಿನ ಇಪ್ಪತ್ತೆಂಟು ಶಿವಾಗಮಗಳ ಒಂದು ಸಮುಚ್ಚಯ. ಅದರ ಉತ್ತರ ಭಾಗದಲ್ಲಿ ವೀರ ಶೈವವು ಉಕ್ತವಾಗಿದೆ. ಇದರಲ್ಲಿ ವೀರಶೈವ ಮತ್ತು ವೀರಮಾಹೇಶ್ವರ ಎಂಬ ಎರಡು ಪ್ರಭೇದಗಳಿವೆ."

"ವೀರಶೈವ ಮತ್ತು ವೀರಮಾಹೇಶ್ವರ ಶಬ್ದಗಳ ಅರ್ಥವೇನು?"

"ವೀ ಎಂದರೆ ಶಿವ ಮತ್ತು ಜೀವರಿಗೆ ಐಕ್ಯವನ್ನು ಬೋಧಿಸುವ ವಿದ್ಯೆ. ಶಿವಜೀವೈಕ್ಯಬೋಧಕವಾದ ಆ ವಿದ್ಯೆಯಲ್ಲಿ ರಮಿಸುವವನು

ವೀರಶೈವ. ಮೇಲೆ ಹೇಳಿದ ಶಿವಜೀವೈಕ್ಯಬೋಧಕ ವಿದ್ಯೆಯಲ್ಲಿ ರಮಿಸು ವುದಲ್ಲದೆ ಹೇಯವಾದ ಮಾಯೆ (ಅವಿದ್ಯೆ) ಯನ್ನು ತ್ಯಜಿಸಿದವನು 'ವೀರ ಮಾಹೇಶ್ವರ.' ವೀರಶೈವನು ಜ್ಞಾನಯಜ್ಞ ನಿರತ. ವೀರಮಾಹೇಶ್ವರನು ಜ್ಞಾನಯಜ್ಞದ ಜೊತೆಗೆ ಕರ್ಮಯಜ್ಞನಿರತನೂ ಆಗಿರುತ್ತಾನೆ. ಎಂದರೆ ಜ್ಞಾನ ಎಂದರೆ ತಿಳಿಯುವುದು. ಕೇವಲ ತಿಳಿದರೆ ಮಾತ್ರ ಸಾಲದು. ಆ ಜ್ಞಾನಕ್ಕೆ ಅಡ್ಡ ಬರುವ ಮಾಯೆಯನ್ನು ತೊಲಗಿಸುವುದು ಮುಖ್ಯ. ಅದು ಅಷ್ಟು ಸುಲಭವಲ್ಲ. ಅದನ್ನು ಪ್ರಯತ್ನಪೂರ್ವಕ ವಾಗಿ ಬಿಡುವ 'ಕ್ರಿಯಾಶೀಲ'ತೆ ಬೇಕು. ಅವನೇ ವೀರಮಾಹೇಶ್ವರ. ಆದ್ದರಿಂದಲೇ ಅವನಿಗೆ ಜ್ಞಾನಯಜ್ಞ ಮತ್ತು ಕರ್ಮಯಜ್ಞನಿರತನೆಂದು ಹೇಳಿದ್ದು.

## ವೀರಶೈವಸ್ವರೂಪ

ವೀರಶೈವವು ಸ್ಥಲಭೇದದಿಂದ ಅಂಗಸ್ಥಲ–ಲಿಂಗಸ್ಥಲ ಎಂದು ಎರಡು ಬಗೆ. ಅಂಗಸ್ಥಲದಲ್ಲಿ ಭಕ್ತ - ಮಾಹೇಶ - ಪ್ರಸಾದಿ - ಪ್ರಾಣಲಿಂಗಿ– ಶರಣ ಮತ್ತು ಐಕ್ಯ ಎಂದು ಆರು ಬಗೆ. ಇವು ಅಂಗಸ್ಥಲಗಳು. ಇದರಂತೆ ಲಿಂಗಸ್ಥಲದಲ್ಲಿಯೂ ಆಚಾರ-ಗುರು-ಶಿವ-ಪ್ರಸಾದ-ಚರ ಮತ್ತು ಮಹಾಲಿಂಗ ಎಂಬ ಆರು ಭೇದಗಳಿವೆ. ಇವೆಲ್ಲವೂ ಒಳಭೇದ ಗಳಿಂದ ಅಂಗಸ್ಥಲಗಳು ನಲವತ್ತುನಾಲ್ಕು (೪೪). ಲಿಂಗಸ್ಥಲಗಳು ಐವತ್ತೇಳು (೫೭) ಸೇರಿ ಒಟ್ಟು ನೂರ ಒಂದು(೧೦೧) ಸ್ಥಲಗಳಾಗುತ್ತವೆ.

"ಅಂಗಸ್ಥಲ ಮತ್ತು ಲಿಂಗಸ್ಥಲ ಶಬ್ದಗಳ ಅರ್ಥವೇನು ?"

" 'ಅಂ' ಎಂದರೆ ಪರಶಿವಬ್ರಹ್ಮ. ಆ ಬ್ರಹ್ಮದ ಕಡೆ ಅಭಿಮುಖನಾದ (ತಿರುಗಿದ) ಸುಕೃತ ಜೀವಿಯು 'ಅಂಗ'. 'ಭವ' ಎಂದರೆ ಹುಟ್ಟುಸಾವುಗಳ ಜೀವಪ್ರಪಂಚ. ಅವುಗಳ ಕಡೆ ಅಭಿಮುಖನಾದವನು ಭವಿ. ಈ ಭವಿಗಳಲ್ಲಿ

ಪರಿಪಕ್ವರಾದವರನ್ನು ಆರಿಸಿ, ಅವರನ್ನು ಶಿವದೀಕ್ಷೆಯಿಂದ ಭವ (ಶಿವ)ನ ಕಡೆ ತಿರುಗಿಸುವವನು ಶ್ರೀಗುರು.

ಶಿವದೀಕ್ಷೆಯಲ್ಲಿ ಷಡಧ್ವಶುದ್ಧಿಕ್ರಮದಲ್ಲಿ ಅಂಗ ಮತ್ತು ಲಿಂಗಗಳನ್ನು ಸಂಸ್ಕರಿಸಿ, ಶಿಷ್ಯನ ಹೃದಯಕಮಲದಲ್ಲಿರುವ ಶಿವಕಲೆಯನ್ನು ತನ್ನ ಯೋಗಶಕ್ತಿಯಿಂದ ಆಕರ್ಷಿಸಿ ಸಂಸ್ಕರಿಸಿದ ಲಿಂಗದಲ್ಲಿ ಸ್ಥಾಪಿಸಿ, ಅದನ್ನು ಶಿಷ್ಯನ ಕರಕಮಲದಲ್ಲಿಟ್ಟ ಶ್ರೀಗುರು, ಗೋವಿನ ಶರೀರದಲ್ಲಿ ಆಗಿರುವ ಗಾಯಕ್ಕೆ ಅದೇ ಗೋವಿನ ಹಾಲು ಕರೆದು, ತುಪ್ಪಮಾಡಿ, ಅದರಲ್ಲಿ ಔಷಧ ಬೆರೆಸಿ ಲೇಪಿಸಿ, ಗಾಯ ವಾಸಿ ಮಾಡುವ ವೈದ್ಯನಂತೆ ಶಿಷ್ಯನ ಭವರೋಗಕ್ಕೆ ವೈದ್ಯನಾಗುತ್ತಾನೆ." ಹೀಗೆ ಶಿವದೀಕ್ಷೆ ಪಡೆದವನೇ ದ್ವಿಜ!

"ಅಂಗಸ್ಥಲ ಮತ್ತು ಲಿಂಗಸ್ಥಲಗಳ ಸ್ವರೂಪವೇನು ?"

"ದೀಕ್ಷೆಯಿಂದ ಸಂಸ್ಕೃತನಾದ ಜೀವ(ಅಂಗ)ನು ಲಿಂಗವಾಗುವುದಕ್ಕೆ ಭಕ್ತಿಯು ಅಗತ್ಯ. ಭಕ್ತಿಯುಳ್ಳವನೇ ಭಕ್ತ. ಈ ಭಕ್ತಿಯು ಶ್ರದ್ಧಾ, ನಿಷ್ಠಾ, ಅವಧಾನ, ಅನುಭವ, ಆನಂದ ಮತ್ತು ಸಮರಸ ಎಂದು ಆರು ವಿಧ. ಸಾಧಕನು ಶ್ರದ್ಧಾ(ನಂಬಿಕೆ) ಭಕ್ತಿಯಿಂದ ಭಕ್ತನೆನಿಸುತ್ತಾನೆ. ಭಕ್ತಿಯು ದೃಢವಾದರೆ ನಿಷ್ಠೆಯಾಗುತ್ತದೆ. ಅಂಥ ನಿಷ್ಠೆಯುಳ್ಳವನೇ ಮಾಹೇಶ. ನಿಷ್ಠೆಯು ಏಕಾಗ್ರತೆ(ಅವಧಾನ)ಪಡೆದಾಗ ಮಾಹೇಶನೇಪ್ರಸಾದಿ ಎನಿಸುತ್ತಾನೆ. ಅವಧಾನವು ಅನುಭವಕ್ಕೆ ಬಂದಾಗ ಆ ಪ್ರಸಾದಿಯೇಪ್ರಾಣ ಲಿಂಗಿಯಾಗುತ್ತಾನೆ. ಅನುಭವದಿಂದ ಆನಂದ ಲಭಿಸುತ್ತದೆ. ನಿತ್ಯಾನಂದಿಯೇ ಶರಣ. ಆನಂದವು ಸಮರಸವಾದಾಗ ಗುರು–ಶಿವ–ಶಿಷ್ಯ ಎಂಬ ಭೇದವಳಿದು ಅವನಿಗೆ ಸ್ವಸ್ವರೂಪ ಸ್ಥಿತಿ ಏರ್ಪಡುತ್ತದೆ. ಅದೇ ಐಕ್ಯಸ್ಥಲದ ಅನುಭವ. ಇಲ್ಲಿ ಐಕ್ಯನೆಂದರೆ ಜೀವನ್ಮುಕ್ತ ! ಅನಾಸಕ್ತಯೋಗಿ ! ಅಂಗಗುಣವಳಿದು ಲಿಂಗಸ್ಥಲಕ್ಕೆ ಅಡಿ ಇಟ್ಟವನು ಲಿಂಗೋದ್ಭವ! ಇಂಥವನನ್ನೇ ಗುರು–ಜಂಗಮ ಪೀಠಗಳ ಅಧಿಪತಿಗಳನ್ನಾಗಿ ಆರಿಸುತ್ತಾರೆ. ಅವರ ದಿನಚರಿಯನ್ನು ಲಿಂಗಸ್ಥಲಗಳು ಬಣ್ಣಿಸಿವೆ. ಈ ಸ್ಥಿತಿಯಲ್ಲಿ ನಾನು ಭೃತ್ಯ, ಶಿವನು ಸ್ವಾಮಿ, ನಾನು ಶಿಷ್ಯ, ಆತ ಗುರು ಎಂಬ

ಭೇದಜ್ಞಾನವಳಿದು ಅದ್ವೈತ ಸಿದ್ಧಿಸಿರುತ್ತದೆ. ಎಂದರೆ ಅವನು ಅಂಗ ಸ್ಥಲದಿಂದ ಮೇಲ್ಸೇರಿ ಲಿಂಗರೂಪು ತಳೆದಿರುವುದರಿಂದ ಅವನು ತ್ರಿಜ! ಅಥವಾ ಲಿಂಗೋದ್ಭವ! ಆಗ ಅವನು ವಿಶ್ವಹೋಮಿ ಎನಿಸುತ್ತಾನೆ.

ಪರಾಹಂತಾಮಯೇ ಸ್ವಾತ್ಮಪಾವಕೇ ವಿಶ್ವಭಾಸಕೇ।
ಇದಂತಾಹವ್ಯ ಹೋಮೇನ ವಿಶ್ವಹೋಮೀತಿ ಕಥ್ಯತೇ ॥
(ಸಿ. ಶಿ. ೧೪-೩೮)

ಲಿಂಗಸ್ಥಲಕ್ಕೇರಿದ ಸಾಧಕನ ದಿನಚರಿಯನ್ನು ಲಿಂಗಸ್ಥಲಗಳಲ್ಲಿ ವಿವರಿಸಿದೆ. ಇಲ್ಲಿ ಆಚಾರಲಿಂಗ-ಗುರುಲಿಂಗ, ಶಿವಲಿಂಗ, ಪ್ರಸಾದಲಿಂಗ, ಜಂಗಮಲಿಂಗ ಮತ್ತು ಮಹಾಲಿಂಗ ಎಂಬ ಆರು ಸ್ಥಲಗಳಿವೆ.

ಲಿಂಗಸ್ಥಲಗಳಲ್ಲಿ ಅಡಿ ಇಟ್ಟ ಸಾಧಕನು ಮೊದಲ'ದೀಕ್ಷಾ ಗುರುಸ್ಥಲ' ದಿಂದ ಕಟ್ಟಕಡೆಯ 'ಜ್ಞಾನಶೂನ್ಯ ಸ್ಥಲ'ಕ್ಕೆ ಬರಬೇಕಾದರೆ ಅದ್ಭುತವಾದ ಸಾಧನೆ ನಡೆಯಬೇಕು ಈ ದೃಷ್ಟಿಯಿಂದ ಸಿದ್ಧಾಂತಶಿಖಾಮಣಿ ಸುಮ್ಮನೆ ಓದಿ, ಬಿಡುವ ಪಠ್ಯಗ್ರಂಥವಲ್ಲ; ಅದು ಪ್ರತಿದಿನವೂ ಪಾರಾಯಣ ಮಾಡಿ ಮನನ ಮಾಡುವ ಪವಿತ್ರ ಗ್ರಂಥ.

ಸಿದ್ಧಾಂತಶಿಖಾಮಣಿಗೆ 'ರೇಣುಕ ಗೀತೆ' ಎಂಬ ಹೆಸರಿದೆ. ಉಪ ನಿಷತ್ತುಗಳ ಸಾರ ಭಗವದ್ಗೀತೆಯಾದರೆ ರೇಣುಕಗೀತೆ ವೇದ, ಆಗಮ, ಉಪನಿಷತ್ತುಗಳ ಸಾರ. ಭಗವದ್ಗೀತೆಯಲ್ಲಿಯೂ ಶಿವಾಗಮಗಳ ಅನೇಕ ಅವತರಣಗಳು ಬಂದಿರುವುದರಿಂದ ಆ ಗೀತೆಯೂ ಸಹ ಶಿವಾಗಮ ಗಳನ್ನು ಆಶ್ರಯಿಸಿದೆ.

ಲಿಂಗಸ್ಥಲದ ಕಡೆಯಲ್ಲಿ ಬರುವ ಜ್ಞಾನಶೂನ್ಯಸ್ಥಲದಲ್ಲಿ ಜೀವನ್ಮು ಕ್ತನು ಸ್ವಪ್ರಕಾಶವೂ, ಚಿದಾಕಾರವೂ ಆದ ಜ್ಯೋತಿರ್ಲಿಂಗದಲ್ಲಿ ಏಕೀ ಭಾವವನ್ನು ಹೊಂದಿರುವುದರಿಂದ ಅವನಲ್ಲಿ ಹೇಗೆ ತಾನೆ ಜ್ಞಾನವು ಉಳಿದೀತು ! ಅವನ ಸ್ಥಿತಿಯು ಕಡೆಗೆ'ನೀರಿನಲ್ಲಿ ನೀರು, ಬೆಂಕಿಯಲ್ಲಿ ಬೆಂಕಿ ಬೆರೆತು ಏಕಾಕಾರವಾಗುವಂತೆ ಪರಬ್ರಹ್ಮದಲ್ಲಿ ವಿಲೀನವಾಗಿ ಸಮುದ್ರದಲ್ಲಿ ನದಿಗಳು ಅಡಗುವಂತೆ, ಉರಿಯುಂಡ ಕರ್ಪೂರದಂತೆ ವಿದೇಹ ಮುಕ್ತಿಯಲ್ಲಿ ಅವನು ಪರಿಪೂರ್ಣಸ್ಥಿತಿಯನ್ನು ಹೊಂದುತ್ತಾನೆ."

"ಶಿವದೀಕ್ಷೆಯಲ್ಲಿ ಗುರುವಿನ ಸ್ಥಾನವೇನು ?"

"ವೀರಶೈವದಲ್ಲಿ ಗುರುವು ಸಾಭಾರಿ ಮತ್ತು ನಿರಾಭಾರಿ ಎಂದು ಎರಡು ವಿಧ. ಶಿಷ್ಯನ ಶಿಕ್ಷಾ, ದೀಕ್ಷಾ ಮುಂತಾದ ಕ್ರಿಯೆಗಳ ಹೊಣೆ ಹೊತ್ತಿರುವವನು ಸಾಭಾರಿಗುರು. ಈ ಹೊಣೆಗಾರಿಕೆಯ ಭಾರದಿಂದ ದೂರವಾಗಿದ್ದು, ಭಕ್ತರನ್ನು ಅನುಗ್ರಹಿಸುವವನು ನಿರಾಭಾರಿಗುರು. ಈತನನ್ನು ಅಷ್ಟಾವರಣದಲ್ಲಿ 'ಜಂಗಮ, ನಿರಂಜನ' ಎಂದು ಕರೆಯ ಲಾಗಿದೆ. ಅಲ್ಲಿ ಗುರು, ಲಿಂಗ, ಜಂಗಮ ತತ್ತ್ವಗಳು ಪೂಜ್ಯವಸ್ತುಗಳು."

"ಶಿವದೀಕ್ಷೆಯ ನಿರ್ವಹಣೆಯು ಗುರುವಿನಿಂದಲೇ ನಡೆಯುವುದ ರಿಂದ ಅಲ್ಲಿ ಈ ಜಂಗಮದ ಆಗತ್ಯವೇನಿದೆ ?"

"ಹಾಗಲ್ಲ ; ಶಿವದೀಕ್ಷೆಯಲ್ಲಿ ಜಂಗಮದ ಅಗತ್ಯವೇ ಹೆಚ್ಚು. ಏಕೆಂದರೆ ಸಾಭಾರಿ ಗುರುವು ವಿಧ್ಯುಕ್ತವಾಗಿ ದೀಕ್ಷೆ ನೀಡಿ ಮಂತ್ರೋಪದೇಶ ಮಾಡಿದ ಮೇಲೆ ಆ ದೀಕ್ಷಿತನಿಗೆ 'ತೀರ್ಥ-ಪ್ರಸಾದ'ಗಳನ್ನಿತ್ತು ಅನುಗ್ರಹಿಸು ವವನು ಜಂಗಮ. ಶಿಕ್ಷಣಕ್ಷೇತ್ರದಲ್ಲಿ ಉಪಾಧ್ಯಾಯ ಮತ್ತು ಪರೀಕ್ಷಕ ರಿರುವಂತೆ! ವರ್ಷವೆಲ್ಲ ಶಿಷ್ಯರಿಗೆ ಪಾಠವನ್ನು ಬೋಧಿಸುವವನು ಉಪಾ ಧ್ಯಾಯ. ವರ್ಷದ ಕಡೆಯಲ್ಲಿ ಅವರನ್ನು ಪರೀಕ್ಷಿಸಿ, ಫಲ ನೀಡುವವನು ಪರೀಕ್ಷಕ. ಪರೀಕ್ಷಕನಿಲ್ಲದೆ ನಮ್ಮ ಕಲಿಕೆ ಪೂರ್ಣವಾಗದು, ಸಫಲವಾಗದು ಅಲ್ಲವೆ ?"

"ನಿಜ ; ಆದರೆ ಉಪಾಧ್ಯಾಯನು ಪರೀಕ್ಷಕನೂ ಆಗುವನಲ್ಲವೆ ?"

"ಆಗಬಹುದು. ಆದರೆ ಪರೀಕ್ಷಕನು ಉಪಾಧ್ಯಾಯನೇ ಆದರೂ ಅವನಿಗೆ ಇವನು ತನ್ನ ಶಿಷ್ಯ, ಇವನು ಬೇರೆಯವನು ಎಂಬ ಪರಿವೆ ಇರುವುದಿಲ್ಲ. ಅವನೊಬ್ಬ ರತ್ನಪರೀಕ್ಷಕನಿದ್ದಂತೆ! ಆದ್ದರಿಂದಲೇ ಸಿದ್ಧಾಂತ ಶಿಖಾಮಣಿಯಲ್ಲಿ ಬರುವ ಭಕ್ತಸ್ಥಲದ ಪ್ರಭೇದಗಳಲ್ಲಿ 'ಉಭಯಸ್ಥಲ' ವಿದೆ. ಗುರು ಮತ್ತು ಲಿಂಗಗಳನ್ನು ಅಲ್ಲಿ 'ಉಭಯ'ವೆಂದು ಹೇಳಿದೆ. ಮುಂದೆ 'ತ್ರಿವಿಧ ಸಂಪತ್ತಿಸ್ಥಲ'ವಿದೆ. ಅಲ್ಲಿ ಸಾಧಕನು ಗುರು-ಲಿಂಗ ಮತ್ತು ಜಂಗಮರಲ್ಲಿ ಭಕ್ತಿ ಮಾಡಬೇಕೆಂದು ಹೇಳಿದೆ. ಮತ್ತೆ ಪ್ರಸಾದಿ ಸ್ಥಲದಲ್ಲಿಯೂ ಗುರು-ಲಿಂಗ ಮತ್ತು ಜಂಗಮಗಳ ಮಾಹಾತ್ಮ್ಯವನ್ನು ಸುಂದರವಾಗಿ ವಿವರಿಸಿದೆ."

ಅನುಷ್ಠಾನ ಬಲ್ಲಿದರಾದ ಗುರು-ಜಂಗಮರು ವೀರಶೈವದ ಎರಡು ಕಣ್ಣುಗಳು. ಶಿವದೀಕ್ಷಿತನು ಇವರಿಬ್ಬರನ್ನೂ ಸಮಾನರೆಂದು ಭಾವಿಸಿ ಗೌರವಿಸಬೇಕು. ಏಕೆಂದರೆ ಭಕ್ತರನ್ನು ಮೇಲೆತ್ತುವುದಕ್ಕಾಗಿ ಸಾಕ್ಷಾತ್ ಪರಶಿವನೇ ಗುರು-ಜಂಗಮ ರೂಪು ತಳೆದಿರುವನಲ್ಲವೆ ?"

"ಸ್ವಾಮಿ, ಒಂದು ಸಂದೇಹ ! ಕೃಪೆ ಮಾಡಿ ಪರಿಹರಿಸಬೇಕು."

"ಅಗತ್ಯವಾಗಿ ಹೇಳಿ ! ಸಾಧ್ಯವಾದರೆ ಪರಿಹರಿಸೋಣ!"

"ತಾವು ಶ್ರೀಗಿರಿಯ ಶಿವಾಚಾರ್ಯರು. ತಾವು ಜಗದ್ಗುರುಗಳೂ ಆಗಿದ್ದೀರಿ. ಆದರೆ ಉಪಾಧ್ಯಾಯನೇ ಪರೀಕ್ಷಕನಾಗುವಂತೆ ಜಂಗಮದ ಸ್ಥಾನವನ್ನು ಅಲಂಕರಿಸಿ ತಾವು ನಮ್ಮನ್ನು ಅನುಗ್ರಹಿಸಬಹುದಲ್ಲವೆ ?"

"ಹಾಗಾಗುವುದಿಲ್ಲ! ಜಂಗಮವು ಎದುರಿಗಿಲ್ಲದಿದ್ದಾಗ ಹಾಗೆ ಮಾಡುವುದರಲ್ಲಿ ದೋಷವಿಲ್ಲ ! ಆದರೆ ಪ್ರತಿಯೊಂದು ಗುರುಪೀಠದಲ್ಲಿಯೂ ಒಬ್ಬೊಬ್ಬ ಜಂಗಮ ಕ್ರಿಯಾಮೂರ್ತಿಯು ಇದ್ದು, ಗುರುವನ್ನು ಅಷ್ಟಾವರಣ ಪರಿಪೂರ್ಣನನ್ನಾಗಿ ಮಾಡುತ್ತಾನೆ. ಅವನು ನಿರಂಜನ ಪ್ರಣವಸ್ವರೂಪಿಯಾಗಿ ಅವ್ಯಕ್ತವಾಗಿರುತ್ತಾನೆ. ರಂಜನೆಯಿಂದ ಅವನು ಬಹುದೂರವಾಗಿರುತ್ತಾನೆ."

"ಸ್ವಾಮಿ, ವೀರಶೈವವು ಸನಾತನ ಎಂದ ಮೇಲೆ ವೇದಾಗಮ ಕಾಲದಲ್ಲಿಯೂ ಜಂಗಮನಿದ್ದಿರಬೇಕಲ್ಲವೆ ?"

"ನೀವು ಹೇಳುವುದು ಬಹು ಸೋಜಿಗದ ಮಾತು! ಏಕೆಂದರೆ, ಋಗ್ವೇದದಲ್ಲಿ ಬರುವ 'ಮುನಿಸೂಕ್ತವು' (ಋ. ಮಂ.೧೦ ಸೂ. ೧೩೬) ಆಗ್ಗೆ ಇದ್ದ ಜಂಗಮರನ್ನು ಸುಂದರವಾಗಿ ವರ್ಣಿಸಿದೆ. ವಾಯುವನ್ನು ಸೇವಿಸುತ್ತಿದ್ದ ಅವರು 'ವಾತ-ರಶನಾಃ' (ವಾತಃ — ಅಶನಂ ಯೇಷಾಂ ತೇ) ಎಂದು ಅಲ್ಲಿ ವರ್ಣಿತರಾಗಿದ್ದಾರೆ. ಗಾಳಿಯೇ ಆಹಾರವಾದ ಇವರು ಗಗನ ಸಂಚಾರಿಗಳಾಗಿ ಭಕ್ತರನ್ನು ಅನುಗ್ರಹಿಸುತ್ತಿದ್ದರು. ಆರ್ಯರಲ್ಲಿ 'ಕಾಶಿ'ಗಳೆಂಬ ಗುಂಪು ಸಿಂಧೂ ಪ್ರಾಂತದಿಂದ ಈ ವಾರಾಣಸಿಗೆ ಬಂದಾಗ ಇಲ್ಲಿ ರಾಜ್ಯಭಾರ ಮಾಡುತ್ತಿದ್ದ ರಾಜನ್ಯರು ವ್ರಾತ್ಯರು.

ಅವರ ಕುಲಗುರುಗಳು ಈ ಜಂಗಮರೇ ! ಆದ್ದರಿಂದಲೇ ಇಲ್ಲಿ 'ಜಂಗಮವಾಟಿಕೆ' ಏರ್ಪಟ್ಟಿದೆ. ಸುಪ್ರಭೇದಾಗಮದಲ್ಲಿ ಹೇಳಿರುವ 'ನಿರಾಭಾರಿ ಜಂಗಮ'ನು 'ನಿರ್ಮೋಹಿಯೂ, ನಿಷ್ಕ್ರಿಯನೂ, ಶೂನ್ಯನೂ, ಸತ್ವಾದಿ ಗುಣರಹಿತನೂ, ನಿಷ್ಪ್ರಪಂಚನೂ ಆಗಿ ಸಚ್ಚಿದಾನಂದ ಲಕ್ಷಣವುಳ್ಳವನು ನಿರಾಭಾರಿ ಎಂದು ಹೇಳಿದೆ. ಆತನ ದೇಹ, ಮನಸ್ಸು, ಭಾವಗಳು ಶಿವಾತ್ಮಕ. ಆತನ ಬುದ್ಧಿ-ಗತಿಯೆಲ್ಲವೂ ಶುದ್ಧ. ಅವನು ಸದಸದ್ವಸ್ತು ರಹಿತ, ಸತ್ಯ-ಅಸತ್ಯಗಳಿಲ್ಲದವ. ಅವನಿಗೆ ಕರ್ಮ-ಅಕರ್ಮಗಳಿಲ್ಲ. ಅಂಥವನೇ ಸಾಕ್ಷಾತ್ ನಿರಂಜನ. ಜಂಗಮದಲ್ಲಿ ಸ್ವಯ-ಚರ-ಪರ ಎಂದು ಮೂರು ವಿಧ. ಪರ ಜಂಗಮನು

ದೇಹಂ ಧೃತ್ವಾಪಿ ನಿರ್ದೇಹೀ ಗುಣವಾನಪಿ ನಿರ್ಗುಣಃ ।
ಅಯಂ ಸಾಕ್ಷಾತ್ ಪರಂ ಬ್ರಹ್ಮ ಯ ಏವ ಹಿ ನಿರಂಜನಃ ॥

ಸುಪ್ರಭೇದಾಗಮ (ವೀ. ಸ. ಸಂಗ್ರಹ)

ಹೀಗೆ ಒಂದು ವಾರದವರೆಗೆ ಶಿವಾಚಾರ್ಯರು ನಡೆಸಿಕೊಟ್ಟ ಪ್ರವಚನದಿಂದ ಜನತೆಯಲ್ಲಿ ಬೇರೂರಿದ್ದ ಅನೇಕ ಸಂಶಯಗಳು ದೂರವಾದವು. ಅವರು ಗುರುವಿಗೆ ಶರಣಾದರು.

ಶಿವದೀಕ್ಷೆಯ ಕಾರ್ಯಕ್ರಮಗಳು ಸಾಂಗವಾದವು. ಪ್ರಾಯಃ ಶಿವದೀಕ್ಷಿತರಲ್ಲಿ ಶಾಸ್ತ್ರಾನುಭವ ಬಲ್ಲಿದರಾಗಿದ್ದವರು ಆರಾಧ್ಯಬ್ರಾಹ್ಮಣರೇ ಮುಂತಾದವರು. ಅವರಿಗೆ 'ವೀರಮಾಹೇಶ್ವರದೀಕ್ಷೆ' ನೀಡಿ "ಅವರು ಶಿವದೀಕ್ಷಿತರ ಶಿಕ್ಷಾ-ದೀಕ್ಷಾದಿಕರ್ತರಾಗಿರಬೇಕು. ಅವರಲ್ಲಿ ಅನುಷ್ಠಾನಬಲ್ಲಿದರಾಗಿ ಲೋಕಾನುಗ್ರಹ ಶಕ್ತಿಪಡೆದವರು ಗುರುಪೀಠವನ್ನು ಅಲಂಕರಿಸಿ ಸಮಾಜವನ್ನು ಮುನ್ನಡೆಸಬೇಕು. ಇವರು ಪೀಠದ ಮೂಲ ಆಚಾರ್ಯ 'ಪಂಡಿತಾರಾಧ್ಯ'ರ ಶುಭನಾಮ ತಳೆದು ಬೆಳಗಲಿ" ಎಂದು ಆಶೀರ್ವದಿಸಿದರು.

ಶಿವದೀಕ್ಷಾ ಸಂಸ್ಕಾರದ ತರುವಾಯ ಗುರುದೇವನು ಶ್ರೀಕರಭಾಷ್ಯವನ್ನು ಪರಿಷ್ಕರಿಸಿ, ಅದನ್ನು ಎರಡು ಪ್ರತಿ ಮಾಡಿಸಿ, ಪರಿಶೀಲನೆಗಾಗಿ ಕಾಶ್ಮೀರದ 'ಜ್ಞಾನಪೀಠ'ಕ್ಕೆ ಕಳುಹಿಸಲು ಅಪ್ಪಣೆ ಮಾಡಿದರು. ಸಮಾ

ರಂಭಕ್ಕೆ ಆಗಮಿಸಿದ್ದ ಎಲ್ಲರಿಗೂ ಫಲಮಂತ್ರಾಕ್ಷತೆಗಳನ್ನು ಅನುಗ್ರಹಿಸಿದ ಗುರುವರನು ಶ್ರೀಶೈಲಾಭಿಮುಖವಾಗಿ ನಿರ್ಗಮಿಸಿದನು.

೬

## ಮಹಾಚಾರ್ಯ ಪ್ರಶಸ್ತಿ

ಜ್ಞಾನಪೀಠಕ್ಕೆ ಕಳುಹಿಸಿದ್ದ ಶ್ರೀಕರಭಾಷ್ಯವು ಕಾಶ್ಮೀರದ ಉದ್ದಾಮ ಪಂಡಿತರಿಂದ ಪರಿಶೀಲಿಸಲ್ಪಟ್ಟು ಗ್ರಂಥಕರ್ತರಿಗೆ 'ಮಹಾ ಚಾರ್ಯ' ಎಂಬ ಪ್ರಶಸ್ತಿಯನ್ನು ದೊರಕಿಸಿಕೊಟ್ಟಿತ್ತು. ಜ್ಞಾನಪೀಠದ ಅಪೇಕ್ಷೆಯಂತೆ ಶ್ರೀಪತಿ ಪಂಡಿತದಂಪತಿಗಳು ಶಂಭುಭಟ್ಟರೊಡನೆ ಕಾಶ್ಮೀರಕ್ಕೆ ತೆರಳಿ, ಅಭಿನಂದನ ಸಮಾರಂಭದಲ್ಲಿ ಭಾಗವಹಿಸಿದ್ದರು. ಅಲ್ಲಿಯ ಶ್ರೀಮನ್ಮ ಹಾರಾಜರವರ ಅಧ್ಯಕ್ಷತೆಯಲ್ಲಿ ಏರ್ಪಟ್ಟ ವಿದ್ವತ್ ಸಭೆಯಲ್ಲಿ ಶ್ರೀಪತಿ ಪಂಡಿತರಿಗೆ' ಮಹಾಚಾರ್ಯ' ಎಂಬ ಪ್ರಶಸ್ತಿಯನ್ನು ಅಮೂಲ್ಯ ಉಡು ಗೊರೆಯೊಡನೆ ನೀಡಿ ಗೌರವಿಸಲಾಯಿತು.

## ಭಕ್ತ ಸಂಘಗಳು

ಈ ಅವಧಿಯಲ್ಲಿ ವಿಶ್ವೇಶ್ವರಾಲಯದಲ್ಲಿ ಮಂಚಣ್ಣ–ವಿಶಾಲಾಕ್ಷಿಯರ ನೇತೃತ್ವದಲ್ಲಿ ಆರಂಭವಾಗಿದ್ದ ಶಿವಭಜನಾ ಸಂಘವು ಸಾಕಷ್ಟು ಜನರನ್ನು ಆಕರ್ಷಿಸಿತ್ತು. ಈಚೆಗೆ ಅದು ಪುರುಷರಿಗೆ ಮತ್ತು ಸ್ತ್ರೀಯರಿಗಾಗಿ ಪ್ರತ್ಯೇಕ ಅಸ್ತಿತ್ವ ಪಡೆದಿತ್ತು. ಪುರುಷರ ಭಕ್ತಸಂಘವು 'ವಿಶ್ವೇಶ್ವರ ಭಕ್ತ ಸಂಘ'ವೆಂದೂ, ಮಹಿಳೆಯರ ಭಕ್ತ ಸಂಘವು 'ಅನ್ನಪೂರ್ಣಾ ಮಹಿಳಾ ಮಂಡಳಿ'ಯೆಂದೂ ಹೆಸರಾಂತಿತ್ತು.

ಪುರುಷರ ಭಕ್ತ ಸಂಘದ ಕಾರ್ಯಕ್ರಮಗಳ ಮುಂದಾಳು ಮಂಚಣ್ಣ ಗಳು. ಅವರು ಆಗಾಗ್ಗೆ ವಿದ್ಯಾಪೀಠದ ವಿದ್ವಾಂಸರನ್ನು ಬರಮಾಡಿ ಕೊಂಡು ಭಾಷಣ, ಚರ್ಚೆ ಮತ್ತು ವಿಮರ್ಶಾತ್ಮಕ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದ್ದರು.

ಅನ್ನಪೂರ್ಣಾ ಮಹಿಳಾ ಮಂಡಳಿಯಲ್ಲಿ ಪುರಾಣ, ಶಿವಕಥೆ ಮತ್ತು ಲಲಿತಕಲೆಗಳ ಕಾರ್ಯಕ್ರಮಗಳು ಏರ್ಪಟ್ಟು ನಗರದ ಸ್ತ್ರೀ-ಪುರುಷರು ಜಾತಿ, ಮತ, ಅಂತಸ್ತುಗಳ ಅಂತರವಿಲ್ಲದೆ ಭಕ್ತಿಮಾರ್ಗದಲ್ಲಿ ಮುನ್ನಡೆಯುತ್ತಿದ್ದರು.

## ೮

## ರವಿ ಪೀಠದಲ್ಲಿ ಶಶಿ ಉದಯ

ಈಗ ಪಶುಪತಿಗೆ ಹನ್ನೆರಡು ವರ್ಷ ತುಂಬಿಬಂದಿತ್ತು. ಕೇವಲ ಆರೇಳು ವರ್ಷಗಳಲ್ಲಿ ಮಲ್ಲಿಕಾರ್ಜುನ, ಶ್ರೀಕಾಂತ, ಉರಿಲಿಂಗದೇವ, ಪರಮಶಿವ ಮುಂತಾದ ಹಿರಿಯ ವಿದ್ಯಾರ್ಥಿಗಳ ಜೊತೆಯಲ್ಲಿ ಪಶುಪತಿ ಅಪೂರ್ವ ಪ್ರಾಜ್ಞವಿದ್ಯಾರ್ಥಿ ಎನಿಸಿ ವಿದ್ಯಾಪೀಠದ ಎಲ್ಲ ಶಾಸ್ತ್ರವಿಭಾಗಗಳಲ್ಲಿ ಅಭ್ಯಾಸ ಮಾಡಿ, ಸ್ವಯಂ ಸಿದ್ಧವಾದ ಸಂಸ್ಕಾರಬಲದಿಂದ ಮಹಾಪ್ರಾಜ್ಞ ನೆನಿಸಿದ್ದ.

ಶಿವಾಚಾರ್ಯರು ಶ್ರೀಪತಿ ಪಂಡಿತ-ದಂಪತಿಗಳಿಗೆ ಸುದ್ದಿ ಕಳುಹಿಸಿ, 'ಪಶುಪತಿಯನ್ನು ತಮ್ಮ ಪೀಠದ ಉತ್ತರಾಧಿಕಾರಿಯನ್ನಾಗಿ ಸ್ವೀಕರಿಸಲಾಗಿದೆಯೆಂದೂ, ಇದೇ ಮಾಘ ಶುದ್ಧ ರಥಸಪ್ತಮಿಯ ಶುಭಮುಹೂರ್ತದಲ್ಲಿ ಪಟ್ಟಾಧಿಕಾರ ಮಹೋತ್ಸವವು ಏರ್ಪಟ್ಟಿದೆಯೆಂದೂ, ಅದಕ್ಕಾಗಿ ನೀವು ಪರಿವಾರದೊಂದಿಗೆ ಆಗಮಿಸಬೇಕೆಂದೂ' ಅಪ್ಪಣೆ ಮಾಡಿದ್ದರು.

ಗುರುವಿನ ಆದೇಶದಂತೆ ಶ್ರೀಪತಿ-ದಂಪತಿಗಳು, ಶಂಭುಭಟ್ಟರು ಮುಂತಾದವರೊಂದಿಗೆ ಶ್ರೀಶೈಲಕ್ಕೆ ಬಂದಿದ್ದರು. ಬೆಜವಾಡ, ಮುದಿಗೊಂಡ ಮುಂತಾದ ಕಡೆಗಳಿಂದ ಬಂಧು-ಬಾಂಧವರು ಬಂದು ನೆರೆದರು. ಕೇದಾರ, ಕಾಶಿ, ಉಜ್ಜಯಿನಿ ಮತ್ತು ಕೊಲ್ಲಿಪಾಕಿಗಳಿಂದ ಚತುರಾಚಾರ್ಯರೂ ದಯಮಾಡಿಸಿದ್ದರು.

ಕಾಶ್ಮೀರ, ನೇಪಾಳ, ಕಾಶಿ, ಬೆಜವಾಡ, ಕಂಚಿ ಮುಂತಾದ ಕಡೆಗಳಿಂದ ಅನೇಕ ರಾಜ-ಮಹಾರಾಜರು ಈ ಉತ್ಸವದಲ್ಲಿ ಪಾಲ್ಗೊಂಡಿದ್ದರು. ಭೈರಣ್ಣ, ಕಾಳಣ್ಣ ಮತ್ತು ವೀರಣ್ಣರು ಸಕ್ರಿಯವಾಗಿ ಭಾಗವಹಿಸಿದ್ದರು. ದುಗ್ಗವ್ವೆ ದಾಸೋಹ ವಿಭಾಗವನ್ನು ವಹಿಸಿಕೊಂಡಿದ್ದಳು.

ಶ್ರೀಮನ್ನಿರಂಜನ ಮೂರ್ತಿಗಳಲ್ಲಿ ಚಿನ್ಮೂಲಾದ್ರಿ ಮುಂತಾದ ಕಡೆಗಳಿಂದ ನಿರಾಭಾರಿ ಜಂಗಮ ಪುಂಗವರು ಚಿತ್ತೈಸಿದ್ದರು. ಪಟ್ಟಾಧಿಕಾರದ ಅಂಗವಾಗಿ ಶಿವದೀಕ್ಷೆ, ಮಹಾರುದ್ರಹೋಮಗಳು ವಿಧ್ಯುಕ್ತವಾಗಿ ನೆರವೇರಿದವು. 'ಶಿವಾಚಾರ್ಯರು ಸೂರ್ಯಸಾವರ್ಣಿ ಮಾಘ ಶುದ್ಧ ರಥಸಪ್ತಮಿ' ಶುಭಮುಹೂರ್ತದಲ್ಲಿ ಈ ನೂತನವಟುವಿಗೆ ಹಸ್ತಮಸ್ತಕ ಸಂಯೋಗ ಮಾಡಿ ಹಣೆಗೆ ಪಟ್ಟವನ್ನು ಬಂಧಿಸಿ, ಅವರನ್ನು ರತ್ನಖಚಿತ ಕನಕ ಸೂರ್ಯಸಿಂಹಾಸನದ ಮೇಲೆ ಕೂಡಿಸಿ, ಕಿರೀಟ ಧಾರಣ ಮಾಡಿದರು. ಕಾಶಿಯಲ್ಲಿ 'ಅಮಾವಾಸ್ಯೆಯ ದಿನ ನಡೆದ ಪೂರ್ಣ ಚಂದ್ರೋದಯ' ಪವಾಡದ ನೆನಪಿಗಾಗಿ ನೂತನ ಪಟ್ಟಾಭಿಷಿಕ್ತರಿಗೆ 'ಜಗದ್ಗುರು ಚಂದ್ರಗುಂಡ ದೇಶಿಕೇಂದ್ರ ಶಿವಾಚಾರ್ಯ'ರೆಂದು ನಾಮಕರಣ ಮಾಡಿದಾಗ ಮಂಗಳವಾದ್ಯಗಳು ಮೊಳಗಿದವು. ಜನ ಜಯಕಾರ ಮಾಡಿ ತಮ್ಮ ಹರ್ಷವನ್ನು ವ್ಯಕ್ತಪಡಿಸಿದರು.

ಸಮಾರಂಭದ ಕಡೆಯಲ್ಲಿ ಶಿವಾಚಾರ್ಯರು ಶ್ರೀಪತಿ ನಂಪತಿಗಳನ್ನು ಬರಮಾಡಿಕೊಂಡು ಅವರಿಗೆ ಮೊದಲೇ ಸೂಚಿಸಿದ್ದಂತೆ 'ಶರಣವ್ರತ'ವನ್ನು ಕರುಣಿಸಿದರು. ಈಗ ಗುರುಲಿಂಗಾರಾಧ್ಯ-ಭಾಗೀರಥಿ, ಶಂಭುಭಟ್ಟರು-ಶ್ರೀದೇವಿ ಮುಂತಾದವರಿಗೂ 'ಶರಣವ್ರತದೀಕ್ಷೆ' ನೀಡಿದರು.

ಶ್ರೀಪತಿಯು ಇಂಗಿತವನ್ನರಿತ ಗುರುದೇವನು ಅವರಿಗೆ "ನಿರಾಭಾರಿ ಯತಿದೀಕ್ಷೆ" ಯನ್ನು ಅನುಗ್ರಹಿಸಿ, 'ಹಂಸ'* ಮಂತ್ರವನ್ನು ಬೋಧಿಸಿದರು. ನೂತನ ಪಟ್ಟಾಭಿಷಿಕ್ತರಿಗೆ ಅನೇಕ ತತ್ತ್ವರಹಸ್ಯಗಳನ್ನು ಉಪದೇಶಿಸಿ, ಶಿಖಾಮುದ್ರೆ ಮುಂತಾದ ಪವಿತ್ರ ವಸ್ತುಗಳನ್ನು ಆಶೀರ್ವದಿಸಿ ಕೊಟ್ಟು, ತಾವು ಕದಳೀವನದ ಕಡೆ ನಡೆದರು.

* 'ನಿಶಬ್ದೇನೋಚ್ಯತೇ ಶಂಭುಃ ಹಂಸಹಂಸೇತಿ ಮಂತ್ರತಃ'
(ಶ್ರೀಕರಭಾಷ್ಯ-ಮಂಗಳಾಚರಣ)

## ೨೧

# ಹಂಸ–ಪರಮಹಂಸ

## ೧

ಶ್ರೀಶೈಲದಿಂದ ಹಿಂದಿರುಗಿ ವಾರಾಣಸಿಗೆ ಆಗಮಿಸಿದ ಶ್ರೀಪತಿ ಪಂಡಿತರು ವಿದ್ಯಾಪೀಠದ ಪ್ರಾಚಾರ್ಯ ಪದವಿಗೆ ತಮ್ಮ ಸ್ವಂತ ಇಚ್ಛೆಯಿಂದ ರಾಜೀನಾಮೆ ಇತ್ತು ಪದವಿಯಿಂದ ನಿವೃತ್ತರಾದರು. ಮಹಾವಿದ್ಯಾಪೀಠವು ಅವರನ್ನು ಬೀಳ್ಕೊಡುವ ಒಂದು ಮಹಾ ಸಮಾರಂಭವನ್ನು ಏರ್ಪಡಿಸಿತ್ತು.

ವಾರಾಣಸಿಯಲ್ಲಿ ಲಬ್ಧಪ್ರತಿಷ್ಠಿತರಾಗಿದ್ದ ಶ್ರೀಪತಿ ಪಂಡಿತರು "ನಿರಾಭಾರಿಯತಿದೀಕ್ಷೆ" ಪಡೆದು ತಮ್ಮ ಸ್ವಸ್ಥಳವಾದ ಬೆಜವಾಡಕ್ಕೆ ಬರುವರೆಂಬ ಸುದ್ದಿ ತಿಳಿದ ಕೂಡಲೇ ಬೆಜವಾಡದ ರಾಜ 'ಅನಂತಪಾಲ ಭೂಪಾಲ'ನು ಅವರನ್ನು ತುಂಬಾ ಗೌರವದಿಂದ ಬರಮಾಡಿಕೊಂಡನು.*

ಶ್ರೀಪತಿ ಪಂಡಿತರು ತಮ್ಮ ಹಿರಿಯ ಮಗ ಗೋಕರ್ಣನನ್ನು ವೃದ್ಧರಾದ ತಮ್ಮ ತಾಯಿ–ತಂದೆಗಳ ಸೇವೆಗೆ ನಿಯಮಿಸಿ ತಾವು ಮಲ್ಲೇಶ್ವರಾಲಯದಲ್ಲಿ ನೆಲೆಸಿದರು. ಕನಕಲತಾದೇವಿಯವರು ಶ್ರೀಮದಾಚಾರ್ಯರ ಪರಿಚರ್ಯೆಯಲ್ಲಿ ನಿರತರಾದರು.

---

* ಪಶ್ಚಿಮ ಚಾಳುಕ್ಯ ರಾಜಾ ತ್ರಿಭುವನಮಲ್ಲದೇವನ ದಂಡನಾಯಕ. ಕೊಂಡಪಲ್ಲಿಯ ನಾಡಪ್ರಭುವಾಗಿದ್ದ ಅವನು 'ಅನಂತಪಾಲ' (೧೦೯೮-೧೧೧೮) ನೆಂಬ ಹೆಸರಿನಿಂದ ಬೆಜವಾಡವನ್ನು ಆಳುತ್ತಿದ್ದ. (ಸಂ)

## ಪ್ರವಚನ

ಶ್ರೀಪತಿ ಪಂಡಿತರು ಪ್ರತಿದಿನ ಸಂಜೆ ಪ್ರವಚನವನ್ನು ನಡೆಸುತ್ತಿದ್ದರು. ಈ ಕಾರ್ಯಕ್ರಮವು ದೇವಾಲಯದ 'ಭೋಗಶೇಖರ ಮಂದಿರ'ದ ಸಭಾಂಗಣದಲ್ಲಿ ಏರ್ಪಡುತ್ತಿತ್ತು. ಆಚಾರ್ಯರು ತಮ್ಮ ಪ್ರವಚನದಲ್ಲಿ ಶಿವನ ಮತ್ತು ಶಿವಭಕ್ತರ ಶ್ರೇಷ್ಠತೆಯನ್ನು ಎತ್ತಿಹಿಡಿಯುತ್ತಿದ್ದುದು ಅಲ್ಲಿಯ ಕೆಲವರ ಅಸಹನೆಗೆ ಕಾರಣವೂ ಆಗಿತ್ತು! ಪ್ರವಚನಕ್ಕೆ ಬರಲು ಎಲ್ಲರಿಗೂ ಅವಕಾಶವಿತ್ತು. "ಜಾತಿ-ಕುಲ-ಅಂತಸ್ತಿನ ಅಂತರವಿರಲಿಲ್ಲ" ಎಂಬುದು ಅವರ ಅಸಹನೆಯನ್ನು ಮತ್ತಷ್ಟು ಕೆರಳಿಸಿತ್ತು.

ಒಂದು ದಿನ ಆಚಾರ್ಯರು ತಮ್ಮ ಪ್ರವಚನದಲ್ಲಿ ಶಿವದೀಕ್ಷೆಗೆ ಯಾರು ಅರ್ಹರು ಎಂಬ ಪ್ರಶ್ನೆ ಬಂತು ಆಗ ಆಚಾರ್ಯರು ಶಿವದೀಕ್ಷೆಗೆ 'ಶಿವಕೃಪೆ'(ಶಕ್ತಿಪಾತ) ಮುಖ್ಯಕಾರಣ. ಗುರು ಶಕ್ತಿಪಾತವನ್ನು ಗುರ್ತಿಸಿ ಅವನಿಗೆ ಶಿವದೀಕ್ಷೆ ನೀಡುತ್ತಾನೆ. ಅದಕ್ಕೆ ಜಾತಿ-ಕುಲ-ಲಿಂಗ-ಕಾಯಕ (ಉದ್ಯೋಗ) ಮುಂತಾದುವು ಅಡ್ಡಬರುವುದಿಲ್ಲ. ಶಿವನು ಭಕ್ತಿಸುಲಭನು ಎಂದು ಹೇಳಿ, ಬೇಡರ ಕಣ್ಣಪ್ಪನ ಉದಾಹರಣೆ ನೀಡಿದರು.

ಆಗ ಸಭಾಸದರಲ್ಲೊಬ್ಬರು ಎದ್ದು ನಿಂತು—

"ಸ್ವಾಮಿ, ಭಕ್ತರು ಯಾವುದೇ ಕಾಯಕದಲ್ಲಿದ್ದರೂ ಶಿವದೀಕ್ಷೆ ಪಡೆಯಬಹುದೆ ?" ಎಂದು ಕೇಳಿದರು.

ಆಚಾರ್ಯರೆಂದರು— "ನೀವು ತಮಿಳು ದೇಶದ ಭಕ್ತರ ಕಥೆಗಳಲ್ಲಿ ಮಾದರ ಚನ್ನಯ್ಯನ ಕತೆ ಕೇಳಿಲ್ಲವೆ ? ಚೋಳರಾಜ ಮಹಾಶಿವಭಕ್ತ. ಅವನು ಪ್ರತಿದಿನ ಜಂಗಮರನ್ನು ಕರೆದು ದಾಸೋಹ ಮಾಡದೆ ಪ್ರಸಾದ ಸೇವಿಸುತ್ತಿರಲಿಲ್ಲ. ಆದರೆ ಒಂದು ದಿನ ರಾಜನಿಗೆ ಯಾವ ಜಂಗಮ ಮೂರ್ತಿಯೂ ಪ್ರಸಾದಕ್ಕೆ ಬರಲಿಲ್ಲ. ಅಷ್ಟು ಹೊತ್ತಿಗೆ ಶಿವನು ಜಂಗಮ ರೂಪದಿಂದ ರಾಜನಿಗೆ ಕಾಣಿಸಿಕೊಂಡ. ರಾಜ ಪ್ರಸಾದಕ್ಕೆ ಬಿನ್ನೈಸಿದಾಗ ಅವನೆಂದ —

"ರಾಜನ್, ಈಗ ನಾನು ನಿನ್ನ ಲಾಯದಲ್ಲಿರುವ ಸೇವಕ ಚನ್ನಯ್ಯನ ಮನೆ ಅಂಬಲಿ ಕುಡಿದು ಬಂದೆ. ಅದು ತುಂಬಾ ರುಚಿಯಾಗಿತ್ತು. ಹೊಟ್ಟೆ ತುಂಬಿದೆ. ಇನ್ನು ನಿನ್ನ ಮನೆಯ ಪ್ರಸಾದ ಸೇರುವುದಿಲ್ಲ!" ಎಂದ ಕತೆ ಕೇಳಿ ರಾಜ ಅವಾಕ್ಕಾದ! ಆದ್ದರಿಂದ ಶಿವ ಚನ್ನಯ್ಯನ ಭಕ್ತಿಗೆ ಒಲಿದನೇ ಹೊರತು ರಾಜಭೋಜನಕ್ಕೆ ಆಸೆ ಪಡಲಿಲ್ಲ!"

## ಕಾಯಕವೇ ಕಾಮಧೇನು !

ಆಚಾರ್ಯರ ಮಾತು ಕೇಳಿದ ವ್ಯಕ್ತಿ ಮುಂದುವರಿದು ಪ್ರಶ್ನಿಸಿದ—

"ಸ್ವಾಮಿ, ಹಾಗಾದರೆ ಮೊಚ್ಚೆ ಹೊಲಿಯುವವನೂ ಶಿವದೀಕ್ಷೆಗೆ ಅರ್ಹನೆ ?"

"ಮೊಚ್ಚೆ ಹೊಲಿಯುವುದೂ ಒಂದು ಕಾಯಕ. ಗುರು-ಲಿಂಗ-ಜಂಗಮ ದಾಸೋಹಕ್ಕಾಗಿ ಮಾಡುವ ಪ್ರತಿಯೊಂದು ವೃತ್ತಿಯೂ ಕಾಯಕ ! ಆಚಾರ್ಯ ರೇಣುಕರು 'ವೃತ್ತಿಶ್ಚೈತನ್ಯರೂಪಿಣಿ'* ಎಂದಿದ್ದಾರೆ. ಮಾನವನು ಯಾವುದೇ ವೃತ್ತಿ (ಕಾಯಕ) ಯಲ್ಲಿದ್ದರೂ ಅವನು ಶಿವಚಿಂತನದಲ್ಲಿ ತೊಡಗಿರಬಹುದು. ಉದ್ಯೋಗವು ಸಾಧಕನಿಗೆ ಅಂತರ್ಬಾಹ್ಯಚೈತನ್ಯವನ್ನಿತ್ತು, ಇಷ್ಟಾರ್ಥವನ್ನು ನೀಡುವುದರಿಂದ ಕಾಯಕವನ್ನು 'ಕಾಮಧೇನು' ಎಂದು ಕರೆಯಲಾಗಿದೆ !

ಈ ದೃಷ್ಟಿಯಿಂದ ಸತ್ಕಾಯಕವು ಶಿವದೀಕ್ಷೆಗೆ ಸಾಧಕವೇ ಹೊರತು, ಅಡ್ಡಿ ಬರುವುದಿಲ್ಲ! ಎಂದರು.

ಎದುರಾಳಿಗಳು ಮುಂದೆ ಮಾತನಾಡಲಿಲ್ಲ! ಪ್ರತಿನಿತ್ಯವೂ ಪ್ರವಚನಕ್ಕೆ ಬರುತ್ತಿದ್ದವರಲ್ಲಿ ಅನೇಕರು ತಮಗೆ ಶಿವದೀಕ್ಷೆ ನೀಡಬೇಕೆಂದು

---

* (ಸಿ.ಶಿ.ಪರಿ. ೧೯-೬೯)

ಆಚಾರ್ಯರಲ್ಲಿ ಬಿನ್ನೈಸುತ್ತಿದ್ದರು. ಅವರಲ್ಲಿ ಮೊಚ್ಚಿಗ ಮರುಳಯ್ಯನೂ ಒಬ್ಬ. ಪ್ರತಿದಿನವೂ ಮರುಳಯ್ಯ, ಅವನ ಹೆಂಡತಿ ದ್ಯಾಮವ್ವ ಮತ್ತು ಮಗ ಕಾಳ ಎಂಬುವರು ಪ್ರವಚನದಲ್ಲಿ ಅತ್ಯಂತ ಶ್ರದ್ಧಾಭಕ್ತಿಗಳಿಂದ ಭಾಗವಹಿಸಿ ಸುಸಂಸ್ಕೃತರಾಗಿದ್ದರು.

ಆಚಾರ್ಯರು ಅವರ ಮನೆಗೆ ತೆರಳಿ ಮೂವರಿಗೂ ಶಿವದೀಕ್ಷೆ ನೀಡಿ ಅವರಲ್ಲಿಯೇ ಪ್ರಸಾದ ಸ್ವೀಕರಿಸಿ ಹಿಂದಿರುಗಿದರು. ಇದನ್ನು ಕಂಡ ಎದುರಾಳಿಗಳು ಗುಲ್ಲೆಬ್ಬಿಸಿದರು. "ಇವರು ಮೊಚ್ಚಿ ಮರುಳಯ್ಯನ ಮನೆಯಲ್ಲಿ ಉಂಡುಬಂದು ಜಾತಿಸಾಂಕರ್ಯವನ್ನು ಮಾಡಿದ್ದಾರೆ!" ಎಂದು ರಾಜನಿಗೆ ದೂರಿತ್ತು, ಆಚಾರ್ಯರನ್ನು ಸಮಾಜದಿಂದ ಬಹಿಷ್ಕರಿಸಬೇಕೆಂದು ಒತ್ತಾಯಿಸಿದರು.

ರಾಜನು ಆಚಾರ್ಯರ ಬಳಿಗೆ ಬಂದು ವಿಚಾರಣೆ ನಡೆಯಿಸಿದನು. ಆಚಾರ್ಯರು ಹೇಳಿದರು—

"ರಾಜನ್, ನಾವು ಜಾತಿಸಾಂಕರ್ಯವನ್ನು ಮಾಡಿಲ್ಲ. ಮೊಚ್ಚಿ ಕಾಯಕದ ಮರುಳಯ್ಯನ ಕುಟುಂಬವು 'ಶಕ್ತಿಪಾತ'ವಾಗಿ ಶಿವಕೃಪೆಗೆ ಪಾತ್ರವಾಗಿದ್ದುದರಿಂದ ಅವರಿಗೆ ಶಿವದೀಕ್ಷೆಮಾಡಿದೆವು. ಶಿವದೀಕ್ಷೆ ಪಡೆದವನ ಹಿಂದಿನ ಪ್ರಾಕೃತಜಾತಿ ಧರ್ಮಗಳು 'ಸುಟ್ಟ ಮೇಲೆ ಸೌದೆಗಳಲ್ಲಿ ಹಿಂದಿನ ರೂಪವು ಹೇಗೆ ಇರುವುದಿಲ್ಲವೋ' ಅದರಂತೆ ಶಿವಸಂಸ್ಕಾರ ಪಡೆದವರಲ್ಲಿ ಹಿಂದಿನ ಜಾತ್ಯಾದಿಗಳು ನಶಿಸುತ್ತವೆ*" ಎಂದಾಗ ಎದುರಾಳಿಗಳ ಬಾಯಿ ಕಟ್ಟಿತು.

## ಅಗ್ನಿಬಂಧನ ಪವಾಡ

ಅವರು ರಾಜನನ್ನು ಒತ್ತಾಯಿಸಿ ಶ್ರೀಪತಿಪಂಡಿತಾರಾಧ್ಯರಿಗೆ ನಗರದಲ್ಲಿ ನೀರು-ಬೆಂಕಿ ಕೊಡದಂತೆ ರಾಜಾಜ್ಞೆ ಮಾಡಿಸಿದರು. ಇದರಿಂದ ಕುಪಿತರಾದ ಆಚಾರ್ಯರು ದೇವಾಲಯದ ಆಗ್ನೇಯ ದಿಕ್ಕಿನಲ್ಲಿದ್ದ ಬನ್ನಿ

---

* ಶಿವಸಂಸ್ಕಾರ ಯುಕ್ತೇಷು ಜಾತಿಭೇದೋ ನ ವಿದ್ಯತೇ ॥
ಕಾಷ್ಠೇಷು ವಹ್ನಿದಗ್ಧೇಷು ಯಥಾ ರೂಪಂ ನ ವಿದ್ಯತೇ ।
—ಸಿ. ಶಿ. ೧೦-೩೭

ಮರದ ಬಳಿಗೆ ಹೋಗಿ, ಒಂದು ರೇಷ್ಮೆ ವಸ್ತ್ರದಲ್ಲಿ ಅಗ್ನಿಯನ್ನು ಆಕರ್ಷಿಸಿ ಪ್ರಮಥರನ್ನು ನೆನೆದು—

"ಎಲೈ ಅಗ್ನಿಯೆ, ನೀನು ಶಿವಭಕ್ತರ ಮನೆಗಳನ್ನು ಬಿಟ್ಟು ಶಿವ ದ್ವೇಷಿಗಳ ಮನೆಗಳಲ್ಲಿ ಇರಕೂಡದು ! ಇದು ಶಿವನ ಆಜ್ಞೆ ! ಶಿವಾಜ್ಞೆಯನ್ನು ಮೀರಿದರೆ ನಿನಗೆ ಹಿಂದೆ ವೀರಭದ್ರನಿಂದ ಆದ ಶಿಕ್ಷೆಯನ್ನು ನೆನೆ!" ಎಂದು ಎಚ್ಚರಿಸಿ ಬನ್ನಿಮರದ ಕೊಂಬೆಯೊಂದಕ್ಕೆ ಕಟ್ಟಿಸಿದರು.

ಆಚಾರ್ಯರ ಆಜ್ಞೆಯಂತೆ ಪರವಾದಿಗಳ ಮನೆಗಳಲ್ಲಿ ಒಂದು ವಾರದವರೆಗೆ ಬೆಂಕಿ ಉರಿಯಲಿಲ್ಲ. ಇದರಿಂದ ವಿಹ್ವಲರಾದ ಪರವಾದಿಗಳು ಮತ್ತೆ ರಾಜನಲ್ಲಿ ಹೋಗಿ, ತಾವು ಮಾಡಿದ ಅಪರಾಧಕ್ಕಾಗಿ ಶ್ರೀ ಗುರು ಶ್ರೀಪತಿ ಪಂಡಿತಾರಾಧ್ಯರ ಕ್ಷಮೆ ಬೇಡುವುದಾಗಿ ವಿನಂತಿಸಿದರು.

ಮಹಾರಾಜರ ಸಮ್ಮುಖದಲ್ಲಿ ಪರವಾದಿಗಳು ಶ್ರೀಮದಾಚಾರ್ಯರಿಗೆ ಶರಣಾದರು. ಆಚಾರ್ಯರು ಅವರಿಗೆ ಕ್ಷಮಾದಾನ ಮಾಡಿದರು.

## ೨

## ಹಂಸ–ಪರಮಹಂಸ

ಅಂದಿನಿಂದ ನಿರಾಭಾರಿ ಯತಿಜನಪರಿವೃಢರಾದ ಶ್ರೀಪತಿಪಂಡಿತರಲ್ಲಿ ಎದುರಾಳಿಗಳು ಶಿಷ್ಯವೃತ್ತಿಯನ್ನು ಸ್ವೀಕರಿಸಿ ಶಿವದೀಕ್ಷೆ ಪಡೆದರು.

ಯತಿಶ್ರೇಷ್ಠರೆಂದು ಹೆಸರಾಂತ ಶ್ರೀಪತಿಪಂಡಿತಾರಾಧ್ಯರ ಸಾಧನೆ ದಿನೇ ದಿನೇ ಬೆಳೆಯುತ್ತಿತ್ತು. ಶ್ರೀಪತಿಪಂಡಿತರು ಯತಿಯು ಏರಲಿರುವ 'ಕುಟೀಚಕ ಬಹೂದಕ' ಹಂತಗಳನ್ನು ಹತ್ತಿ 'ಹಂಸ'ಸ್ಥಿತಿಗೆ ಬಂದಿದ್ದರು. ಆಗ ಅವರ ಶಿಷ್ಯನೂ ಮಂಚಣ್ಣಗಳ ಪುತ್ರರೂ ಆದ ಉರಿಲಿಂಗದೇವರು ಶ್ರೀಮದಾಚಾರ್ಯರನ್ನು ಕುರಿತು ಪ್ರಶ್ನಿಸಿದರು.

"ಗುರುದೇವಾ, 'ಹಂಸ' ಎಂದರೇನು ?"

"ಅದೊಂದು ಮಂತ್ರ ; ಮಾತ್ರವಲ್ಲ ಆದು ಮಹಾಮಂತ್ರ ! ಅದಕ್ಕೆ 'ಅಜಪಾಗಾಯತ್ರಿ' ಎಂಬ ಹೆಸರಿದೆ. ಅದೊಂದು ಸಾಮಾನ್ಯ ವಿದ್ಯೆಯಲ್ಲ : ಅದು ಮಹಾವಿದ್ಯೆ !

ಪ್ರತಿಯೊಂದು ಜೀವಿಯೂ 'ಹಂಸ' ಜಪ ಮಾಡುತ್ತದೆ. ಆದರೆ ಎಷ್ಟೋ ಜೀವಿಗಳಿಗೆ ಅದರ ಪರಿಜ್ಞಾನವಿರುವುದಿಲ್ಲ. ಈ ಮಂತ್ರವು ಜೀವನದಲ್ಲಿ ಹಾಸುಹೊಕ್ಕಾಗಿದೆ. ದಿನನಿತ್ಯವೂ ನಾವು ಉಸಿರಾಡುವುದು ಹಂಸಮಂತ್ರವೇ ! ಪಂಚಪ್ರಾಣಗಳಿಗೆ ಹಂಸಮಂತ್ರವನ್ನು ಬಿಟ್ಟರೆ ಇರಲು ಇಂಬಿಲ್ಲ ! ಜೀವನ ಅಂಗಾಂಗಗಳಲ್ಲಿ ಚೇತನ ಮೂಡುವುದು ಈ ಮಂತ್ರ ದಿಂದ ! ಹಂಸಮಂತ್ರವು ಸಿದ್ಧಿಸದ ಮೇಲೆ ಮಾನವನಿಗೆ ಪಾವಿತ್ರ್ಯವೇ ಇಲ್ಲ !"

"ಮುಕ್ತಿಯಲ್ಲಿ ಹಂಸಮಂತ್ರದ ಸ್ಥಾನವೇನು ?"

"ಬ್ರಹ್ಮೋಪನಿಷತ್ತಿನಲ್ಲಿ ಹೇಳಿರುವಂತೆ ತತ್ತ್ವಸಾಕ್ಷಾತ್ಕಾರಕ್ಕೆ ಎಷ್ಟೋ ದಾರಿಗಳಿವೆ. ಆದರೆ ಅವುಗಳಲ್ಲಿ ಹಂಸಮಂತ್ರವು ಮುಖ್ಯವಾದದ್ದು. ಅದು ಶರೀರ, ಪ್ರಾಣ, ಆತ್ಮವಿಕಾಸಗಳಲ್ಲಿ ಪರಾಮಂತ್ರವೆನಿಸಿದೆ. ಅದನ್ನು ತಿಳಿದವನು ಶಿವತಾದಾತ್ಮ್ಯವನ್ನು ಹೊಂದುತ್ತಾನೆ."

"ಹಂಸಮಂತ್ರವನ್ನು ಜಪಿಸಲು ಅಧಿಕಾರಿ ಯಾರು ?"

"ಹಂಸಮಂತ್ರಜಪಕ್ಕೆ ಅವನು ಇವನು ಎಂಬ ಬಿರುಕಿಲ್ಲ. ಅಲ್ಲಿ-ಇಲ್ಲಿ ಎಂಬ ಕವಲಿಲ್ಲ. ಯಾರಾದರೂ ಎಲ್ಲಿಯಾದರೂ ಅದನ್ನು ಅನುಸಂಧಾನ ಮಾಡಬಹುದು. ಈ ಮಂತ್ರವು ಎಲ್ಲ ಜೀವಿಗಳಲ್ಲಿಯೂ ಪ್ರಾಣರೂಪವಾಗಿದೆ. ಶ್ವಾಸೋಚ್ಛ್ವಾಸಗಳು ಅದರ ಕ್ರಿಯೆ. ಇದನ್ನು 'ಪ್ರಾಕೃತ ಪ್ರಾಣಾಯಾಮ' ಎಂದು ಕರೆಯಲಾಗಿದೆ. ಹಂಸಮಂತ್ರವು ಎಲ್ಲ ಮಂತ್ರಗಳ ಕೇಂದ್ರ. ಅದು ಪ್ರೇರಕ ಮತ್ತು ಪೂರಕ. ಜೀವನಕ್ಕೆ ಪ್ರಾಣ (ವಾಯು)ವು ಅಗತ್ಯವಾಗಿರುವಂತೆ ಹಂಸಮಂತ್ರವೂ ಅತ್ಯಗತ್ಯ. ಅದಿಲ್ಲದಲ್ಲಿ ಆನಂದವೆಲ್ಲಿಯದು ?

ಹಂಸಮಂತ್ರ ಸಾಧನೆಯಲ್ಲಿ ಗುರುವಿನ ಪಾತ್ರ ಹಿರಿದು. ಗುರುವಿನ ಅನುಗ್ರಹವಿಲ್ಲದೆ ಈ ಮಂತ್ರ ಸಿದ್ಧಿಸದು. ಮರವೆಯಲ್ಲಿದ್ದ ಈ ಮಂತ್ರವನ್ನು ಅರಿವಿಗೆ ತಂದುಕೊಡುವವನೇ ಶ್ರೀಗುರು. ಹಂಸಮಂತ್ರದ ನೀತಿ ರೀತಿ ಕಲೆಗಳು ಬೋಧವಾಗುವುದು ಗುರುವಿನ ಕೃಪೆಯಿಂದ. ಈ ಮಂತ್ರದ

ಅನುಷ್ಠಾನವಿಲ್ಲವೆ ಜೀವನ ಬೆಳಗದು. ಅಜ್ಞಾನ ಅಳಿಯದು. ಅದು ಪರಂಜ್ಯೋತಿ !"

"ಹಂಸಮಂತ್ರ ಜಪದಿಂದ ಲಭಿಸುವ ದೃಷ್ಟಫಲಗಳು ಯಾವುವು ?"

"ಹಂಸಮಂತ್ರವನ್ನು ಜಪಿಸುವವನಿಗೆ ಪೂಜ್ಯತೆಯು ಅವನು ಬಯಸದೆಯೇ ದೊರೆಯುತ್ತದೆ. ಬುದ್ಧಿ-ಸಿದ್ಧಿಗಳು ಕೈವಶವಾಗುತ್ತವೆ. ಸುಖ ಸಂತೋಷ ಆರೋಗ್ಯ ಭಾಗ್ಯಗಳು, ಆಯುಷ್ಯಾಭಿವೃದ್ಧಿಗಳು ಇದರ ದೃಷ್ಟ ಫಲಗಳು.

ಹಂಸಮಂತ್ರಾಭ್ಯಾಸದಿಂದ ಶರೀರವು ಆರೋಗದೃಢಕಾಯವಾಗುತ್ತದೆ. ದಿವ್ಯತೇಜಸ್ಸು ಮೂಡುತ್ತದೆ. ಮನಸ್ಸು ನಿರ್ಮಲವಾಗುತ್ತದೆ. ಪ್ರಾಣವಾಯುವಿನ ಗತಿ ಶರೀರರಾಗಕ್ಕೆ ಮೂಲ. ಅಪಾನದ ಗತಿ ರೋಗಕ್ಕೆ ಕಾರಣ. ಈ ಪ್ರಾಣ ಮತ್ತು ಅಪಾನಗಳೆರಡನ್ನು ತಡೆದು ಹಂಸವೆಂಬ ಪ್ರಣವಾಗ್ನಿಯಲ್ಲಿ ಹೋಮಮಾಡಿದಾಗ ಜೀವನು ಪರಿಶುದ್ಧನಾಗುತ್ತಾನೆ."

"ಹಂಸಮಂತ್ರದ ಸ್ವರೂಪವೇನು ?"

"ಹಂಸಮಂತ್ರವೇ ಪರಮ ಸತ್ಯ. ಪರಮ ಶಕ್ತಿಯೂ ಅದೇ. ಅದು ಪರಾವಾಕ್ ! ಅದೇ ರುದ್ರ ! ಎಲ್ಲ ದೇವತೆಗಳ ಕೇಂದ್ರಬಿಂದುವೆನಿಸಿರುವ ಮಹೇಶ್ವರನು ಹಂಸಮಂತ್ರವೇ !

ಶರೀರದೊಳಗಿನ ಪ್ರಾಣವಾಯುವು ಹಕಾರದಿಂದ ಹೊರಬರುತ್ತದೆ. ಸಕಾರದಿಂದ ಅದು ಒಳಕ್ಕೆ ಹೋಗುತ್ತದೆ. ಜೀವನು 'ಹಂಸ ಹಂಸ' ಎಂದು ಸದಾ ಜಪಿಸುತ್ತಿರುತ್ತಾನೆ. ಮಾನಸಸರೋವರದಲ್ಲಿ ರಾಜಹಂಸವು ಮೆರೆಯುವಂತೆ ಹಂಸಮಂತ್ರವು ಮನಸ್ಸೆಂಬ ಸರಸ್ಸಿನಲ್ಲಿ ವಿಹರಿಸುತ್ತದೆ. ಹಂಸಮಂತ್ರಜಪಸಂಖ್ಯೆ ಒಂದು ದಿನಕ್ಕೆ (ಹಗಲು-ರಾತ್ರಿ ಸೇರಿ) ೨೧,೬೦೦ ಆಗುತ್ತದೆ.

ಹಂಸಮಂತ್ರ ಗತಿಯನ್ನು ಗುರುಮುಖದಿಂದ ಚನ್ನಾಗಿ ತಿಳಿದು ಜಪಿಸಿದರೆ ಹೃದಯಕಮಲವು ಅರಳುತ್ತದೆ. ಆಗ ಜಪಿಸುವವನ ಸಂಕಲ್ಪ ಸಿದ್ಧಿಸುತ್ತದೆ. ಆಗ ಅವನು ಆಡಿದ ಮಾತು ಜ್ಯೋತಿರ್ಲಿಂಗವಾಗುತ್ತದೆ.

ಈ ಮಂತ್ರದಲ್ಲಿ ಕ್ರಿಯಾಂಗವು ಸಹಜವಾಗಿಯೇ ಇದೆ. ಜ್ಞಾನಾಂಗವನ್ನು ಮಾನವನು ಅದರ ಜೊತೆಗೆ ಬೆರೆಸಬೇಕು. ಆಗ ಅದು ತನಗೆ ತಾನೇ ರೇಚಕ-ಪೂರಕ ಜಪವಾಗುತ್ತದೆ. ಇವೆರಡನ್ನು ನಿಲ್ಲಿಸಿ ಕೇವಲ ಕುಂಭಕದಲ್ಲಿ ನಿಂದಾಗ ಅಮೃತತತ್ವ ಪ್ರಾಪ್ತಿ!"

"ಹಂಸಮಂತ್ರದ ಸಾಧನ ಕ್ರಮವು ಹೇಗೆ?"

"ಬ್ರಹ್ಮವಿದ್ಯೋಪನಿಷತ್ತಿನ ಪ್ರಕಾರ ಹಂಸಮಂತ್ರವು ಸಾಮಾನ್ಯವಾದದ್ದಲ್ಲ; ಅದು ಸಚ್ಚಿದಾನಂದಸ್ವರೂಪ. ಆತ್ಮವು ಪ್ರಸಾದಮಯ.

ಹಂಸ ಮಂತ್ರದಲ್ಲಿರುವ ಹಕಾರವು ಸತ್, ಸಕಾರವು ಚಿತ್, ಶೂನ್ಯ (ಸೊನ್ನೆ)ವು ಆನಂದರೂಪ. ಸಹಜವಾದ ರೇಚಕ ಪೂರಕಗಳನ್ನು ನಿಲ್ಲಿಸಿ, ಕುಂಭಕವನ್ನು ಸ್ಥಿರಗೊಳಿಸಿ ನಾಭಿಯ ಕಂದ ಮೂಲದಲ್ಲಿ ಪ್ರಾಣಾಪಾನಗಳೆರಡನ್ನೂ ಕೂಡಿಸಿ ಧ್ಯಾನಿಸಬೇಕು. ಆಗ ಆ ಸಾಧಕನ ಮಸ್ತಕದಲ್ಲಿರುವ ಅಮೃತವನ್ನು ಆಸ್ವಾದಿಸಿದ ಅನುಭವವಾಗುತ್ತದೆ.

ಹೃದಯದಲ್ಲಿರುವ ಪ್ರಾಣಲಿಂಗಕ್ಕೆ ಅದು ಅಮೃತಾಭಿಷೇಕ. ಆ ಪೂಜೆಯಲ್ಲಿ ಜ್ಞಾನವೇ ದೀಪಾರತಿ. ಹಂಸ ಮಂತ್ರವನ್ನು ಜಪಿಸುವುದರಿಂದ ಮುಪ್ಪು-ಮೃತ್ಯು ರೋಗ ರುಜಿನಗಳು ದೂರವಾಗುತ್ತವೆ. ಮುನ್ಮುಂದೆ ಅಣಿಮಾ ಮಹಿಮಾ - ಲಘಿಮಾ-ಗರಿಮಾ-ಪ್ರಾಪ್ತಿ-ಪ್ರಾಕಾಮ್ಯ – ವಶಿತ್ವ ಮತ್ತು ಈಶತ್ವ ಎಂಬ ಅಷ್ಟಸಿದ್ಧಿಗಳು ಸಿದ್ಧಿಸುತ್ತವೆ."

"ಹಂಸಮಂತ್ರದ ಪಂಚಪ್ರಸಾದಗಳು ಯಾವುವು?"

"ಹಕಾರವು ಶುದ್ಧಪ್ರಸಾದ. ಹ್ರಾಂಕಾರವು ಮೂಲಪ್ರಸಾದ, ಹಂ ತತ್ತ್ವಪ್ರಸಾದ, ಹೌಂ ಆದಿಪ್ರಸಾದ, ಹಂಸಃ ಆತ್ಮಪ್ರಸಾದ. ಈ ಐದೂ ಹಂಸಪ್ರಸಾದಮಂತ್ರಗಳೆಂದೂ ಶಿವಮಂತ್ರಗಳೆಂದೂ ಹೇಳಲಾಗಿದೆ. ಏಕೆಂದರೆ ಇವು ಶಿವಬೀಜ. ಹಂಸಮಂತ್ರವು "ಪ್ರಾಕೃತಪ್ರಾಣಾಯಾಮ ಎಂದು ವರ್ಣಿತವಾಗಿದೆ."

"ಸೋऽಹಂ" ಎಂಬುದು ವೈಕೃತ ಪ್ರಾಣಾಯಾಮ. ಅದನ್ನು ರೇಣುಕರು 'ಹಂಸರೂಪಂ ಪರಾತ್ಮಾನಂ ಸೋऽಹಂ ಭಾವೇನ ಭಾವಯೇತ್!' ಎಂದಿದ್ದಾರೆ. ಎಂದರೆ ನಾಸಿಕದಿಂದ ನಾಭಿಯವರೆಗೆ ಇಡಾ ಮತ್ತು ಪಿಂಗಳ ನಾಡಿಗಳಿಂದ ಆಡುವ ಹಂಸಮಂತ್ರವು ಸದ್ರೂಪ ಶಿವನನ್ನು ಅರಿಯುವುದು ಸ್ಥೂಲಾಂಗ. ಈ ರೇಚಕ ಪೂರಕಗಳನ್ನು ನಿಲ್ಲಿಸಿ, ನಾಭಿಯ ಕಂದ ಮೂಲದಲ್ಲಿ ಕುಂಭಕ ಮಾತ್ರದಿಂದ ಚಿದ್ರೂಪ ಶಿವನನ್ನು ಆರಾಧಿಸುವುದು ಸೂಕ್ಷ್ಮಾಂಗ. ಇದು ಹೃದಯದಲ್ಲಿ ಲಭ್ಯವಾದ ಸೂಕ್ಷ್ಮಸಿದ್ಧಿಯ ಬಲದಿಂದ ಸುಷುಮ್ನೆಯ ಮೂಲಕ ಮೇಲಕ್ಕೆ ಹೋಗಿ ಶಿರದ ಅರಮನೆಯಲ್ಲಿ ನೆಲೆನಿಂದು ಆನಂದರೂಪ ಪರಾತ್ಮ ಶಿವನಲ್ಲಿ ಸಮರಸವಾಗುವುದು ಕಾರಣಾಂಗ. ಸೂಕ್ಷ್ಮಾಂಗ ಸಾಧನೆಯಲ್ಲಿ ಹಂಸ ಮಂತ್ರದ ಮುಂದಿನ ಅಕ್ಷರವು ಹಿಂದಾಗಿ (ವೈಕೃತ ಪ್ರಾಣಾಯಾಮ) 'ಸೋऽಹಂ' ಎನಿಸುತ್ತದೆ.

"ಹಂಸ"ವೆಂಬ ಸ್ಥೂಲಮಂತ್ರಕ್ಕೆ 'ಸೋऽಹಂ' ಎಂಬುದು ಸೂಕ್ಷ್ಮರೂಪ. ಇದರ ಧ್ಯಾನವೇ ಕಾರಣಾಂಗದ ಕರ್ತವ್ಯ. ಇದು ಅಷ್ಟು ಸುಲಭವಲ್ಲ"

"ಇದನ್ನು ಕಾರ್ಯಗತ ಮಾಡುವುದು ಹೇಗೆ ?"

"ಹಂಸ" ಮತ್ತು "ಸೋऽಹಂ" ಮಂತ್ರಗಳ ಮರ್ಮವು ಮನವರಿಕೆಯಾಗಬೇಕಾದರೆ ಗುರುವಿನ ಮಾರ್ಗದರ್ಶನ ಅಗತ್ಯ; ಇಲ್ಲದಿದ್ದರೆ ಇವೆರಡರ ತರ-ತಮ ಭಾವಗಳು ತಿಳಿಯುವುದಿಲ್ಲ. 'ಹಂಸ'ವೆಂಬ ಸ್ಥೂಲ-ಮಂತ್ರದಲ್ಲಿ 'ನಾನೇ ಅವನು' ಎಂಬ ಅರ್ಥವಿದೆ. 'ಸೋऽಹಂ' ಎಂಬ ಸೂಕ್ಷ್ಮಮಂತ್ರದಲ್ಲಿ 'ಅವನೇ ನಾನು' ಎಂಬ ಅರ್ಥವಿದೆ. "ನಾನೇ ಅವನು, ಅವನೇ ನಾನು" ಎಂಬುದು ಲೌಕಿಕ ಕ್ರಮ. ವೈದಿಕದಲ್ಲಿ 'ನಾನೇ ಬ್ರಹ್ಮ' (ಅಹಂ ಬ್ರಹ್ಮಾಸ್ಮಿ) 'ಅವನೇ ನೀನು' ಆಗಿರುವೆ (ತತ್ತ್ವಮಸಿ) ಎಂಬುದು ಇನ್ನೂ ಸ್ಥೂಲವೆಂದು ಬೇರೆ ಹೇಳಬೇಕಾಗಿಲ್ಲ.

## ಹಂಸ ಮತ್ತು ಸೋऽಹಂ ಮಂತ್ರಗಳಿಗಿರುವ ಅಂತರ

ಹಂಸ ಮಂತ್ರವು ವೈದಿಕವಾದ್ದರಿಂದ ಅದು ಸ್ಥೂಲ. ಆದರೆ ಹಂಸ ಮಂತ್ರದ ಸೂಕ್ಷ್ಮಾಂಗವಾದ 'ಸೋऽಹಂ' ಎಂಬುದು ವೈಕೃತ ಪ್ರಾಣಾಯಾಮ ಎಂದು ನಿರ್ಧರಿಸಿದ ಹೆಮ್ಮೆ ಶಿವಾಗಮಕ್ಕೆ ಸಲ್ಲಬೇಕು. ಪ್ರಾಕೃತ

ಪ್ರಾಣಾಯಾಮ ಮತ್ತು ವೈಕೃತ ಪ್ರಾಣಾಯಾಮಗಳು ಯೋಗಶಾಸ್ತ್ರ ಸಾಧನೆಯಿಂದ ಶಿವಾಚಾರ್ಯೋಪಜ್ಞವೆಂದರೆ ತಪ್ಪಾಗದು.

'ನಾನೇ ಅವನು' ಎಂಬ ಲೌಕಿಕ ಕ್ರಮವು ಅಧ್ಯಾತ್ಮದಲ್ಲಿ 'ಅವನೇ ನಾನು' ಎಂದಾಗುತ್ತದೆ. ಏಕೆಂದರೆ ಅಲ್ಲಿ ಮೊದಲ ವಸ್ತು ಅವನು (ಸಃ) ಅವನಿಂದ ನಾನು ಆದ್ದರಿಂದ ಅದು 'ಸೋಽಹಂ' ಆಯಿತು. ಆದಕ್ಕಾಗಿ ಸೋಽಹಂ ಮಂತ್ರದ ಜಪಾನುಷ್ಠಾನ ಅತ್ಯಗತ್ಯ, ಇದು ಆಧ್ಯಾತ್ಮಿಕ ಕ್ರಮ, ಬದ್ಧಪೂರಕ.

| | |
|---|---|
| ೧ ಹಂಸ ಮಂತ್ರವು ಇಡಾ-ಪಿಂಗಳಗಳಲ್ಲಿ ಸುಳಿಯುತ್ತದೆ. | 'ಸೋಽಹಂ ಮಂತ್ರವು ಸೂಕ್ಷ್ಮವಾದ ಸುಷುಮ್ನೆಯಲ್ಲಿ ಸುಳಿಯುತ್ತದೆ. |
| ೨ ಹಂಸಮಂತ್ರವು ಪ್ರಾಣಶಕ್ತಿಯನ್ನು ಬಲಪಡಿಸುತ್ತದೆ. | 'ಸೋಽಹಂ' ಮಂತ್ರವು ಮನಸ್ಸು ಬುದ್ಧಿ ಚಿತ್ತ ಅಹಂಕಾರಗಳನ್ನು ನಿಲ್ಲಿಸುತ್ತದೆ. |
| ೩ 'ಹಂಸ' ಎಂಬುದು ಕೇವಲ ಮಂತ್ರ ! | 'ಸೋಽಹಂ' ಮಂತ್ರಯೋಗ! |

೪ ಧ್ಯಾನವು ಹಂಸ ಮಂತ್ರದಿಂದ ಆರಂಭವಾಗಿ ಮುನ್ಮುಂದೆ ಸೋಽಹಂ ಯೋಗವಾಗುತ್ತದೆ. ಹಂಸದ ಮೇಲಿನ ಹಂತ ಸೋಽಹಂ. ಅದು ಮಹಾಕಾರಣಕ್ಕೆ ಅತಿ ಸಮೀಪ.

| | |
|---|---|
| ೫ ಹಂಸಮಂತ್ರವು ಸ್ಥೂಲಾಂಗಲ್ಲಿ ಇಷ್ಟಲಿಂಗವಾಚ್ಯ. | 'ಸೋಽಹಂ' ಮಂತ್ರವು ಮಾನಸದಲ್ಲಿ ಪ್ರಾಣಲಿಂಗಕ್ಕೆ ವಾಚ್ಯ. ಇದು ಮಂತ್ರಯೋಗವೆನಿಸುತ್ತದೆ. |
| ೬ 'ಹಂಸ' ಮಂತ್ರವು ಅಂಗದ ಪೂರ್ವಭಾಗದಲ್ಲಿದೆ. | 'ಸೋಽಹಂ' ಮಂತ್ರವು ಪಶ್ಚಿಮ ಭಾಗದಲ್ಲಿದೆ. |
| ೭ ಹಂಸವು ಕ್ಷೇತ್ರ | 'ಸೋಽಹಂ' ಕ್ಷೇತ್ರಜ್ಞ. |

ಇವೆರಡು ಮಂತ್ರಗಳ ರಹಸ್ಯವನ್ನು ಗುರುಶಿಷ್ಯನಿಗೆ ವಿವರಿಸುತ್ತಾನೆ. 'ಕ್ಷೇತ್ರಜ್ಞ'ನಾಗುವುದೇ 'ಸೋಽಹಂ' ಮಂತ್ರ ಯೋಗದ ಗುರಿ. ಅದರ ಉಪಾಸನೆ ಸುಷುಮ್ನಾ ನಾಡಿಯಲ್ಲಿ.

ಶಿವಯೋಗಿಯು 'ಸೋಽಹಂ' ಮಂತ್ರಯೋಗವನ್ನು ಸುಷುಮ್ನೆಯ ಹಾದಿಯಲ್ಲಿಯೇ ಜಪಿಸಬೇಕು. ಆಗ ನಿಃಶ್ರೇಯಸ್ಸು ಲಭಿಸುತ್ತದೆ."

"ಹಂಸ' ಮತ್ತು 'ಸೋಽಹಂ' ಮಂತ್ರಗಳಿಗಿರುವ ಮಹದಂತರವು ಯಾವುದು ?"

## ಎರಡೂ ಮಂತ್ರಗಳಲ್ಲಿನ ತರ-ತಮ ಭಾವ

| | |
|---|---|
| ೧ ಹಂಸ ಮಂತ್ರದಲ್ಲಿ ಪುರುಷ-ಪ್ರಕೃತಿ ಸ್ವರೂಪವಿರುವುದರಿಂದ ಅದು ಸೂರ್ಯಮಂಡಲವನ್ನು ಭೇದಿಸುತ್ತದೆ. | 'ಸೋಽಹಂ ಮಂತ್ರಯೋಗ'ದಲ್ಲಿ ಪುರುಷ—ಪ್ರಕೃತಿಗಳ ಭೇದಭಾವವ ಳಿದು ಸೂರ್ಯಮಂಡಲದ ಆಚೆ ನಿಂತರೆ ಸೂರ್ಯಸುರರಿಂದಪೂಜ್ಯತೆ ಲಭಿಸುತ್ತದೆ.ಆದ್ದರಿಂದ'ಸೋಽಹಂ' ಮಂತ್ರವು ಮಹಾಜ್ಞಾನದಾಯಕ. ಸೋಽಹಂ ಸಿದ್ಧಿಸದಿದ್ದಲ್ಲಿ ಅವು ಅಳವಡುವುದಿಲ್ಲ. |

"ಹಂಸಮಂತ್ರ' ಮತ್ತು 'ಸೋಽಹಂ ಮಂತ್ರಯೋಗ'ಗಳಲ್ಲಿ ಪ್ರಣವದ ಸ್ಥಾನವೇನು ?"

"ಇದು ತುಂಬಾ ಮಹತ್ವದ ಪ್ರಶ್ನೆ. ಸ್ಥೂಲವಾದ ಹಂಸಮಂತ್ರವು ಜಪ ವಿಧಾನಭರದಲ್ಲಿ ವಿಪರೀತವಾಗಿ ಸೂಕ್ಷ್ಮವಾದ 'ಸೋಽಹಂ ಮಂತ್ರ ಯೋಗವಾಗಿ ಪರಿಣಮಿಸುತ್ತದೆ. ಎಂದು ಹೇಳಲಾಗಿದೆ.

ಪ್ರಕೃತ ಸೂಕ್ಷ್ಮವಾದ ಸೋಽಹಂ ಮಂತ್ರಯೋಗದಲ್ಲಿ ಸೂಕ್ಷ್ಮಾಂಗ ಗಳಾದ 'ಹ'ಕಾರ 'ಸ'ಕಾರಗಳು ಕಳಚಿದಾಗ(ಭಾಗತ್ಯಾಗ)ಉಳಿಯುವುದು ಕೇವಲ 'ಓಂ' ಎಂಬುದೆ ! ಅದೇ ಪ್ರಣವ ಮಂತ್ರ !

ಹಕಾರಾರ್ಣಂ ಸಕಾರಾರ್ಣಂ ಗೋಪಯಿತ್ವಾ ತತಃ ಪರಂ ।
ಸಂಧಿಂ ಕುರ್ಯಾತ್ ತತಃ ಪಶ್ಚಾತ್ ಪ್ರಣವೋಽಸೌ
ಮಹಾಮನುಃ ॥

ಎಂಬ ಕಾರಿಕೆ ಮಹಾಮಂತ್ರದ ಸ್ವರೂಪವನ್ನು ಸುಂದರವಾಗಿ ಬಣ್ಣಿಸಿದೆ."

"ಗುರುದೇವಾ, 'ಹಂಸ' 'ಸೋऽಹಂ' ಮತ್ತು 'ಓಂ' ಇವುಗಳ ಸ್ವರೂಪವನ್ನು ಸರಳವಾಗಿ ಬೋಧಿಸಬೇಕು!"

೧ ಹಂಸವು ಕ್ಷೇತ್ರ, ಸೋऽಹಂ ಕ್ಷೇತ್ರಜ್ಞ, 'ಓಂ' ಸರ್ವಜ್ಞ.

೨ ಹಂಸವು ಸ್ಥೂಲ; ಸೋऽಹಂ ಸೂಕ್ಷ್ಮ; 'ಓಂ' ಕಾರಣ.

೩ ಹಂಸವು ಪೂರ್ವದಲ್ಲಿ ಸೋऽಹಂ ಪಶ್ಚಿಮದಲ್ಲಿ 'ಓಂ' ಉತ್ತರದಲ್ಲಿ

೪ ಹಂಸವು ಕಾಯದಲ್ಲಿ ಸೋऽಹಂ ಮಾನಸದಲ್ಲಿ 'ಓಂ' ಭಾವದಲ್ಲಿ

೫ ಹಂಸದ ಸುಳಿದಾಟ ಕಂಠನಾಳದಲ್ಲಿ, ಸೋऽಹಂ ಸಂಚಲನ ಅಂತರಾಳದಲ್ಲಿ, ಓಂ ಸುಳಿದಾಟ ಬ್ರಹ್ಮನಾಳದಲ್ಲಿ (ತ್ರಿಕೂಟ).

೬ ನಾನೇ ಅವನು (ಹಂಸ) ಅವನೇ ನಾನು (ಸೋऽಹಂ), 'ಓಂ' ಎಂಬಲ್ಲಿ ಎರಡರ ಭಿನ್ನಭಾವವಳಿದು 'ನಾನೇ ನಾನು' ಎಂಬ ಏಕಾರ್ಥ ಭಾವವು ಉಳಿದು ಸಮರಸ ಸಿದ್ಧಿಸುತ್ತದೆ.

೭ ಸ್ಥೂಲಾಂಗವಾದ ಹಂಸಮಂತ್ರಕ್ಕೆ ಸೋऽಹಂ ಪ್ರಾಣ ಪ್ರಾಯವಾಗುತ್ತದೆ. ಓಂ ಆತ್ಮಸ್ವರೂಪವೆನಿಸಿದರೆ ಸೋऽಹಂಮಂತ್ರಯೋಗದಲ್ಲಿ ಸಕಲ ನಿಷ್ಕಳನಾದ ಆತ್ಮನು ಓಂ ಮಹಾಮಂತ್ರದಲ್ಲಿ ಕೇವಲ ನಿಷ್ಕಳನಾಗಿರುತ್ತಾನೆ.

೮ 'ಸೋऽಹಂ ಮಂತ್ರಯೋಗ'ದಲ್ಲಿನ 'ಸ್' 'ಹ್'ಗಳನ್ನು ಕಳೆದು ಓಂಕಾರವು ಏಕಾಕ್ಷರ ಮಹಾಮಂತ್ರವೆನಿಸುತ್ತದೆ. ಆ ಪ್ರಣವವು 'ಅ-ಉ-ಮ' ಎಂದು ಮೂರು ಮಾತ್ರೆಗಳುಳ್ಳದ್ದು. ಆ ಮೂರು ಅಕ್ಷರಗಳು ಒಂದಾಗಿ ಏಕಾಕ್ಷರವಾಗುತ್ತದೆ. ಅಂಥ ಪ್ರಣವವಾಚ್ಯನು ನಿಷ್ಕಳ ಪರಶಿವ. ಇದೇ ಶಕ್ತಿವಿಶಿಷ್ಟಾದ್ವೈತರಹಸ್ಯ. ಇದು ಮೊದಲು ಹಂಸವಾಗಿ ಮಧ್ಯದಲ್ಲಿ ಸೋऽಹಂ ಆಗಿ ಕಡೆಯಲ್ಲಿ ಓಂ ಆಗಿ ಉಳಿಯುವ ಹಂಸಯೋಗ. ಇದರ ರಹಸ್ಯ ಅತ್ಯದ್ಭುತ!

"ಓಂಕಾರ ಮಂತ್ರದ ಗುರಿಯಾವುದು ?"

"ಓಂಕಾರ ಮಂತ್ರವು ಸರ್ವವ್ಯಾಪಿ. ಅದು ಶರೀರದಲ್ಲಿನ ಷಟ್ ಚಕ್ರಗಳನ್ನು ಜಾಗೃತಗೊಳಿಸುತ್ತದೆ.

ಯೋಗ ಸಾಧನೆಗೆ ಕುಳಿತ ಸಾಧಕನು ಆಧಾರ ಚಕ್ರವೆನಿಸಿದ ಗುದವನ್ನು ಬಿಗಿಹಿಡಿದಾಗ ಅಲ್ಲಿರುವ ವಾಯುವನ್ನು ಓಂಕಾರವು ಎಬ್ಬಿಸಿ, ಸ್ವಾಧಿಷ್ಠಾನ (ಗುಹ್ಯ) ಚಕ್ರವನ್ನು ಮೂರು ಸಲ ಸುತ್ತಿ, ಮೇಲೇರಿ, ಮಣಿಪೂರಕ (ನಾಭಿ) ಚಕ್ರವನ್ನು ಹೊಕ್ಕು ಶೋಧಿಸಿ, ಅನಾಹತ (ಎದೆ) ಚಕ್ರವನ್ನು ಮೀರಿ, ವಿಶುದ್ಧಿ (ಕಂಠ) ಚಕ್ರದಲ್ಲಿ ಪ್ರಾಣಗಳನ್ನು ನಿಲ್ಲಿಸಿ, ಆಜ್ಞಾ (ಭ್ರೂಮಧ್ಯ) ಚಕ್ರದ ಜೊತೆಗೂಡಿ ಬ್ರಹ್ಮರಂಧ್ರ(ಸಹಸ್ರಾರ)ದಲ್ಲಿ ಧ್ಯಾನಿಸುತ್ತಾ ಮೂರು ಮಾತ್ರೆಯುಳ್ಳ ಓಂಕಾರವಾಗುತ್ತದೆ. ಅದನ್ನು ಯಾವಾಗಲೂ ಧ್ಯಾನಿಸುವ ಶಿವಯೋಗಿಯು ತಾದಾತ್ಮ್ಯಹೊಂದಿದ್ದು ನಿರ್ವಿಕಾರವಾಗಿ ಚಿದಕ್ಷಿಯಾಗಿ ಎಲ್ಲವನ್ನು ನೋಡುತ್ತಿರುತ್ತಾನೆ."

"ಮೂರು ಮಾತ್ರೆಯ ಪ್ರಣವಕ್ಕೂ ಪಂಚಾಕ್ಷರ ಮಂತ್ರಕ್ಕೂ ಇರುವ ಸಂಬಂಧವು ಯಾವುದು?"

"ಪ್ರಣವ(ಓಂ)ದ ವಿಕಾಸವೇ ಪಂಚಾಕ್ಷರ ಮಹಾಮಂತ್ರ. ಪ್ರಣವದಲ್ಲಿ ಪಂಚಾಕ್ಷರಮಂತ್ರವು ಅಡಗಿದೆ. 'ನ-ಮಃ-ಶಿ-ವಾ-ಯ' ಎಂಬಲ್ಲಿ ನಕಾರವು 'ತಾರ'ಣಕ ರೂಪ, ಮಕಾರವು ದಂಡಾಕಾರ, ಶಿಕಾರವು ಕುಂಡಲರೂಪ, ವಾಕಾರವು ಅರ್ಧಚಂದ್ರಾಕಾರ, ಯಕಾರವು ದರ್ಪಣ ಎಂದರೆ ಬಿಂದು ರೂಪ೧. ಇವುಗಳಿಗೆ ಸೂತ್ರಗಳೆಂದು ಹೆಸರು. ಈ ಪಂಚಸೂತ್ರಘಟಿತವಾದ ಲಿಂಗದಲ್ಲಿ ಮತ್ತು ಪ್ರಣವದಲ್ಲಿಯೂ ಸಹ ಈ ಲಕ್ಷಣಗಳಿವೆ. ಪಂಚಾಕ್ಷರ ವೆಂಬ ಕಲ್ಪವೃಕ್ಷಕ್ಕೆ ಪ್ರಣವವೇ ಬೀಜ. ವಾತುಲಾಗಮದಲ್ಲಿ "ಪ್ರಣವಃ ಸರ್ವವರ್ಣಾನಾಂ ಬೀಜಮಿತಿ ಸ್ಮೃತಂ"ಎಂದಿರುವುದು ಇದನ್ನು ಸಮರ್ಥಿಸುತ್ತದೆ.

ಎಲ್ಲಕ್ಕೂ ಮೂಲವಾದದ್ದು ಪ್ರಣವ. ಮೂರೂ ಕಾಲಗಳ ಆಗುಹೋಗುಗಳೆಲ್ಲ ಈ ಪ್ರಣವದಿಂದಲೇ! ಪ್ರಣವವು ತ್ರಿಕಾಲಾತೀತವಾದದ್ದು.

---

೧ ಪ್ರಥಮಂತಾರಕಾರೂಪಂ ದ್ವಿತೀಯಂ ದಂಡ ಉಚ್ಯತೇ ॥
ತೃತೀಯಂ ಕುಂಡಲಾಕಾರಂ ಚತುರ್ಥಂ ಚಾರ್ಧಚಂದ್ರಕಂ ।
ಪಂಚಮಂ ದರ್ಪಣಾಕಾರಂ ಷಷ್ಠಂ ಜ್ಯೋತಿಸ್ಸ್ವರೂಪಕಂ ॥
—(ಶಿವಾಗಮ)

ಓಂಕಾರದಲ್ಲಿನ ಅಕಾರವನ್ನು ಜಾಗ್ರದವಸ್ಥೆಯಲ್ಲಿ ವೈಶ್ವಾನರನು, ಉಕಾರವನ್ನು ಸ್ವಪ್ನಾವಸ್ಥೆಯಲ್ಲಿ ತೈಜಸನೂ, ಮಕಾರವನ್ನು ಸುಷುಪ್ತಿಯಲ್ಲಿ ಪ್ರಾಜ್ಞನೂ ಉಪಾಸಿಸುತ್ತಾರೆ ಎಂದು ಮಾಂಡೂಕ್ಯವು ಉಲ್ಲೇಖಿಸಿ, ಕಡೆಯಲ್ಲಿ "ಅಮಾತ್ರಶ್ಚತುರ್ಥೋಽವ್ಯವಹಾರ್ಯಃ" "ಶಿವೋಽದ್ವೈತ ಏವಮೋಂಕಾರ ಆತ್ಮೈವ ಸಂವಿಶತ್ಯಾತ್ಮಾನಂ ಯ ಏವಂ ವೇದ, ಯ ಏವಂ ವೇದ" ಎಂದು ಮುಗಿದೆ.

ಎಂದರೆ ಮಾತ್ರಾಪರಿಗಣನೆ ಇಲ್ಲದ, ವ್ಯವಹಾರಕ್ಕೆ ನಿಲುಕದ, ಪ್ರಪಂಚಕ್ಕೆ ಸಿಲುಕದ ಶಿವಾದ್ವೈತವೆನಿಸಿದ '0' ಶೂನ್ಯವೇ ಓಂಕಾರ. ಆತ್ಮರೂಪ. ಅದನ್ನು ತಿಳಿದವನು ತಾನೇ ತಾನಾಗುವನೆಂದು ಗಮನಿಸತಕ್ಕದ್ದು. ಪ್ರಣವವು ಶಿವವಾಚಕ. ಶಿವನೇ ಪ್ರಣವ. ಒಟ್ಟಿನಲ್ಲಿ ಮಹಾಮಂತ್ರ ಸಹಿತವಾದ ಓಂಕಾರವೇ ಲಿಂಗ, 'ನಮಃ'ಗಳು ಆ ಲಿಂಗದ ಪೀಠವು, ಶಿಕಾರವು ಮಧ್ಯ, ವಾಕಾರವು ಗೋಮುಖ, ಯಕಾರವು ಗೋಲ. ಆದ್ದರಿಂದ ಓಂಕಾರವೇ ಲಿಂಗ.

ಪ್ರಣವವು ಪರ ಮತ್ತು ಅಪರ ಎಂದು ಎರಡು ಬಗೆ. ಸಚ್ಚಿದಾನಂದ (ವಾಚ್ಯ) ಲಕ್ಷಣವುಳ್ಳ ಪರಬ್ರಹ್ಮವೇ ಪರಪ್ರಣವ. ಶಬ್ದ (ವಾಚಕ)ವೆ ಅಪರಪ್ರಣವ. ಪರಪ್ರಣವವೇ '0' ಶೂನ್ಯ.

**ಪರಮಹಂಸ**

'ಪರಮಹಂಸ' ಸ್ತರಕ್ಕೆ ಏರಿದವನಿಗೆ ಉಪಾಸ್ಯವು ಈ ಶೂನ್ಯವೆ! ಇದು ಶಬ್ದವಲ್ಲ. ಅದನ್ನು ಉಚ್ಚರಿಸಲಾಗುವುದೂ ಇಲ್ಲ. ಇದು ಅವಾಚ್ಯ ಪ್ರಣವ. ಇದೇ ಓಂಕಾರದ ಮೂಲ.

"ಗುರುದೇವಾ, ಅವಾಚ್ಯಪ್ರಣವದ ಸ್ವರೂಪವನ್ನು ಇನ್ನೂ ವಿವರವಾಗಿ ಬಿಡಿಸಿ ಅಪ್ಪಣೆ ಕೊಡಿಸ ಬೇಕು !"

"ಹಂಸ ಮಂತ್ರವು ಪ್ರಾಕೃತ ಪ್ರಾಣಾಯಾಮದಲ್ಲಿ ವೈಕಾರಿಕವಾಗಿ 'ಸೋಽಹಂ'ಮಂತ್ರವಾಯಿತು. ಈ 'ಸೋಽಹಂ'ದಲ್ಲಿರುವ ಸ್ಥೂಲ ವ್ಯಂಜನಾಕ್ಷರಗಳು (ಸ್-ಹ್-ಗಳು) ಕುಂಭಕ ಉಪಾಸನೆಯಿಂದ ಅಡಗಿ, ಸ್ವರಾಕ್ಷರಗಳು ಉಳಿದು 'ಓಂ' ಎಂದಾಯಿತು. ಸ್ಥೂಲ ಉಪಾಧಿಗಳೆಲ್ಲ ಕಳೆದು

ಈಗ ಅದು ಕೇವಲ ಶಿವ-ಶಕ್ತಿರೂಪ ಪರಬ್ರಹ್ಮವೆನಿಸಿತು. ಇದರಲ್ಲಿರುವ ಅಕಾರವೇ ಶಿವ, ಉಕಾರವು ಶಕ್ತಿ. ಶಿವ-ಶಕ್ತಿಯರು ತಮ್ಮ ಲೋಕೋತ್ತರ ಗುಣ ಸ್ವಭಾವಗಳಿಂದ ಒಡಗೂಡಿ ಪರಿಪೂರ್ಣವಾದ '0' ಶೂನ್ಯದೊಡನೆ ಬೆರೆತಾಗ 'ಓಂ' ಎಂಬ ವಾಚ್ಯ ಪ್ರಣವವಾಗುತ್ತದೆ. ವಾಚ್ಯ ಪ್ರಣವದ ಅ-ಉ-ಗಳು ಸಹ ವರ್ಣಾತೀತವಾದ ಅವಾಚ್ಯ ಪರತತ್ತ್ವವೆನಿಸುತ್ತವೆ; ಪರಿಪೂರ್ಣನಿರಾಕಾರವಾಗುತ್ತವೆ.

ಈ ಸ್ಥಿತಿಯನ್ನು ಸಂಪಾದಿಸುವುದೇ ಪರಮಹಂಸನ ಗುರಿ. ಅದನ್ನು ಸಂಪಾದಿಸಿದಾಗ ಅವನೇ ಪರಮಹಂಸ! ಆ ಪರಮಹಂಸಸ್ವರೂಪದಲ್ಲಿ ಬೆರೆದ ಯೋಗಿಗೆ ಮಂತ್ರದ ನೆನಹಿಲ್ಲ; ಮತ್ತೊಂದರ ಹಂಗಿಲ್ಲ.

"ಹಾಗಾದರೆ ಪರಮಹಂಸನ ಸ್ವರೂಪವೇನು ?"

"ಆಚಾರ್ಯ ರೇಣುಕರು ಪರಮಹಂಸನ ಸ್ವರೂಪವನ್ನು ಹೀಗೆ ಬಣ್ಣಿಸಿದ್ದಾರೆ—

ಶೂನ್ಯೇ ಚಿದಂಬರೇ ಸ್ಥಾನೇ ದೂರೇ ವಾಙ್ಮನಸ್ವಾಥ ನಃ ।
ವಿಲೀನಾತ್ಮಾ ಮಹಾಯೋಗೀ ಕೇನ ಕಿಂ ವಾಪಿ ಭಾವಯೇತ್ ॥

ಆ ವಸ್ತು ವಾಕ್ ಮತ್ತು ಮನಸ್ಸುಗಳನ್ನು ಮೀರಿದ್ದು ಚಿದಾಕಾಶಸ್ವರೂಪ. ಅದು 'ಶೂನ್ಯ' ಎಂದರೆ ಪರಿಪೂರ್ಣ, ಅದರಲ್ಲಿ ತಲ್ಲೀನನಾದ ಪರಮಹಂಸನೇ ಮಹಾಯೋಗಿ. ಅವನು ತನ್ನ ಪರಮಾನಂದದಲ್ಲಿಯೇ ವಿಹರಿಸುತ್ತಾನೆ!

"ಏಷೋಽಸೌ ಪರಮಹಂಸೋ ಭಾನುಕೋಟಿ ಪ್ರಕಾಶೋ ।
ಯೇನೇದಂ ಸರ್ವಂ ವ್ಯಾಪ್ತಂ."

ಎಂದು ಹಂಸೋಪನಿಷತ್ತು ಅವನನ್ನು ವರ್ಣಿಸಿದೆ. ಪರಪ್ರಣವ ಅವಾಚ್ಯಪ್ರಣವ ಶೂನ್ಯ'0'ಲಿಂಗವೆಂಬ ಹೆಸರುಗಳು ಆ ಪರಿಪೂರ್ಣ ವಸ್ತುವಿಗಿವೆ. ಅದರಲ್ಲಿ ತಲ್ಲೀನನಾದವನೇ ಪರಮಹಂಸ !"

"ಆ ಪರಮಹಂಸನ ಲಕ್ಷಣವೇನು ?"

"ಅಂತಹ ಮಹಾಯೋಗಿಯನ್ನು ಶಿವಾದ್ವೈತಿಗಳು ಜೀವನ್ಮುಕ್ತನೆಂದೂ, ಐಕ್ಯನೆಂದೂ ಹೇಳುತ್ತಾರೆ. ದೇಹಭಾವ ಅವನಿಗಿರದು.

ಲೋಕೋಪಕಾರವೇ ಅವನ ಗುರಿ. ಆತ್ಮಾನಂದವೇ ಅವನ ಆಹಾರ. ಉಭಯವೆಂಬ ಪಕ್ಷಗಳು ಕಳಚಿ ಸದಾ ಪರಮನಲ್ಲಿ ಪರಿಣಮಿಸಿ ಇರುವವನೇ ಪರಮಹಂಸ !

ಅಂತಃ ಪೂರ್ಣಃ ಬಹಿಃ ಪೂರ್ಣಃ ಪೂರ್ಣಕುಂಭ ಇವಾರ್ಣವೇ ।
ಸಂಪೂರ್ಣತ್ವಾತ್ ಸದಾ ಪೂರ್ಣಾತ್ ಪರಿಪೂರ್ಣಃ ತದುಚ್ಯತೆ ॥
ಅಂತಃ ಶೂನ್ಯಂ ಬಹಿಶ್ಶೂನ್ಯಂ ಶೂನ್ಯತತ್ತ್ವ ಮಿವಾಂಬರೇ ।
ಸರ್ವಶೂನ್ಯನಿರಾಲಂಬಂ ಮಹಾಶೂನ್ಯಮಿಹೋಚ್ಯತೆ ॥
ಹಂಸ ಹಂಸಃ ಪರಮಹಂಸಃ. ಸೋऽಹಂ ಹಂಸಃ ಸೋऽಹಂ ಹಂಸಃ
ಹಂಸ ಹಂಸಾಯ ವಿದ್ಮಹೇ ಪರಮಹಂಸಾಯ ಧೀಮಹಿ ।
ತನ್ನೋ ಹಂಸಃ ಪ್ರಚೋದಯಾತ್ ॥
ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೆ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವ ಶಿಷ್ಯತೇ
ಓಂ ಶಾಂತಿಃ ಶಾಂತಿಃ ಶಾಂತಿಃ

* * * *

## ಮಹಾಸಮಾಧಿ

ಪರಮಹಂಸ ಸ್ಥಿತಿಗೇರಿದ ಶ್ರೀಮನ್ನಿರಾಭಾರಿ ಯತಿವ್ರಜ ಪರಿವೃಢ ಶ್ರೀಪತಿಪಂಡಿತಾರಾಧ್ಯ ಮಹಾ ಶಿವಯೋಗಿಗಳು ಕಡೆ ಕಡೆಗೆ ಮೇಲೆ ಹೇಳಿದಂತೆ ಸಾಧನೆಯ ತುಟ್ಟ ತುದಿಗೇರಿ ಲಿಂಗವೇ ಆದರು !

ಅವರ ಧರ್ಮಪತ್ನಿ ಕನಕಲತಾ ದೇವಿಯುರೂ ಸಹ ಪತಿಯ ದಾರಿಯಲ್ಲಿ ನಡೆದು, ಅವರ ಸೇವೆಯಲ್ಲಿ ತಮ್ಮನ್ನು ಸವೆಸಿಕೊಂಡು ಇಷ್ಟಲಿಂಗದಲ್ಲಿ ಪತಿಯನ್ನು ಆ ಪತಿಯಲ್ಲಿ ತಮ್ಮನ್ನೂ ನಿವೇದಿಸಿಕೊಂಡು ಉರಿಯುಂಡಕರ್ಪೂರದಂತೆ ಲಿಂಗೈಕ್ಯರಾದರು.

ಈರ್ವರ ಮಹಾಸಮಾಧಿಗಳು ಬೆಜವಾಡದ ಮಲ್ಲೇಶ್ವರಾಲಯದ ಆವರಣದಲ್ಲಿ ಇಂದಿಗೂ ಆ ಮಹಾ ಶಿವಯೋಗಿಗಳ ಅಮರಕಥೆಯನ್ನು ನೆನಪಿಸುತ್ತವೆ.

ಇನ್ನು ವಾರಾಣಸಿಯ ಮಹಾವಿದ್ಯಾ ಪೀಠದಲ್ಲಿ ಅಭ್ಯಾಸ ಮಾಡಿ ಪರಿಣತರಾಗಿ ಶಿವಯೋಗಿಗಳಲ್ಲಿ ಶಿಷ್ಯವೃತ್ತಿಯಲ್ಲಿದ್ದವರಲ್ಲಿ ಉರಿಲಿಂಗದೇವನು ಕಂಧಾರದ ಶ್ರೀ ಮಠಕ್ಕೂ, ಮಲ್ಲಿಕಾರ್ಜುನ ಪಂಡಿತನು ವೆಲ್ಲಟೂರಿನ ಶ್ರೀ ಮಠಕ್ಕೂ ಶ್ರೀಕಾಂತನು ದ್ರಾಕ್ಷಾರಾಮಕ್ಕೂ ಆರಿಸಲ್ಪಟ್ಟು ಸಾಂಸ್ಕೃತಿಕ ಸೇವಾದೀಕ್ಷೆ ವಹಿಸಿದ್ದರು.

—oOo—

## ಅನುಬಂಧ-೧

ವಿಜಯವಾಡ 'ಜಮ್ಮಿದೊಡ್ಡಿ' ಎಂಬಲ್ಲಿರುವ ಶ್ರೀಪತಿಪಂಡಿತಾ ಚಾರ್ಯರ ಮಹಿಮೆಯನ್ನು ಸೂಚಿಸುವ ಪಲ್ಲಿಕೇತರಾಜನ ಶಿಲಾಶಾಸನದ ಸಾರಾಂಶ*

ಇಲ್ಲಿರುವ ಜ್ಯೋತಿರ್ಲಿಂಗವು ಸನಾತನವಾದದ್ದು. ಹಿಂದೆ ಸಪ್ತ ಸಾಗರಗಳನ್ನು ಪಾನ ಮಾಡಿದ ಅಗಸ್ತ್ಯ ಮಹರ್ಷಿ ಈ ಲಿಂಗವನ್ನು 'ಜಯೇಶಾನ' ಎಂದು ಕರೆದನು. ಆನಂತರ ದ್ವಾಪರಯುಗದಲ್ಲಿ ಅರ್ಜುನನು ಪರಮೇಶ್ವರನೊಡನೆ ಮಲ್ಲಯುದ್ಧವನ್ನು ಮಾಡಿ ಅವನಿಂದ ಶಸ್ತ್ರಾಸ್ತ್ರ ಗಳನ್ನು ಪಡೆದದ್ದರಿಂದ ಈ ಲಿಂಗಕ್ಕೆ "ಮಲ್ಲೇಶ್ವರ"ನೆಂಬ ಹೆಸರಾಯಿತು.

ಅನಂತರ ಈ ಭಾಗವನ್ನು ಆಳುತ್ತಿದ್ದ "ಮಾಧವವರ್ಮ" ಎಂಬ ರಾಜನು ತನ್ನ ಮಗನು ಹುಣಸೆ ಎಲೆ ತಿಂದು ಜೀವಿಸುತ್ತಿದ್ದ ಒಬ್ಬ ಬಡವಿಯ ಮಗನನ್ನು ನಿಷ್ಕಾರಣವಾಗಿ ಕೊಂದ. ಆಗ ಧರ್ಮರಕ್ಷಕನಾದ ರಾಜ ತನ್ನ ಮಗನಿಗೆ ಮರಣದಂಡ ವಿಧಿಸಿದ. ರಾಜನ ಧರ್ಮಬುದ್ಧಿಗೆ ಪ್ರಸನ್ನನಾದ ಶಿವ ಬಡವಿಯ ಮಗ ಮತ್ತು ರಾಜಪುತ್ರರಿಬ್ಬರನ್ನು ಬದುಕಿಸಿದ. ಆಗ ದೇವತೆಗಳು ಸುವರ್ಣವೃಷ್ಟಿ ಸುರಿಸಿದರು. ಆನಂತರ ಭಕ್ತೋತ್ತಮರಾದ ಪಂಡಿತಾರಾಧ್ಯರು "ಶಿವಭಕ್ತರು ದೇವರ್ಷಿಗಳಿಗಿಂತ ಅಧಿಕರು ಎಂದು ಚೀನಾಂಬರದಲ್ಲಿ ಬೆಂಕಿಯನ್ನು ಆಕರ್ಷಿಸಿ ಬಂಧಿಸಿ ಬನ್ನಿ ಮರದ ಕೊಂಬೆಗೆ ಕಟ್ಟಿಸಿದರು. ಆಗ ಮಲ್ಲೇಶ್ವರನು ಪ್ರತ್ಯಕ್ಷನಾದ. ಮಲ್ಲೇಶ್ವರನ ಮಹಿಮೆ ಅಪಾರ !" ಇತ್ಯಾದಿ.

---

* (Inscription of Palliketa Raja recording the greatness of Shreepathi Panditaradhya at Bezwada)

# ಆ ಕ ರ ಗ ಳು-೨

"ಶ್ರೀಪತಿಪಂಡಿತ"-ಭಾರತೀಯ ಸಂಸ್ಕೃತಿ :—ಡಾ॥ಎಸ್. ಶ್ರೀಕಂಠಶಾಸ್ತ್ರೀ, (ಪು. ೧೩೬) ಮೈಸೂರು ವಿಶ್ವವಿದ್ಯಾನಿಲಯ ಪ್ರಕಟನೆ (೧೯೫೪)

"ಶ್ರೀಪತಿಪಂಡಿತ" :—ಶಿವಶರಣ ಕಥಾ ರತ್ನಕೋಶ ಶ್ರೀ ತ. ಸು. ಶಾಮರಾಯ ಎಂ. ಎ., ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು (ಪು. ೪೬೫) (೧೯೬೭)

ಶ್ರೀ ಶೈಲ ಪಂಡಿತಾರಾಧ್ಯ ಚರಿತ್ರಮು (ತೆಲುಗು) ಪುಲ್ಲಕವಿ :— ಸಂಪಾದಕ—ಎಂ. ಜಿ. ನಂಜುಂಡಾರಾಧ್ಯ (ಆಶ್ವಾಸ ೧-೨೧೧) ಶ್ರೀ ಜ.ಚ.ನಿ. ಪುಸ್ತಕ ಭಂಡಾರ—೧೯೫೮

ಶ್ರೀ ಕರಭಾಷ್ಯ ಪ್ರಶಸ್ತಿ (ಭಾರತೀಯ ಸಂಸ್ಕೃತಿಗೆ ವೀರಶೈವದ ಕೊಡುಗೆ)— ಸಂಪಾದಕ—ಎಂ. ಜಿ. ನಂಜುಂಡಾರಾಧ್ಯ, ಪ್ರಶಸ್ತಿ ಮತ್ತು ಅಭಿನಂದನ ಗ್ರಂಥ ಪ್ರಕಾಶನ ಸಮಿತಿ, ಬಸವೇಶ್ವರ ರಸ್ತೆ, ಮೈಸೂರು ೧೯೮೧

ಶ್ರೀ ಕರಭಾಷ್ಯದ ಉಪೋದ್ಘಾತ :—(ಇಂಗ್ಲಿಷ್) ಭಾ. 1. ದಿ॥ ಸಿ. ಹಯ ವದನರಾಯರು, ಬೆಂಗಳೂರು ಪ್ರೆಸ್, ೧೯೩೬

ಶ್ರೀ ಕರಭಾಷ್ಯಂ :—(ಸಂಸ್ಕೃತ ಮೂಲ) ಭಾ. 2 ಡಿಟೋ ೧೯೩೬

ಮುಂಚಣ್ಣ ಅಥವಾ ಶಿವಲೆಂಕ ಮಂಚಣಪಂಡಿತ :— ಶಿವಶರಣ ಕಥಾರತ್ನಕೋಶ, ತ. ಸು. ಶಾಮರಾಯ (ಪು. ೩೧೯) ೧೯೬೭

ಉರಿಲಿಂಗದೇವ :—(ಶಿ. ಶ. ಕ. ರತ್ನಕೋಶ, ಪು. ೪೫) ಡಿಟೋ

ಆಂಧ್ರ ಬಸವಪುರಾಣಮು:—ಪಾಲ್ಕುರಿಕಿ ಸೋಮನಾಥ ಕವಿ ೧೯೩೬ ಪ್ರಕಾಶಕರು : ಕಾಶೀನಾಥುನಿ ನಾಗೇಶ್ವರರಾವು, ವೇಟೂರಿ ಪ್ರಭಾಕರ ಶಾಸ್ತ್ರಿ ಸಂಪಾದಿತ (ಪು. ೭೬-೭೭)

ಕಾಶೀ ಜಂಗಮವಾಡೀ ಮಠದ ಕೋರ್ಟು ಜಡ್ಜಿಮೆಂಟ್ ಭಾಗ I (ಸೂಟ್ ನಂ. 12 1932) ಪು. 15

ಆರಾಧ್ಯ ಚಾರಿತ್ರ :—ನೀಲಕಂಠಾಚಾರ್ಯ ವಿರಚಿತ, ಮೈಸೂರು ವಿಶ್ವವಿದ್ಯಾ ನಿಲಯ ಪ್ರಕಟಣೆ (೧೯೮೦)

ಚತುರಾಚಾರ್ಯ ಪುರಾಣ :—ಸಂಪಾದನೆ ಸಿದ್ಧನಂಜೇಶ
(ಮೈಸೂರು ವಿಶ್ವವಿದ್ಯಾ ನಿಲಯ ಪ್ರಕಟಣೆ ೧೯೮೬)

ಗುರುರಾಜ ಚಾರಿತ್ರ :—ಸಿದ್ಧನಂಜೇಶ,
ಬಾಲಲೀಲಾ ಮಹಂತೇಶ ಗ್ರಂಥಮಾಲೆ, ಧಾರವಾಡ ೧೯೫೦

ಮಲ್ಲಿಕಾರ್ಜುನ ಪಂಡಿತಾರಾಧ್ಯ ಚಾರಿತ್ರ :—ಪಾಲ್ಕುರಿಕೆ ಸೋಮನಾಥ
ಸಂಪಾದಕ ಡಾ|| ಚಿಲಕೂರಿ ನಾರಾಯಣರಾವು ಎಂ. ಎ.
ಪಿ.ಹೆಚ್.ಡಿ. ೧೯೩೯

ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತಂ (ಸಂಸ್ಕೃತ) :—ಗುರುರಾಜ ಕವಿ
ಎನ್. ಆರ್. ಕರಿಬಸವಶಾಸ್ತ್ರಿ ಸಂಪಾದಿತ ಮೈಸೂರು ೧೯೦೮

ಅಗಸ್ತ್ಯ ಸೂತ್ರ ವೃತ್ತಿ :—
Introduction to Srikara Bhashya Edited by
C. Hayavadana Rao VOL. I P. 3, 1936.
Bangalore Press.

ತಿರುಪತಿಯಲ್ಲಿ ವೀರಭದ್ರನು ವೆಂಕಟರಮಣನಾದ :—ಶ್ರೀ ಬಿ. ವಿ. ಶ್ರೀನಿ
ವಾಸರಾವ್ ಎಂ .ಎ., ಎಂ. ಆರ್. ಎ. ಎಸ್.
(ಸಿಲೋನ್) ತಾಯಿನಾಡು (ದೈನಿಕ) ೧೩-೫-೧೯೬೨

ಪರಮಹಂಸ :—ಡಾ|| ಶ್ರೀ. ಜ. ಚ. ನಿ. ಶ್ರೀ ಶೈಲಜ. ನಿಡುಮಾಮಿಡಿ
ಪುಸ್ತಕ ಭಂಡಾರ, ಬೆಂಗಳೂರು (೧೯೭೪)

ರೇಣುಕ ವಿಜಯ (ಪೀಠಿಕೆ) :—ಪಂ. ಕಾಶೀನಾಥ ಶಾಸ್ತ್ರೀ
'ಪಂಚಾಚಾರ್ಯ, ಪ್ರಭಾ' ಪ್ರೆಸ್, (೧೯೬೫) ಮೈಸೂರು

ಚಂದ್ರಗಿರಿ ಶಾಸನ (೧೪೪೨) (೧೩-೫-೧೯೬೨ ತಾಯಿನಾಡು) ಡಿಟೋ
ಬಿ. ವಿ. ಶ್ರೀನಿವಾಸರಾಯರ ಲೇಖನ

ವೈರಾಗ್ಯ ಸಿದ್ಧ ವಿರೂಪಾಕ್ಷ ದೇಶಿಕೇಂದ್ರ :—ಶ್ರೀ ಎಂ. ಜಿ. ನಂ. ೧೯೬೮
ಶ್ರೀ ಶೈಲಜ. ನಿಡುಮಾಮಿಡಿ ಪುಸ್ತಕ ಭಂಡಾರ ಬೆಂಗಳೂರು

## ಒಂದು ಪುಟ್ಟ ವಿಶ್ವಕೋಶ !

"ಈ ಕಾದಂಬರಿಯಲ್ಲಿ ಬಾಲಕ ಶ್ರೀಪತಿಯ ಪ್ರಶ್ನೆಗಳಿಗೆ ಉತ್ತರ ರೂಪವಾಗಿ ಪುರಾಣ ಕತೆಗಳು, ದಂತ ಕತೆಗಳು, ನ್ಯಾಯಗಳು, ಇವುಗಳಲ್ಲದೆ ಧರ್ಮ ಜಿಜ್ಞಾಸೆಯಲ್ಲಿ ಬರುವ ಅತಿ ಸೂಕ್ಷ್ಮವಾದ ಸಂಶಯಗಳಿಗೆ ಸಮಂಜಸವಾದ ಉತ್ತರಗಳು ವಿಪುಲವಾಗಿ ಬಂದಿವೆ. ಶ್ರೀಮದಾಚಾರ್ಯರು ರಚಿಸಿರುವ ಭಾಷ್ಯದಲ್ಲಿ ಬರುವ ಗಹನವಾದ ವಾದಘಟ್ಟಗಳು ಇಲ್ಲಿ ಅತಿ ಸರಳವಾಗಿ ಮೂಡಿ ಬಂದಿವೆ.

ಒಟ್ಟಿನಲ್ಲಿ ಈ ಕೃತಿಯನ್ನು ಭಾರತೀಯ ಸಂಸ್ಕೃತಿಯ "ಒಂದು ಪುಟ್ಟ ವಿಶ್ವಕೋಶ" ಎಂದು ಹೇಳಿದರೆ ಅತಿಶಯೋಕ್ತಿಯಲ್ಲ !"

ವಿದ್ವಾನ್ ವೈ. ಎಂ. ಉಮಾಪತಿಶರ್ಮ

'ಪರಮಹಂಸ ಶ್ರೀಪತಿ ಪಂಡಿತಾಚಾರ್ಯ' ಕಾದಂಬರಿಯನ್ನು ನಾನು ಎಚ್ಚರಿಕೆಯಿಂದ ಓದಿ ಮುಗಿಸಿದೆ. ಇಲ್ಲಿ ಕೃತಿಕಾರರ ಅನುಭವ ಶ್ರೀಮಂತಿಕೆಯನ್ನು ಕಂಡು ಬೆರಗಾದೆ. ಪ್ರತಿಭಾಶಾಲಿಯಾದ ಸಾಧಕನೊಬ್ಬ ಪರಮಹಂಸ ಪದವಿಗೆ ಏರುವ ಮಹಾ ಪವಾಡವೊಂದು ಇಲ್ಲಿ ಅನುಪಮವಾಗಿ ದಾಖಲಿಸಿದೆ.

"ಸುಸಂಸ್ಕಾರಿಯಾದ ಶ್ರೀಪತಿ, ಹುಟ್ಟೂರಿನಿಂದ ಅಭ್ಯಾಸಕ್ಕಾಗಿ ಕಾಶಿಗೆ ಬಂದು ವಿದ್ಯಾಪೀಠದಲ್ಲಿ ಪಾಂಡಿತ್ಯವನ್ನು ಗಳಿಸಿ, ತಾನು ರಚಿಸಬೇಕೆಂದಿದ್ದ ಪ್ರಬಂಧ ರಚನೆಗೆ ಅಗತ್ಯವಾದ ಆಧಾರ ಸಂಗ್ರಹಿಸಲು ಕಾಶ್ಮೀರ–ಕೇದಾರಗಳ ಯಾತ್ರೆ ಕೈಗೊಂಡು ಬ್ರಹ್ಮಸೂತ್ರಗಳ ಮೇಲೆ ಭಾಷ್ಯವೊಂದನ್ನು ಬರೆದು, ಅದೇ ವಿದ್ಯಾಪೀಠದಲ್ಲಿ ಪ್ರಾಚಾರ್ಯನಾದ. ಸದ್ಗುರುವೊಬ್ಬರಿಂದ ಪರಮಹಂಸ ಮಂತ್ರ ರಹಸ್ಯವನ್ನು ಅರಿತು ಮಹಾ ಶಿವಯೋಗಿಯಾಗಿ ದೀನ–ದಲಿತರನ್ನು ಮೇಲೆತ್ತುವ ಮಣಿಹದಲ್ಲಿ ತೊಡಗಿ ಆ ನಾಡಿನ ರಾಜಮನ್ನಣೆಗೆ ಪಾತ್ರನಾದ ಆದರ್ಶ ಜೀವನ ಮೌಲ್ಯಗಳನ್ನು ಮೆರೆದಿರುವ ಕಥಾವಸ್ತು ಇಲ್ಲಿ ಚಿತ್ರಿತವಾಗಿದೆ. ಈ ಕಾದಂಬರಿ ಬಸವಪೂರ್ವ ಯುಗಕ್ಕೆ ಸೇರಿರುವುದೆಂಬುದು ನಿಜವಾಗಿಯೂ ಆದರಣೀಯ.

**ಚದುರಂಗ**